**University of Mysore**

Oriental Library Publications

KANNADA SERIES No. 19.

# ವೀರರಾಜೇಂದ್ರವಿರಚಿತಂ ಸಕಲವೈದ್ಯಸಂಹಿತಾಸಾರಾರ್ಣವಂ

ಸಂಪುಟ ೧.

# SAKALAVAIDYASAMHITĀSĀRÂRṆAVAM

BY

VIRARĀJÊNDRA

Vol I.

EDITED BY

D. SRINIVASACHAR, M.A.,

...sor of Sanskrit, Maharaja's College,
..., Government Oriental Library, Mysore

AND

...L. NARASIMHACHAR, M.A.,

...rnment Oriental Library, Mysore





MYSORE

...NTED AT THE GOVERNMENT BRANCH PRESS

1932

Price Rs. 1-14-0.

University of Mysore

Oriental Library Publications
KANNADA SERIES No. 19.

# ವೀರರಾಜೇಂದ್ರವಿರಚಿತಂ
# ಸಕಲವೈದ್ಯಸಂಹಿತಾಸಾರಾರ್ಣವಂ

ಸಂಪುಟ ೧.

# SAKALAVAIDYASAMHITĀSĀRÂRṆAVAM

BY

VIRARĀJÊNDRA

Vol I.

EDITED BY
D. SRINIVASACHAR, M.A.,
*Professor of Sanskrit, Maharaja's College, and Curator, Government Oriental Library, Mysore*

AND

D. L. NARASIMHACHAR, M.A.,
*Government Oriental Library Mysore.*

MYSORE
PRINTED AT THE GOVERNMENT BRANCH PRESS
1932

# ಪ್ರಸ್ತಾವನೆ

"ವೀರರಾಜೇಂದ್ರೋಕ್ತಿ ವಿಲಾಸ" ಅಥವಾ "ಸಕಲವೈದ್ಯ ಸಂಹಿತಾ ಸಾರಾರ್ಣವ" ಎಂಬ ಈ ವೈದ್ಯಗ್ರಂಥವನ್ನು ಬರೆದಾತನು ಕಳಲೆಯ ಪ್ರಭುವಾದ ವೀರರಾಜನು. ಈತನ ಪಿತಾಮಹನು ಕಳಲೆಯ ಪುರವರಾಧೀಶ್ವರನಾದ ಕಾಂತಯ್ಯ ಪ್ರಭು. ಈತನ ತಂದೆಯು ದಳವಾಯಿ ದೊಡ್ಡರಾಜ ; ಹೆಂಡತಿ ಕಾರುಗಹಳ್ಳಿ ಚನ್ನಾಜಮ್ಮಣ್ಣಿ.

ಈತನ ವಿಷಯವಾಗಿಯೂ ಈತನ ವಂಶಿಕರ ವಿಷಯವಾಗಿಯೂ ಕೆಲವು ಸಂಗತಿಗಳು 'ಕಳಲೆ ಅರಸುಗಳ ವಂಶಾವಳಿ'[1] ಎಂಬ ಒಂದು ಕೈಬರೆಹದ ಕಾಗದದ ಗ್ರಂಥದಿಂದ ತಿಳಿದು ಬರುತ್ತವೆ. ಈ ಗ್ರಂಥವು ಸ್ಥಳೀಯ ಕೈಫಿಯತ್ತು, ಪುರಾಣ ಇತ್ಯಾದಿಗಳ ಪಂಗಡಕ್ಕೆ ಸೇರಿದೆ. ಕಳಲೆ ನಿವಾಸಿಗಳಾದ ಮ॥ ರಾ॥ ಕಳಲೆ ರಂಗಸ್ವಾಮಿ ಅಯ್ಯಂಗಾರ್ಯರ ಮೂಲಪ್ರತಿಯಿಂದ ಈ ಗ್ರಂಥವು ಬರೆಯಲ್ಪಟ್ಟಿದೆ. ಇದರಲ್ಲಿ ಹೇಳಿರುವ ವಿಷಯಗಳು ನಂಬಿಕೆಗೆ ಅರ್ಹವಾದುವುವಲ್ಲವಾದರೂ ಇವುಗಳನ್ನು ಪುಷ್ಟೀಕರಿಸಲು ಬೇರೆ ಪ್ರಮಾಣಗಳು ದೊರೆತರೆ ಇವುಗಳ ಬೆಲೆ ಹೆಚ್ಚುತ್ತದೆ. ಈ ಗ್ರಂಥದ ಆಧಾರದ ಮೇಲೆಯೂ ಇತರ ಆಧಾರಗಳ ಮೇಲೆಯೂ ವೀರರಾಜನ ವಂಶಾವಳಿಯು ಮುಂದೆ ವಿವರಿಸಲ್ಪಟ್ಟಿದೆ.

'ಶಾಲಿವಾಹನ ಶಕ ೧೪೨೧ನೆಯ ಸಿದ್ಧಾರ್ಥಿಸಂವತ್ಸರದ ಮಾಘ ಶುದ್ಧ' ೧೦ರಲ್ಲಿ ಯಾದವಕುಲತಿಲಕನಾದ ಕೃಷ್ಣರಾಜನೆಂಬವನೊಬ್ಬನು ತನ್ನ ಅಣ್ಣನಾದ ಕಾಂತಯ್ಯನೊಡನೆ ದ್ವಾರಾವತಿಯಿಂದ ವಿಜಯನಗರದ ಕೃಷ್ಣರಾಯನ ಬಳಿಗೆ ಬಂದು ಅವನ ಆಶ್ರಯವನ್ನು ಪಡೆದನು. ಕೆಲವು ಕಾಲವಾದ ಮೇಲೆ ಇಬ್ಬರೂ ಕೃಷ್ಣರಾಜನ ಅನುಮತಿಯನ್ನು ಪಡೆದು ಕಳಲೆಗೆ ಪ್ರಯಾಣ ಬೆಳಸಿದರು. ಕೃಷ್ಣರಾಜನ ಅಧೀನನಾದ ಉಮ್ಮತ್ತೂರಿನ ಪಾಳೆಯಗಾರನು, ಇವರು ಬಂದ ವಿಷಯವನ್ನು ತಿಳಿದು ರಾಜಾಜ್ಞೆಗನುಸಾರವಾಗಿ ಕಾಂತಯ್ಯನಿಗೆ ಕಳಲೆಯ ಪಟ್ಟವನ್ನು ಕಟ್ಟಿದನು. ಕಳಲೆಯ ವಂಶಕ್ಕೆ ಇವನೇ ಮೂಲಪುರುಷನಾದನು. ಕಾಂತಯ್ಯನು ೨೨ ವರ್ಷಗಳ ಕಾಲ ರಾಜ್ಯಸುಖವನ್ನು ಅನುಭವಿಸಿದನು.

---

[1] ಮೈಸೂರು ಸರ್ಕಾರದ ಓರಿಯಂಟಲ್ ಲೈಬ್ರರಿ, ನಂ. K. B. 234.

ಕಾಂತಯ್ಯನ ಆಳಿಕೆಯು ಮುಗಿದ ಮೇಲೆ ಇವನ ವಂಶದ ಐವರು ಪ್ರಭುಗಳು ೮೫ ವರ್ಷಗಳ ಕಾಲ ರಾಜ್ಯವಾಳಿದರು.[2] ಅನಂತರ ಕರಿಕಾಲ ಮಲ್ಲರಾಜನು ಪ್ರಭುವಾದನು. ಇಲ್ಲಿಂದೀಚೆಗೆ ಕಳಲೆ ಅರಸರ ವಂಶಾವಳಿಯು ನಂಬಲರ್ಹವಾದ ಇತಿಹಾಸವು ಪೂರ್ತಿಯಾಗಿ ದೊರೆಯುತ್ತದೆ 'ನಂಜರಾಜ ಯಶೋಭೂಷಣ' (Edited by Embar Krishnamacharya, Oriental Institute, Baroda) ಎಂಬ ಅಲಂಕಾರ ಗ್ರಂಥದ ಉಪೋದ್ಘಾತದಿಂದ ಸಂಗ್ರಹಿಸಿ ಈ ಕೆಳಗೆ ಕೊಟ್ಟಿರುವ ವಂಶಾವಳಿಯನ್ನು ಬರೆದಿದೆ. ಆದರೆ ಈ ವಂಶಾವಳಿಗೂ 'ಕಳಲೆಯ ಅರಸುಗಳ ವಂಶಾವಳಿ' ಎಂಬ ಗ್ರಂಥದ ಕೊನೆಯಲ್ಲಿ ಕೊಟ್ಟಿರುವ ವಂಶಾವಳಿಗೂ ಹಲವು ವ್ಯತ್ಯಾಸಗಳಿವೆ. ಇವನ್ನು ಅಡಿ ಟಿಪ್ಪಣಿಗಳಲ್ಲಿ ಸೂಚಿಸಿದೆ.




---

[2] (೧) ಹಿರಿ ತಿಮ್ಮರಾಜ ಒಡೆಯ. ವರ್ಷ ೧೮. (೨) ನಂದಿನಾಥ ಒಡೆಯ. ವರ್ಷ ೧೮. (೩) ಮುದ್ದುಮಲ್ಲರಾಜ ಒಡೆಯ. ವರ್ಷ ೨೬. (೪) ಕಾಂತ ಒಡೆಯ. ವರ್ಷ ೧೩. (೫) ಮಲ್ಲಹಳ್ಳಿ ಚಂದ್ರಶೇಖರ ಒಡೆಯ. ವರ್ಷ ೧೦.

[3] ಇವನಿಗೆ 'ಕರಿಕಾಲ' ಎಂಬ ಹೆಸರು ಬರಲು ಕಾರಣ:—"ತಮ್ಮ (ಎಳಂದೂರ ಹಿರಿರಾಮರಾಜ ಒಡೆಯನ) ಕೊಮಾರತಿ ದೇವೀರಮ್ಮಣ್ಣಿಯವರನ್ನು ವಿವಾಹ ಮಾಡುವಾಗ ಈ ಚಪ್ರಕ್ಕೆ ಅಗ್ನಿಪ್ರವೇಶ ಆದ್ದರಿಂದ ತಮ್ಮ ಕುಟುಂಬವನ್ನು ಕರೆದುಕೊಂಡು ಬರುವಾಗ ಈ ಮಲ್ಲರಾಜ ಒಡೆಯರವರ ಕಾಲಮೇಲೆ ಬೆಂಕಿ ಬಿದ್ದದ್ದರಿಂದ ಪಾದವು ಹುಣ್ಣಾಗಿ ಇರಲಾಗಿ ಅದಕ್ಕ ಇವರ ಭಾವಮೈದುನವರು ಕರಿಕಾಲ ಮಲ್ಲರಾಜ ಒಡೆಯರು ಎಂದು ಕರೆಯಲಾಗಿ ಆ ಹೆಸರೇ ಪ್ರಸಿದ್ಧವಾಯಿತು" ಕ. ಅ. ವ. (ಇವನಿಗೆ ಪತ್ನಿಯರಿಬ್ಬರು;) ಮೂವರು ಗಂಡುಮಕ್ಕಳು.

[4] ಇವನು ಕರಿಕಾಲ ಮಲ್ಲರಾಜನ ಮೊದಲನೆ ಹೆಂಡತಿಯ ಎರಡನೆಯ ಮಗ. ಇವನಿಗೆ ಪತ್ನಿಯರಿಬ್ಬರು; ೭ಜನ ಗಂಡುಮಕ್ಕಳು.

ಮೇಲೆ ಕಂಡ ವಂಶವೃಕ್ಷದಲ್ಲಿ ಹೇಳಿರುವ ಪ್ರಭುಗಳಲ್ಲಿ ಮುಪ್ಪಿನ ಕಾಂತರಾಜನವರೆಗೂ ಎಲ್ಲರೂ ಕಳಲೆಯಲ್ಲಿಯೇ ಆಧಿಪತ್ಯಮಾಡುತ್ತಿದ್ದರು. ಇವರಿಗೂ ಮೈಸೂರಿನ ರಾಜಮನೆತನಕ್ಕೂ ಕೊಟ್ಟುತರುವ ವಾಡಿಕೆಯು ಬಹಳ ಕಾಲದಿಂದ ಬೆಳೆದುಬಂದಿತ್ತು. ದೊಡ್ಡರಾಜನು ಅನೂಚಾನವಾಗಿ ಬಂದ ಕಳಲೆಯ ರಾಜ್ಯವನ್ನು ಬಿಟ್ಟು ಮೈಸೂರಿನ ಚಿಕ್ಕದೇವರಾಜನ ಆಳಿಕೆಯಲ್ಲಿ (೧೬೭೨-೧೭೦೪) ಶ್ರೀರಂಗಪಟ್ಟಣಕ್ಕೆ ಬಂದು ಅಲ್ಲಿ ದಳವಾಯಿಯ ಪದವಿಯನ್ನು ಹೊಂದಿದನು ಆದುದರಿಂದ ಇವನ ಕಾಲದಿಂದ ಈಚೆಗೆ ಕಳಲೆಯ ಪಟ್ಟಕ್ಕೆ ಬಂದವರ ಹೆಸರುಗಳು "ಕಳಲೆ ರಾಜರ ವಂಶಾವಳಿ" ಯ ರೀತ್ಯಾ ಬೇರೆಯಾಗಿವೆ [7]. ಈ ದಳವಾಯಿ ದೊಡ್ಡರಾಜನ ಮಗನೇ ಈ ವೈದ್ಯಗ್ರಂಥವನ್ನು ರಚಿಸಿದ ವೀರರಾಜನು.

ವೀರರಾಜನು ತನ್ನ ಗ್ರಂಥವನ್ನು ಬರೆದ ಕಾಲದ ವಿಷಯವಾಗಿ ಏನನ್ನೂ ಹೇಳಿಕೊಂಡಿಲ್ಲ. ಆದರೆ ಸ್ವಲ್ಪ ಹೆಚ್ಚುಕಡಿಮೆ ಮೇಲೆ ಕಂಡ ವಂಶಾವಳಿಯು

---

[5] ಇವನಿಗೆ ಪತ್ನಿಯರಿಬ್ಬರು. ಹಿರಿಯಮಗ ದಳವಾಯಿ ದೊಡ್ಡಯ್ಯ. ಆದರೆ (Mysore Archæological Report, 1923, ಪುಟ 70) ರಲ್ಲಿ ಸರ್ವಾಧಿಕಾರಿ ನಂಜರಾಜಯ್ಯನಿಗೆ ಸಂಬಂಧಿಸಿದ ಒಂದು ಶಾಸನದ (ನಂ. 58) ವಿಮರ್ಶೆಯಲ್ಲಿ ಕಾಂತರಾಜನಿಗೆ ನಂಜರಾಜ ಎಂಬ ಇನ್ನೊಬ್ಬ ಮಗನಿದ್ದನೆಂದೂ ಇವನಿಗೆ ಬಸವರಾಜನೆಂಬ ಮಗನಾಗಿ ಮೈಸೂರು ದಳದಲ್ಲಿ ದಳವಾಯಿಯಾಗಿದ್ದನೆಂದೂ ಇವನ ಮಗನೇ ಸರ್ವಾಧಿಕಾರಿ ನಂಜರಾಜಯ್ಯನೆಂದೂ ಲಿಖಿತವಾಗಿದೆ. ಇನ್ನೊಂದು ಶಾಸನದಲ್ಲಿ (Mysore Archæological Report, 1929, ಪುಟ 111. ನಂ. 44) ನಂಜರಾಜಯ್ಯನು ವೀರರಾಜಯ್ಯನ ಮಗನೆಂದೂ ದಳವಾಯಿ ದೊಡ್ಡಯ್ಯನ ಮೊಮ್ಮಗನೆಂದೂ ಹೇಳಿದೆ. ಆದುದರಿಂದ ಇಬ್ಬರು ನಂಜರಾಜರಿದ್ದಿರಬೇಕು. ಮೊದಲನೆ ನಂಜರಾಜ ಬಸವರಾಜನ ಮಗ. ಇವನು ಕೆಲವು ಕಾಲ ಸರ್ವಾಧಿಕಾರಿ ಪದವಿಯಲ್ಲಿದ್ದು ಮೃತಿಯನ್ನು ಹೊಂದಿದ ಮೇಲೆ ಕರಾಚೂರಿ ನಂಜರಾಜಯ್ಯನು ಸರ್ವಾಧಿಕಾರಿಯಾದನು. ನಂಜರಾಜಯ್ಯನು ಇಮ್ಮಡಿ ಕೃಷ್ಣರಾಜನ ಕಾಲದಲ್ಲಿ (೧೭೩೪-೧೭೬೬) ಸರ್ವಾಧಿಕಾರಿಯಾಗಿದ್ದನು.

[6] ಇವನಿಗೆ ೪ ಜನ ಪತ್ನಿಯರು. ಇವರಲ್ಲಿ ಕಾರುಗಹಳ್ಳಿ ಗೌರಮ್ಮನ ಮಗ ವೀರರಾಜ. ದೊಡ್ಡಯ್ಯನು ದಳವಾಯಿ ಕಳಲೆ ಕೊಮಾರಯ್ಯನ ಮಗನೆಂದು ಹಲವೆಡೆ ಹೇಳಿದೆ. ೧. (Wilks' History of Mysoor, Vol. I, p. 97, line 3) ೨ ಚಾಮರಾಜೇಂದ್ರ ಒಡೆಯರ ವಂಶರತ್ನಾಕರ (1887). ಪುಟ ೧೦೭, ಪಂಕ್ತಿ ೨; ಪುಟ ೧೧೪ ಪಂಕ್ತಿ ೧). ಆದರೆ ಕ. ಅ ವ. ಯಲ್ಲಿ ತಿಮ್ಮರಾಜನ ಅರುಜನ ಮಕ್ಕಳಲ್ಲಿ ಕೊಮಾರಯ್ಯನ ಹೆಸರು ಕಂಡುಬರುವುದಿಲ್ಲ.

[7] (೧) ಕುಮಾರ ಮಲ್ಲರಾಜಯ್ಯ, ಆಳಿಕೆ ವರ್ಷ ೨೦

(೨) ದಳವಾಯಿ ಕೊಮಾರಯ್ಯನ ಮಗ ಮಲ್ಲರಾಜ, ಆಳಿಕೆ ವರ್ಷ ೨೯

(೩) ಚಲುವಯರಸು, ಆಳಿಕೆ ವರ್ಷ ೧೬

(೪) ದಳವಾಯಿ ದೇವರಾಜ, ಆಳಿಕೆ ವರ್ಷ ೨೭

ಇವರಾದಮೇಲೆ ಹೈದರನು ಇವರ ರಾಜ್ಯವನ್ನು ಮೈಸೂರಿಗೆ ಸೇರಿಸಿಕೊಂಡು ಇವರ ಜೀತಕ್ಕಾಗಿ ಮಾಸಾಶನವನ್ನೂ ಮಾನ್ಯಗಳನ್ನೂ ಕೊಟ್ಟನು.

ಆಧಾರದಿಂದ ಇವನ ಕಾಲವನ್ನು ನಿಶ್ಚಯಿಸಬಹುದು. ಇವನ ತಂದೆಯಾದ ದೇವರಾಜನು ಕ್ರಿ. ಶ. ೧೬೯೧ರ ವರೆಗೂ ದಳವಾಯಿಯಾಗಿದ್ದನು. ಇವನ ಕಿರಿಯ ಮಗನಾದ ನಂಜರಾಜನು (ಕರಾಚೂರಿ) ೧೭೩೪–೧೭೬೬ರ ವರೆಗೆ ಆಳಿದ ಇಮ್ಮಡಿ ಕೃಷ್ಣರಾಜನಲ್ಲಿ ದಳವಾಯಿಯೂ ಮಂತ್ರಿಯೂ ಆಗಿದ್ದನು. ಆದುದರಿಂದ ವೀರರಾಜನು ೧೬೯೧ರಿಂದ ೧೭೩೪ರ ವರೆಗಿರುವ ಅಂತರದಲ್ಲಿ ಯಾವಾಗಲೂ ಜೀವಿಸಿದ್ದಿರಬೇಕು. ಕವಿಚರಿತಕಾರರು ಹೇಳುವಂತೆ ಇವನ ಕಾಲವು ಸುಮಾರು ೧೭೨೦ ಇರಬಹುದು.[8]

ವೀರರಾಜನು ಬಹು ಉದಾರನಾಗಿಯೂ, ದಾನಶೂರನಾಗಿಯೂ ಇದ್ದಂತೆ ತಿಳಿದುಬರುತ್ತದೆ[9] "ಕಾವ್ಯನಾಟಕಾಲಂಕಾರ ವ್ಯಾಕರಣ ತರ್ಕಾಯುರ್ವೇದ ಧನುರ್ವೇದ ಮುಂತಾದ ಸಮಸ್ತ ವಿದ್ಯೆ" ಗಳನ್ನು ಶೈಶವದಲ್ಲಿಯೇ ಕಲಿತವನೆಂದು ತನ್ನ ಗ್ರಂಥದಲ್ಲಿ ಈತನು ಹೇಳಿಕೊಂಡಿರುತ್ತಾನೆ. ಈತನಿಗೆ ಆಯುರ್ವೇದದಲ್ಲಿ ಹೆಚ್ಚು ಪರಿಶ್ರಮವಿದ್ದಿರಬೇಕೆಂದು ತೋರುತ್ತದೆ. 'ರಾಜಾವಳೀ ಕಥೆ' ಯನ್ನು ಬರೆದ ದೇವಚಂದ್ರನು (೧೮೩೮) "ಅನೇಕವೈದ್ಯಶಾಸ್ತ್ರಂಗಳೊಳ್ಪರ್ಚ ರೋಗಹರಮಪ್ಪ ಚಿಕಿತ್ಸೆಗಳಂ ಕನ್ನಡವಾಕ್ಯದೊಳ್ ವೀರರಾಜೋಕ್ತಿವಿಲಾಸ ಮೆಂದು ಬರೆಯಿಸಿದಂ"[10] ಎಂದು ತನ್ನ ಗ್ರಂಥದಲ್ಲಿ ಹೇಳಿರುತ್ತಾನೆ. ಇದರಿಂದ ಇನ್ನಾರೊ ಈ ಗ್ರಂಥವನ್ನು ರಚಿಸಿರಬಹುದೆಂಬ ಸಂದೇಹಕ್ಕೆ ಅವಕಾಶವಿದೆ.

ವೀರರಾಜನು ತನ್ನ ಗ್ರಂಥದ ಪ್ರಸ್ತಾವನೆಯಲ್ಲಿ ತನ್ನ ತಂದೆಯಾದ ದೊಡ್ಡೇಂದ್ರನ ಪರಾಕ್ರಮವನ್ನು ಹೆಚ್ಚಾಗಿ ಹೊಗಳಿ ಮರಾಟರೊಡನೆ ನಡೆದ ಒಂದು ದೊಡ್ಡಯುದ್ಧವನ್ನು ವರ್ಣಿಸಿರುತ್ತಾನೆ. ಈ ಯುದ್ಧವು ಐತಿಹಾಸಿಕ ಸಂಗತಿಯೆಂದು ತಿಳಿದು ಬರುತ್ತದೆ.[11] ವಿಲ್ಕ್ಸಸಾಹೇಬರು ಈ ಯುದ್ಧವು ಕ್ರಿ. ಶ. ೧೬೯೭ರಲ್ಲಿ ನಡೆದಿರಬೇಕೆಂದು ಅಭಿಪ್ರಾಯಪಡುತ್ತಾರೆ. ಆದರೆ ದೊಡ್ಡಯ್ಯನು ಕ್ರಿ. ಶ. ೧೬೯೧ ರ ವರೆಗೆ ಮಾತ್ರ ದಳವಾಯಿಯಾಗಿದ್ದನೆಂದು ತಿಳಿಯುವುದರಿಂದ ಈ ಯುದ್ಧವು ಹೆಚ್ಚೆಂದರೆ ೧೬೯೧ರಲ್ಲಿಯಾದರೂ ನಡೆದಿರಬೇಕು.

ವೀರರಾಜನು ಈ ಯುದ್ಧದ ಸಂಪೂರ್ಣವರ್ಣನೆಯನ್ನು ಕೊಟ್ಟಿಲ್ಲ. ಇತಿಹಾಸಕಾರರು ಇದನ್ನು ಬೇರೆ ರೀತಿಯಲ್ಲಿ ವರ್ಣಿಸಿದ್ದಾರೆ. ದಳವಾಯಿ ದೊಡ್ಡ

---

[8] ಕರ್ಣಾಟಕ ಕವಿಚರಿತೆ III. ಪು. ೧೦.

[9] Mysore Archæological Report, 1923, p. 70.

[10] ಕರ್ಣಾಟಕ ಕವಿಚರಿತೆಯಿಂದ ತೆಗೆದು ಇಲ್ಲಿ ಕೊಟ್ಟಿದೆ.

[11] Wilks' History of Mysoor, Vol I, p. 95. ಚಾಮರಾಜೇಂದ್ರ ಒಡೆಯರ ವಂಶರತ್ನಾಕರ, ಪು. ೧೦೭.

ಯ್ಯನ ಚಮತ್ಕಾರವುಳ್ಳ ಒಂದು ಉಪಾಯದಿಂದ ಶತ್ರುಗಳು ನಿರ್ಜಿತರಾದರೆಂದು ತಿಳಿದುಬರುತ್ತದೆ. ಆ ಯುದ್ಧವು ನಡೆದ ರೀತಿಯನ್ನು ಇತಿಹಾಸಗಳ ಆಧಾರ ದಿಂದ ಸಂಕ್ಷೇಪವಾಗಿ ಹೀಗೆ ವರ್ಣಿಸಬಹುದು.

ಮೈಸೂರಿನ ಸೈನ್ಯವು ತಂಜಾವೂರು ತಿರುಚನಾಪಳ್ಳಿಗಳ ಪ್ರಾಂತದಲ್ಲಿ ಯುದ್ಧದಲ್ಲಿ ತೊಡಗಿದ್ದಿತು. ರಾಜಧಾನಿಯಾದ ಶ್ರೀರಂಗಪಟ್ಟಣದಲ್ಲಿ ಹೆಚ್ಚು ಸೈನ್ಯವಿರಲಿಲ್ಲ. ಈ ಸುಳುವನ್ನು ತಿಳಿದುಕೊಂಡು ಮರಾಟರ ಸರದಾರರಾದ ಜಗದೇವಘಾಟಿ, ನಿಂಬೋಜಿಘಾಟಿ ಎಂಬಿಬ್ಬರು ದೊಡ್ಡಪಡೆಯೊಡನೆ ಶ್ರೀರಂಗ ಪಟ್ಟಣಕ್ಕೆ ದಾಳಿಯನ್ನಿಟ್ಟರು. ಈ ವರ್ತಮಾನವನ್ನು ಚಿಕ್ಕದೇವರಾಜನು ತಿರು ಚನಾಪಳ್ಳಿಯಲ್ಲಿದ್ದ ತನ್ನ ದಳವಾಯಿಯಾದ ಕಳಲೆ ಕುಮಾರಯ್ಯನಿಗೆ ಹೇಳಿ ಕಳು ಹಿಸಿದನು. ಕುಮಾರಯ್ಯನ ಹರೆಯವೆಲ್ಲವೂ ಆಗಲೆ ಕಳೆದುಹೋಗಿ ಮುಪ್ಪು ತಲೆ ದೋರಿತ್ತು. ಅಲ್ಲದೆ ಇವನು ತಿರುಚನಾಪಳ್ಳಿಯನ್ನು ಗೆದ್ದಲ್ಲದೆ ರಾಜಧಾನಿಗೆ ಬರುವುದಿಲ್ಲವೆಂದು ಪ್ರತಿಜ್ಞೆ ಬೇರೆ ಮಾಡಿದ್ದನು. ಆದುದರಿಂದ ತನ್ನ ಮಗನಾದ ದಳವಾಯಿ ದೊಡ್ಡಯ್ಯನನ್ನು ಸೈನ್ಯದೊಡನೆ ಶ್ರೀರಂಗಪಟ್ಟಣದ ರಕ್ಷಣೆಗಾಗಿ ಕಳುಹಿಸಿದನು ದೊಡ್ಡಯ್ಯನು ನಿಂತಲ್ಲಿ ನಿಲ್ಲದೆ ಕಣಿವೆಯನ್ನು ಹತ್ತಿ ದಂಡಿ ನೊಡನೆ ರಾಜಧಾನಿಯ ಪ್ರಾಂತಕ್ಕೆ ಬಂದನು. ಆಗ ತಾನೆ ಸೂರ್ಯನು ಬೈಗು ಗೆಂಪನ್ನು ಚೆಲ್ಲಿ ಪಡುಗಡಲ ತೆರೆಯಲ್ಲಿ ಇಳಿದಿಳಿದು ಮಾಯವಾದನು.

ಅಂದಿನಿರುಳು ಕಾಳರಾತ್ರಿ. ಎಲ್ಲೆಲ್ಲಿಯೂ ನೀರವತೆ. ಮರಾಟರು ಹಗಲಿನ ಹೋರಾಟದಿಂದ ಶ್ರಾಂತರಾಗಿ ಪಾಳೆಯದಲ್ಲಿ ವಿಶ್ರಮಿಸಿಕೊಳ್ಳುತ್ತಲಿದ್ದರು. ಮರು ಗಳಿಗೆಯಲ್ಲಿ ಎಂತಹ ವಿಪತ್ತು ತಮ್ಮನ್ನು ಆವರಿಸಿ ನುಂಗುವುದೆಂಬುದನ್ನು ಅವರು ಸ್ವಲ್ಪವೂ ತಿಳಿದಿರಲಿಲ್ಲ. ಪಾಳೆಯದಲ್ಲಿ ಮಿನುಗುತ್ತಿದ್ದ ಸೊಡರುಗಳ ಅಸ್ಪಷ್ಟವಾದ ಬೆಳಕು ಭಯವನ್ನು ಕಾರುವಂತಿತ್ತು. ದೂರದಲ್ಲಿಯೇ ದೊಡ್ಡ ಯ್ಯನು ಈ ಬೆಳಕುಗಳನ್ನು ದೃಷ್ಟಿಸಿ ನೋಡಿ ಮರಾಟರ ಶಿಬಿರವು ಇದ್ದ ಸ್ಥಳವನ್ನೂ ಸನ್ನಿವೇಶವನ್ನೂ ರಚನೆಯನ್ನೂ ತಿಳಿದುಕೊಂಡನು. ಮರಾಟರು ಸ್ವಭಾವವಾಗಿ ಶೂರರು. ಅವರ ಪಡೆಯಾದರೊ ಬಹು ದೊಡ್ಡದು. ಇವರಮೇಲೆ ಕೈಮಾಡು ವುದು ಕಷ್ಟವೆಂದು ದೊಡ್ಡಯ್ಯನು ಅರಿತು ಒಂದು ಉಪಾಯವನ್ನು ಹೂಡಿದನು.

ದೊಡ್ಡಯ್ಯನು ತನ್ನ ಸೈನ್ಯದ ಸ್ವಲ್ಪ ಭಾಗವನ್ನು ತನ್ನಲ್ಲಿಯೇ ಉಳಿಸಿ ಕೊಂಡು ಮಿಕ್ಕ ಸೈನ್ಯಕ್ಕೆ ಸಮರ್ಥರಾದ ಸರದಾರರನ್ನು ನಾಯಕರನ್ನಾಗಿ ನೇಮಿಸಿ, ತಾನು ಯಾವ ದಿಕ್ಕಿನಿಂದ ಮರಾಟರಮೇಲೆ ನುಗ್ಗಬೇಕೆಂದಿದ್ದನೊ ಆ ದಿಕ್ಕಿಗೆ ಎದುರಾಗಿ ಮರಾಟರ ಪಾಳೆಯವನ್ನು ಬಳಸಿಕೊಂಡು ಹೋಗಿ ರಾಜಧಾ ನಿಯಿಂದ ಹೊಸ ಸೈನ್ಯವು ಬಂದಿತೆಂಬ ಭ್ರಾಂತಿಯನ್ನು ಮರಾಟರಿಗೆ ಹುಟ್ಟು ವಂತೆ ಮಾಡಬೇಕೆಂದೂ, ತಾನು ನುಗ್ಗಿದ ಕೂಡಲೆ ಅವರೂ ಮರಾಟರ ಮೇಲೆ

ಬೀಳಬೇಕೆಂದೂ ಬೋಧಿಸಿ ಕಳುಹಿಸಿಕೊಟ್ಟನು. ತನ್ನ ಸನ್ನಾಹವೆಲ್ಲವೂ ಸಾಂಗವಾಗಿ ಮುಗಿಯಿತು. ಆ ಮೇಲೆ ದೊಡ್ಡಯ್ಯನು ಎರಡು ಮೂರುಸಾವಿರ ಎತ್ತುಗಳನ್ನು ತರಿಸಿ ಅವಕ್ಕೆ ಅಪಾಯವಾಗದಂತೆ ಕೊಂಬುಗಳಿಗೆ ದೊಡ್ಡ ಪಂಜುಗಳನ್ನು ಬಿಗಿದುಕಟ್ಟಿಸಿ ಒಂದೇಸಲ ಎಲ್ಲಾ ಪಂಜುಗಳನ್ನೂ ಹೊತ್ತಿಸಿ ಮರಾಟರ ಶಿಬಿರದ ಮೇಲೆ ಎತ್ತುಗಳನ್ನು ನುಗ್ಗಿಸಲು ಮೊದಲು ಮಾಡಿದನು. ಮರಾಟರಿಗೆ ಇದೇನೆಂಬುದು ಗೊತ್ತಾಗಲಿಲ್ಲ. ಕಾಳ್ಕಿಚ್ಚು ಹರಿದು ಬರುವಂತೆ ರಭಸದಿಂದ ಸಾಗಿ ಬರುತ್ತಿದ್ದ ಪಂಜುಗಳ ಜ್ಯೋತಿಯನ್ನು ಕಂಡು ಅವರು ಚಕಿತರಾದರು, ಭಯಭ್ರಾಂತರಾದರು. ಶತ್ರುಗಳ ಕಪಟವೆಂದು ತಿಳಿದುಕೊಳ್ಳುವಷ್ಟುಹೊತ್ತಿಗೆ ಪಂಜಿನ ಜ್ವಾಲೆಯು ಕಡಲು ಪಾಳೆಯದ ಮೇಲೆ ದಾಳಿಯಿಟ್ಟಿತು. ಮರಾಟರೆಲ್ಲರೂ ಈ ದಿಕ್ಕಿನಿಂದಲೇ ಶತ್ರುಗಳು ಬಂದರೆಂದು ತಿಳಿದು ಯುದ್ಧಕ್ಕೆ ಆರಂಭಿಸಿದರು. ಇಷ್ಟುಹೊತ್ತಿಗೆ ಸರಿಯಾಗಿ ದೊಡ್ಡಯ್ಯನು ನೇಮಿಸಿದ್ದ ಸರದಾರರ ಪಡೆಯು ಹಿಂದುಗಡೆಯಿಂದ ಬಂದು ಮರಾಟರ ಮೇಲೆ ನುಗ್ಗಿ ಅವರ ಸೈನ್ಯವನ್ನು ಚೆದರಿಸಿ ಹರಿಹಂಚುಮಾಡಿತು. ಅವರ ದಳದ ನಾಯಕರು ಮಡಿದರು. ದೊಡ್ಡಯ್ಯನು ಪ್ರಳಯ ಭೈರವನ ಆಕಾರವನ್ನು ತಾಳಿ ಯುದ್ಧದಲ್ಲಿ ಶತ್ರುಗಳನ್ನು ಕಡಿಕಂಡ ಮಾಡಿದನು. ಮರಾಟರ ಅಳಿದುಳಿದ ಪಡೆಯು ಪಲಾಯನ ಮಾಡಿತು. ಮರುದಿನ ಪ್ರಾತಃಕಾಲದಲ್ಲಿ ಚಿಕ್ಕದೇವರಾಜನು ದೊಡ್ಡಯ್ಯನ ಸಾಹಸವನ್ನು ಕೇಳಿ ರಿಪುರಕ್ತದಲ್ಲಿ ಮಿಂದ ಆ ರಣಧೀರನನ್ನು ಇದ್ದಹಾಗೆಯೇ ಕರೆಯಿಸಿ ಅನೇಕವಾದ ಖಿಲ್ಲತ್ತುಗಳನ್ನೂ ಬಹುಮಾನಗಳನ್ನೂ ಕೊಟ್ಟು ಮನ್ನಿಸಿದನು.

ವೀರರಾಜನು ಈ ಗ್ರಂಥದ ಬಹುಭಾಗವನ್ನು ಕನ್ನಡದಲ್ಲಿ ಬರೆದಿದ್ದಾನೆ; ಉಳಿದ ಭಾಗವನ್ನು ತೆಲುಗು ಭಾಷೆಯ ಗದ್ಯ ಸರಣಿಯಲ್ಲಿ ಬರೆದಿರುವನು. ಇದರಲ್ಲಿ ೧೮೬ ವಿಧವಾದ ಪ್ರಯೋಗಗಳಿವೆ. ರೋಗ ನಿದಾನದಲ್ಲಿಯಾಗಲಿ ಚಿಕಿತ್ಸಾ ಕ್ರಮದಲ್ಲಿಯಾಗಲಿ ಇರುವ ಭಿನ್ನಾಭಿಪ್ರಾಯಗಳನ್ನು 'ಮತಾಂತರೆ' ಎಂದು ಬರೆದು ಸೂಚಿಸಿದ್ದಾನೆ ಅಲ್ಲಲ್ಲಿ ವೈದ್ಯಶಾಸ್ತ್ರದಲ್ಲಿ ಪ್ರವೀಣರಾದ ಪೂರ್ವಾಚಾರ್ಯರ ಹೆಸರುಗಳನ್ನು ಹೇಳಿದ್ದಾನೆ. ಈ ಗ್ರಂಥದ ಮೊದಲು ೧೨೮ ಪುಟಗಳಲ್ಲಿ ಇರುವ ತೆಲುಗು ಭಾಷೆಯ ಪ್ರಯೋಗಗಳು ಕನ್ನಡಕ್ಕೆ ಪರಿವರ್ತಿತವಾಗಿವೆ. ಉಳಿದಕಡೆ ಹೀಗೆ ಮಾಡದೆ ವೀರರಾಜನ ಗ್ರಂಥದ ಸ್ವರೂಪಕ್ಕೆ ಕುಂದು ಬರದ ಹಾಗೆ ತೆಲುಗು ಭಾಷೆಯನ್ನೇ ಉಪಯೋಗಿಸಿದೆ.

ಈ ಪುಸ್ತಕವು ಎರಡು ಪ್ರತಿಗಳ ಆಧಾರದಿಂದ ಮುದ್ರಿತವಾಗಿದೆ. ಮೊದಲನೆಯದು ಓಲೆಯಪ್ರತಿ. ಇದಕ್ಕೆ (ಕ) ಎಂಬ ಸಂಕೇತವನ್ನು ಕೊಟ್ಟಿದೆ. ಇದು ತಕ್ಕಮಟ್ಟಿಗೆ ಶುದ್ಧವಾಗಿದೆ. ಇದರಲ್ಲಿರುವ ತೆಲುಗುಭಾಷೆಯು ಇನ್ನೊಂದು ಪ್ರತಿಯಲ್ಲಿನ ಭಾಷೆಗಿಂತ ಶುದ್ಧವಾಗಿದೆ. ಸಾಧಾರಣವಾಗಿ ಇದನ್ನೇ ಆಧಾರವಾಗಿಟ್ಟು

ಕೊಂಡಿರುವುದಾಗಿದೆ. ಅಲ್ಲಲ್ಲಿ ಹಲವು ಓಲೆಗಳು ಲುಪ್ತವಾಗಿವೆ. ಎರಡನೆಯ ಪ್ರತಿಯು ಕಾಗದದ ಪ್ರತಿ. ಇದಕ್ಕೆ ಸಂಕೇತ (ಗ) ಎಂದು. ಇದೇನೂ ಅಷ್ಟು ಶುದ್ಧವಾದುದಲ್ಲ. ಇದರಲ್ಲಿಯ ತೆಲುಗು ಭಾಷೆಯಂತೂ ವಿಚಿತ್ರವಾದ ರೂಪವನ್ನು ಹೊಂದಿದೆ. ಈ ಪ್ರತಿಯು ಮೊದಲ ಪ್ರತಿಗೆ ಸಹಾಯಕಾರಿ, ಇಷ್ಟೆ.

ಈ ಪುಸ್ತಕವನ್ನು ಅಚ್ಚುಹಾಕಿಸುವ ಕೆಲಸವು ಮಹಾಮಹೋಪಾಧ್ಯಾಯ ಡಾ॥ ಆರ್. ಶ್ಯಾಮಶಾಸ್ತ್ರಿ, ಬಿ.ಎ., ಪಿ.ಎಚ್.ಡಿ., ಅವರ ಕಾಲದಲ್ಲಿ ಮೊದಲಾಯಿತು. ಆಗ ನನ್ನ ಸ್ಥಾನದಲ್ಲಿದ್ದ ಶ್ರೀಮಾನ್ ಜಿ. ಕಸ್ತೂರಿ, ಬಿ.ಎ., ಬಿ.ಎಲ್., ಅವರು ಈ ಪುಸ್ತಕದ ಮೊದಲ ೧೨೮ ಪುಟಗಳನ್ನು ಪರಿಷ್ಕರಿಸಿ ಅಚ್ಚುಹಾಕಿಸಿದರು.

ಈಗ ಅಚ್ಚಾಗಿರುವುದು ಈ ಗ್ರಂಥದ ಮೊದಲ ಭಾಗ ಮಾತ್ರ. ಇದರಲ್ಲಿ ಅನೇಕ ಲೋಪಗಳಿವೆ ಎಂಬುದನ್ನು ಬಲ್ಲೆವು. ಮಹನೀಯರು ಈ ದೋಷಗಳನ್ನು ತೋರಿಸಿ ಅವನ್ನು ಸರಿಪಡಿಸುವ ರೀತಿಯನ್ನು ಸೂಚಿಸಿದರೆ ಅವರಿಗೆ ತುಂಬ ಕೃತಜ್ಞರಾಗಿರುವೆವು. ಮುಂದಿನ ಮುದ್ರಣದಲ್ಲಿಯಾದರೂ ಸರಿಪಡಿಸಿಕೊಳ್ಳಬಹುದು. ಈಗ ಮುದ್ರಿತವಾಗಿರುವ ಭಾಗವು ಜನಸಮುದಾಯಕ್ಕೆ ಉಪಯುಕ್ತವಾಗಿದೆ ಎಂದು ತಿಳಿದುಬಂದರೆ ಮುಂದಿನ ಭಾಗವನ್ನೂ ಅಚ್ಚುಹಾಕಿಸುವ ಪ್ರಯತ್ನವನ್ನು ಮಾಡಲಾಗುತ್ತದೆ.

ಈ ಗ್ರಂಥವನ್ನು ಉಪಯೋಗಿಸುವ, ವೈದ್ಯರಲ್ಲದ ಜನಗಳಿಗೆ ಸೂಚನೆಯೊಂದನ್ನು ಕೊಡಬಹುದು. ಅನುಭವವುಳ್ಳ ವೈದ್ಯರ ಅನುಮತಿಯನ್ನೂ ಸಲಹೆಯನ್ನೂ ಪಡೆದು ಅದರಂತೆ ವರ್ತಿಸಬೇಕಲ್ಲದೆ ಬರಿಯ ಪುಸ್ತಕವನ್ನು ನೆಚ್ಚಿಕೊಂಡು ಹೋಗಬಾರದು. ಈ ಎಚ್ಚರಿಕೆಯನ್ನು ವಾಚಕರು ಗಮನದಲ್ಲಿಟ್ಟುಕೊಳ್ಳುವುದು ಉತ್ತಮವೆಂದು ತೋರುತ್ತದೆ.

ಮೈಸೂರು,

೧೨-೩-೧೯೩೨.

# ವಿಷಯಸೂಚಿಕೆ

| ವಿಷಯ | ಪುಟ |
|---|---|

# ಶುದ್ಧಾಶುದ್ಧಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 3 | 2 | ದಾದಾಜೀ | ದಾದಜೀ |
| 4 | 19 | ನಿರಾಕತ | ನಿರಾಕೃತ |
| 15 | 3 | ಶ್ಲೆಷ್ಮಾಧಿಕ್ಯ | ಶ್ಲೇಷ್ಮಾಧಿಕ್ಯ |
| 17 | 1 | ವಿಧಾನ | ನಿದಾನ |
| ,, | 5 | ಯೌವ್ವನ | ಯೌವನ |
| ,, | 31 | ದುಷ್ಪಾಂಗ | ಪುಷ್ಪಾಂಗ |
| 18 | 7 | ಬೂದಿವರ್ನ | ಬೂದಿವರ್ಣ |
| ,, | 16 | ವತ್ಸರಿಗ | ಮತ್ಸರಿಗ |
| 23 | 24 | ಸ್ಥಾವಿರ ವಿಷಜಂಗಮ, ವಿಷ, | ಸ್ಥಾವರವಿಷ, ಜಂಗಮ ವಿಷ |
| 26 | 1 | ಕುಂಥಶಾಕ | ಕುಂಥಶಾಖ |
| ,, | 13 | ವಿಷೂಜಿ | ವಿಷೂಚಿ |
| 28 | 12 | ವಿದ್ರಡಿ | ವಿದ್ರುಧಿ |
| ,, | 29 | ಉದರು | ಉದುರು |
| 29 | 1 | ವಹುವವು | ವಹುವು |
| ,, | 25 | ಪವರ್ತ | ಪರ್ವತ |
| ,, | ,, | ಬಾಹ್ಮಣ | ಬ್ರಾಹ್ಮಣ |
| 31 | 4 | ಅಧ್ಯಂಗನ | ಅಧ್ಯಂಜನ |
| 33 | 12 | ವರ್ಧಿಸುವುದ್ನು | ವರ್ಧಿಸುವುದು |
| 34 | 24 | ಶುಧ | ಶುಭ್ರ |
| 43 | ,, | ಕಿಂಚಿತಂಕರ | ಕಿಂಚಿತ್ ಭೇದಿಕರ |
| 48 | 20 | ರೋಗೆ | ರೋಗ |
| ,, | 30 | ಹುಟುವ | ಹುಟ್ಟುವ |
| 49 | 26 | ಯಕ್ಕ | ಎಕ್ಕ |
| 52 | 14 | ತುಪ | ತುಪ್ಪ |
| ,, | 15 | ಹಾಲ್ಪು | ಹಾಲು |
| ,, | 19 | ಎಂಟ | ಎಂಟು |
| 55 | 29 | ಆಧ್ಯಯನ | ಆಧ್ಯಯನ |
| 56 | 25 | ಹೆಚ್ಚ | ಹೆಚ್ಚು |
| 60 | 1 | ತಿಮರ | ತಿಮಿರ |
| 63 | 14 | ಉವ್ವಾಸ | ಉಚ್ಛ್ವಾಸ |
| 63 | 23 | ದಕ್ಷಧ್ವರ | ದಕ್ಷಾಧ್ವರ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 63 | 24 | ಲಯಕತ್ಮ | ಲಯಕರ್ತೃ |
| 64 | 31 | ಶಿಹಿ | ಸಿಹಿ |
| 65 | 12 | ವಾತಜ್ವ | ವಾತಜ್ವರ |
| ,, | ,, | ಅರಿಸಿನದ | ಅರಿಸಿನ |
| 67 | 6 | ಗುಳ | ಗುಳ್ಳ |
| ,, | 31 | ಶೀತಜ್ವಪ | ಶೀತಜ್ವರಪ |
| 68 | 3 | ಮಡಿವಾಳ | ಮುಡಿವಾಳ |
| ,, | 16 | ಕಡಿಯೆ | ಕುಡಿಯೆ |
| 70 | 32 | ಅಟ್ಟ | ಅಟ್ಟು |
| 71 | 6 | ತೆಗೆದ | ತೆಗೆದು |
| ,, | 7 | ಒಳಕೆ | ಒಳಕ್ಕೆ |
| ,, | 11 | ಚಕೆ | ಚಕ್ಕೆ |
| 73 | 7 | ಸಹ ಕೂಡ | ಸಹ |
| ,, | 18 | ಮುಲ | ಮೂಲ |
| 77 | 1 | ಲ್ಕಗಳು | ಕಲ್ಕಗಳು |
| ,, | 21 | ಗುಳಿಯುಂ | ಗುಳಿಗೆಯುಂ |
| 81 | 9 | ಕಲೆಸಿ | ಕಲಸಿ |
| ,, | 12 | ಹೊಮ್ಮಗಳು | ಹೊಮ್ಮುಗುಳು |
| 83 | 14, 22 | ಅಮರದ | ಅಮರದ |
| 85 | 19 | ಅಷ್ಟ | ಯಷ್ಟಿ |
| 86 | 6 | ಎರಡ | ಎರಡು |
| 87 | 17 | ಕೋಷ | ಕೋಷ್ಟ |
| 88 | 11 | ಚಟು | ಚಟ್ಟು |
| ,, | 12 | ಕೊನಾರಿ | ಕೊನ್ನಾರಿ |
| ,, | 24 | ಲೋಳ | ಲೋಳಿ |
| 97 | 23 | ಸೀವನ್ನಿ | ಶಿವನ್ನಿ |
| 98 | 1 | ಪಱಿದು | ಪರಿದು |
| 100 | 17 | ಶೂಲೇ | ಶೂಲೆ |
| 101 | 4 | ಕಷಯ | ಕಷಾಯ |
| 102 | 15 | ಒಡತ | ಒಡೆತ |
| 104 | 5 | ಎಲವು | ಎಲುವು |
| 106 | 6 | ತಪ್ಪಿ | ತಪಿ |
| 109 | 16 | ಸ್ತ್ರೀಸಂಗ್ಯ | ಸ್ತ್ರೀಸಂಗ |
| ,, | 17 | ಅಪಥ | ಅಪಥ್ಯ |
| 112 | 6 | ಅತ್ತಿ ಚಕ್ಕೆ,.ಲೋನಾರು | ಅತ್ತಿ ಚಕ್ಕಲೊನಾರು |
| 116 | 4 | ಮಿಚೆ | ಮುಚೆ |
| 125 | 4 | ಓಡಲ | ಔಡಲ |
| ,, | 23 | ವರ್ಜ | ವರ್ಜ್ಯ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 128 | 12 | ವಾಯುವಿಳಂಗ | ವಾಯವಿಳಂಗ |
| 129 | 2 | ಸ್ಮಶಾನ | ಶ್ಮಶಾನ |
| 131 | 9 | ಸ್ವರನಾದ | ಸ್ವರಸಾದ |
| 137 | 16 | ಗೃಹಣಿ | ಗ್ರಹಣಿ |
| 140 | 15 | ಕೊಡೀಶ | ಕೋಡೀಶ |
| 141 | 27 | ಅರೋೕಚವಾಗಿ | ಅರೋಚಕವಾಗಿ |
| 144 | 28 | ಗಣಚಿಲ | ಗಣಜಿಲ |
| 147 | 4 | ಜುಟ್ಟಿ | ಜುಂಟಿ |
| 155 | 15 | ಅಗಿ | ಅಗ್ನಿ |
| ,, | 18 | ಈಯುನ್ನು | ಈಯುನು |
| ,, | 22 | ರಸತೊ | ರಸಮುತೂ |
| 161 | 22 | ಸಿತಾಂಗ | ಶೀತಾಂಗ |
| ,, | ,, | ರಕ್ತಷ್ಟವಿ | ರಕ್ತಷ್ಮೀವಿ |
| 174–5 | 12 ಇತ್ಯಾದಿ | ರಕ್ತಷ್ಟವಿ | ರಕ್ತಷ್ಮೀವಿ |
| 178 | 8 | ಕೊಡಲಿ | ಕೊಡಲು |
| 179 | 14 | ನಶ್ಯ | ನಸ್ಯ |
| 183 | 25 | ಮೂನೀಳ್ಳು | ಮೂನಃಳ್ಳು |
| ,, | 26 | ಉಂಡ | ಉಂಡು |
| ,, | 28 | ಇದಿಕಿ | ದೀನಿಕಿ |
| 192 | 16 | ಕಡುಹು | ಕುಡುಹು |
| 195 | 7 | ಲಲು | ಲಮುಃಲು |
| 201 | 7 | ಅವಿನಿ | ಅಪಿನಿ |
| 203 | 13 | ಗಾಜಿ | ಗಾಚಿ |
| 204 | 13 | ಚೆವ್ಯ | ಚವ್ಯ |
| ,, | 16 | ಇಚ್ಚಿನ | ಇಚ್ಚಿತೆ |
| 207 | 10 | ದ್ವಿಪ | ದ್ವೀಪ |
| 219 | 11 | ಮುನಿಯು | ಮುನಿವ |
| 235 | 1 | ಗೊರ್ಚಿ | ಗೋರ್ಚಿ |
| 242 | 22 | ನೀಟಿಲೊ | ನೀಡುಲೊ |
| 259 | 15 | ಬಿಕ್ಕುಳ್ಳು | ಬಿಕ್ಕುಳು |
| 269 | 22 | ತುಪ | ತುಪ್ಪ |
| 271 | 7 | ಯಂಡೆ | ಯುಂಡೆ |
| 272 | 9 | ಪಿಪ್ಪಲಾದಿ | ಪಿಪ್ಪಲ್ಯಾದಿ |
| 275 | 19 | ಜಲ್ಲಡು | ಜಿಲ್ಲಡು |
| 277 | 11 | ಚಿಲ | ಚೀಲ |
| 278 | 12 | ಚಿಕ್ಕಿತ್ಸೆ | ಚಿಕಿತ್ಸೆ |
| 294 | 21 | ಶ್ಲೇಷ | ಶ್ಲೇಷ್ಮ |
| ,, | ,, | ಗಜ್ಜು | ಗಜ್ಜುಗ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 303 | 17 | ಹೂವ್ವಿನ | ಹೂವಿನ |
| 317 | 6 | ಗುರತ | ಗುರುತ |
| ,, | 10 | ಮಳೆ | ಮೊಳೆ |
| ,, | 18 | ಕ್ಯೈಯ್ಯಲಿ | ಕ್ಮೈಯಲಿ |
| 340 | 1 | ಶೇಷ್ಮಾ | ಶ್ಲೇಷ್ಮಾ |
| 346 | 21 | ಚೆತ್ರ | ಚಿತ್ರ |
| 374 | 19 | ಮಜ್ಜಗೆ | ಮಜ್ಜಿಗೆ |
| 384 | 12 | ತಿಲು | ತುಲು |
| 392 | 18 | ಆಶ್ರೈಸಿ | ಆಶ್ರಯಿಸಿ |
| 393 | 7ಇತ್ಯಾದಿ | ಆಶ್ಮರಿ | ಆಶ್ಮರಿ |

ಶ್ರೀ

# ವೀರರಾಜೇಂದ್ರೋಕ್ತಿವಿಲಾಸ

## ಸಕಲ ವೈದ್ಯಸಂಹಿತಾಸಾರಾರ್ಣವ

ಕ್ಷೀರಾಂಭೋರಾಶಿಗಾಢಪ್ರಮಥನಜನಿತೋತ್ಪಾತಮಂ ತೂಳ್ದಿ ಲಬ್ಧೋ ।
ದಾರಶ್ರೀಕಲ್ಪಭೂಜಾದಿಗಳಿನಖಿಳದೇವರ್ಕಳಂ ಸಂತವಿಟ್ಟಾ ॥
ಧೌರೇಯಂ ದೇವದೇವಂ ತ್ರಿಜಗದೊಳೆನೆ ವಿಖ್ಯಾತಿಯಂ ತಾಳ್ದಿ ನಿತ್ಯಂ ।
ಶ್ರೀರಮ್ಯಾವಾಸನಾದಂ ಸಲಹುಗೆ ಕೃಪೆಯಿಂದೆಮ್ಮನೆಂದುಂ ಮಹೇಶಂ ॥೧॥

ಶ್ರೀರಾಮಾರಮಣೀಮನೇತ್ರರುಚಿಗಳ್ ಸ್ವೀಯಾಂಗಮಂ ಚಿತ್ರಿಸು ।
ತ್ತೀರಂತೊಪ್ಪುತೆ ದಿವ್ಯಸೂರಿವಿವಿಧಸ್ತೋತ್ರಪ್ರಹೃಷ್ಟಂ ಕೃಪಾ ॥
ಸಾರಂಬೆತ್ತ ಕಟಾಕ್ಷದಿಂ ಪೊರೆಯಲೀ ಭೂಲೋಕಮಂ ಪಶ್ಚಿಮ
ಶ್ರೀರಂಗಾಧಿಪನಾದನೆಮ್ಮನೊಲವಿಂ ರಕ್ಷಿಕ್ಕೆ ನಾರಾಯಣಂ ॥೨॥

ಶ್ರೀಯುಂ ಪಾಲಿತದಿವಿಜನಿ
ಕಾಯಂ ನಿಯಮಿತ ಸಮಸ್ತ ಲೋಕಾಭ್ಯುದಯೋ ॥
ಪಾಯುಂ ಕುಡುಗೆಮಗಖಿಳ ವಿ
ಧೇಯಂ ಶ್ರೀರಾಮನಮಳಗುಣಗಣಧಾಮಂ ॥೩॥

ವರಕರ್ಣಾಟಕಮಧ್ಯದೊಳ್ ಸಕಳಸಂಪತ್ಸಾರಸೌಭಾಗ್ಯದಿಂ ।
ಧರಣೀಕಾಂತೆಗೆ ಕುಂತಳಂಬೊಲೆಸೆಗುಂ ತಾಂ ಕುಂತಳಂ ದೇಶಮೈ ॥
ಸಿರಿಯಂ ಬೀರುತದಕ್ಕೆ ರತ್ನಖಚಿತಪ್ರಾಸಾದಸಂತಾನ ಸುಂ ।
ದರಮೊಪ್ಪಂಬಡೆದೊಪ್ಪುಗುಂ ಮಿಗೆ ಮಹೀಶೂರಾಖ್ಯೆಯಿಂ ಪಟ್ಟಣಂ ॥೪॥

ಇಂತೆಸೆವಾ ಪಟ್ಟಣದೊಳ್
ಕಂತುಸಮಂ ರಾಜರಾಜವಿಭವಂ ವೈರಿಕ್ಷ ॥
ತಾಂತಂ ವಿದಿತಾಖಿಲ ವೃ
ತ್ತಾಂತಂ ಜಿತವೈಷ್ಣವಾನ್ಯಮತಸಿದ್ಧಾಂತಂ ॥೫॥

ಸಿರಿಯಾಣ್ಮಂ ಸಕಲಕಲಾ
ಪರಿಣತನಪ್ರತಿಮನಮಿತ ಮಹಿಮಂ ನತದಿ ॥
ಕ್ಪರಿವ್ರಢ ಕಿರೀಟ ವರಮಣಿ
ಕಿರಣಸಮಾಶ್ಲಿಷ್ಟಚರಣನಾಶ್ರಿತಶರಣಂ ॥೬॥

ವೀರಂ ಧೃತಸಕಲ ಮಹೀ
ಪಾರಂ ಯದುಕುಲಲಲಾಮನದ್ಭುತಶೌರ್ಯಾ ॥
ಗಾರಂ ಪ್ರಕೃಷ್ಟಸತ್ತ್ವೋ
ದಾರಂ ಹತವೈರಿಭೂಪ ಸಂಪತ್ಸಾರಂ ॥೭॥

ಬಿರುದಂತೆಂಬರ ಗಂಡಂ
ಧುರಧೀರಂ ಚಾರುಕೀರ್ತಿಧವಳಿತಭುವನಂ ॥
ತರಣಿಸಮತೇಜನತಿಶಯು
ವರಗುಣಸಮ್ಮೋದಿತಾವನೀದೇವಗಣಂ ॥೮॥

ನಲವಿಂ ಪಾಲಿಸುತೀ ಧರಾತಲಮನಾ ಶ್ರೀ ಚಿಕ್ಕದೇವೇಂದ್ರನು ।
ಜ್ವಲಿಸುತ್ತೊಪ್ಪಿರೆ ತನ್ಮಹಾಮಹಿಮತೇಜಂ ಮೂರ್ತಿಗೊಂಡಂತೆ ನಿ ॥
ರ್ಮಲವೃತ್ತಂ ಜಗದೇಕವೀರನಮಳಾಕಾರಂ ಪೃಥಾಪುತ್ರನಿ ।
ಶ್ಚಲಶೌರ್ಯಂ ರಣಭೂಚಲಜ್ಜಯಃರಮಾಪಾಣಿಗ್ರಹಪ್ರಾಭವಂ ॥೯॥

ಕಳಲೇ ದೊಡ್ಡೇಂದ್ರಭೂಪಂ ದಶಗಜಬಲನಾ ಚಿಕ್ಕದೇವೇಂದ್ರಚಂದ್ರೋ ।
ಜ್ವಳ ಸೇನಾಧೀಶನಾದಂ ತಳೆಯೆ ಯದುಃಬಲಂ ಪೆರ್ಮೆಯಂ ರಮ್ಯಲಕ್ಷ್ಮೀ॥
ನಿಳಯಂ ತಾನಾಗೆ ಕರ್ಣಾಟಕಮರಿಪು[1]ರಿ[1]ಗಳ ಭೀತಿಯಿಂ ಬೆರ್ಚೆ ನಿಚ್ಚಂ।
ತೊಳಗುತ್ತಂ ಕೀರ್ತಿಚಂದ್ರಾತಪಮೊಡನಿಳೆಯಂ ಪರ್ವೆ ಸಂರಂಭದಿಂದಂ ॥

ಮತ್ತಮಾವಾರ್ತೆಯಂ ಕೇಳ್ದು ಮರಾಟರೊಳ್ ಡಿಳ್ಳಿಯಾಗರೆ ಭಾಗಾನಗರ ವಿಜಯಾಪುರದ ನಾಡುಬೀಡುಗಳಂ ಕಡಿದುಃ ಸೂರೆಗೆಯ್ದು ಪಾದುಶಾಹನಿಹ ದೇಶ

[1] ಲಿ (ಗ)

ದೊಳ್ಮೊದಲಾಗಿ ಚೌತಾಯಮಂ ಕೊಂಡು ಪ್ರಸಿದ್ಧಿವೆತ್ತಿರ್ಪಂ ಜೇಜೇ ಘಾಟಿ. [ಇವನುಂ] ನಿಂಜೋಜಿಘಾಟಿ, ದಾದಾಜೀ ಕಾಕಡೆ, ಜಸವಂತರಾವು ಮುಂತಾದ ನಿಬರುಂ ಕನರ್ಲ್ದೊಂದೆ ಸಮಯದೊಳ್ ತಂತಮ್ಮ ಬಲಂ ಬೆರಸೇಳ್ತಂದು ಕೋಟೆಗಳಂ ದುರ್ಗಂಗಳಂ ಮುತ್ತಿ ಸೀಮೆಯಂ ಸೂರೆಗೆಯ್ಯುತ್ತಿರೆ ನಿಜಸೇನೆಯೊಡನೇಳ್ತಂದು ನಿಂದಾಗಳ್ ಬಲವೆರಡುಂ ಬೆಟ್ಟುಗಳ್ಪಳಂಚುವಂತೆ ಪಳಂಚಿ ಸುರಗಿ ಸೆಲ್ಲಹ ಚಕ್ರ ಮುಸುಂಡಿ ಪರಿಘ ಬಿಂಡಿವಾಳ ಗದಾಘಾತಂಗಳಿಂ ಗಾಯಂಬಡೆದು ಕೈದೆಗೆದು ಕಾದುತ್ತಿರ್ಪ ಸೈನಿಕರಂ ಕಂಡು ಕೋಪದಿಂ ಧನುವಂ ಕೊಂಡು ಸಿಡಿಲಂ ಸರಂಗೊಳಿಸಿದಂತೆ ತಿಬ್ಬಿನಬ್ಬರಂ ಸೈನ್ಯ ಕಲಕಲಮಂ ನುಂಗಿ ದಿಗಂತಮಂ ನೀಡಿರಿವುತ್ತಿರೆ ಬಾಯಿಧಾರೆಗಳ್ ಕುಡಿಮಿಂಚುಗಳಂತಾಗೆ ಶರವೃಷ್ಟಿಯಂ ಕರೆದು ಮಾರ್ಬಲದ ಶೌರ್ಯಾನಲನಂ ನಂದಿಸಿ ರಣಾಂಕಣದೊಳ್ ತೊಳಗುತ್ತಿರ್ಪ ಸೇನಾಧಿಪಂಗೆ ಮುಳಿದು, ೪

ಬರೆ ಜೇಜೇಘಾಟಿ ಮುಂತಾದನಿಬರ ಶಿರಮಂ ಕೋಲ್ಗಳಿಂ ಕೊಯ್ವನಾದು।
ರ್ಧರವೀರಾವೇಶಮಂ ಕಂಡೊಡನೆ ಗಜಹಯಾನೀಕಮಂ ಬಿಟ್ಟು ಬಾಯ್ದೊ ॥
ಳ್ಬೆರಲಂ ಸಾರ್ಚುತ್ತೆ ಕಯ್ಯಂ ಮುಗಿವುತೆ ಸುಭಟಂ ಸಾಗೆ ನಿಟ್ಟೋಟದಿಂ ಬಿ।
ಲ್ದಿರುವಂ ಹಸ್ತಾಗ್ರದಿಂ ನೇವರಿಸುತೆ ನಲವಿಂ ನಿಂದನಾ ಸೈನ್ಯನಾಥಂ ॥೧೧॥

ಮತ್ತಮೊಂದೆಡೆಯೊಳ್ ಮಹಾಸೈನ್ಯಂ ಶೌರ್ಯಾತಿರೇಕದಿಂ ಸುತ್ತುಂ ಮುತ್ತಿ ಕಡಿವುತ್ತುಂ ಮೇಲ್ವೀಳೆ,

ಪುಡಿಯಾಗಲ್ ಸೀಸಕಂಗಳ್ ಕಡಿವಡೆದುದುರಲ್ ಜೋಡುಗಳ್ ಕೈಯ ಕೈದಿ।
ಕ್ಕಡಿಯಾಗಲ್ ನೇಜಯಂಗಳ್ ಮುರಿದುರುಳೆ ಗುಳಂ ನುಗ್ಗುನುಗ್ಗಾಗೆ ಜೋದರ್॥
ಕೆಡೆಸುಲ್ ಬಲ್ಗಾಯದಿಂ ಬಿಳ್ದಿರಲೆ ನೆಲದೊಳಾರಾವುತರ್ ಕೇತನಂಗಳ್ ।
ಸಿಡಿವುತ್ತುಂ ಬೀಳೆ ಬಿಲ್ಲಿಂದುಗುಳಿಸಿ ಶರಮಂ ಕೊಟ್ಟಿದಂ ಕೂಡೆ ಮತ್ತಂ ॥೧೨॥

ಇರಿವಾಳ್ಗೊಂದಣಮಂ ಹಯಪ್ರಕರಮಂ ಮತ್ತೇಭ ಸಂದೋಹಮಂ ।
ತರಿದಿರ್ತುಂಡಿಸಿ ಸೀಳ್ದು ಬಾಣತತಿಯಿಂ ಕೈಗೈವರಿಲ್ಲೆಂಬಿನಂ ॥
ತುರುಗಿರ್ದಾರಿಪು ಸೈನ್ಯದೊಳ್ ಭಟಸಮಾಜಂ ಬೆರ್ಚೆ ಬಿಲ್ಬಲ್ಮೆಯಂ ।
ಮೆರೆದಂ ಪಾರ್ಥಪರಾಕ್ರಮಂ ರಣದೊಳಾ ದೊಡ್ಡೇಂದ್ರ ಸೈನ್ಯಾಧಿಪಂ ॥೧೩॥

ಮತ್ತಮದಂ ಕಂಡು,

ಕಡುಗುತ್ತುಂ ದಾದಜೀಕಾಕಡೆಯೆನಿಪ ಮಹಾಶೂರನೇಳ್ತಂದಿದಿರ್ಚಲ್ ।
ಕಡಿದಂ ಕೂರಂಬಿನಿಂದಾತನನವಮ ಮಹಾಯುದ್ಧಮಾಯ್ತಲ್ಲಿ ನೆತ್ತರ್ ॥

ಕಡಲಂತಾದತ್ತು ಮಾಂಸಂನೆಣವಸೆಕರುಳ್ಗಳ್ ಸುತ್ತಲುಂ ತೀವಿ ಜೌಗೆ ।
ದ್ವಿಡಿಯಿರ್ಕಲ್ ಬಾರದೆಂಬಂತಿರೆ ಭಯರಸಮಂ ಬೀರಿತಾ ಯುದ್ಧರಂಗಂ ॥೧೪॥

ತದನಂತರದೊಳ್,

ನಾನಾದೇಶಾಧಿನಾಥರ್ ಸುಗಿದು ಬಹುಧನಸ್ತ್ರೀಗಜಾಶ್ವಂಗಳಂ ಕೊ ।
ಟ್ಟಾನಂದಂ ಮಿಾರೆ ತಂತಮ್ಮಯ ನೆಲೆನೆಲೆಯೊಳ್ ನಿಂದರೊಳ್ಪಿಂ ಮರಾಟರ್ ॥
ಮಾನಂಗೆಟ್ಟೋಡೆ ಮುಂದೇಳ್ದವರ ಗಡಿಗಳಂ ಬಲ್ಮೆಯಿಂದೀಳ್ದು ದುರ್ಗ ।
ಸ್ಥಾನಂಗಳ್ಗಿಟ್ಟನಾಗಳ್ ಗಜಘಟತತಿಯಿಂ ಕಾಪನಾ ದೊಡ್ಡಭೂಪಂ ॥೧೫॥

ಇಂತು ಮರಾಟರೊಳ್ ಪ್ರಸಿದ್ಧರಾಗಿರ್ದ ಜೇಜೇಘಾಟಿ ಮುಂತಾದ ಮಹಾಶೂರರಂ ಕಡಿದವರಾನೆಕುದುರೆ ಬೊಕ್ಕಸ ದೂಸು ದುಮಾನ ಬಿರುದು ಮುಂತಾದವಂ ಕೊಂಡು ಜಸವಂತರಾಯನ ಮೂಗಂ ಕೊಯ್ಸಿ ಕರ್ಣಾಟಕ ದೇಶಮಂ ವಿಜಯಲಕ್ಷ್ಮೀನಾಟಕಪ್ರದೇಶಮೆನಿಸಿದ ಜಯವಾರ್ತೆಯಂ ಕೇಳ್ದವರಂಗ ಜೇಬು ಪಾದುಶಾಹ ಮುಂತಾದ ಭೂಮಿಾಶ್ವರರೆಲ್ಲರುಂ ಭಾಪುಭಾಪೆಂದು ಕೈಯೆತ್ತಿ ಕೊಂಡಾಡುತ್ತಿರೆ ಕರ್ಣಾಟಕ ಚಕ್ರವರ್ತಿ ಚಿಕದೇವೇಂದ್ರಂಗೆ ದಕ್ಷಿಣ ಭುಜಾದಂಡಮೆನಿಸಿ ಕೀರ್ತಿವಡೆದ ದಳವಾಯಿ ದೊಡ್ಡೇಂದ್ರನ ಕುಮಾರಂ ವೀರ ರಾಜೇಂದ್ರನೆಳಮೆಯೊಳ್ ಕಾವ್ಯನಾಟಕಾಲಂಕಾರವ್ಯಾಕರಣತರ್ಕಾಯುರ್ವೇದ ಧನುರ್ವೇದ ಮುಂತಾದ ಸಮಸ್ತ ವಿದ್ಯಂಗಳಂ ಕಲ್ತು ಶೌರ್ಯ್ಯೌದಾರ್ಯ ಸ್ಥೈರ್ಯ ಗಾಂಭೀರ್ಯಮಾಧುರ್ಯಚಾತುರ್ಯವಿನಯಾದಿ ಗುಣಂಗಳೆ ಮೂರ್ತಿ ಗೊಂಡಂತೆ ಯೌವ್ವನದಿಂ ಪಜ್ಜಳಿಸುತ್ತಂಗಜನಂತೆ ಕಾಮಿನೀನಯನಾ [1]ಸೇಚ[1]ಕನುಂ, ಚಂದ್ರನಂತೆ ಕುವಲಯಾನಂದಕರನುಂ, ಸೂರ್ಯನಂತೆ ನಿರಾಕ ತಾನ್ಯತೇಜನುಂ, ಸಮುದ್ರನಂತೆ ಗೋತ್ರಸಂರಕ್ಷಕನುಂ, ಕುಬೇರನಂತೆ ಪುಣ್ಯಜನ ಪರಿವೇಷ್ಟಿತನುಂ, ದೇವೇಂದ್ರನಂತೆ ವಿಬುಧಾವನ ಪರಾಯಣನುಂ ನಿಧಿಯಂತೆ ಸರ್ವಾಭೀಷ್ಟಪ್ರದನುಮಾಗಿ ನೆಗಳ್ತೆವಡೆದು ತಾಂ ಸಕಲಕಲಾಕೋವಿದನಪ್ಪು ದರಿಂ, ವಿದ್ವತ್ಸಮಾಜದೊಳ್ ಕಾವ್ಯನಾಟಕಾಲಂಕಾರತರ್ಕಶಬ್ದವಿಚಾರಂಗೆಯ್ಯು ತ್ತೊಂದುದಿನ ಮಾಯುರ್ವೇದಮಂ ವಿಚಾರಿಸುತ್ತಿರ್ದು

ಧರೆಯೊಳ್ ಭೈಷಜ್ಯಶಾಸ್ತ್ರಂ ಸುಖಕರಮಖಿಳರ್ಗಾದೊಡಂ ವೈದ್ಯಬೋಧಂ ।
ತರದಿಂ ತಳ್ವುತ್ತೆ ಬಂದತ್ತವನಿಯೊಳೆನುತಾ ವೈದ್ಯಶಾಸ್ತ್ರಕ್ಕೆ ಟೀಕಂ ॥
ಬರೆದಂ ವೈದ್ಯಪ್ರ[2]ವೇಕ[2]ರ್ ಪೊಗಳುತಿರೆ ಮಹಾಸಂಹಿತಾದುಗ್ಧರತ್ನಾ ।
ಕರದಿಂದತ್ತುತ್ತೆ ಸಾರಾಂಶಮನೊಡನೊಲವಿಂ ವೀರರಾಜಕ್ಷಿತೀಂದ್ರಂ ॥೧೬॥

---

[1]ಸ್ಮೇರ (ಗ)  [2] ವೀಣ (ಗ)

## ಪೀಠಿಕಾಪ್ರಕರಣ

ವೀರರಾಜೋಕ್ತಿವಿಲಾಸ ಸಕಲ ವೈದ್ಯಸಂಹಿತಾಸಾರಾರ್ಣವದೊಳ್ ಪೀಠಿಕಾಪ್ರಕರಣವೆಂತೆನೆ,

ಶ್ರೀನಾಥಂ ಶಿರಸಾ ನತ್ವಾ ಜರಾದ್ಯಾಮಯಶಾನ್ತಯೆ ।
ಭೇಷಜಾನಿ ಪ್ರಶಸ್ತಾನಿ ಸಂಗೃಹ್ಯನ್ತೆ ಸಮಾಸತಃ ॥

ಈ ಶ್ಲೋಕಾರ್ಥವನ್ನು ಲಾಲಿಸಿ ನೋಡುವಲ್ಲಿ ಲಕ್ಷ್ಮೀಪತಿಯಾದಂಥ ಆ ನಾರಾಯಣನಿಗೆ ನಮಸ್ಕಾರವನ್ನು ಶಿರಸ್ಸಿನಿಂದ ಮಾಡಿ ಮುಪ್ಪುರೋಗಾದಿಗಳು ಮುಂತಾದ ವ್ಯಾಧಿಗಳ ಪರಿಹಾರಾರ್ಥವಾಗಿ ಪ್ರಶಸ್ತವಾದ ಔಷಧಗಳನ್ನು ಸಂಗ್ರಹಿಸಿ ಹೇಳುತ್ತಲಿದ್ದರೂ, ರೋಗನಿವೃತ್ತಿಗೆ ಔಷಧಗಳಂ ಮಾತ್ರ ಹೇಳಬೇಕಲ್ಲದೆ ಮೊದಲು ನಾರಾಯಣನಿಗೆ ನಮಸ್ಕಾರವಂ ಮಾಡುವ ಕಾರಣವೇನು ಎಂದೊಡೆ, ಸಕಲೈಶ್ವರ್ಯವನ್ನೂ ನೋಟದಿಂದಲೇ ಉಂಟುಮಾಡುವ ಶ್ರೀ ದೇವಿಗೂ ಒಡೆಯನಾಗಿ, ಅಣುಮಹತ್ಪರಿಪೂರ್ಣನಾಗಿ, "ಭಯಕೃದ್ಭಯನಾಶನಃ" ಎಂಬುವುದರಿಂದ ಭಯವನ್ನುಂಟುಮಾಡುವವನು, ಭಯುವ ಪರಿಹಾರಮಾಡುವವನು ತಾನೆ ಆಗಿ, ಈ ಅನಂತ ಕಲ್ಯಾಣಗುಣಗಳಿಗೂ ನಿಕ್ಷೇಪಸ್ಥಾನವಾಗಿರುವಂಥ ನಾರಾಯಣನಿಗೆ ನಮಸ್ಕಾರಮಾಡುವ ಮಾತ್ರದಿಂದಲೇ ಸಕಲ ಜೀವಾಂತರ್ಯಾಮಿಯಾಗಿ ಪ್ರಾಣಾದಿ ವಾಯುಗಳಲ್ಲಿಯೂ ಅಗ್ನಿಯಲ್ಲಿಯೂ ತನ್ನ ಶಾಖವನುಂಟುಮಾಡುವುದರಿಂದ ಜೀವರಿಗುಂಟಾದ ರೋಗಗಳ ಹರಂಗೆಯ್ವ ಔಷಧಗಳಲ್ಲಿಯೂ ತಾನೇ ವ್ಯಾಪಿಸಿರ್ಪುದರಿಂ ತನ್ನನ್ನು ಸ್ಮರಿಸುವಂಥ ಭಕ್ತರಿಗೆ ತಾನೆ ಶುಭವನ್ನುಂಟುಮಾಡುವುದರಲ್ಲಿ ಸಂದೇಹವೇನೆಂಬುದರಿಂದ ಲಕ್ಷ್ಮೀಪತಿಗೆ ಮೊದಲು ನಮಸ್ಕರಿಸಿ ರೋಗಹರವಾದ ಔಷಧಗಳನ್ನು ಬಳಿಕ ಪೇಳ್ವೆನೆಂಬುದೇ ಸಮಸ್ತ ವೇದಶಾಸ್ತ್ರಾದೀತಿಹಾಸಪುರಾಣಂಗಳ ಸಮ್ಮತಮಾಗಿರ್ಪುವೆಂಬುದೆ ಈ ಶ್ಲೋಕಾರ್ಥ. ಅದೆಂತೆಂದೊಡೆ,

ರಮ್ಯವಾಗಿರುವ ಕೈಲಾಸಪರ್ವತದಲ್ಲಿ ನವರತ್ನಖಚಿತವಾದ ಸಿಂಹಾಸನಾಸೀನನಾಗಿ ಸಕಲ ಭೂತಹಿತಪರನಾಗಿ ಜಗದ್ರಕ್ಷಕನಾಗಿ ಬ್ರಹ್ಮಾಂಡಕ್ಕೆಲ್ಲ ತಾನೆ ಒಡೆಯನಾಗಿರುವಂಥ ಪರಮೇಶ್ವರನು ದಿಕ್ಪಾಲಕ ಸಮೇತನಾಗಿ ಒಡ್ಡೋಲಗಂಗೊಟ್ಟಿರ್ಪಲ್ಲಿ ಒಂದಾನೊಂದುದಿನವುಮಾದೇವಿಯು ತನ್ನೆರೆಯನಂತರಂಗದ

ಹರ್ಷವನರಿತು ತಾನೆಳಸಿದ ಧೂತಹಿತ ಪ್ರಯೋಜನವನ್ನು ಆ ಪರಮೇಶ್ವರನಿಂದಲೇ ತಿಳಿಯ ಕೇಳ್ವೆನೆಂಬಿಚ್ಛೆಯಿಂದ ಸನ್ನಿಧಿಯನ್ನೈದಿ ಆ ರಾಜಶೇಖರನ ಎಡದೊಡೆಯೊಳ್ಕುಳಿತು ವಿಜ್ಞಾಪನಂಗೆಯ್ವಲ್ಲಿ ಮಹಾಭಕ್ತಿಯಿಂದ ಅತ್ಯಂತ ದೈನ್ಯಗೂಡಿ ಸ್ವಾಮಿ, ಈ ಚತುರ್ವಿಧವಾದ ಜೀವರಾಶಿಗಳ ಸೃಷ್ಟಿಸಿದಂಥ ಚತುರ್ಮುಖಬ್ರಹ್ಮನು ಆಯಾ ಜೀವರುಗಳಿಗೆ "ಶತಾಯುಃ ಪುರುಷಶ್ಶತೇಂದ್ರಿಯಃ" ಎಂಬೀ ಶ್ರುತಿವಾಕ್ಯಾನುಸಾರವಾಗಿ ನೂರುವರ್ಷದಾಯುಷ್ಯವನ್ನು ಆ ಆಯುಷ್ಯವಿರುವ ಪರ್ಯಂತವೂ ಇಂದ್ರಿಯಬಲವನ್ನು ಕೂಡ ಉಂಟುಮಾಡಿ ಇದಕ್ಕೆ ತಪ್ಪದಂತೆ ಪಣೆಯೊಳಾಬ್ರಹ್ಮನೇ ಲಿಖಿಸಿರುವ ಹಾಗೂ, ಬ್ರಹ್ಮನೇ ಕಟ್ಟಳೆ ತಪ್ಪದೆ ನಡೆವನೆಂಬ ಹಾಗೂ, ವೇದವಾಕ್ಯಗಳಿಂದ ಕೇಳಿರುವ ಎನ್ನ ಬುದ್ಧಿಗೆ ಯಥಾರ್ಥವಾಗಿ ಈ ಪ್ರಕಾರಕ್ಕೆ ನಡೆಯಲಿಲ್ಲವೆಂಬ ಹಾಗೆ ತೋರುತ್ತಾ ಇದ್ದೀತು. ಅದೇತಕ್ಕೆಂದೊಡೆ,

ಈ ಮರ್ತ್ಯರುಗಳಿಗೆ ಜನನಮರಣಾದಿಗಳು ಮಿತಿಯಿಲ್ಲದೆ ಕೆಲಬರು ಹುಟ್ಟುತ್ತಲೇ ಲಯವನ್ನೈದುವುದರಿಂದಲೂ ಮಧ್ಯೆ ರೋಗಾದಿಗಳಿಡೆಗೊಂಡು ಮರಣವಾಗುವುದರಿಂದಲೂ ಬ್ರಹ್ಮ ಬರೆದ ಬರೆಹ ತಪ್ಪುವುದೆಂಬ ಹಾಗೆ ನಿಶ್ಚಯವಾಗಿ ಕಾಣಿಸುವಂಥ ಈ ಸಂಶಯವೇ ಸಹಜವಾದರೆ ಆ 'ಶತಾಯುಃ ಪುರುಷಃ' ಎಂಬ ಶ್ರುತಿವಾಕ್ಯಕ್ಕೂ ತಪ್ಪಿಲ್ಲದೆ ಇರುವ ಬಗೆ ಹೇಗೆ? ಈ ಮನುಷ್ಯರುಗಳು ಮಧ್ಯೆ ರೋಗಾದಿಗಳಿಂದ ನವೆದು ಮರಣವನ್ನೈದುವ ಯಾತನೆಯನ್ನು ನೋಡಿದರೂ ನನಗೆ ಮೊದಲಾಗಿ ಮಹಾಸಂಕಟ ತೋರುತಲಿದ್ದೀತು. ಈ ಹುಟ್ಟಿದ ಜೀವರುಗಳು ತಮ್ಮಾಯುಃಪರಿಮಾಣವುಳ್ಳ ಪರ್ಯಂತರವೂ ರೋಗಾದಿಗಳಿಲ್ಲದೆ ಸುಖವಾಗಿರುವ ಉಪಾಯವೇನು? ಆ ಉಪಾಯವೆನ್ನ ಮನಸ್ಸಿಗೆ ಮಹಾಸಂತೋಷವಾಗಿರುವುದಾದಕಾರಣ ಈ ಸಂಶಯಪ್ರಶ್ನೆಗೆ ಪ್ರತ್ಯುತ್ತರವನ್ನು ವಿವರಿಸಬೇಕೆಂದು ವಿಸ್ತಾರವಾಗಿ ಬಿನ್ನವಿಸುವ ಭವಾನಿಯ ವಾಕ್ಯವನ್ನು ಲಾಲಿಸಿದಂಥ ಪರಮೇಶ್ವರನು ಅಪಾರ ಸಂತೋಷಚಿತ್ತನಾಗಿ, ಎಲೌ ಪಾರ್ವತೀದೇವಿಯೇ ಕೇಳು, ಈಗ ನೀನು ಕೇಳುವಂಥ ಪ್ರಶ್ನೆಯು ವೇದವಾಕ್ಯಕ್ಕೂ, ಬ್ರಹ್ಮಲಿಖಿತಕ್ಕೂ ಸಾಮರಸ್ಯವನ್ನುಂಟುಮಾಡುವಂಥಾದ್ದು. ಹೃದಯಾಂತರ್ಯಾಮಿಯಾದ ಶ್ರೀಮನ್ನಾರಾಯಣನಿಗೆ ಅನೇಕ ಸಂಭ್ರಮ ಸಂತೋಷಕರವಾದಂಥಾದ್ದು. ಆದ್ದರಿಂದ ಈ ವಿಷಯವನ್ನು ವಿಸ್ತಾರವಾಗಿ ಸೊಲ್ಲಿಸುವೆ, ಲಾಲಿಸು. ವೇದಾಂತವೇದ್ಯನಾಗಿ ಸಕಲ ಕಲ್ಯಾಣಗುಣಂಗಳಿಗೂ ಆವಾಸಸ್ಥಾನನಾಗಿ ಅಪಾರಮಹಿಮನಾಗಿ ವೈಕುಂಠದೇಶಾಧೀಶನಾಗಿ ಲಕ್ಷ್ಮೀಪತಿಯಾಗಿ ನಾನುಂ ಮೊದಲಾಗಿ ಸಕಲ ದೇವತೆಗಳಿಗೂ ಶರಣಸ್ಥಾನವಾದ ಚರಣಾರವಿಂದವುಳ್ಳವನಾಗಿರುವಂಥ ಶ್ರೀ ನಾರಾಯಣನು ತನ್ನ ನಾಭೀಕಮಲದಿಂದ ಚತುರ್ಮುಖಬ್ರಹ್ಮನನ್ನುಂಟುಮಾಡಿದನು. ಆ

ಬ್ರಹ್ಮನಿಂದ ಭೃಗು ಮೊದಲಾದ ನವಬ್ರಹ್ಮರೂ ಅಷ್ಟದಿಕ್ಪಾಲಕರೂ, ಸೂರ್ಯಚಂದ್ರರೂ, ಮನುವಿನಿಂದ ಮನುಷ್ಯರೂ ಒಗೆದರು. ಈ ನವಬ್ರಹ್ಮರೂ ಮನು ಮೊದಲಾದ ಋಷಿಗಳೂ, ದೇವತೆಗಳೂ ಮನುಷ್ಯರೂ ಮುಂತಾಗಿ ಸಕಲರೂ ತಮ್ಮ ತಮ್ಮ ಶಕ್ತಿಬುದ್ಧ್ಯನುಗುಣವಾಗಿ ಯುಗಧರ್ಮಮಿರ್ದಂತೆ ತಿಳಿದಿರ್ಪರು. ಆ ವೇದವಾಕ್ಯಂಗಳಿಗೆ ಎಂದೆಂದಿಗೂ ಬಾಧಕವಿಲ್ಲದಿರ್ಪುದು; ಅದೇ ರೀತಿಯಲ್ಲಿ ಬ್ರಹ್ಮ ಬರೆದ ಬರೆಹಕ್ಕೂ ಊಣೆಯುಮಿಲ್ಲದಿರ್ಪುದು. ಅವೆರಡಕ್ಕೂ ಎಡರುಂಟಾಯಿತೆಂದರೆ ಆ ನಾರಾಯಣನೇ ಯುಗಯುಗಂಗಳೊಳವತಾರಂಗೆಯ್ದು ಆ ಬಾಧಕವಂ ಪರಿಹರಿಸಿ ವೇದವಾಕ್ಯವೆ ತನ್ನ ವಾಕ್ಯವಾದ ಕಾರಣ ಆ ಶ್ರುತಿವಾಕ್ಯವನ್ನು ಸತ್ಯವೆನಿಸುವನು ಅದೆ ಬ್ರಹ್ಮ ಬರೆದ ಬರೆಹವೆನಿಸುವುದು. ಇಂತಿಪ್ಪಲ್ಲಿ ಸತ್ಯಸಂಕಲ್ಪನಾದ ನಿತ್ಯಶುದ್ಧಬುದ್ಧನಾದ ಶ್ರೀ ಹರಿಯು ತನ್ನ ಲೀಲಾವಿನೋದದಿಂದ ಉಂಟುಮಾಡಿರ್ಪ ಈ ಬ್ರಹ್ಮಾಂಡದಲ್ಲಿ ಹುಟ್ಟಿದ ಜೀವಕೋಟಿಗಳಾದ್ಯಂತವೂ ಅನುಭವಿಸುವ ಪುಣ್ಯಪಾಪಾನುಗುಣವಾದ ಫಲಗಳು ಪೂರ್ವಕರ್ಮಾನುರೂಪವಾಗಿರ್ಪುವು. ಆ ಕರ್ಮಫಲದಿಂದ ಮಧ್ಯೆ ರೋಗಂಗಳಡಸಿ ಬಾಧೆ ಪಡುತ್ತಿಪ್ಪ ಜೀವಕೋಟಿಗಳಂ ರಾಜೀವಲೋಚನಂ ದಯಾದೃಷ್ಟಿಯಿಂ ನಿರೀಕ್ಷಿಸಿ ಈ ರೋಗಂಗಳಿಗೆ ಈ ಔಷಧವೆಂಬ ಮಿತಿಯನ್ನುಂಟುಮಾಡಿ ಮಿಕ್ಕಿನವರು ಈ ಕಟ್ಟಳೆಯಿಂ ತಿಳಿದು ನಡೆಸುವುದು ಕಟ್ಟಾಯಸವೆಂಬುದರಿಂ ತಾನೆ ಧನ್ವಂತರಿ ಎಂಬ ನಾಮಧೇಯದಿಂ ವೈದ್ಯನಾಗಿ ಅವತರಿಸಿ ಪಲವುಂ ತೆರನಾದ ರೋಗ ಭೇದಗಳನ್ನೂ ಈ ರೋಗಗಳಿಗೆ ಈ ಔಷಧವೆಂಬ ಮಿತಿಯಾಗಿರ್ಪ ಮೂಲಿಕೆ ಮುಂತಾದ ವಸ್ತುಗಳಲ್ಲಿ ವಾತಪಿತ್ತ ಶ್ಲೇಷ್ಮಾದಿ ದೋಷತ್ರಯವಾದ ವಸ್ತುಗಳಿವು, ಈ ಮೂರು ದೋಷಗಳನ್ನುಂಟುಮಾಡುವ ವಸ್ತುಗಳೆಂಬ ವೃತ್ತಾಂತ ಸಕಲವೂ ಏರ್ಪಾಡಾಗಿ ಆ ಸಮಸ್ತ ವಸ್ತುಗಳಲ್ಲಿ ತಾನೆ ವ್ಯಾಪಿಸಿರುವುದರಿಂದ ಸರ್ವಜ್ಞನಾದ ಆ ಧನ್ವಂತರಿಯಾದ ನಾರಾಯಣನು ಆಯುರ್ವೇದಾನುಕೂಲವಾದನೇಕ ವೈದ್ಯಗ್ರಂಥಗಳನ್ನು ಪರಿಮಿತಿ ಇಲ್ಲದೆ ರಚಿಸಿರ್ಪನು. ಇದಲ್ಲದಿನ್ನೂ ಆ ನವಬ್ರಹ್ಮರೂ ವಸುಮುನಿಗಳೂ ಅನೇಕ ವಿಧವಾಗಿ ತದನುಗುಣವಾಗಿಯೇ ಈ ವೈದ್ಯವಿಶೇಷಮಂ ಸೊಲ್ಲಿಸಿರ್ಪರು. ಅದೇರೀತಿಯಲ್ಲಿ ಪುಟ್ಟುವ ರೋಗಂಗಳಿಗೆ ತಕ್ಕ ಚಿಕಿತ್ಸೆಯನೆಗಳಲೊಡನಾರೋಗ್ಯಕರವಾಗಿರ್ಪುದೆಂದು ಪೇಳ್ವ ಶ್ರೀಪರಮೇಶ್ವರನ ವಾಕ್ಯಂಗಳಂ ಕೇಳ್ದು ಎಲೆ, ಸ್ವಾಮಿ ಈ ಮರ್ಯಾದೆಯಲ್ಲಿ ನೀವು ಬುದ್ಧಿಕಲಿಸಿದಂಥ ಈ ವೃತ್ತಾಂತವು ಬಹು ಸಂಗ್ರಹವಾಗಿರುವುದರಿಂದ ಶ್ರೀ ಹರಿಯವತಾರವೂ ಸಕಲ ಜೀವೋಪಕಾರವೂ ಕೂಡ ಉಂಟಾಗಿರುವ ಈ ಸತ್ಕಥೆಯನ್ನು ಇನ್ನೂ ವಿಸ್ತಾರವಾಗಿ ಕೇಳಲಪೇಕ್ಷಿಸಿ ಇದ್ದೇನೆಯಾದುದರಿಂದ ನನ್ನಮೇಲೆ ದಯೆಯಿಂದಲೂ ಸಕಲಭೂತ ಹಿತೋಪಕಾರವಾಗಿರುವುದರಿಂದಲೂ ಭೂತೇಶನಾದ ನೀನು ಬೇಸರ

ವಿಲ್ಲದೆ ಕಟಾಕ್ಷವಿಟ್ಟು ವಿವರವಾಗಿ ನಿರೂಪಿಸಬೇಕು ಎಂದು ಕೇಳುವಂಥ ರುದ್ರಾಣಿ ಗೋಸ್ಕರವಾಗಿ ರುದ್ರದೇವರು ನಿರೂಪಿಸುತಲಿದ್ದರು. ಅದೆಂತನೆ,

ಅಪಾರಮಹಿಮನಾದ ಆ ನಾರಾಯಣನ ಅವತಾರ ಚರಿತ್ರಗಳನ್ನು ಆದ್ಯಂತವಾಗಿ ತಿಳಿದು ಹೇಳುವುದಕ್ಕೆ ಅನಂತವಾದ ವೇದಗಳಿಂದಲೂ ಅಶಕ್ಯ ವಾಗಿರ್ಪಲ್ಲಿ ಪೆರತೊರ್ವರ್ಗೆ ಶಕ್ಯವಲ್ಲೆಂಬುದು ಸರಿಯೈಸ ; ಆ ಬ್ರಹ್ಮೇಂದ್ರಾದಿ ಗಳಿಗೆ ಅಗೋಚರನಾದ ಅನಂತ ವೇದಗಳಿಂದಲೂ ಸ್ತುತಿಸಲು ಯೋಗ್ಯನಾದ ಆ ನಾರಾಯಣನು ಎನ್ನ ಮೇಲಣ ದಯಾವಿಶೇಷದಿಂದೊಂದಾನೊಂದು ದಿನಂ ತನ್ನವತಾರ ಕಥಾ ಪ್ರಸಂಗಂಗಳಂ ಎನ್ನೊಡನೆ ನಿರೂಪಿಸಿಕೊಂಡು ಬರುವಲ್ಲಿ ಮಧ್ಯೇ ಕ್ಷೀರಸಮುದ್ರಮಥನವ್ಯಾಜದಿಂದ ಧನ್ವಂತರಿಯವತಾರವನ್ನೂ, ಅಮೃತ, ಐರಾವತ, ಆಳಿಲೆಕಾಯಿ ಮುಂತಾದ ವಸ್ತೂತ್ಪತ್ತಿ ವಿಶೇಷಂಗಳನ್ನೂ ಸೊಲ್ಲಿ ಸಿರುವನು. ಅದರಲ್ಲಿ ಜ್ಞಾಪಕಕ್ಕೆ ಒಂದಷ್ಟು ಹೇಳುತಲಿದ್ದೇವೆ. ಮುನ್ನ ಸ್ವರ್ಗಾಧಿಪತಿಯಾದ ದೇವೇಂದ್ರನು ಐರಾವತ ಕುಂಭಸ್ಥಳಾರೂಢನಾಗಿ ಸಕಲ ದೇವತಾಸಮೇತನಾಗಿ ಒಂದಾನೊಂದುದಿವಸ ತನ್ನ ಉದ್ಯಾನವನವನ್ನೀಕ್ಷಿಸುವ ಕಾಂಕ್ಷೆಯಿಂದ ಸಾರಿಯಾಗಿರ್ಪಲ್ಲಿ ದೂರ್ವಾಸಋಷಿಯು ಸ್ವರ್ಗಲೋಕಕ್ಕೆ ಬಂದು ಈ ದೇವೇಂದ್ರನಂ ಕಂಡು ತನ್ನ ಕೊರಳಲ್ಲಿರ್ದ ಪಾರಿಜಾತವೃಕ್ಷದ ಪುಷ್ಪದ ನೆಗಳಿದ ಮಂದಾರಮಾಲೆಯಂ ತೆಗೆದು ದೇವೇಂದ್ರನ ಬಳಿಗೆ ಈಡಾಡಲು ಈ ವೇಷಮಂ ಕಾಣದೆ ದೇವೇಂದ್ರನು ಯಥಾಸ್ಥಿತನಾಗಿರ್ದಲ್ಲಿ ಐರಾವತವು ತನ್ನ ಸೊಂಡಲಿ ನಿಂದ ಮಂದಾರಮಾಲೆಯಂ ತೆಗೆದು ನೆಲಕ್ಕೆ ಈಡಾಡಲಾಗಿ ದೂರ್ವಾಸ ಋಷಿಯು ಮಹತ್ತಾಗಿ ಕೋಪಿಸಿ ಎಲೆ, ದೇವೇಂದ್ರನೆ, ನಾವು ಕೊಟ್ಟ ಮಂದಾರ ಮಾಲೆಯಂ ಸ್ವೀಕರಿಸಿ ಶಿರಸಾವಹಿಸದೆ ಉದಾಸೀನಂಗೈದೆಯಲಾ, ಅದರಿಂದ ಈ ದೋಷದಿಂದಲೇ ನಿನ್ನ ಐಶ್ವರ್ಯವು ನಷ್ಟವಾಗಿ ಹೋಗಲಿ ಎಂದು ಶಾಪವ ನಿತ್ತು ದೂರ್ವಾಸ ತನ್ನ ದಾರಿಗೊಂಡು ತಾನು ಹೋದಲ್ಲಿ ಅದೇ ರೀತಿಯಲ್ಲಿ ನಷ್ಟ ವಾದ ಐಶ್ವರ್ಯವನುಳ್ಳ ದೇವೇಂದ್ರನನ್ನು ಕಂಡಂಥ ದಾಯಾದಿಗಳಾದ ರಾಕ್ಷಸರು ಅದೇ ಸಮಯದಲ್ಲಿ ಸ್ವರ್ಗಕ್ಕೆ ಮುತ್ತಿಗೆಯನಿಕ್ಕಿ ದೇವೇಂದ್ರನ ಸಕಲೈಶ್ವರ್ಯ ವನ್ನೂ ಅಪಹರಿಸಿ ಪರಾಜಿತನ ಮಾಡಲಾಗಿ ಸಕಲದೇವತಾ ಸಮೇತನಾದ ದೇವೇಂದ್ರನು ಸಹ ಆ ಬ್ರಹ್ಮದೇವರು ಕ್ಷೀರಸಾಗರವನ್ನೈದಿ ವೇದವಾಕ್ಯಗಳಿಂ ಸ್ತುತಿಸಿ ಭಕ್ತಾಭೀಷ್ಟ ಫಲಪ್ರದನಾದ ಶ್ರೀಹರಿಯ ದಯಾಭಿಮುಖವಿಗ್ರಹನಂ ಮಾಡಿಕೊಂಡು ಬಿತ್ತರಿಸಿದ ಈ ವಿವರಮಂ ತಾನರಿತವನಾದೊಡಂ ಆಗತಾನೆ ತಿಳಿದವನಂತೆ ಲಾಲಿಸಿ ಈ ಕ್ಷೀರಸಾಗರವಂ ಕಡೆವ ಯತ್ನವನ್ನು ರಾಕ್ಷಸರ ಕೂಡ ನೀವು ಮಾಡಿದರೆ ನಿಮ್ಮ ಇಚ್ಛೆಯು ನೆರವೇರುವಂತೆ ತಾನೇ ಆಗುಮಾಡಿಕೊಡುವೆ ನೆಂದು ಅಭಯವಿತ್ತು ಅಂತರ್ಧಾನವಾಗಲಾಗಿ ಆ ದಿಕ್ಕಿಗೆ ಬ್ರಹ್ಮಾದಿದೇವತೆಗಳು

ನಮಸ್ಕರಿಸಿ ಕಳುಹಿಸಿಕೊಂಡು ಬಂದು ರಾಕ್ಷಸರೊಡನೆ ಸಂಧಾನವನೆಸಗಿ ಈ ಕಾರ್ಯಕ್ಕೆ ಅನುಕೂಲ ಮಾಡಿಕೊಂಡು ಮಂದರಪರ್ವತವನ್ನು ಕಡೆಗೋಲಾಗಿ ಮಾಡಿ ಮಹಾಶೇಷನಂ ತೆಗೆದು ನೇಣಂಗೆಯ್ದು ದೇವತೆಗಳೂ ರಾಕ್ಷಸರೂ ಕೂಡ ಕಡೆವಲ್ಲಿ ಮೊದಲು ತೆಗೆನೇಣಾದ (?) ಮಹಾಶೇಷನ ಉಚ್ಛ್ವಾಸದಿಂದೊಗೆದ ವಿಷ ಜ್ವಾಲೆಯಿಂ ಅನೇಕ ರಾಕ್ಷಸರು ಹತವನೈದಿದಲ್ಲಿಯುಂ ಬಿಡದೆ ಲೋಕವೆಲ್ಲವಂ ಕೊಲ್ಲುವೆನೆಂಬಿಚ್ಛೆಯಿಂ ಮಹಾಭೀಕರವಾಗಿ ಪರಿದು ಬರ್ಪ ವಿಷವನ್ನು ಲೋಕಾನುಗ್ರಹಾರ್ಥವಾಗಿ [ಪರಮೇಶ್ವರನು ಸೇವಿಸಿದನು.] ಆ ಬಳಿಕ ಉಳಿದರಾಕ್ಷಸರೂ ದೇವತೆಗಳೂ ಕೂಡಿ ತಿರುಗಿಸಿ ಕಡೆವಲ್ಲಿ ಮಂದರಗಿರಿ ಮುಳುಗಲಾಗಿ [ವಿಷ್ಣುವು] ಕೂರ್ಮರೂಪವಂ ಧರಿಸಿ ಪಾತಾಳತಳದಿಂದ ಗಿರಿಯನುದ್ಧರಿಸಿ ತಂದು ಮತ್ತಮಾಗಿರಿ ಮುಳಗದಂತೆಯುಂ ಆ ಪರ್ವತದ ಕೆಳಗೂ ಮೇಲೂ ಉಭಯಪಾರ್ಶ್ವಗಳಲ್ಲಿಯೂ ತಾನೆ ವ್ಯಾಪಿಸಿರ್ದು ಆ ಗಿರಿ ಬಿರ್ಚದಂತೆಯುಂ ಸರ್ಪಂ ಸತ್ತ್ವಂಗಿಡದಂತೆಯುಂ ಪ್ರತ್ಯೇಕಮವರವರ್ಗೆ ಪ್ರಾಣವನಿತ್ತು ಪೀತಾಂಬರಮಂ ನಡುವಿಂಗೆ ಸುತ್ತಿ ಕಿವಿಗಳೊಳು ಕುಂಡಳಂಗಳಳ್ಳಾಡೆ ಕೌಸ್ತುಭಹಾರವೊಲೆದಾಡೆ ಕಿರೀಟಪ್ರಭೆ ಸೂರ್ಯಚಂದ್ರಾಗ್ನಿ ಪ್ರಭೆಯಂ ತಿರಸ್ಕಾರಮಂ ಮಾಡೆ ಶ್ರೀಹರಿ ತಾನೊರ್ವನೆ ಕಡೆಯಲಾಗಿ ಹುಟ್ಟಿದ ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ಉಚ್ಚೈಶ್ಶ್ರವ, ಐರಾವತ, ಚಂದ್ರ, ಪಾಂಚಜನ್ಯವೆಂಬ ಶಂಖ ಮುಂತಾದ ವಸ್ತುಗಳಂ ದೇವತೆಗಳಿಗೂ ರಾಕ್ಷಸರಿಗೂ ಪಿತೃದೇವತೆಗಳಿಗೂ ಹಂಚಿಕೊಟ್ಟು ವಾರುಣೀದೇವಿಯಂ ರಾಕ್ಷಸರಿಗಿತ್ತು ಲಕ್ಷ್ಮೀದೇವಿಯಂ ತನ್ನಧೀನಂಗೆಯ್ದು ಆ ಶ್ರೀದೇವಿಯ ಕಟಾಕ್ಷದಿಂದಲೆ ಸಕಲಾಭೀಷ್ಟ ಫಲಪ್ರದಸಾಮರ್ಥ್ಯವುಂಟಾದ ಕಲ್ಪವೃಕ್ಷ ಚಿಂತಾಮಣಿಗಳಿಂ ದೇವತೆಗಳನೈಶ್ವರ್ಯವಂತರಂ ಮಾಡಿ ಅಮೃತಸೇವನೆಯಿಂ ಜರಾಮರಣಾದ್ಯುಪದ್ರವಂಗಳಂ ತಪ್ಪಿಸಿ ಅದರಿಂಲೇ ಸಕಲ ರಾಕ್ಷಸರನ್ನೂ ಜಯಿಸುವಂತೆ ದೇವತಗಳು ಜಯೋಪಾಯರಾಗಿ ಯಾಗಂಮಾಡಿ ತದನಂತರಂ ಕ್ಷೀರಸಮುದ್ರದೊಳ್ ಶಂಖಚಕ್ರಪಾಣಿಯಾಗಿಯುಂ ಒಂದು ಹಸ್ತದೊಳಮೃತಕಲಶವನ್ನು, ಪೆರತೊಂದು ಹಸ್ತದೊಳ್ ಹರೀತಕ ಚಿಗುಳಿ ಸಮೇತನಾಗಿ ಅವತರಿಸಿದಂಥ ಧನ್ವಂತರಿನಾರಾಯಣನನ್ನು ದೇವತೆಗಳೆಲ್ಲರು ಸ್ತುತಿಸುತ್ತಲಿದ್ದಾರೆ, ಅದೆಂತೆಂದೊಡೆ,

ನಮಾಮಿ ಧನ್ವಂತರಿಮಾದಿದೇವಂ ।
ಸುರಾಸುರೈರ್ವಂದಿತ ಪಾದಪದ್ಮಂ ॥
ಲೋಕೇ ಜರಾರುಗ್ಭಯ ಮೃತ್ಯುನಾಶಂ ।
ದಾತಾರಮೀಶಂ ವಿವಿಧೌಷಧೀನಾಂ ॥

ದೇವತೆಗಳಿಗೆಲ್ಲ ಮೊದಲಿಗನಾದಂಥ, ಮತ್ತಮಾ ಸಕಲ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ ಪಾದಾರವಿಂದವುಳ್ಳಂಥ, ಲೋಕದಲ್ಲಿ ಜನರುಗಳ ಮುಪ್ಪು ರೋಗಗಳೆಂಬ ಭಯಮನುಳ್ಳ ಮೃತ್ಯುವನ್ನು ನಾಶಮಾಡುವಂಥ, ಸಕಲವಾದ ಔಷಧಂಗಳನ್ನೂ ಕೊಡುತ್ತಲಿರುವಂಥ ಧನ್ವಂತರಿಗೋಸ್ಕರ ನಮಸ್ಕಾರವಂ ಮಾಡುತಲಿದ್ದೇವೆ ಎಂಬುದಾಗಿ ಸ್ತುತಿಸುವಂಥ ಈ ಜೀವಕೋಟಿಗಳ ರೋಗಾದಿ ಭಯಮಂ ಪರಿಹರಿಸಿದನೆಂಬ ಪುರಾಣಕಥೆಯಂ ಪರಮೇಶ್ವರನು ಪಾರ್ವತೀ ದೇವಿಗೆ ಪೂರ್ವದೊಳ್ ನಿರೂಪಿಸಿರ್ಪನ್ನ ವೃಂತಾಂತವನ್ನೇ ಸಕಲ ಸ್ಮೃತೀತಿ ಹಾಸ ಪುರಾಣಗಳಲ್ಲಿ ವಿಧಿಸಿ ವಿಶದಮಾಗಿ ತಿಳಿವಂತೆ ಸೊಲ್ಲಿಸಿರ್ಪುದರಿಂದಂದಿ ನಿಂದೀವರೆಗೂ ಧನ್ವಂತರಿಯಾದಿಯಾಗಿ ಅನೇಕ ಋಷಿಗಳೂ ಮನುಮುನಿಗಳೂ ಮೊದಲಾದ ದೊರೆಗಳೂ, ಋಷಿಪ್ರಾಯರಾದ ಸ್ಮೃತಿಕರ್ತರೂ ಮತ್ತುಮನೇಕ ಭಿಷಜರೂ ಈ ನಿಮಿತ್ತದಿಂದಲೇ ಲೋಕೋಪಕಾರವನೆಣಿಸುವರು. ಇವರು ಮುಂತಾದವರಿಂದೀಯಾಯುರ್ವೇದವು ಪಲವಿಧವಾಗಿ ಸಮುದ್ರಕ್ಕೆ ಕಾಲ್ವೆ ಪುಟ್ಟಿ ದಂತೆ ನೆಗಳ್ತೆವೆತ್ತಿರ್ಪುದು. ಈ ಸಮಸ್ತಗ್ರಂಥಗಳನ್ನೂ ಕ್ರೋಡೀಕರಿಸಿ ಪರಿಶೋ ಧಿಸಿ ಲೋಕಹಿತಾರ್ಥವಾಗಿ ಆ ಸಾರಾಂಶವನ್ನೇ ಜೋಡೆಗೆಯ್ದು ನವರತ್ನದೊಳಾ ಣಿಮಣಿಯನಾಯ್ದಾಯ್ದು ಹಾರಮಂ ಬಿತ್ತರಿಸುವಂತೆ ಈ ವೈದ್ಯಸಾರಸಂಹಿತಾ ರ್ಣವ ಗ್ರಂಥಮಂ ಕನ್ನಡವಾಕ್ಯದಿಂ ಕಳಲೆಯ ಪುರವರಾಧೀಶ್ವರನುಂ ಕಾಂತಯ ಭೂಕಾಂತಪೌತ್ರನುಂ ದಳಪತಿ ದೊಡ್ಡೇಂದ್ರಪ್ರಿಯಪುತ್ರನುಂ ದಾನಕರ್ಣನುಂ ಸಂಗ್ರಾಮಾರ್ಜುನನುಂ ಷಟ್ಚಕ್ರವರ್ತಿಸಮನುಂ ದೊಡ್ಡೇಶನೃಪಾಲಕರೊಳೆ ಣಿಕೆವೆತ್ತ ಸುಧರ್ಮಾದಿ ಷಡ್ಗುಣಗಣಭೂಷಣಭೂಷಿತಾವಯವನುಮೆನಿಸಿ ಲೋಕ ಮಂ ತನ್ನ ಜಸದಿಂ ಬೆಳಗುವ ಶ್ರೀವೀರರಾಜ ಭೂಪಾಲಂ ವಿರಚಿಸಿದಂ.

ವೈದ್ಯಸಂಹಿತಾಸಾರಾರ್ಣವವೆಂಬ ಗ್ರಂಥದೊಳ್
ಪೀಠಿಕಾಪ್ರಕರಣಂ ಸಮಾಪ್ತಂ.

---

# ನಾಡೀಪರೀಕ್ಷೆ

ಆದೌ ಸರ್ವೇಷು ರೋಗೇಷು ನಾಡೀಂ ಜಿಹ್ವಾಂ ಚ ಮೂತ್ರಕಂ ।
ಪರೀಕ್ಷಯೇತ್ಸ್ವರೂಪಂ ವೈದ್ಯಸ್ತದ್ವಿಧಾನಂ ನಿಗದ್ಯತೆ ॥

ಸಕಲವಾದ ರೋಗಗಳಲ್ಲಿಯೂ ಮೊದಲು ನಾಡಿಯನ್ನೂ ಜಿಹ್ವೆಯನ್ನೂ ಮೂತ್ರವನ್ನೂ ಪರೀಕ್ಷಿಸುವುದು. ಆ ನಾಡಿಯನ್ನು ಪರೀಕ್ಷಿಸುವ ಪ್ರಕಾರವೆಂತೆಂದೊಡೆ ;—

ಪುರುಷರ ಬಲದ ಕೈಯ ಹೆಬ್ಬೆರಲ ಮೂಲದಲ್ಲಿ ಮೂರು ಬೆರಲ ತುದಿಗಳಿಂದೊತ್ತಿ ಪಿಡಿದು ನಾಡಿಯನ್ನು ನಿದಾನಿಸಬೇಕು. ಸ್ತ್ರೀಯರುಗಳಿಗೆ ಎಡದ ಕೈ ಹೆಬ್ಬೆರಲ ಮೂಲದಲ್ಲಿ ಅದೇ ರೀತಿಯಲ್ಲಿ ಪಿಡಿದು ನೋಡಬೇಕು. ಲೋಕದಲ್ಲಿ ಪುರುಷರುಗಳು ಸ್ತ್ರೀಯರು ಶಿವಶಕ್ತ್ಯಾತ್ಮಕರಾದ ಕಾರಣದಿಂದ ಬಲದ ಭಾಗವು ಶಿವಾತ್ಮಕವಾದ ಪುರುಷಾಂಶವಾಗಿಯೂ, ವಾಮಭಾಗವು ಶಕ್ತ್ಯಾತ್ಮಕವಾದ ಸ್ತ್ರೀಯಂಶವಾಗಿಯೂ ಇರುವುವೆಂಬುದರಿಂದ ಪುರುಷರಿಗೆ ಬಲದ ಹಸ್ತವನ್ನೂ ಸ್ತ್ರೀಯರಿಗೆ ಎಡದ ಹಸ್ತವನ್ನೂ, [ಪಿಡಿದು] ನಿದಾನದಿಂದ ನಾಡೀಭೇದಗಳ ತಿಳಿದು, ರೋಗ ನಿರ್ಣಯವನ್ನರಿಯಬೇಕೆಂಬುದೇ ಪ್ರಶಸ್ತವಾಗಿರುವುದು. ಮೊದಲು ನಾಡಿಯ ನೋಡುವಲ್ಲಿ ಯವಬೀಜಪ್ರಮಾಣವಾಗಿರುವ ನಾಡಿಯ ಸರ್ವಾಂಗವನ್ನೂ ವ್ಯಾಪಿಸಿಕೊಂಡಿರುವುದು ; ಬಲದ ಕೈಯ ಹೆಬ್ಬೆರಲ ಮೂಲದಲ್ಲಿ ನೂಲಿನ ಹಗ್ಗದ ಹಾಗೆ ಆಶ್ರಯಿಸಿ ಇರುವುದು. ದಮನಿ, ಗಮನಿ, ಲೋಲೆ, ಧೃತಿ, ಸರ್ವಗಾ ಎಂದೈದು ನಾಮವನುಳ್ಳ ನಾಡಿಯು ತಾನು ಏಕರೂಪವಾಗಿಯೇ ಆಲದ ಬೀಳಿನ ಹಾಗೆ ನೂಲಿನಂತೆ ಐದು ಬೆರಲಿಗೂ ಪ್ರಧಾನವಾದ ಹೆಬ್ಬೆಟ್ಟಿನ ಮೂಲದಲ್ಲಿರುವ ನರದ ಮೇಲೆ ಸಣ್ಣನಾಗಿ ಕಾಣಬರುವುದು. ವೈದ್ಯನು ತನ್ನ ಎಡದ ಕೈಯಲ್ಲಿ ರೋಗಿಯ ಬಲದ ಕೈಯ ಹೆಬ್ಬೆಟ್ಟಿನ ಮೂಲದಲ್ಲಿ ಮೂರು ಬೆರಲನ್ನೂ ಅಂಕುಶಾಕಾರವಾಗಿ ಒತ್ತಿಪಿಡಿದು ಆ ಮೂರು ಬೆರಲ ತುದಿಗಳಿಂದ ಮೋಹಿ ನೋಡಲಾಗಿ ಸಣ್ಣನಾಗಿ ಆಡುವ ನಾಡಿಯು ಬೆರಲುಗಳಿಗೆ ಕಾಣಬರುವ ಭೇದವು ಮನಸ್ಸಿಗೆ ತಿಳಿವುದು. ಎಂತೆಂದೊಡೆ, ಅತಿಮೆಲ್ಲನೆ ಆಡುವ ನಾಡಿಯನ್ನೂ ಅತಿವೇಗವಾಗಿ ನಡೆವ ನಾಡಿಯನ್ನೂ ತನ್ನ ಮನಸ್ಸಿನ ಭಾವದಿಂದಲೇ ಪರೀಕ್ಷಿಸಿ ತಿಳಿಯಬೇಕು. ರುದ್ರವೀಣೆಯ ತಂತಿಯನ್ನು ಬೆರಲುಗಳಿಂದ ಮಿಡಿದು ನೋಡಲಾಗಿ ರಾಗ ಭೇದಗಳನ್ನು ಹೇಗೆ ಮನಸ್ಸಿಗೆ ತಿಳಿಯಪಡಿಸುವುದೊ ಹಾಗೆ ತಾನೆ ಬೆರಲುಗಳಿಂದೊತ್ತಿ ನೋಡಲಾಗಿ ಈ ಶರೀರವೆಂಬ ವೀಣೆಗೆ ಬ್ರಹ್ಮ ನಿರ್ಮಿತವಾಗಿ ಕಟ್ಟಿರುವ ತಂತ್ರಿಯೆಂಬ ನಾಡಿಯು, ರಾಗಭೇದವನ್ನು ಮನಸ್ಸಿಗೆ ತಿಳಿಸುವ ಮರ್ಯಾದೆಯಲ್ಲಿಯೇ, ರೋಗಭೇದಗಳನ್ನು (ಮನಸ್ಸು ಎಂಬ) ಸೂಕ್ಷ್ಮ

ಬುದ್ಧಿಯುಳ್ಳ ವೈದ್ಯನಿಗೆ ತಿಳಿಯಪಡಿಸುವುದು. ಆ ನಾಡಿಯು ಬಲೆಯ ಮೊದಲ ಹಗ್ಗದ ಹಾಗೆ ಶರೀರವೆಲ್ಲವನ್ನೂ ವ್ಯಾಪಿಸಿಕೊಂಡಿರುವುದು. ಬಲದ ಕೈಯ ಹೆಬ್ಬೆರಲಿನ ಮೂಲದಲ್ಲಿರ್ದ ನಾಡಿಯನ್ನು ಪರೀಕ್ಷಿಸಲಾಗಿ [ಆ ನಾಡಿಯು] ರೋಗಭೇದವನ್ನು ತಿಳಿಯಪಡಿಸುವುದೆಂತೆಂದೊಡೆ, ವಾತಾಧಿಕ್ಯವಾದೊಡೆ ಡೊಂಕಾಗಿ ನಡೆವುದು. ಪಿತ್ತಾಧಿಕ್ಯವಾದೊಡೆ ಅತಿವೇಗದಿಂ ಚಂಚಲವಾಗಿ ನಡೆವುದು. ಶ್ಲೇಷ್ಮ ನಾಡಿಯು ಏಕತಾಳದ ಹಾಗೆ ಸ್ಥಿರವಾಗಿ ಆಡುವುದು. ವಾತಪಿತ್ತದ್ವಂದ್ವಗಳಲ್ಲಿ ವಾತನಾಡಿಯು ಡೊಂಕಾಗಿಯೂ, ಪಿತ್ತನಾಡಿಯು ವೇಗವಾಗಿ ಚಂಚಲವಾಗಿಯೂ, ಇವು ಎರಡು ಲಕ್ಷಣಗಳೂ ಕೂಡಿ ನಡೆವುದು. ತ್ರಿದೋಷವು ಕೂಡಿದಾಗ ವಾತಪಿತ್ತಶ್ಲೇಷ್ಮಗಳೆಂಬ ಮೂರು ನಾಡಿಯು ಏಕವಾಗಿ ಒಂದರೊಳೊಂದು ಬೆರಸಿಕೊಂಡು ನಡೆವುದು. ವಾತಾಧಿಕವಾದ ನಾಡಿಯು ಹೆಬ್ಬೆರಲ ಮೂಲದಲ್ಲಿ ವೆಗ್ಗಳವಾಗಿ ನಡೆವುದು. ಪಿತ್ತಾಧಿಕವಾದ ಕಾಲದಲ್ಲಿ ಮಧ್ಯನಾಡಿಯೂ ಪಿತ್ತನಾಡಿಯೂ ವೆಗ್ಗಳವಾಗಿ ನಡೆವುದು. ಶ್ಲೇಷ್ಮಾಧಿಕವಾದರೆ ಕಡೆಯ ನಾಡಿ ವೆಗ್ಗಳವಾಗಿ ನಡೆವುದು. ಸನ್ನಿಪಾತದಲ್ಲಿ ಈ ಮೂರು ನಾಡಿಯೂ ವೆಗ್ಗಳವಾಗಿ ನಡೆವುದು. ಅಗ್ನಿಮಾಂದ್ಯದಲ್ಲಿಯೂ ಮೆಲ್ಲಮೆಲ್ಲನೆ ಆಡುತ್ತ ಅರಿಯ ಬಾರದ ಹಾಗೆ ಗುಪ್ತವಾಗಿರುವುದು. ವಾತಪಿತ್ತಾದಿ ದೋಷಂಗಳ ಸಾಧ್ಯಾಸಾಧ್ಯ ಸ್ಥಿತಿಗಳನ್ನು ಮೊದಲ ಮರ್ಯಾದೆಯಲ್ಲಿಯೇ ಬೆರಲುಗಳಿಂದೊತ್ತಿ ಹೇಳುವುದು. ಕೈಗೆ ಅತಿವೆಗ್ಗಳವಾಗಿ ನಡೆಯುತ್ತಿದ್ದರೆಜ್ವರ ನಾಡಿಯೆಂದು ಹೇಳುವುದು. ಅಲ್ಪವಾಗಿ ಶೀತವಾಗಿ ನಡೆಯುತ್ತಿದ್ದರೆ ತೆಗೆದುಕೊಂಡಾಹಾರ ಜೀರ್ಣಿಸದೆ ಇರುವುದು ; [ಇದಂ] ಅಜೀರ್ಣ ನಾಡಿಯೆಂದು ಹೇಳುವುದು. ನಾಡಿಯು ಕೈಗೆ ಕೆಲವು ಹೊತ್ತು ಉಷ್ಣವಾಗಿ ಕಾಣಿಸಿ ಮತ್ತೊಂದಿಷ್ಟು ಹೊತ್ತಿಗೆ ಶೀತವಾಗಿ ಆಡುತ್ತಿದ್ದರೆ ಒಳಗೆ ಜ್ವರವುಂಟೆಂದು ಹೇಳುವುದು. ದಿನದಿನದಲ್ಲಿಯೂ ಒಂದಿಷ್ಟು ಮೆಲ್ಲನೆ ನಾಡಿ ಕಾಣಿಸಿದರೆ ಅಲ್ಪಜ್ವರವುಂಟೆಂದು ಹೇಳುವುದು. ಬಹಳ ವಾತರೋಗಗಳಲ್ಲಿಯೂ ನಾಡಿಯು ಜಿಗುಳೆಯ ಹಾಗೂ ಸರ್ಪನ ಹಾಗೂ ನಡೆವುದು. ಈರೀತಿಯಲ್ಲೇ ರಾತ್ರಿಯ ಕಾಲದಲ್ಲಿ ಬರುವ ಜ್ವರವು ಮಂದವೆಂದು ಹೇಳುವುದು. ಬಹಳ ಪೈತ್ಯರೋಗಂಗಳಲ್ಲಿ ಓತಿಯ ಹಾಗೂ ಹಾವಿನ ಹಾಗೂ ಕಪ್ಪೆಯ ಹಾಗೂ ನಡೆವುದು. ಬಹಳ ಶ್ಲೇಷ್ಮರೋಗಗಳಲ್ಲಿ ಬಕಪಕ್ಷಿಯ ಹಾಗೂ, ಹಂಸೆಯ ಹಾಗೂ, ನವಿಲಿನ ಹಾಗೂ, ಪಾರಿವಾಳದ ಹಕ್ಕಿಯ ಹಾಗೂ, ಅಂತರಪಲ್ಲಟಿಯ ಹಾಗೂ, ಕೋಳಿಗಳ ಹಾಗೂ ನಾಡಿ ನಡೆವುದು. ವಾತಪಿತ್ತವೆರಡೂ ಕೂಡಿದ ದ್ವಂದ್ವರೋಗದಲ್ಲಿ ಅಡಿಗಡಿಗೆ ಹಾವಿನ ಹಾಗೆ ನಡೆಯುತ್ತ ಮತ್ತು ತಟತಟನೆ ಹಾರಾಡುತ್ತಲಹುದೆಂದು ಹೇಳುವುದು. ಸನ್ನಿಪಾತದಲ್ಲಿ ನಾಡಿಯು ಅತಿಮೆಲ್ಲನೆ ನಡೆವ ಹಾಗೆ ಕಾಣಿಸುವುದು, ಮತ್ತು ಕ್ಷಣಕ್ಕೆ ಉಷ್ಣವಾಗಿ ಕ್ಷಣಕ್ಕೆ ಶೀತವಾಗಿ ಕಾಣಿಸುವುದು. ತ್ರಿದೋಷ

ವಾಗಿ ಬಹಳ ಅಸಾಧ್ಯವಾದರೆ ನಾಡಿಯು ಅತ್ಯಂತ ಕುಣಿವುತ ವೇಗಸಹಿತವಾಗಿ ಇರುವುದು. ನೂಲ ಎಳೆಗಿಂತಲೂ ಸಣ್ಣನಾಗಿ ಕಾಣಬಾರದೆ ಬೆರತುಕೊಂಡು ಒಂದು ಲಕ್ಷಣದಲ್ಲಿಯೂ ಹೊಂದದೆ ಇರುವ ನಾಡಿಯನ್ನು ಅಸಾಧ್ಯವೆಂದು ತಿಳಿವುದು. ನಾಡಿಯು ಅತಿವೇಗವಾಗಿ ನಿಲ್ಲದೆ ಆಡುತ್ತಿದ್ದರೆ ಅಂತರ್ದಾಹವಿದ್ದೀತೆಂದು ತಿಳಿವುದು. ಆ ಬಳಿಕ ತ್ರಿದೋಷ ಸನ್ನಿಪಾತರೋಗಗಳಲ್ಲಿ ಆಹೊತ್ತು ಸಾವವನ ನಾಡಿಯು ಅತಿಶೈತ್ಯವಾಗಿ ತುಪ್ಪವ ತೊಡೆದ ಹಾಗೆ ನಯವಾಗಿ ಮೇಣದ ಅಂಟಿನೊಡನೆ ಬೆವರುತ ನಾಡಿ ಆಡುವುದನ್ನೆ ಅಸಾಧ್ಯವೆಂದು ತಿಳಿವುದು. ಜ್ವರಾತಿಸಾರನಾಡಿಯು ಮುಳ್ಳು ಮುಳ್ಳಾಗಿ ಕಠಿಣವಾಗಿ ರಕ್ತಧಾತುವನಾಶ್ರಯಿಸಿಕೊಂಡು ನೀರೊಳಗೆ ಮೀನು ಹೋಳೆವ ಹಾಗೆ ನಡೆವುದು. ಗ್ರಹಣೀರೋಗದವನ ನಾಡಿಯು ಮಲಗಿದ ಹಾವು ಉಸಿರು ಬಿಡುವ ಹಾಗೆ [ನಡೆವುದು.] ವಿಷೂಚಿಯು ನಾಡಿಯೂ ಕುಕ್ಷಿರೋಗದ ನಾಡಿಯೂ ವಿಚಿತ್ರವಾಗಿ ಹೊತ್ತಿಗೊಂದು ಬಗೆಯಾಗಿ ನಡೆವುದು ನಾಡಿಯು ಕೆದರಿಕೊಂಡು ಸಿಡಿದಾಡಿದರೆ ಕಾಮಾತ ರೋಗವೆಂಬ ಹಾಗೂ, ಹಲ್ಲಿಯು ಹಾಗೆ ಆಡಿದರೆ ರಕ್ತಪಿತ್ತವೆಂಬುವ ಹಾಗೂ, ನೀರೊಳಗೆ ಜಿಗುಳೆ ಆಡುವ ಹಾಗೆ ಆಡಿದರೆ ಕ್ಷಯ ಖಾಸವೆಂಬ ಹಾಗೂ ತಿಳಿವುದು. ನರವು ಕಠಿಣವಾಗಿ ಇಲಿ ಹಾರಿದ ಹಾಗೆ ನಡೆವುತ್ತಿದ್ದರೆ ಪ್ರಮೇಹದ ರೋಗವ ನಾಡಿಯೆಂದರಿವುದು. ಕಠಿಣವಾಗಿ ಅತಿ ವೇಗವಾಗಿ ಇಲಿಯ ನಡೆಯಂತೆ ನಡೆಯುತ್ತಿದ್ದರೆ ಶೂಲೆಗೂಡಿದ ಕ್ಷಯವೆಂದರಿವುದು. ಸಿಹಿಗೂಡಿದ ಆಹಾರವನ್ನು ಹೆಚ್ಚಾಗಿ ತೆಗೆದುಕೊಂಡಿದ್ದರೆ ಎಣ್ಣೆಯ ತೊಡೆದ ಹಾಗೂ ನೀರಕಾಗೆಯ ಹಾಗೂ ವೇಗಗೂಡಿ ನಡೆವುದು. ತುಪ್ಪ ಮೊದಲಾದ ಕ್ಷಾರದ್ರವ್ಯಗಳನ್ನು ಹೆಚ್ಚಾಗಿ ತೆಗೆದುಕೊಂಡಿದ್ದರೆ ನಾಡಿಯು ಬೆವರುಸಹಿತ ಅತಿವೇಗದಲ್ಲಿ ನಡೆಯುತ್ತ ಅತ್ಯುಷ್ಣವಾಗಿ ಹೆಳವ ನಡೆವ ಹಾಗೆ ನಡೆವುದು. ತೊಗರು ಸಾರಗಳ ಆಹಾರವನ್ನು ಹೆಚ್ಚಾಗಿ ತೆಗೆದುಕೊಂಡರೆ ನಾಡಿಯು ತನ್ನ ಗತಿಯಲ್ಲಿ ಸ್ವಸ್ಥವಾಗಿ ನಡೆವುದು. ಇವು ಮೊದಲಾದ ಈ ಪ್ರಕಾರವಾಗಿ ಹೇಳಿಯಿರುವ ನಾಡಿಯಿಂದ ರೋಗಭೇದಗಳ ತಿಳಿದು ಶುಭಾಶುಭಂಗಳ ಹೇಳುವ ವೈದ್ಯನು ಸಮರ್ಥನು. ಮಧುರಾದಿ ರಸಾಹಾರಗಳನಾಹಾರವಾಗಿ ಹೆಚ್ಚಾಗಿ ತೆಗೆದುಕೊಂಡು ಇದ್ದರೆ ನಾಡಿಯು ತನ್ನ ಗತಿಯಲ್ಲಿ ಸ್ವಸ್ಥವಾಗಿ ನಡೆವುದು. ವೈದ್ಯಶ್ರೇಷ್ಠನಾದವನು ಮನುಷ್ಯನ ಬಲದ ಕೈಯ ಹೆಬ್ಬೆಟ್ಟಿನ ಮೂಲವನ್ನು ತನ್ನೆಡದ ಕೈಯ ಮೂರು ಬೆರಲಿಂದೊತ್ತಿ ಪಿಡಿದು ನಾಡಿಯ ಗತಿ ಭೇದಂಗಳಿಂದ ವಾತ ಮೊದಲಾದ ನಾಡಿಗಳನ್ನೂ ವಾತ ಪಿತ್ತಾದಿ ದ್ವಂದ್ವ ನಾಡಿಗಳನ್ನೂ ತಿಳಿದು ಹೇಳುವುದು. ಮತ್ತು ವಾತನಾಡಿಯು ಗೋಮೂತ್ರದ ಹಾಗೆ ಡೊಂಕಾಗಿ ನಡೆವುದು. ಪಿತ್ತಾಧಿಕವಾದ ನಾಡಿಯು ಕಪ್ಪೆಯ ಮರ್ಯಾದೆಯಲ್ಲೂ, ನವಿಲಂತೆಯೂ ತೀವ್ರವಾಗಿ ಉಷ್ಣವಾಗಿ ನಡೆವುದು. ಶ್ಲೇಷ್ಮಾಧಿಕವಾದ ನಾಡಿಯು ಪಾರಿವಾಣದ

ಹಾಗೆ ವೇಗ ಮಂದವಾಗಿ ಶೀತವಾಗಿ ಆಡುತಿಹುದು ಎಂಬೀನಾಡೀಭೇದಗಳನ್ನು ಕ್ಷೀರಪಾಣ್ಯಾಚಾರ್ಯರು ಹೇಳಿದರು.

## ನಾಡಿಯು ಕಾಣದುದು

ದಾರಿಯು ನಡೆದು ಬಂದವನಿಗೂ, ಬಾಯಾರಿಕೆಯಾದವನಿಗೂ, ಬಿಸಿಲಲ್ಲಿ ಹೋಗಿ ಬಂದು ಕಂಗೆಟ್ಟವನಿಗೂ, ಹಸಿದಿರುವವನಿಗೂ, ಆಗತಾನೆ ಊಟಮಾಡಿದವನಿಗೂ, ಅಭ್ಯಂಜನಸ್ನಾನ ಮಾಡಿಕೊಂಡವನಿಗೂ, [1] ಸ್ತ್ರೀಸಂಭೋಗಮಾಡಿದವನಿಗೂ [1] ನಾಡಿಯು ಕಾಣದೆ ಇರುವುದು.

## ಅಸಾಧ್ಯ ನಾಡೀಲಕ್ಷಣ

ಜ್ವರ ಬಂದವನಿಗೆ ಕಿಚ್ಚಿನ ಹಾಗೆ ಬೇಸಗೆಯ ಬಿಸಿಲಿನ ಹಾಗೆ ಅತ್ಯುಷ್ಣವಾಗಿ ಬಿಡದೆ [2] ದಿನಾ [2] ಕಾಯುತ ನಾಡಿಯು ಅತಿ ಶೀಘ್ರವಾಗಿ ಕಾಯುತ್ತಿದ್ದರೆ ಆತನಿಗೆ ಶೀಘ್ರದಲ್ಲಿ ಮೃತ್ಯುವೆಂದರಿವುದು. ರೋಗಿಗೆ ನಾಡಿಯು ಮುಖಸ್ಥಾನದಲ್ಲಿ ಕ್ಷಣ ಕ್ಷಣಕ್ಕೆ ನಿರಂತರವಾಗಿ ಹಾರಿದರೆ ಆತನಿಗೆ ನಾಲ್ಕನೆಯ ದಿನಕ್ಕೆ ಮರಣವೆಂದರಿವುದು, ಮತ್ತಂ ರೋಗಿಗೆ ನಾಡಿಯು ಕೈಯಲ್ಲಿ ಅತಿವೇಗವಾಗಿ ನಡೆಯುತ್ತ ಕಾಲ ಹರಡಿನ ಕೆಳಗೆ ರುದ್ರನಾಡಿ ಕಾಣಿಸಿಕೊಳ್ಳದೆ ಇದ್ದರೆ ಆತನಿಗೆ ಆ ದಿನವೇ ಮರಣವೆಂದರಿವುದು. ಪ್ರಾತಃಕಾಲದಲ್ಲಿ ಶ್ಲೇಷ್ಮನಾಡಿಯು ಅಧಿಕವಾಗಿ ಆಡುವುದು. ಸಾಯಂಕಾಲದಲ್ಲಿ ವಾತನಾಡಿಯು ಅಧಿಕವಾಗಿ ಆಡುವುದು. ಮಧ್ಯಾಹ್ನದಲ್ಲಿ ಶೀತನಾಡಿ ಅಧಿಕವಾಗಿ ಆಡುವುದು. ಪೂರ್ವರಾತ್ರಿಯಲ್ಲಿ ಶ್ಲೇಷ್ಮನಾಡಿ ಆಡುವುದು. ಅಪರರಾತ್ರಿಯಲ್ಲಿ ವಾತನಾಡಿ ಆಡುವುದು. ಇದಕ್ಕೆ ವಿಪರೀತವಾಗಿ ನಡೆದ ನಾಡಿಯನ್ನೂ ಮನುಷ್ಯಪ್ರಕೃತಿಗಳನ್ನೂ ಕಾಲಕಾಲದಲ್ಲಿ ಶಾಸ್ತ್ರದಿಂದಲೇ ವಿಚಾರಿಸಿಕೊಂಡು ಚಿಕಿತ್ಸೆಯ ಮಾಡುವ ವೈದ್ಯನಿಗೆ ಕೀರ್ತಿಲಾಭವೂ, ಪೂಜ್ಯತೆಯೂ ಉಂಟಾಗುವುವು. ಚಿಕಿತ್ಸೆಮಾಡುವ ವೈದ್ಯನಿಗೆ ಒಂದು ಸ್ಥಳದಲ್ಲಿ ದ್ರವ್ಯಲಾಭವೂ, ಒಂದು ಸ್ಥಳದಲ್ಲಿ ಮಿತ್ರತ್ವವೂ, ಒಂದು ಸ್ಥಳದಲ್ಲಿ ಕೀರ್ತಿಯೂ, ಒಂದು ಸ್ಥಳದಲ್ಲಿ ಚಿಕಿತ್ಸಾಭ್ಯಾಸವೂ ಚಿಕಿತ್ಸೆಯಿಂದಲೇ ಉಂಟಾಗಬಹುದಾದ್ದರಿಂದ ಚಿಕಿತ್ಸಾ ವಿಷಯವು ನಿಷ್ಫಲವಲ್ಲವೆಂದು ಪೂರ್ವಾಚಾರ್ಯರು ಹೇಳುವರು.

ನಾಡೀಪರೀಕ್ಷೆ ಸಮಾಪ್ತಿ

---

[1] (ಕ) ಪ್ರತಿಯಲ್ಲಿಲ್ಲ [2] ೫ ದಿನ (ಕ)

## ಜಿಹ್ವಾಪರೀಕ್ಷೆ

ಜಿಹ್ವೆಯು ವಾತಾಧಿಕ್ಯದಲ್ಲಿ ಬಹಳ ವಿವರ್ಣವಾಗಿ, ಮುಟ್ಟಿದರೆ ಬಹು ಬಿರುಸಾಗಿ ಒಡೆದಿರುವುದು, ಪಿತ್ತಾಧಿಕ್ಯದಲ್ಲಿ ಕೆಂಪಾಗಿಯೂ ಕಪ್ಪಾಗಿಯೂ ಇರುವುದು. ಶ್ಲೇಷ್ಮಾಧಿಕ್ಯದಲ್ಲಿ ಬಿಳಿದಾಗಿ ಬಹಳ ದ್ರವವಾಗಿರುವುದು. ವಾತಪಿತ್ತ ದ್ವಂದ್ವಾದಿಗಳಲ್ಲಿ ಹಳದಿ ವರ್ಣವಾಗಿಯೂ, ಬಿರುಸಾಗಿಯೂ, ಕೆಂಪಾಗಿಯೂ, ಕಪ್ಪಾಗಿಯೂ ಇರುವುದು. ಸನ್ನಿಪಾತದಲ್ಲಿ ಕಪ್ಪಾಗಿ ಮುಳ್ಳುಮುಳ್ಳಾಗಿ ಒಣಗಿ ದ್ರವವಿಲ್ಲದೆ ಇರುವುದು. ಮತಾಂತರತೆ ; ಜಿಹ್ವೆಯಲ್ಲಿ ಅತ್ಯಂತ ನೀರು ಸುರಿಯುತ್ತಿದ್ದರೆ ಶ್ಲೇಷ್ಮಾಧಿಕ್ಯವೆಂದರಿವುದು. ಒಣಗಿಕೊಂಡಿದ್ದರೆ ವಾತಾಧಿಕ್ಯವೆಂದರಿವುದು, ಒಣಗಿಕೊಂಡು ಮುಳ್ಳುಸಹಿತ ಇದ್ದರೆ ಸನ್ನಿಪಾತವೆಂದರಿವುದು. ನಾಲಗೆಯ ಮೇಲೆ ಬೊಕ್ಕೆಗಳೆದ್ದು ಹಳದಿ ವರ್ಣವಾಗಿ ಕಪ್ಪುಗೂಡಿರ್ದರೆ ಅಸಾಧ್ಯವೆಂದರಿವುದು. ಕ್ಷಾರವಾಗಿ ದ್ರವವಾಗಿ ಇದ್ದರೆ ಪಿತ್ತಾಧಿಕ್ಯವೆಂದರಿವುದು. ಕಹಿಯಾಗಿ ದ್ರವವಾಗಿ ಇದ್ದರೆ ಅತ್ಯಂತ ಪಿತ್ತಾಧಿಕ್ಯವೆಂದು ತಿಳಿವುದು. ನಾಲಗೆ ಅತ್ಯಂತ ಸಣ್ಣನಾಗಿದ್ದರೂ ಅತಿ ದಪ್ಪನಾಗಿದ್ದರೂ ಸಕಲ ವ್ಯಾಧಿಗಳಲ್ಲಿಯೂ ಅಸಾಧ್ಯವೆಂದು ತಿಳಿಯುವುದು. ನಾಲಗೆಯು ತಾಳಿನಲ್ಲಿ ಕಪ್ಪಾಗಿದ್ದು ತುದಿಯಲ್ಲಿ ನಿರ್ಮಲವಾಗಿ ಇದ್ದರೆ ವಾತಶ್ಲೇಷ್ಮ ವಿಕಾರ ; ಇದು ಸನ್ನಿಪಾತಕ್ಕೆ ಕಾರಣವೆಂದರಿವುದು. ನಾಲಗೆಯು ತಾಳಿನಲ್ಲಿ ನಿರ್ಮಲವಾಗಿ ತುದಿಯಲ್ಲಿ ಕಪ್ಪಾಗಿದ್ದರೆ ವಾತ ಪಿತ್ತ ವಿಕಾರ ; ಶೂಲ ಗ್ರಂಥಿಗೆ ಕಾರಣವೆಂದರಿವುದು. ಮಧ್ಯದಲ್ಲಿ ಹಳ್ಳವಾಗಿ ತುದಿಯಲ್ಲಿ ಅಗಲವಾಗಿ ನಾಲಗೆ ಇದ್ದರೆ ಶಿರೋವ್ಯಾಧಿ ಹೆಚ್ಚುವುದು. ನಾಲಗೆಯು ಅತಿ ದೀರ್ಘವಾಗಿಯಾದರೂ ಅತಿ ಗಿಡ್ಡನಾಗಿಯಾದರೂ ಇದ್ದರೆ ದೀರ್ಘರೋಗದಿಂದ ಮರಣವೆಂದರಿವುದು. ನಾಲಗೆಯು ಅತ್ಯುಷ್ಣವಾಗಿ ಬಹಳವಾಗಿ ಒಣಗುತ್ತ ದಾಹವುಂಟಾಗಿದ್ದರೂ ಅತಿ ಶೀತವಾಗಿದ್ದರೂ ಮೃತ್ಯುಭಯಮುಂಟು. ಒಣಗಿದ್ದರೆ ವಾತ ಪಿತ್ತಾದಿ ಸಂಕರ ಲಕ್ಷಣವೆಂದೂ [ತಿಳಿವುದು]. ಈ ರೀತಿಯಲ್ಲಿ ಹೇಳಿರುವ ಜಿಹ್ವಾ ಪರೀಕ್ಷೆಯನ್ನು ವೈದ್ಯನು ವಿಚಾರಿಸಿ ಚಿಕಿತ್ಸೆ ಮಾಡುವುದು.

ಜಿಹ್ವಾಪರೀಕ್ಷೆ ಸಮಾಪ್ತಿ

---

## ಮೂತ್ರಪರೀಕ್ಷೆ

ಸಾಮಾನ್ಯ ಗುಣಗಳು:—ಮೂತ್ರವು ವಾತರೋಗದಲ್ಲಿ ಬಿಳಿದಾಗಿಯೂ, ಶ್ಲೇಷ್ಮರೋಗದಲ್ಲಿ ನೊರೆಗಟ್ಟಿಕೊಂಡೂ, ಪಿತ್ತರೋಗದಲ್ಲಿ ಕೆಂಪಾಗಿಯೂ, ದ್ವಂದ್ವ ರೋಗಗಳಲ್ಲಿ ಮಿಶ್ರವಾಗಿಯೂ ಇರುವುದು. ಈ ಪ್ರಕಾರದಲ್ಲಿ ಮೂತ್ರವನ್ನು ಪರೀಕ್ಷಿಸಿ ಚಿಕಿತ್ಸೆಯಂ ಮಾಡುವುದು.

### ದೇಶಭೇದ

ವೈದ್ಯನು ಚಿಕಿತ್ಸೆಯಂ ಮಾಡುವಲ್ಲಿ ಜಾಂಗಲಾನೂಪಾದಿ ದೇಶಭೇದ ಗಳನ್ನೂ, ಕಾಲವನ್ನೂ, ವಯಸ್ಸನ್ನೂ, ಸಾತ್ಮ್ಯವನ್ನೂ ವಾತಪಿತ್ತಾದಿ ಪ್ರಕೃತಿ ಗಳನ್ನೂ, ಉಚಿತವಾದ ಔಷಧಗಳನ್ನೂ ದೇಹಬಲ ಸತ್ವಗಳನ್ನೂ ವ್ಯಾಧಿಯನ್ನೂ ಪರೀಕ್ಷಿಸಿ ತಿಳಿದು ಚಿಕಿತ್ಸೆಯನ್ನು ಪ್ರಾರಂಭಿಸಬೇಕು. ಎಂತೆಂದೊಡೆ:—ದೇಶ ಭೇದವು ಜಾಂಗಲ, ಅನೂಪ, ಸಾಧಾರಣವೆಂದು ಮೂರು ತೆರನಾಗಿರುವುದು. ಅಲ್ಪನೀರುಳ್ಳದ್ದಾಗಿಯೂ ಅಲ್ಪವೃಕ್ಷಂಗಳುಳ್ಳದ್ದಾಗಿಯೂ ಇರುವ ದೇಶವೇ ಜಾಂಗಲ ದೇಶವೆನಿಸಿಕೊಂಬುದು. ಆ ದೇಶವು ರಕ್ತಪಿತ್ತ ವ್ಯಾಧಿಯನ್ನುಂಟುಮಾಡುವುದು. ಬಹಳ ನೀರು ಉಂಟಾದ ದೇಶವು ಅನೂಪದೇಶವೆನಿಸಿಕೊಂಡು ಶ್ಲೇಷ್ಮವ್ಯಾಧಿವಾತ ರೋಗಗಳನ್ನುಂಟುಮಾಡುವುದು. ಈ ಎರಡು ಲಕ್ಷಣಗಳೂ ಕೂಡಿರುವ ಸಂಕರ ದೇಶವು ಸಾಧಾರಣದೇಶವೆನಿಸಿಕೊಂಬುದು ; ಸಂಕರ ರೋಗಗಳನ್ನುಂಟುಮಾಡು ವುದು.

### ಕಾಲಭೇದ

ಕಾಲವು ಸಂಕ್ಷೇಪದಿಂದ ಶೀತವಲಯ, ಉಷ್ಣವಲಯ, ವರ್ಷಾಕಾಲವೆಂದು, ಮೂರು ತೆರನಾಗಿರುವುದು. ವಾತಾದಿಗಳಿಗೆ ಸಂಗ್ರಹವೂ, ಪ್ರಕೋಪವೂ ಶಾಂತಿಯೂ ಇರುವುವು. ಗ್ರೀಷ್ಮ, ವರ್ಷ, ಶರದೃತುಗಳೆಂಬ ಮೂರು ಋತುಗಳ ಲ್ಲಿಯೂ ವಾತಕ್ಕೆ ಯಥಾಕ್ರಮವಾಗಿ ಸಂಗ್ರಹ ಪ್ರಕೋಪಶಾಂತಿಗಳಹವು. ವರ್ಷರ್ತು, ಶರದೃತು, ಹೇಮಂತ ಋತುಗಳಲ್ಲಿ ಪಿತ್ತಕ್ಕೆ ಸಂಗ್ರಹಪ್ರಕೋಪಶಾಂ ತಿಯೂ, ಶಿಶಿರ ವಸಂತ ಗ್ರೀಷ್ಮಗಳಲ್ಲಿ ಶ್ಲೇಷ್ತಕ್ಕೆ ಸಂಗ್ರಹ ಪ್ರಕೋಪಶಾಂತಿಗಳೂ ಅಹವು. ವಾಯುವಿಗೆ ಉಷ್ಣಕಾಲದಲ್ಲಿ ಸಾಯಂಕಾಲದಲ್ಲಿ ತೆಗೆದುಕೊಂಡಾಹಾರ ಜೀರ್ಣವಾದಮೇಲೆ ಪ್ರಚಾರ ಉಂಟಾಗುವುದು. ಪಿತ್ತಕ್ಕೆ ಹಗಲಿರುಳು ಮಧ್ಯಗತಿ ಯಲ್ಲಿಯೂ ತೆಗೆದುಕೊಂಡಾಹಾರವು ಜೀರ್ಣವಾಗುವುದು, ಮಧ್ಯಕಾಲದಲ್ಲಿಯೂ ಪ್ರಚಾರವುಂಟಾಗುವುದು. ಆಹಾರ ತೆಗೆದುಕೊಂಡ ಸಮಯದಲ್ಲಿಯೂ ಪೂರ್ವ ರಾತ್ರಿಯಲ್ಲಿಯೂ ಪೂರ್ವಾಹ್ಣದಲ್ಲಿಯೂ ಶ್ಲೇಷ್ಮಪ್ರಚಾರವೆಂದರಿವುದು. ತೆಗೆದು ಕೊಂಡಾಹಾರದ ಪೂರ್ವಭಾಗ ಶ್ಲೇಷ್ಮಕಾಲ, ಮಧ್ಯಭಾಗ ಪಿತ್ತಕಾಲ, ಕಡೆಯ ಭಾಗವೇ ವಾತಕಾಲವೆಂದರಿವುದು.

ವಯೋಭೇದ.—ವಯೋವಿಧಾನ, ವಯಸ್ಸು ; ಮೂರು ತೆರನಾಗಿರುವು ದೆಂತೆಂದೊಡೆ—ಬಾಲ್ಯ, ಯೌವ್ವನ, ವೃದ್ಧಾಪ್ಯಗಳೆಂಬ ಮೂರು ವಿಧಗಳಲ್ಲಿ, ಕ್ಷೀರ ವೃತ್ತಿ, ಅನ್ಯವೃತ್ತಿಗಳುಳ್ಳ ಹುಟ್ಟಿದ ಒಂದು ವರ್ಷ ತೊಡಗಿ ಹದಿನಾರು ವರ್ಷ ಪರ್ಯಂತರಕ್ಕೂ ಬಾಲ್ಯವೆನಿಸಿಕೊಂಬುದು. ಆ ಮೇಲೆ ಎಪ್ಪತ್ತುವರ್ಷ ಪರ್ಯಂ ತರಕ್ಕೂ ಯೌವ್ವನವೆನಿಸಿಕೊಂಬುದು. ಎಪ್ಪತ್ತರ ಮೇಲೆ ನೂರುವರ್ಷ ಪರ್ಯಂ ತರ ವೃದ್ಧಾಪ್ಯವೆನಿಸಿಕೊಂಬುದು ಬಾಲ್ಯದಲ್ಲಿಯೂ, ವೃದ್ಧಾಪ್ಯದಲ್ಲಿಯೂ, ಕ್ಷಾರ ವಿಧಿ, ಅಗ್ನಿವಿಧಿ, ಶಸ್ತ್ರವಿಧಿಗಳನ್ನು ವೈದ್ಯನು ಮಾಡಲಾಗದು.

ಅಥ ವಹ್ನಿಸ್ವರೂಪ ನಿರೂಪಣಂ.—ದೇಹದಲ್ಲಿ ಜಠರಾಗ್ನಿಯು ನಾಲ್ಕು ತೆರನಾಗಿರುವುದೆಂತೆಂದೊಡೆ—ಮಂದಾಗ್ನಿ, ತೀಕ್ಷ್ಣಾಗ್ನಿ, ವಿಷಮಾಗ್ನಿ, ಸಮಾಗ್ನಿ ಯೆಂಬ ನಾಲ್ಕು ವಿಧವಾದ ಅಗ್ನಿಗಳಲ್ಲಿ ಶ್ಲೇಷ್ಮದಿಂ ಮಂದಾಗ್ನಿ, ಪಿತ್ತಾಧಿಕ್ಯದಿಂದ ತೀಕ್ಷ್ಣಾಗ್ನಿಯೂ, ವಾತಾಧಿಕ್ಯದಿಂದ ವಿಷಮಾಗ್ನಿಯೂ, ವಾತಪಿತ್ತ ಶ್ಲೇಷ್ಮಗಳಿಂದ ಸಮಾಗ್ನಿಯೂ ಉಂಟಾಗಿರುವುದು. ಇದರಲ್ಲಿ ಸಮಾಗ್ನಿಯನ್ನು ನಾನಾ ಉಪಾ ಯದಿಂದ ಪರಿಪಾಲಿಸುವುದೇ ಮುಖ್ಯವೆನಿಸುವುದು. ವಿಷಮಾಗ್ನಿಯಲ್ಲಿ ವಾತಹರ ಚಿಕಿತ್ಸೆಯನ್ನೂ, ತೀಕ್ಷ್ಣಾಗ್ನಿಯಲ್ಲಿ ಪಿತ್ತಶಮನಕ್ರಿಯೆಯನ್ನೂ ಮಾಡುವುದು. ಮಂದಾಗ್ನಿಯಲ್ಲಿ ಶ್ಲೇಷ್ಮಹರಚಿಕಿತ್ಸೆಯನ್ನು ಮಾಡುವುದು.

ಸಾತ್ಮ್ಯವೆಂತೆಂದೊಡೆ.—ವಿರುದ್ಧ ಪಾನಾಪಾನಾಹಾರಗಳು ವಿರುದ್ಧ ಪ್ರಕೃ ತಿಯುಳ್ಳವನಿಗಾದರೂ ಒಡಂಬಟ್ಟು ಬರುವುದಾವುದುಂಟೋ ಅದೇ ಸಾತ್ಮ್ಯವೆನಿ ಸಿಕೊಂಬುದು. ಆ ಸಾತ್ಮ್ಯವೆಂತೆಂದೊಡೆ—ದೇಶಸಾತ್ಮ್ಯ, ದೇಹಸಾತ್ಮ್ಯ, ವ್ಯಾಧಿ ಸಾತ್ಮ್ಯವೆಂದು ಆ ಸಾತ್ಮ್ಯವು ಮೂರುತೆರನಾಗಿರುವುದು.

ಪ್ರಕೃತಿಲಕ್ಷಣಂ.—ಪ್ರಕೃತಿಯೆಂತೆಂದೊಡೆ—ವಾತಪ್ರಕೃತಿ, ಪಿತ್ತಪ್ರಕೃತಿ, ಶ್ಲೇಷ್ಮಪ್ರಕೃತಿ, ಮಿಶ್ರಪ್ರಕೃತಿ ಎಂದು ಪ್ರಕೃತಿಯು ನಾಲ್ಕು ತೆರನಾಗಿರುವುದು. ವಾತಪ್ರಕೃತಿಯೆಂತೆಂದೊಡೆ–ಕೃಶನಾಗಿರುವನು, ದೇಹವು ರೂಕ್ಷಿಸಿಕೊಂಡಿರುವುದು, ಮಂಡೆಕೂದಲು ವಿರಳವಾಗಿರುವುದು, ಚಂಚಲಚಿತ್ತವುಳ್ಳವನಾಗಿರುವನು, ಒಂದು ಗಳಿಗೆಯಾದರೂ ಒಂದುಸ್ಥಳದಲ್ಲಿ ನಿಲುಕಡೆಯಿಲ್ಲದೆ ಇರುವನು. ಬಹಳ ವಾಚಾಳ ನಾಗಿರುವನು ; ಸ್ವಪ್ನದಲ್ಲೂ ಆಕಾಶದಲ್ಲೂ ತಾನು ಹಾರಿಯಾಡುವುದ ಕಾಣ್ಬನು ; ಅಂಥವನನ್ನು ವಾತಪ್ರಕೃತಿಯುಳ್ಳವನೆಂದು ನಿಶ್ಚೈಸುವುದು.

ಪಿತ್ತಪ್ರಕೃತಿಯೆಂತೆಂದೊಡೆ.—ವೃದ್ಧಾಪ್ಯವಿಲ್ಲದೆ ಮಂಡೆ ನರೆವುದು, ಅಂಗಾ ಲು ಬೆವರುತ್ತಿರುವುದು ; ಮುಂಗೋಪಿಯಾಗಿರುವುದು ; ಬುದ್ಧಿಯುಳ್ಳವನಾಗಿರು ವುದು, ಸ್ವಪ್ನದಲ್ಲಿ ಕಿಚ್ಚು, ಕಿಡಿ ಮೊದಲಾದ ಜ್ಯೋತಿಸ್ಸುಗಳ ಕಾಂಬುದು, ಈ ಲಕ್ಷಣವುಳ್ಳವನನ್ನು ಪಿತ್ತಪ್ರಕೃತಿಯುಳ್ಳವನೆಂದು ತಿಳಿವುದು.

ಶ್ಲೇಷ್ಮಪ್ರಕೃತಿಯೆಂತೆಂದೊಡೆ. — ಸ್ಥಿರಚಿತ್ತನಾಗಿ ದುಷ್ಟಾಂಗನಾಗಿ, ಬಳ್ಳಿತ್ತಾದ ಮಕ್ಕಳುಳ್ಳವನಾಗಿ, ಮಿಂಚಾಗಿ, ನಯವುಳ್ಳ ಕೇಶವುಳ್ಳವನಾಗಿ ಸ್ವಪ್ನ

ದಲ್ಲಿ ನೀರನ್ನೂ ಬಿಳಿದಾದ ವಸ್ತುಗಳನ್ನೂ ಕಾಣುವವನೇ ಶ್ಲೇಷ್ಮ ಪ್ರಕೃತಿವುಳ್ಳವನೆಂದು ನಿಶ್ಚೈಸುವುದು.

ಮಿಶ್ರಪ್ರಕೃತಿಯೆಂತನೆ.— ವಾತಪಿತ್ತಲಕ್ಷಣವಾದರೂ, ವಾತಪಿತ್ತಶ್ಲೇಷ್ಮಲಕ್ಷಣವಾದರೂ ಇವುಗಳಿಂದ ಕೂಡಿಕೊಂಡಿರುವಾತನೇ ಮಿಶ್ರಪ್ರಕೃತಿಯುಳ್ಳವನೆಂದರಿವುದು.

ಮತಾಂತರೆ.—ತ್ರಿವಿಕ್ರಮಪಂಡಿತಾಚಾರ್ಯವಿರಚಿತಗ್ರಂಥದಲ್ಲಿ— ಬಹಳ ವಾಯುವುಳ್ಳವರಾಗಿ, ಒಡೆದುಕೊಂಡು ಬೂದಿವರ್ಣವಾದ ಮೈಯುಳ್ಳವರಾಗಿ, ಶೈತ್ಯದ್ವೇಷಿಗಳಾಗಿ, ಚಂಚಲವಾದ ಧೈರ್ಯವೂ, ಬುದ್ಧಿಯೂ, ನೆನಹೊ, ಚೇಷ್ಟೆಯೂ ಉಂಟಾದವರಾಗಿ, ವಿಲಾಸಿಗಳಾಗಿ, ಗಾನದಲ್ಲಿಯೂ ಹಾಸ್ಯಪ್ರಸಂಗದಲ್ಲಿಯೂ, ಕಲಹದಲ್ಲಿಯೂ, ಪ್ರೀತಿಯುಳ್ಳವರಾಗಿ, ಸಿಹಿ, ಹುಳಿ, ಕಾರ, ಬಿಸಿಗಳು ಬೇಟೆಮುಂತಾದವುಗಳಲ್ಲಿ ಒಡಂಬಟ್ಟು ಇದ್ದ ಶರೀರವುಳ್ಳವರಾಗಿ, ಕೃಶರಾಗಿ, ನೀಟವಾಗಿದ್ದ ಶರೀರವುಳ್ಳವರಾಗಿ, ನಡತೆಯಲ್ಲಿ ಧೃಢಗಾತ್ರರಲ್ಲದೆ, ಜಿತೇಂದ್ರಿಯರಲ್ಲದೆ, ಸ್ತ್ರೀಯರಲ್ಲಿ ವಿಶ್ವಾಸವುಳ್ಳವರಲ್ಲದೆ ಬಹಳ ಸಂತಾನವುಳ್ಳವರಲ್ಲದೆ, ದೂಸರವರ್ಣವಾಗಿ, ಕಠಿಣವಾಗಿ, ಬಹುವಾಗಿ ಎಸಳಿನಹಾಗೆ ನಿದ್ರೆಮಾಡುತ್ತಿದ್ದರೂ ಕಣ್ಣುಗಳು ತೆರೆದಿರುವಹಾಗೆ ಕಾಣಿಸುತ್ತ, ಸ್ವಪ್ನದಲ್ಲಿ ಮರಬೆಟ್ಟಗಳನ್ನೇರುವುದನ್ನೂ ಆಕಾಶದಲ್ಲಿ ನಡೆದಾಡುವುದನ್ನೂ ಕಾಣುತ್ತ, ಧನಿಕರಲ್ಲದೆ ವತ್ಸರಿಗಳಾಗಿ, ಜಾರವೃತ್ತಿವುಳ್ಳವರಾಗಿ, ಗಂಟುಗಂಟುಮೈಕಾಲುಳ್ಳವರಾಗಿ, ಇರುವರು. ತಿರ್ಯಗ್ಜಾತಿಗಳಲ್ಲಿ, ನಾಯಿ, ನರಿ, ಒಂಟೆ, ಹದ್ದು, ಇಲಿ, ಗೂಗೆ, ಕಾಗೆ ಸಹ ವಾತಪ್ರಕೃತಿಗಳೆಂದರಿವುದು.

ಪಿತ್ತಪ್ರಕೃತಿಯೆಂತನೆ:—ಪಿತ್ತವು ಅಗ್ನಿಸ್ವರೂಪವಾಗಿರುವುದು. ಆ ವಹ್ನಿಯಿಂದ ಜನಿಸಿದ ನಿಮಿತ್ತದಿಂದ ಪಿತ್ತೋದ್ರೇಕವುಳ್ಳವನಾಗಿ ತೀವ್ರವಾದ ತೃಷ್ಣೆಯೂ ಹಸಿವೂ ಉಂಟಾದವನಾಗಿ ಕೆಂಪಾಗಿ ಬಿಸಿಯಾದ ಶರೀರವುಳ್ಳವನಾಗಿ, ತಾಮ್ರವರ್ಣವಾದ ಕಣ್ಣುಗಳುಳ್ಳವನಾಗಿ, ಶೂರನಾಗಿ, ಅಭಿಮಾನವುಳ್ಳವನಾಗಿ ಕೆಂಗೂದಲುಳ್ಳವನಾಗಿ, ಅಲ್ಪರೋಮವುಳ್ಳವನಾಗಿ, ಪುಷ್ಪಮಾಲೆ ಗಂಧಪರಿಮಳಾದ್ಯಲಂಕಾರಗಳಲ್ಲಿ ಪ್ರೀತಿಯುಳ್ಳವನಾಗಿ, ಶತ್ರುಗಳಿಗೆ ಭಯಂಕರವಾದ ನಡತೆಯುಳ್ಳವನಾಗಿ, ಬೆಮರುಳ್ಳವನಾಗಿ, ದುರ್ಗಂಧವುಳ್ಳವನಾಗಿ, ವೆಗ್ಗಳವಾದ ಮಾತುಗಳುಳ್ಳವನಾಗಿ, ಸ್ತ್ರೀಯರುಗಳಿಗೆ ಪ್ರಿಯನಲ್ಲದೆ, ಅಲ್ಪವಾದ ವೀರ್ಯದಿಂದ ಕಾಮವುಂಟಾದವನಾಗಿ, ನರೆ, ಜಗ್ಗೂ, ಹಸುರಾದ ನರೆಯುಳ್ಳವನಾಗಿ ಮಧುರಾಹಾರ, ಒಗರು, ಕಹಿ, ಪಿತ್ತಾಹಾರಗಳಲ್ಲಿ ಪ್ರಿಯವುಳ್ಳವನಾಗಿ, ಬಿಸಿಲ ಸಹಿಸದವನಾಗಿ, ದುರ್ಗಂಧವಾದ ಬೆಮರುಳ್ಳವನಾಗಿ, ಕೋಪಿಯಾಗಿ, ಪಾನದ್ರವ್ಯಗಳಲ್ಲಿ ಇಚ್ಛೆಯುಳ್ಳವನಾಗಿ, ನಿದ್ದೆಗೈವಲ್ಲಿ ಪುಷ್ಪಿತವಾದ ಬೆಟ್ಟದಾವರೆ, ಮುತ್ತುಗ, ದಿಕ್ಕುಗಳದಾಹ, ಉಲ್ಕಾ

ಪಾತ, ಮಿಂಚು, ಸೂರ್ಯ, ಕಿಚ್ಚುಸಹಿತವಾಗಿ ಕನಸ್ಸಿನಲ್ಲಿ ಕಾಣುವವನಾಗಿ, ಕಣ್ಣುಗಳು ಚಿಕ್ಕವಾಗಿ, ಪಿಂಗಳವರ್ಣವಾಗಿ, ತರಳವಾಗಿ ಅಲ್ಪವಾದ ಯವೆಗಳುಳ್ಳವನಾಗಿ, ಕೋಪದಿಂದಲೂ, ಮದ್ಯದಿಂದಲೂ, ಸೂರ್ಯನ ಕಿರಣದಿಂಧಲೂ, ಕೆಂಪಾಗುವ ಕಣ್ಣುಗಳುಳ್ಳವನಾಗಿ ಇರುವವನೇ ಪಿತ್ತಪ್ರಕೃತಿಯುಳ್ಳವನೆಂದರಿವುದು.

ಶ್ಲೇಷ್ಮಪ್ರಕೃತಿಯೆಂತೆನೆ:—ಶ್ಲೇಷ್ಮವೆಂಬುದು ಸಾಮಾನ್ಯವಾಗಿಹುದು. ಆದ್ದರಿಂದ ಶ್ಲೇಷ್ಮಪ್ರಕೃತಿಯುಳ್ಳವನು ಸೌಮ್ಯವಾದ ಮತಿಯಾಗಿ, ಸತ್ಯಸಂಧನಾಗಿ, ಎಡಬಿಡದಿರುವ ಸಂಧಿಬಂಧಾಸ್ಥಿಮಾಂಸಗಳುಳ್ಳವನಾಗಿ, ಹಸಿವೂ, ಬಾಯಾರಿಕೆಯೂ, ದುಃಖ, ಕ್ಲೇಶ, ಬಿಸಿಲುಗಳಿಂದ ಸಂತಾಪಬಡದೆ ಇರುವವನಾಗಿ, ಬುದ್ಧಿವಂತನಾಗಿ ಸಾತ್ವಿಕನಾಗಿ, ನೆಳಲು, ದೂರ್ವೆ, ದರ್ಭೆ, ಶುಕ್ತಿ, ಗೋರೋಜನ, ಪದ್ಮ, ಸುವರ್ಣ ಮುಂತಾದ ಈ ವರ್ಣಗಳಲ್ಲಿ ಒಂದು ವರ್ಣವುಳ್ಳವನಾಗಿ, ನೀಟವಾದ ತೋಳುಗಳು, ತೆರವಾಗಿ, ಪಾತ್ರೆಯಂತೆ ಎದೆಕಟ್ಟುಗಳುಳ್ಳವನಾಗಿ, ಅಗಲವಾದ ಹಣೆಯುಳ್ಳವನಾಗಿ, ಹೊದರಾಗಿಕಟ್ಟಿದ ಕೇಶಪಾಶವುಳ್ಳವನಾಗಿ, ಮೃದುವಾದ ಮೈಯುಳ್ಳವನಾಗಿ, ಏರ್ಪಡಿಸಲ್ಪಟ್ಟ ಮನೋಹರವಾದ ದೇಹವುಳ್ಳವನಾಗಿ, ಬಹುವಾದ ಪ್ರಭಾವವೂ, ರತಿಕ್ರೀಡೆಯೂ, ಮಕ್ಕಳೂ ಉಂಟಾದವನಾಗಿ, ಧರ್ಮಾತ್ಮನಾಗಿ ಒಂದು ಬಾರಿಯೂ ನಿಷ್ಠೂರವಿಲ್ಲದೆ, ಒಬ್ಬರಿಗೂ ತಿಳಿಯಪಡಿಸದಹಾಗೆ ವೈರವನ್ನು ಮಾಡುವವನಾಗಿ, ಮದಳೆ, ಸಿಂಹಗಳ ಧ್ವನಿಯಹಾಗೆ ಧ್ವನಿಯುಳ್ಳವನಾಗಿ, ನೆನಹುಳ್ಳವನಾಗಿ, ಅತ್ಯಂತ ಯುಕ್ತಿಯುಳ್ಳವನಾಗಿ, ವಿನಯಪರನಾಗಿ, ಬಾಲ್ಯದಲ್ಲಿ ಲೆಕ್ಕವಿಲ್ಲದೆ ಕಹಿ, ಒಗರು, ಕಾರ, ಉಷ್ಣಗಳಿಂದ ಕೂಡಿದ ಆಹಾರಗಳನ್ನೇ ಅಲ್ಪವಾಗಿ ಭುಂಜಿಸುತ್ತಲೂ, ಬಲು ಮಾನವಾದ ಶರೀರವುಳ್ಳವನಾಗಿ, ಕಡುಗೆಂಪಾಗಿ ಮನೋಹರವಾಗಿ, ವಿಶಾಲವಾಗಿ, ನೀಟವಾಗಿ, ವ್ಯಕ್ತವಾಗಿ, ಬಿಳುಪಾಗಿ ಕಪ್ಪಾದ ಯವೆಗಳುಳ್ಳವನಾಗಿ, ಅಲ್ಪವಾದ ಆಯುಸ್ಸೂ, ಕೋಪವೂ, ಪಾನವೂ, ಭೋಜನವೂ ಮುಂತಾದ ಆಹಾರಗಳಲ್ಲಿ ಕರುಬುಳ್ಳವನಾಗಿ, ದೀರ್ಘಸೂತ್ರಿಯಾಗಿ, ಕೊಡಗೈಯುಳ್ಳವನಾಗಿ ವಿದ್ವಾಂಸನಾಗಿ, ಕರ್ಮಶ್ರದ್ಧೆಯುಳ್ಳವನಾಗಿ, ಭಯರಹಿತನಾಗಿ, ಅತಿತ್ಯಾಗಿಯಾಗಿ, ಪೂಜ್ಯನಾಗಿ, ಸ್ಥೈರಣೆಯುಳ್ಳವನಾಗಿ, ನಿದ್ರೆಯಲ್ಲಿ ಸ್ವಪ್ನರೂಪಾಗಿ ಕಾಣುವ ವ್ಯವಹಾರಸೌಖ್ಯವುಳ್ಳವನಾಗಿ, ಕಮಲ ಪಕ್ಷಿಸಾಲುಂಟಾದ ಕೆರೆಗಳನ್ನೂ ಮೇಘಗಳನ್ನೂ ಕಾಣುತ್ತ, ಬ್ರಹ್ಮ, ರುದ್ರ, ವರುಣ, ಇಂದ್ರ, ಗರುಡ, ಹಸು, ಮದ್ದಾನೆ, ಸಿಂಹ, ಕುದುರೆ, ವೃಷಭಗಳ ಸಮೇತವಾಗಿ ಸ್ವಪ್ನದಲ್ಲಿ ದರ್ಶಿಸುತ್ತಾ, ಈ ಲಕ್ಷಣಗಳೆಲ್ಲವೂ ಇದ್ದರೆ ಶ್ಲೇಷ್ಮಪ್ರಕೃತಿಯೆಂದರಿವುದು.

ಅಥ ಔಷಧವೆಂತೆನೆ.— ಔಷಧವೆಂಬುದು ಶೋಧನವೆಂದೂ, ಶಮನವೆಂದೂ ಸಂಕ್ಷೇಪದಿಂದ ಎರಡು ತೆರನಾಗಿರುವುದು. ದೋಷಗಳನ್ನು ಪರಿಹರಿಸಿ ಸಮವಾದ ದೋಷಂಗಳ ಹೆಚ್ಚಿಸದೆ, ವಿಷಮದೋಷಗಳನ್ನು ಸಮಾನವಾಗಿ ಮಾಡುವು

ದಾವುದುಂಟೋ ಅದು ಸಮಾನೌಷಧವೆನಿಸಿಕೊಂಬುದು. ಅದು ದೀಪನ, ಸಾಧನ, ಕ್ಷುತ್ತು, ತೃಪ್ತಿ, ವ್ಯಾಯಾಮ, ಬಿಸಿಲು, ಗಳಿಗೆಗಳೆಂದು ಏಳುತೆರನಾಗಿ ರುವುದು. ಮತಾಂತರೆ-ತ್ರಿವಿಕ್ರಮಪಂಡಿತಾಚಾರ್ಯವಿರಚಿತ ಗ್ರಂಥದಲ್ಲಿ—

ಶರೀರದಲ್ಲಿ ಉಂಟಾದ ದೋಷಗಳಿಗೆ —ವಸ್ತಿ, ವಿರೇಕ, ದಮನ, ತೈಲ, ತುಪ್ಪಗಳೆಂಬುದೇ ಪರಮೌಷಧವೆಂಬಹಾಗೂ, ಬುದ್ಧಿ, ಧೈರ್ಯ, ಆತ್ಮಜ್ಞಾನ ಗಳೆಂಬುವು ಮನಸ್ಸಿನ ದೋಷಕ್ಕೆ ಪರಮೌಷಧವೆಂಬ ಹಾಗೂ ತಿಳಿಯುವುದು.

ದೇಹಮೆಂತೆನೆ.—ದೇಹವು ಕೃಶ, ಸ್ಥೂಲ, ಮಧ್ಯಮವೆಂದು ಮೂರುತೆರನಾ ಗಿರುವುದು. ವಾತಾಧಿಕ್ಯದಿಂದ ದೇಹಕೃಶ, ಪಿತ್ತಾಧಿಕ್ಯದಿಂದ ದೇಹಮಧ್ಯಮ, ಶ್ಲೇಷ್ಮಾಧಿಕ್ಯದಿಂದ ದೇಹವು ಸ್ಥೂಲವಾಗಿರುವುದು. ಕೃಶದೇಹಕ್ಕೆ ಪುಷ್ಟಿಕರವಾದ ಔಷಧದಿಂದ ರಕ್ಷಣೆ ಮಾಡುವುದು. ಮಧ್ಯಮಶರೀರಕ್ಕೆ ಸಮವಾದ ಔಷಧದಿಂದ ರಕ್ಷಣೆ ಮಾಡುವುದು.

ಸತ್ವವೆಂತೆನೆ:—ಆಪತ್ತುಸಂಪತ್ತುಗಳಲ್ಲಿ ಒಂದೇಪ್ರಕಾರವಾದ ಉತ್ಸಾಹ ವೆಂಬುದು ಸತ್ವವೆನಿಸಿಕೊಂಬುದು. ಆ ಸತ್ವಗುಣವುಳ್ಳ ಪುರುಷನು ಸಾತ್ವಿಕನೆನಿ ಸಿಕೊಂಬನು.

ಬಲವೆಂತೆಂದೊಡೆ:—ದಪ್ಪವಾದ ಶರೀರವುಳ್ಳವನಾದರೂ ಒಬ್ಬನು ತ್ರಾಣ ವಿಲ್ಲದೆ ಇಹನು. ಬಡವಾದ ಶರೀರವುಳ್ಳವನಾದರೂ ಒಬ್ಬನು ತ್ರಾಣವುಳ್ಳವನಾಗಿ ಹನು. ಆದಕಾರಣದಿಂದ ಸ್ಥಿರವಾಗಿ ಉದ್ಯೋಗಗಳಲ್ಲಿಯೂ, ಸಂಚಾರದ ಲ್ಲಿಯೂ ಆವುದೊಂದು ತ್ರಾಣವುಂಟೋ ಅದು ಬಲವೆನಿಸಿಕೊಂಬುದು, ಆ ಬಲವು ಮೂರುವಿಧವಾಗಿರುವುದು, ಎಂತೆಂದೊಡೆ—ಆ ಕಾಯಬಲವು ಸಹಜವೆಂದೂ ಕಾಲಜವೆಂದೂ, ಯುಕ್ತಿಕೃತವೆಂದೂ ಮೂರು ತೆರನಾಗಿರುವುದು ; ಎಂತೆನೆ— ಹುಟ್ಟುವಾಗಲೇ ದೇಹದಲ್ಲಿದ್ದ ಬಲವು ಸಹಜವೆನಿಸಿಕೊಂಬುದು, ಯೌವ್ವನದಲ್ಲಿ ಉಂಟಾದ ಬಲವು ಕಾಲಜವೆನಿಸಿಕೊಂಬುದು. ರಸಾಯನಾದ್ಯೌಷಧಗಳಿಂದಾದ ಬಲವು ಯುಕ್ತಿಬಲವೆನಿಸಿಕೊಂಬುದು.

ವೈದ್ಯಲಕ್ಷಣ.— ವೈದ್ಯನ ಲಕ್ಷಣವೆಂತೆಂದೊಡೆ—ಒಂದೌಷಧದಿಂದ ಉಂ ಟಾದ ದೋಷವಿದು. ಎರಡುದೋಷದಿಂದುಂಟಾದ ವ್ಯಾಧಿಯಿದು. ಮೂರು ದೋಷದಿಂದುಂಟಾದ ವ್ಯಾಧಿಯಿದು. ಒಂದರ ಸಂಕರದಿಂದ, ಅನೇಕ ಸಂಕರ ದಿಂದ ಉಂಟಾದುವು ; ಬಹಳ ದಿನದಲ್ಲಿ ಹುಟ್ಟಿದ್ದರೂ, ಬಹಳ ಅಪಥ್ಯದಿಂದ ಹುಟ್ಟಿದ್ದರೂ, ಅಲ್ಪಪಥ್ಯದಿಂದ ಹುಟ್ಟಿದ್ದರೂ, ಇವೆಲ್ಲವನ್ನೂ, ಪಕ್ವವಾಗಿದ್ದಂಥಾ ದ್ದನ್ನೂ, ಇದು ಶೀಘ್ರದಲ್ಲೇ ಚಿಕಿತ್ಸೆಯನ್ನು ಮಾಡಲು ತಕ್ಕುದೆಂಬುದನ್ನೂ, ಇದು ದಿನಾಲಸ್ಯದಮೇಲೆ ಚಿಕಿತ್ಸೆಮಾಡಲು ತಕ್ಕುದೆಂಬುದನ್ನೂ, ಭೌಮಾದಿ ನವಗ್ರಹಗಳ ಅನುಕೂಲವುಳ್ಳವನೆಂಬುದನ್ನೂ, ದೂತಲಕ್ಷಣಶಕುನಾದ್ಯರಿಷ್ಟಗಳನ್ನೂ ತಿಳಿದು ನೋಡಿ ಚಿಕಿತ್ಸೆಯನ್ನು ಮಾಡುವಾತನೇ ವೈದ್ಯನೆನಿಸಿಕೊಂಬನು.

## ವಾತಪ್ರಕೋಪಲಕ್ಷಣಂ.

ವಾತಪ್ರಕೋಪಲಕ್ಷಣವೆಂತೆಂದೊಡೆ.— ಮಲಮೂತ್ರಗಳ ನಿರೋಧದಿಂದಲೂ, ಅತ್ಯಾಹಾರದಿಂದಲೂ, ಜಾಗರಣದಿಂದಲೂ, ಕೂಗಿ ಮಾತಾಡ ವುದರಿಂದಲೂ, ಅತಿ ಸಂಚಾರದಿಂದಲೂ, ಕುದುರೆಯೇರಾಟದಿಂದಲೂ, ಕಾರ, ಕಹಿ, ಒಗರು, ರೂಕ್ಷಾಹಾರಗಳಿಂದಲೂ, ಚಿಂತೆ, ಮೈಥುನ, ಭಯ, ಲಂಘನ, ಶೀತ, ಶೋಕ, ಇವುಗಳಿಂದಲೂ ವರ್ಷಾಕಾಲದಿಂದಲೂ, ವಾಯುವು ಪ್ರಕೋಪಿಸುವುದು. ವಾತಪ್ರಕೋಪವಾದಾಗ, ಎಂತಿಹುದೆಂದೊಡೆ — ಬಾಯಹೇವರಿಕೆ, ಮಲದಲ್ಲಿ ಕಾಠಿನ್ಯ, ಶರೀರದಲ್ಲಿ ಕೃಶತ್ವವೂ, ರಾತ್ರಿ ನಿದ್ರಾಭಂಗವೂ, ತ್ವಕ್ಕಿನಲ್ಲಿ ಕಾಠಿನ್ಯವೂ, ಅಗ್ನಿವೈಷಮ್ಯವೂ, ಇಷ್ಟೂ ವಾತಪ್ರಕೋಪದಿಂದುಂಟಾದ ಲಕ್ಷಣವೆಂದರಿವುದು. ವಾತಶಮನಕರ—ಸ್ನಿಗ್ಧಾಹಾರ, ಉಷ್ಣಾಹಾರ, ಬಹಳ ವೀರ್ಯವೃದ್ಧಿಕರದ್ರವ್ಯ— ಬಾಲ್ಯವಯಸ್ಸು, ಲವಣ, ಮಧುರ, ಹುಳಿ, ಎಣ್ಣೆ, ಬಿಸಿಲು, ಅಭ್ಯಂಗನಸ್ನಾನ, ವಸ್ತಿ, ಮಾಂಸಾಹಾರ, ಮದ್ಯಪಾನ, ಅಂಗಮರ್ದನ, ಕಾಲಗುದ್ದಿಸಿಕೊಂಬುದು, ತೈಲವಿಧಿ, ಸ್ವೇದವಿಧಿ, ನಿರೋಹಣ, ಬೆಚ್ಚಗಿದ್ದ ಶಯನಸ್ಥಾನ, ವಾಹನ, ಇವೇ ಮೊದಲಾದ ಆಹಾರವಿಹಾರಗಳೆಲ್ಲವೂ ವಾತಶಮನಕರವೆಂದರಿವುದು.

ಪಿತ್ತಪ್ರಕೋಪಕರ ದ್ರವ್ಯಗಳು.—ಕಾರ, ಹುಳಿ, ಮದ್ಯ, ಉಪ್ಪು, ಉಷ್ಣ, ವಿವಾದ, ವೆಗ್ಗಳವಾದ ಕೋಪ, ಬಿಸಿಲು, ಕಿಚ್ಚು, ಉದ್ಯೋಗದಿಂದುಂಟಾದ ಬಳಲಿಕೆ, ಒಣಗಿದಮಾಂಸ, ಕ್ಷಾರದ್ರವ್ಯ, ಬಹಳವಾದ ಅಜೀರ್ಣ, ವಿಷಮಾನ್ನಭೋಜನ ಮುಂತಾದವುಗಳಿಂದಲೂ, ಶರತ್ಕಾಲದಿಂದಲೂ ಪಿತ್ತಪ್ರಕೋಪವಾಗುವುದು.

ಅಂತೂ ಪಿತ್ತಪ್ರಕೋಪವಾದಾಗ ಶರೀರಧರ್ಮವೆಂತಿಹುದೆನೆ.—ಭ್ರಮೆ, ಮದ, ಬಾಯಾರಿಕೆ, ಬೆವರು, ಸಂತಾಪ, ಮೂರ್ಛೆ, ಮುಖದಲ್ಲಿ, ಕಣ್ಣಿನಲ್ಲಿ, ಉಗುರಿನಲ್ಲಿ, ಮೂತ್ರದಲ್ಲಿ, ಮಲದಲ್ಲಿ ಸಹ ಹಳದೀವರ್ಣವಾಗಿರುವುದು, ಪ್ರಲಾಪ ಅತಿಸಾರ, ಬಾಯಿಕಹಿ, ಜ್ವರ, ತೃಷೆ, ಅತ್ಯಂತ ಶೈತ್ಯದಲ್ಲಿ ಇಚ್ಛೆಯೂ ಇವುಗಳಿಷ್ಟೂ ಪಿತ್ತಪ್ರಕೋಪಲಕ್ಷಣವೆಂದರಿವುದು.

ಪಿತ್ತಶಮನದ್ರವ್ಯ.—ಕಹಿ, ಸಿಹಿ, ತೊಗರು, ಶೈತ್ಯವಾದ ಗಾಳಿ, ನೆಳಲು, ರಾತ್ರಿಕಾಲದಲ್ಲಿ ಬೀಸಿಕೊಂಬುದು, ಬೆಳದಿಂಗಳು, ನೆಲಮಾಳಿಗೆ, ಜಲಸೂತ್ರ, ಮೋಡ, ಸ್ತ್ರೀಯರ ಅಂಗಸಂಗ, ತುಪ್ಪ, ಹಾಲು, ವಿರೇಕ, ದುಷ್ಟವಾದ ರಕ್ತಮೋಕ್ಷಣ, ಗಂಧಾನುಲೇಪನ, ಸೀತಳವಾದ ಪಾನಾಹಾರವಿಹಾರಕ್ರಿಯೆಗಳು, ಪರಿಮಳಪುಷ್ಪಮಾಲ್ಯಾಲಂಕಾರ ಮುಂತಾದವುಗಳೆಲ್ಲವೂ ಪಿತ್ತಶಮನದ್ರವ್ಯಗಳು.

ಶ್ಲೇಷ್ಮಪ್ರಕೋಪಕರದ್ರವ್ಯ.—ಹಗಲುನಿದ್ರೆ, ಮಧುರಾಹಾರ, ಶೈತ್ಯ, ಮೀನಮಾಂಸ, ಗುರ್ವಾಹಾರ, ಹುಳಿ; ಸ್ನಿಗ್ಧಾಹಾರ, ಎಳ್ಳು, ಕಬ್ಬಿನಹಾಲು ಮೊದ

ಲಾದ ವಸ್ತುಗಳು, ಹಾಲು ಮೊದಲಾದ ಪಯೋವಸ್ತುಗಳು, ಕಟ್ಟಿದ ಅನ್ನ, ಉಪ್ಪು ನೀರು, ಪಾನದ್ರವ್ಯ, ಕಜ್ಜಾಯ, ಇವುಗಳಿಂದಲೂ ವಸಂತಕಾಲದಿಂದಲೂ ಶ್ಲೇಷ್ಮಪ್ರಕೋಪವೆಂದರಿವುದು.

ಶ್ಲೇಷ್ಮಪ್ರಕೋಪಲಕ್ಷಣವೆಂತೆಂದೊಡೆ.— ಅಗ್ನಿಮಾಂದ್ಯವೂ, ಶೀತಬಾಧೆಯೂ, ಶ್ವಾಸಖಾಸವೂ, ಪ್ರಶೀತವೂ, ನಾಲಗೆ ದಪ್ಪವಾಗಿ, ಸಿಹಿಯಾಗಿ ಇರುವುದೂ, ಶರೀರದಲ್ಲಿ ಬಹು ಆಲಸ್ಯವೂ, ರೋಮಾಂಚನವೂ, ಸಂದುಗಳು ಸಡಲಿದ ಹಾಗೆ ಇರುವುದೂ, ಬಹಳ ನಿದ್ರೆಯೂ, ನಾಡೀರಂಧ್ರಗಳ ನಿರೋಧವೂ, ಎದೆಯೊದ್ದುಕೊಂಡು ನೋವು ಉಂಟಾಗಿರುವುದೂ ಇವು ಇಷ್ಟೂ ಶ್ಲೇಷ್ಮಪ್ರಕೋಪ ಲಕ್ಷಣವೆಂದರಿವುದು.

ಶ್ಲೇಷ್ಮಶಮನ ದ್ರವ್ಯಗಳು:—ರೂಕ್ಷಾಹಾರವೂ, ಕ್ಷೀರಾಹಾರವೂ, ತೊಗರೂ, ಕಹಿಯೂ, ಸಂಚಾರವೂ, ಉಗುಳುವುದೂ, ಸ್ತ್ರೀಸಂಗವೂ, ದಾರಿನಡೆಯುವುದೂ, ಬಾಹುಯುದ್ಧವೂ, ನಿದ್ರೆಯನ್ನು ತಡೆವುದೂ, ವನಸಂಚಾರ ಮುಂತಾದ ವನಕ್ರೀಡೆಯೂ, ಕಾಲುತೀಡಿಸಿಕೊಂಬುದೂ, ಧೂಮಪಾನವೂ, ಮಧುರಾಹಾರವೂ, ನಸ್ಯವೂ, ವಮನವೂ, ಉಪವಾಸ ಮೊದಲಾದ ಲಂಘನವೂ, ಶೀತವೂ, ಪಾನಾಹಾರವಿಹಾರಗಳೆಂಬ ಔಷಧಮುಂತಾದವುಗಳಿಂದ ಅತ್ಯುಗ್ರವಾದ ಶ್ಲೇಷ್ಮ ಶಮನವೆಂದರಿವುದು.

ಕ್ಷೀಣವಾತಶ್ಲೇಷ್ಮಲಕ್ಷಣವೆಂತೆನೆ.—ಕ್ಷೀಣವಾಯುವು ಕಡಮೆಯಾಗಿ, ಒಂದೆಡೆ ಗುರುತಾಗಿ, ದೇಹದಲ್ಲಿ ಬಳಲಿಕೆಯೂ, ನಿಷ್ಠುರವಾಗಿ, ಅಲ್ಪವಾಗಿ ಮಾತಾಡುವುದೂ, ಮರವೆಯುಂಟಾಗಿ ಚೈತನ್ಯಗೆಟ್ಟಿರುವುದೂ, ಶ್ಲೇಷ್ಮ ಹೆಚ್ಚಿರುವುದೂ, ಬಿಕ್ಕಲು ಉಂಟಾಗಿರುವುದೂ ಇವು ಇಷ್ಟೂ ಕ್ಷೀಣವಾತಶ್ಲೇಷ್ಮಲಕ್ಷಣವೆಂದರಿವುದು.

ಕ್ಷೀಣಪಿತ್ತಲಕ್ಷಣವೆಂತನೆ.—ಪ್ರಸ್ನಸ್ವರೂಪವಾದಪಿತ್ತವು ಕ್ಷೀಣವಾದರೆ ಶರೀರವು ಶೀತವಾಗುವುದು. ದೇಹವು ಭಾರವಾಗುವುದು. ಕಾಂತಿಗುಂದುವುದು.

ಕ್ಷೀಣಶ್ಲೇಷ್ಮ ಲಕ್ಷಣ.—ಶ್ಲೇಷ್ಮಸ್ಥಾನಗಳು ಶೂನ್ಯವಾಗಿಹುದು, ಎದೆಯಲ್ಲಿ ಬೆವರುಂಟಾಗಿರುವುದು, ಸಂದುಗಳು ಸಡಲಿಸುವುದು.

## ರೋಗಪರೀಕ್ಷೆ.

ದೇಹವನ್ನು ಮುಟ್ಟಿನೋಡುವುದು, ನಾಡಿಯ ಪರೀಕ್ಷಿಸುವುದು, ರೋಗಿಯ ವಕ್ಕಣೆಗಳಿಂದ ಶರೀರಸ್ಥಿತಿಯನ್ನು ಕೇಳುವುದು, ಈ ಮೂರು ತೆರದಿಂದಲೂ ರೋಗಿಯ ರೋಗವನ್ನು ಪರೀಕ್ಷಿಸುವುದು. ಎಂತೆಂದೊಡೆ—ನಿದಾನಪ್ರಾಗ್ರೂಪಲಕ್ಷಣೋಪಶಯಾಪ್ತಿಗಳೆಂಬೈದು ತೆರದಿಂದಲೂ ರೋಗವ ಪರೀಕ್ಷಿಸುವುದು. ನಿದಾನವೆಂಬುದು ರೋಗಕ್ಕೆಲ್ಲಾ ಆದಿಕಾರಣವಾದಂಥಾದ್ದು. ಪ್ರಾಗ್ರೂಪ

ಎಂದರೆ, ರೋಗ ಹುಟ್ಟುವುದಕ್ಕೆ ಮೊದಲೇ ಉಂಟಾದ ಅವ್ಯಕ್ತವಾದ ರೋಗ ಲಕ್ಷಣ ; ಲಕ್ಷಣವೆಂಬುದು ಹುಟ್ಟಿದ ರೋಗದ ವ್ಯಕ್ತಲಕ್ಷಣ. ಉಪಶಯವೆಂಬುದು ಈ ರೋಗಕ್ಕೆ ಔಷಧವು. ಆಹಾರವಿದು, ಅಪಥ್ಯವೆಂಬುದು ಸಹಿತವಾಗಿ, ಆಪ್ತಿಯೆನಿಸಿಕೊಂಬುದು. ಈ ಸ್ಥಾನದಲ್ಲಿರುವ ದೋಷದಿಂದಲೂ, ಉಪದ್ರವವೆಂದರಿವುದು ಸಹ ಆಪ್ತಿಯೆನಿಸಿಕೊಂಬುದು. ಇವೇಮುಂತಾದ ಈ ಐದು ಪ್ರಕಾರದಿಂದಲೂ ರೋಗಿಯ ರೋಗವರಿತು ಇದು ಸಾಧ್ಯ, ಇದು ಕಷ್ಟಸಾಧ್ಯ, ಇದು ಅಸಾಧ್ಯವೆಂದು ತಿಳಿದು ವೈದ್ಯನು ಚಿಕಿತ್ಸೆಯನ್ನು ಪ್ರಾರಂಭಿಸುವುದು.

ಸಾಧ್ಯಲಕ್ಷಣವೆಂತೆನೆ.—ಒಂದೊಂದೇ ದೋಷದಿಂದ ಹುಟ್ಟಿದ ವ್ಯಾಧಿಯೂ ಉಪರೋಗವಿಲ್ಲದ ವ್ಯಾಧಿಯೂ ಮೂರು ಹೊತ್ತಾದರೂ, ಆರುಹೊತ್ತಾದರೂ ಚಿಕಿತ್ಸೆ ನಡೆದಮೇಲೆ ರೋಗವು ಹೆಚ್ಚದೆ ಯಥಾಸ್ಥಿತಿಯಾಗಿರುವ ರೋಗವೂ ಆವಾಗಲೂ ದೀಪನವುಳ್ಳವನ ರೋಗವೂ ಜ್ಞಾನಿಯಾದವನ ರೋಗವೂ ಅಲ್ಪಕಾಲದಲ್ಲಿ ಹುಟ್ಟಿದವನ ರೋಗವೂ, ಇವು ಇಷ್ಟೂ ಸುಲಭವಾಗಿ ಸಾಧ್ಯವಹುದು.

ಯಾಪ್ಯಸಾಧ್ಯವೆಂತೆಂದರೆ.—ಅವುದಾದರೊಂದು ವ್ಯಾಧಿಯು ಔಷಧಸೇವನೆಪರಿಯಂತರ ಹೆಚ್ಚದೆ, ತಗ್ಗದೆ ಇದ್ದು ಆ ಔಷಧವನ್ನು ಬಿಟ್ಟಬಳಿಕ ಎಂದಿನ ಮರ್ಯಾದೆಯಲ್ಲಿ ಯಾವಾಗ ಹೆಚ್ಚುತಲಿದ್ದಿತೋ ಆ ರೋಗವೂ ದೋಷಾಂತರದೊಡನೆ ಕೂಡಿರುವ ರೋಗವೂ ಯಾಪ್ಯಸಾಧ್ಯಗಳೆಂದರಿವುದು.

ಅಸಾಧ್ಯಲಕ್ಷಣವೆಂತೆನೆ.—ಆವಾವ ರೋಗಗಳು ಮರ್ಮಸ್ಥಾನದಲ್ಲಿ ಹುಟ್ಟಿ ಇದ್ದಾವು ; ಜನನಾದಿಯಾಗಿ ಹುಟ್ಟಿ ಇದ್ದಾವು ; ತ್ರಿದೋಷಗಳಿಂದ ಕೂಡಿಯಿದ್ದಾವು ; ಬಹುಕಾಲಾರಭ್ಯ ನಡೆಯುತ್ತಿದ್ದಾವು ; ಕೆಲವು ಉಪದ್ರವದೊಡನೆ ಕೂಡಿಕೊಂಡಿದ್ದರೂ ಹಿತವಾಗಿ ನಡೆಸುತ್ತಲಿದ್ದಾವು ; ಈ ವ್ಯಾಧಿಗಳೂ ಮತ್ತು ಒಡವೆಯು ಹೋಗಾಡಿದವನ ವ್ಯಾಧಿಯೂ, ಜನ್ಮಾಂತರದಲ್ಲಿ ಮಾಡಿದ ಉತ್ಕಟವಾದ ಪಾಪದಿಂದ ಹುಟ್ಟಿದಂಥಾದ್ದು ; ಇವಿಷ್ಟೂ ವೈದ್ಯರುಗಳಿಗೆ ಅಸಾಧ್ಯವೆಂದರಿವುದು.

## ರೋಗಕ್ಕೆ ಶೀಘ್ರಪ್ರತೀಕಾರವೆಂತೆನೆ.

ಸ್ಥಾವಿರ ವಿಷಜಂಗಮ, ವಿಷ, ಕುಷ್ಠ, ಅಪಸ್ಮಾರ, ಬೆರಗು, ಮಹೋದರ, ಕಾಮಾಲೆ ಮುಂತಾದ ರೋಗಗಳು ಕಾಣಿಸಿದಲ್ಲಿಯೇ ಚಾಪ್ಯವಮಾಡದೆ ಶೀಘ್ರದಲ್ಲಿಯೇ ಪ್ರತೀಕಾರವಂ ಮಾಡಬೇಕು. ದಿನಾಲಸ್ಯವಾದರೆ ರೋಗವು ವೈದ್ಯನಿಗೆ ಅಸಾಧ್ಯವೆಂದರಿವುದು.

ಚಿರಪ್ರತೀಕಾರವೆಂತೆನೆ.—ಅತಿಸಾರದಲ್ಲಿಯೂ ಜ್ವರದಲ್ಲಿಯೂ, ರಕ್ತಪಿತ್ತದಲ್ಲಿಯೂ, ಕಣ್ಣಿಯವೆಗಳಲ್ಲಿಯೂ, ಅರೋಗಗಳಲ್ಲಿಯೂ ಆದಿಯಲ್ಲಿ ಚಿಕಿತ್ಸೆಯನ್ನು ಮಾಡಬಾರದು. ವ್ಯಾಧಿಗಳ ವೇಗವೆಂಬುದು ಉಲ್ಬಣಕಾಲದಲ್ಲಿ ಚಿಕಿತ್ಸೆಯಂ

ಬಿಟ್ಟು ಯುಕ್ತಿಗಳಿಂದ ಜಯಿಸಲು ಅಶಕ್ಯವಾಗಿರುವುದು. ಆದ್ದರಿಂದ ಈ ರೋಗ ಗಳಲ್ಲಿಯೂ, ವಾತಾದಿ ರೋಗಗಳಲ್ಲಿಯೂ ಆದಿಯಲ್ಲಿ ಚಿಕಿತ್ಸೆ ಮಾಡಬಾರದೆಂಬು ದನ್ನೂ ಇತರ ರೋಗಾದಿಗಳಲ್ಲಿ ಆದಿಯಲ್ಲೇ ಶೀಘ್ರವಾಗಿ ಚಿಕಿತ್ಸೆಯು ಮಾಡವೇ ಕೆಂಬುದನ್ನೂ ತಿಳಿಯುವುದೇ ಕುಶಲವೆನಿಸುವುದು.

ಚಿಕಿತ್ಸಾಂಗವೆಂತೆಂದೊಡೆ.—ವೈದ್ಯ, ಔಷಧ, ರೋಗಸ್ಥ, ಪರಿಚಾರಕ ಈ ನಾಲ್ಕೂ ಚಿಕಿತ್ಸಾಂಗವೆನಿಸಿಕೊಂಬುವುವು. ಈ ಅಂಗಗಳಿಲ್ಲದೇ ಇದ್ದರೆ, ಶರೀರವಿಲ್ಲ ದವರಿಗೆ ನಡೆಯೂ, ಪಂಚೇಂದ್ರಿಯ ವ್ಯಾಪಾರವೂ, ಹೇಗೆ ಇಲ್ಲದೇ ಇರುವುದೋ ಆ ರೀತಿಯಲ್ಲೇ ಚಿಕಿತ್ಸೆಯು ಸಿದ್ಧಿಸುವುದೆಂದರಿವುದು.

ವೈದ್ಯನೆಂತೆನೆ.—ಸತ್ಯಸಂಧನಾಗಿ, ಧೈರ್ಯವಂತನಾಗಿ, ಅಮೃತಹಸ್ತನಾಗಿ ಸಕಲಶಾಸ್ತ್ರಾರ್ಥವನ್ನು ತಿಳಿದವನಾಗಿ, ಮೌನವಿಲ್ಲದೆ ಎಚ್ಚರವುಳ್ಳವನಾಗಿ ಶ್ರುತ ದೃಷ್ಟಾನುಮಾನಗಳಲ್ಲಿ ನಿಪುಣನಾಗಿ, ಮೃದುವಾಣಿಯಾಗಿ, ಅತ್ಯಾಶೆಯಿಲ್ಲದವ ನಾಗಿ, ಯಥಾಶಾಸ್ತ್ರಕೋವಿದನಾಗಿ, ಧರ್ಮಜನಾಗಿ, ಸಕಲಜೀವದಯಾಪರನಾ ಗಿರುವವನೇ ವೈದ್ಯನೆನಿಸಿಕೊಂಬನು.

ಔಷಧವೆಂತೆನೆ —ಒಳ್ಳಿತಾದ ಸ್ಥಳದಲ್ಲಿ, ಒಳ್ಳೆಯದಾದ ಸಮಯದಲ್ಲಿ ಕಾಲ ಕಾಲವರಿತು ಸಂಗ್ರಹಿಸಿದಂಥಾ ವಸ್ತುಗಳೊಡನೆ ಕೂಡಿದ್ದಾಗಿ, ಸ್ವಲ್ಪಮಾತ್ರೆಯು ಳ್ಳದ್ದಾಗಿ, ದೃಷ್ಟಿಪ್ರಿಯವಾಗಿ, ರುಚಿಕರವಾಗಿ, ಒಳ್ಳಿತಾದ ಪರಿಮಳದೊಡನೆ ಕೂಡಿದ್ದಾಗಿ, ಸೇವನಮಾತ್ರದಿಂದಲೇ ಸಕಲರೋಗಗಳನ್ನೂ ಪರಿಹರಿಸುವಂಥಾ ಪರಮೌಷಧವೇ ಔಷಧವೆನಿಸಿಕೊಂಬುದು.

ರೋಗಿಯೆಂತೆನೆ—ದ್ರವ್ಯವುಳ್ಳವನಾಗಿಯಾದರೂ, ದಯಾವಂತನನಾಶ್ರಯಿಸಿ ದಂಥಾವನಾಗಿಯಾದರೂ, ಆಯುಷ್ಯವುಳ್ಳವನಾಗಿಯಾದರೂ, ಬುದ್ಧಿಯುಳ್ಳವನಾ ಗಿಯೂ, ಇಷ್ಟರಾದ ಸ್ತ್ರೀಪುತ್ರರುಳ್ಳವನಾಗಿಯೂ, ಒಳ್ಳೆಯವರಾದ ಭೃತ್ಯರೂ, ಬಂಧುವರ್ಗವುಳ್ಳವನಾಗಿಯೂ, ಜಿತೇಂದ್ರಿಯನಾಗಿಯೂ, ಸತ್ವಗುಣವುಳ್ಳವನಾ ಗಿಯೂ, ತನಗೆ ಆರೋಗ್ಯವೂ, ಸುಖವೂ, ಆಗಬೇಕೆಂಬ ಇಚ್ಛೆಯುಳ್ಳವನಾಗಿ ರ್ದವನೇ ರೋಗಿಯೆನಿಸಿಕೊಂಬುವನು. ಇವನ ರೋಗವು ಸುಲಭಸಾಧ್ಯವಾಗಿ ರುವುದು.

ಪರಿಚಾರಕನೆಂತೆನೆ.—ರೋಗಸ್ಥನಲ್ಲಿ ಪ್ರೀತಿಯುಳ್ಳವನಾಗಿಯೂ, ಶುಚಿ ವಂತನಾಗಿ, ಮೋಸವಿಲ್ಲದವನಾಗಿ ಸಕಲೌಷಧ, ಕಷಾಯ, ತುಪ್ಪ, ತೈಲ, ಲೇಹ್ಯ, ಚೂರ್ಣ ಮೊದಲಾದ ಪ್ರಯೋಗಗಳನ್ನೂ ವೈದ್ಯನು ಹೇಳಿದಂತೆ ಮಾಡಬಲ್ಲ ಕುಶಲ ನಾಗಿ, ಎಲ್ಲಾ ಔಷಧ ಮೂಲಿಕೆಗಳನ್ನೂ ತಿಳಿದವನಾಗಿ ನಿರಾಲಸ್ಯನಾಗಿ ದೃಢ ಗಾತ್ರನಾಗಿ, ವೈದ್ಯನಲ್ಲಿ ಸ್ನೇಹಬಯಸುವವನಾಗಿರುವಂಥಾವನೇ ಪರಿಚಾರಕ ನೆನಿಸಿಕೊಂಬನು.

ಇದರಲ್ಲಿ ಮೊದಲು ಹೇಳಿದ ರೋಗವು ಮೂರುವಿಧವಾಗಿರುವುದೆಂತೆನೆ :— ವ್ಯಾಧಿಯು ಕರ್ಮಜವೆಂದೂ, ದೋಷಜವೆಂದೂ, ಕರ್ಮದೋಷಜವೆಂದೂ ಮೂರು ವಿಧವಾಗಿರುವುದು. ಇದರಲ್ಲಿ ಜನ್ಮಾಂತರದಲ್ಲಿ ಮಾಡಿದ ಪಾಪಕರ್ಮದ ಹೆಚ್ಚಿಗೆಯಿಂದಾದಂಥಾ ಕಾಯಮನೋವಿಕಾರಾದಿ ರೋಗಗಳು ಕರ್ಮಜವೆನಿಸಿ ಕೊಂಬುವು ; ವಾತಪಿತ್ತಶ್ಲೇಷ್ಮ ಮೊದಲಾದ ದೋಷಗಳಿಂದುಂಟಾದ ವ್ಯಾಧಿಯು ದೋಷಜವೆನಿಸಿಕೊಂಬುದು, ಪೂರ್ವಜನ್ಮಕರ್ಮಗಳಿಂದಲೂ ದೋಷಗಳಿಂದಲೂ ಹುಟ್ಟಿದರೋಗಗಳು ಕರ್ಮದೋಷಜವೆನಿಸಿಕೊಂಡು ಈ ರೀತಿಯಲ್ಲಿ ವ್ಯಾಧಿಯು ಮೂರು ತೆರನಾಗಿರುವುದೆಂದರಿವುದು.

ಈ ವ್ಯಾಧಿಶಮನವೆಂತೆನೆ.— ದಾನವು, ಭೂತದಯವು, ದ್ವಿಜಸಂತರ್ಪಣೆ ದೇವತಾಸಂತರ್ಪಣೆ, ಗುರುಸಂತರ್ಪಣೆ ಮೊದಲಾದ ಪೂಜೆ ನಮಸ್ಕಾರ ಗಳಿಂದಲೂ, ಸೂರ್ಯನಮಸ್ಕಾರ, ಜಪತಪಮುಂತಾದ ಪುಣ್ಯಕರ್ಮಂಗಳನ್ನು ಮಾಡುವುದರಿಂದಲೂ ಕರ್ಮಜವೆಂಬ ವ್ಯಾಧಿಯು ಶಾಂತವಹುದು. ವಮನ ವಿರೇಚನ ಮೊದಲಾದ ಪಂಚಕರ್ಮಗಳಿಂದ ದೋಷಜವಾದ ವ್ಯಾಧಿಗಳು ಶಮನ ವಹುದು ; ಮೊದಲು ಹೇಳಿದ ದಾನಮುಖ್ಯವಾದ ಪುಣ್ಯಕರ್ಮಗಳಿಂದಲೂ, ಔಷಧ ಗಳಿಂದಲೂ ಕರ್ಮದೋಷಜವೆಂಬ ವ್ಯಾಧಿಗಳು ಶಮನವಹುವೆಂದರಿವುದು.

ಮತಾಂತರೆ —ತ್ರಿವಿಕ್ರಮಪಂಡಿತಾಚಾರ್ಯವಿರಚಿತಗ್ರಂಥದಲ್ಲಿ— ವ್ಯಾಧಿಗಳು ನಾಲ್ಕುತರವೆಂತೆನೆ.—ಆಗಂತುಕವಾಗಿ ಬಂದ ರೋಗಗಳು ಶಾರೀರಕವೆನಿಸಿಕೊಂ ಬುವು ; ಈ ರೋಗಗಳು ಔಷಧಸಾಧ್ಯಂಗಳು. ಮಾನಸರೋಗಂಗಳು ಜ್ಞಾನ ಯೋಗಸಾಧ್ಯಂಗಳು. ಸಹಜರೋಗಂಗಳು ಚಿಕಿತ್ಸೆಯಿಂದ ಸಾಧ್ಯಗಳು. ಇವು ಗಳಲ್ಲಿ ಜ್ವರ, ಕುಷ್ಠ ಮೊದಲಾದ ರೋಗಂಗಳೇ ಶಾರೀರಕರೋಗವೆನಿಸಿಕೊಂಬುವು. ಕೋಪ, ಕ್ರೋಧ ಮೊದಲಾದವುಗಳಿಂದಾದ ರೋಗಗಳೇ ಮಾನಸರೋಗವೆನಿಸಿ ಕೊಂಬುವುವು. ಅಭಿಘಾತದಿಂದಾದ ರೋಗಗಳೇ ಆಗಂತುಕವೆನಿಸಿಕೊಂಬುವುವು. ಹಸಿವು, ತೃಷೆ, ಜರೆ ಮೊದಲಾದ ರೋಗಗಳು ಸಹಜರೋಗಗಳೆನಿಸಿಕೊಂಬುವುವು. ಈ ಮರ್ಯಾದೆಯಲ್ಲಿ ಶಾರೀರಕವೆಂದೂ, ಮಾನಸವೆಂದೂ, ಆಗಂತುಕವೆಂದೂ, ಸಹಜವೆಂದೂ, ನಾಲ್ಕುವಿಧ ರೋಗಂಗಳೆನಿಸಿಕೊಂಬುವುವು.

ಈ ರೋಗಗಳಿಗೆ ಪಂಚಕರ್ಮಗಳೆಂತೆನೆ.—ಸ್ನೇಹವಿಧಿಯು ಸ್ನೇಹವೆನಿಸಿ ಕೊಂಬುದು, ಸ್ವೇದನವಿಧಿಯೇ ಸ್ವೇದನವೆನಿಸಿಕೊಂಬುದು, ವಮನವಿಧಿ, ವಿರೇಚನ ವಿಧಿ, ನಸ್ಯವಿಧಿ ಸಹಾ ಪಂಚಕರ್ಮವೆನಿಸಿಕೊಂಬುವುವು ; ಈ ಪಂಚಕರ್ಮಗಳು ಸಕಲರೋಗಗಳಲ್ಲಿಯೂ ಪ್ರಯೋಗಿಸುವ ಮುಖ್ಯಚಿಕಿತ್ಸೆಗಳು.

ಈ ಪಂಚಕರ್ಮಂಗಳಂ ಪ್ರಯೋಗಿಸುವವಿಧಿಯೆಂತೆಂದೊಡೆ.—ವಾತರೋ ಗಗಳಲ್ಲಿ ತೈಲಮುಂತಾದವುಗಳಿಂದ ಲೇಪನ, ಪಾನ ಮುಂತಾದ ಸ್ನೇಹವಿಧಿ

ಗಳನ್ನೂ, ಕುಂಭಶಾಕ ಮುಂತಾದುದರಿಂದ ಸ್ವೇದನವಿಧಿಯನ್ನೂ ಪ್ರಯೋಗಿಸುವುದು. ಪಿತ್ತರೋಗಗಳಲ್ಲಿ ವಿರೇಚನವಿಧಿಯನ್ನು ಪ್ರಯೋಗಿಸುವುದು. ಶ್ಲೇಷ್ಮರೋಗದಲ್ಲಿ ವಮನವಿಧಿಯನ್ನು ಪ್ರಯೋಗಿಸುವುದು. ಸನ್ನಿಪಾತ ರೋಗಗಳಲ್ಲಿ ನಸ್ಯವಿಧಿಯನ್ನು ಪ್ರಯೋಗಿಸುವುದು.

ಈ ಪಂಚಕರ್ಮಗಳಿಗೆ ಕಾಲಭೇದವೆಂತೆನೆ.—ಅಂಜನ, ನಸ್ಯ, ವಮನಗಳೆಂಬ ಈ ಮೂರು ವಿಧಿಯನ್ನೂ ಪ್ರಾತಃಕಾಲದಲ್ಲಿಯೇ ಮಾಡಿಸುವುದು. ಸೇಕವನ್ನು ಮಧ್ಯಾಹ್ನಕಾಲದಲ್ಲಿ ಮಾಡುವುದು, ವಸ್ತಿಕರ್ಮವನ್ನು ಸಾಯಂಕಾಲದಲ್ಲಿ ಮಾಡುವುದು.

ವಮನಯೋಗ್ಯರು.— ಮಂದಾಗ್ನಿಯುವರು, ಛಳಿಜ್ವರದವರು, ಶಿರೋರೋಗದವರು, ಮುಖರೋಗದವರು, ಶೋಭೆಯರೋಗದವರು, ಪ್ರಸೇಕರೋಗದವರು, ಶ್ವಾಸರೋಗದವರು, ಉನ್ಮಾದರೋಗದವರು, ಪೈತ್ಯಜ್ವರದವರು, ಶ್ಲೇಷ್ಮರೋಗದವರು, ಪೀನಸರೋಗದವರು, ಪ್ರಮೇಹಕುಷ್ಠರೋಗದವರು, ಮೆಟರುಗಂಟಿನ ರೋಗದವರು, ವಿಸರ್ಪರೋಗದವರು, ವಿಷೂಚಿರೋಗದವರು, ವಿಷದರೋಗದವರ , ಇವರಿಷ್ಟೂ ವಮನಯೋಗ್ಯರೆಂದರಿವುದು.

ವಮನವರ್ಜಿತರು.—(ವಮನ ಅಯೋಗ್ಯರು) ಕಜ್ಜಿಯುವರಲ್ಲಿ, ಮಹೋದರದವರಲ್ಲಿ, ಗುಲ್ಮದವರಲ್ಲಿ, ಬಾಯಾರಿಕೆಯಿದ್ದವರಲ್ಲಿ, ಉದಾವಾರ್ತಾರೋಗದವರಲ್ಲಿ, ಗರ್ಭಿಣಿಯುವರಲ್ಲಿ, ವಾತವ್ಯಾಧಿ ಇರುವವರಲ್ಲಿ, ಕಾಮಾಲೆಇರುವವರಲ್ಲಿ ಪಾಂಡುರೋಗವಿರುವವರಲ್ಲಿ, ಹೃದಯರೋಗದವರು, ನೇತ್ರರೋಗದವರು, ಪಾರ್ಶ್ವವಾತದವರು, ಕೃಶದೇಹದವರು, ಕ್ಷಯವ್ಯಾಧಿಯವರು, ಇಷ್ಟುವಿಧವಾದ ಕಾಯಿಲೆಯುವರಲ್ಲಿ, ವಮನಕ್ರಿಯೆ ಮಾಡಲಾಗದು.

ವಮನಗುಣವೆಂತೆನೆ.— ವಮನದಿಂದ ಶ್ಲೇಷ್ಮಹರ ; ಸಕಲ ಶೀತಹರ ; ಮತಾಂತರದಲ್ಲಿ ವಮನಕ್ರಿಯೆಯಿಂದ ದೀಪನ ಉಂಟಾಗುವುದು. ಶ್ಲೇಷ್ಮದಿಂದುಂಟಾದ ದೋಷವೂ, ಪಿತ್ತದಿಂದುಂಟಾದ ದೋಷವೂ, ಶಮನವಹುದು. ಎದೆನೋವು, ಕೃತ್ರಿಮ ಮೊದಲಾದ ಸಕಲವಿಷದೋಷಂಗಳೂ, ಭ್ರಮೆ, ದಾಹ, ಜ್ವರಗಳೂ ಶಮನವಾಗುವುವು.

ವಿರೇಚನಕ್ಕೆ ಯೋಗ್ಯರು.—ಅಪಸ್ಮಾರ ರೋಗದಲ್ಲಿಯೂ, ಮಹೋದರದಲ್ಲಿಯೂ, ವಾತವ್ಯಾಧಿಯಲ್ಲಿಯೂ, ಪಿತ್ತದಲ್ಲಿಯೂ, ನೇತ್ರರೋಗದಲ್ಲಿಯೂ, ಮಲಬದ್ಧವಾಗಿದ್ದವರಲ್ಲಿಯೂ, ಶಿರೋರೋಗದಲ್ಲಿಯೂ, ಶೋಭೆಯಲ್ಲಿಯೂ, ಕುಷ್ಠವ್ಯಾಧಿಯಲ್ಲಿಯೂ, ಜೀರ್ಣಜ್ವರದಲ್ಲಿಯೂ, ಅರೋಚನದಲ್ಲಿಯೂ, ಕುಕ್ಷಿರೋಗದಲ್ಲಿಯೂ, ಇಲಿಯ ವಿಷದಲ್ಲಿಯೂ, ವಿಸರ್ಪ ವ್ಯಾಧಿಯಲ್ಲಿಯೂ, ಪ್ರಮೇಹದಲ್ಲಿಯೂ ಮೂಲವ್ಯಾಧಿಯಲ್ಲಿಯೂ, ಪಾಂಡುವ್ಯಾಧಿಯಲ್ಲಿಯೂ, ಇವಿಷ್ಟರಲ್ಲಿ ವಿರೇಚನ ಮಾಡಿಸಬಹುದು.

ಗರ್ಭಿಣಿಯರು, ಬಾಲಕರು, ಬಲಕ್ಷೀಣವಾದವರು ಇವರುಗಳಿಗೆ ವಿರೇಚನ ಮಾಡಿಸಲಾಗದು.

ಮತಾಂತರೆ—ವಿರೇಚನಕ್ಕೆಅಯೋಗ್ಯರು—ನವಜ್ವರದಲ್ಲಿಯೂ, ಸನ್ನಿಪಾತ ದಲ್ಲಿಯೂ, ಗರ್ಭಿಣಿಯರಲ್ಲಿಯೂ, ವೃದ್ಧರಲ್ಲಿಯೂ, ರೋಗಶೇಷವೆಂಬ ಅಜೀ ರ್ಣದಲ್ಲಿಯೂ, ಗೃಹಣಿಯಲ್ಲಿಯೂ, ಬಲರಹಿತವಾದವರಲ್ಲಿಯೂ, ಇವಿಷ್ಟರಲ್ಲಿಯೂ ವಿರೇಚನ ಮಾಡಲಾಗದು.

ವಿರೇಚನ ಗುಣವೆಂತನೆ.—ಬುದ್ಧಿಪ್ರಸನ್ನವಹುದು. ಪಂಚೇಂದ್ರಿಯ ಬಲವೂ, ಸಪ್ತಧಾತುಗಳ ಸ್ಥಿರವೂ, ಅಗ್ನಿ ಬಲವೂ, ಕ್ರಮದಿಂದ ವಯಸ್ಸು ಪರಿಣಮಿಸು ವುದೂ ಸಹ, ವಿರೇಚನ ಗುಣವೆಂದರಿವುದು.

ಅಂಜನ ಪ್ರಯೋಗಿಸುವಕಾಲವೆಂತನೆ.—ಹಿಮಂತಋತುವಿನಲ್ಲಿಯೂ, ಶಿಶಿರ ಋತುವಿನಲ್ಲಿಯೂ, ಮಧ್ಯಾಹ್ನದಲ್ಲಿ ಅಂಜನವನ್ನುಪಯೋಗಿಸುವುದು. ಶರತ್ಕಾಲ ದಲ್ಲಿಯೂ, ಗ್ರೀಷ್ಮಕಾಲದಲ್ಲಿಯೂ, ಪ್ರಾತಃಕಾಲದಲ್ಲಿ ಪ್ರಯೋಗಿಸುವುದು. ವಸಂತ ಕಾಲದಲ್ಲಿ ಮುಖ್ಯವಾಗಿ ಸಾರ್ವಕಾಲದಲ್ಲಿ ಅಂಜನವನ್ನುಪಯೋಗಿಸುವುದು. ಆದರೆ ವರ್ಷಾಕಾಲದಲ್ಲಿ ಅಂಜನವನ್ನು ಅಪರಾಹ್ಣದಲ್ಲಿ ಉಪಯೋಗಿಸುವುದು.

ಅಂಜನವರ್ಜ್ಯರು.—ಬಹಳ ಭಯಪಟ್ಟವರಲ್ಲಿಯೂ, ವಮನ ಮಾಡಿದವ ರಲ್ಲಿಯೂ, ವಿರೇಚಕ್ಕೆ ಔಷಧಿಯನ್ನು ತೆಗೆದುಕೊಂಡಿರುವವರಲ್ಲಿಯೂ, ಅತ್ಯಂತ ಶೀತವೇಗವುಳ್ಳವರಲ್ಲಿಯೂ, ಬಹಳವಾಗಿ ಕೋಪವ ತಾಳಿರುವವರಲ್ಲಿಯೂ, ಹೊಸ ದಾದ ಜ್ವರವೇಗವುಳ್ಳವರಲ್ಲಿಯೂ, ಬಳಲಿದ ಕಣ್ಣುಗಳುಳ್ಳವರಲ್ಲಿಯೂ, ಬಹಳ ಮಂಡೆನೋವು ಉಂಟಾದವರಲ್ಲಿಯೂ, ಬಹುದುಃಖ ಉಂಟಾದವರಲ್ಲಿಯೂ, ರಾತ್ರಿ ಜಾಗರಣೆ ಮಾಡಿದವರಲ್ಲಿಯೂ, ಒಂದುವೇಳೆಯೂ ಸೂರ್ಯಕಿರಣ ಕಾಣದವ ರಲ್ಲಿಯೂ, ಆಗತಾನೆ ಅಭ್ಯಂಗನಮಾಡಿದವರಲ್ಲಿಯೂ, ಧೂಮಪಾನ, ಮದ್ಯ ಪಾನಮಾಡಿದವರಲ್ಲಿಯೂ, ಅಜೀರ್ಣರೋಗದವರಲ್ಲಿಯೂ, ಅಗ್ನಿ, ಸೂರ್ಯ ಇವುಗಳಿಂದ ಸಂತಪ್ತರಾಗಿರುವವರಲ್ಲಿಯೂ, ಹಗಲು ನಿದ್ದೆಗೈದವರಲ್ಲಿಯೂ, ಬಹಳ ಬಾಯಾರಿದವರು, ಛಳಿಜ್ವರದಿಂದ ಕಂಗೆಟ್ಟಿರುವವರು ಇವರುಗಳಿಗೆ ಅಂಜನಕ್ರಿಯೆಯಂ ಮಾಡಲಾಗದು.

ಅಂಜನಯೋಗ್ಯರು.—ಬೇರೊಂದು ರೋಗವಿಲ್ಲದೆ ಶುದ್ಧದೇಹವುಳ್ಳವನ ನೇತ್ರರೋಗದಲ್ಲಿಯೂ, ಹೊಸದಾದ ನೇತ್ರರೋಗವಲ್ಲದೆ ಪಕ್ವವಾಗಿರುವ ನೇತ್ರ ರೋಗದಲ್ಲಿಯೂ, ಸ್ವಲ್ಪ ಬಾವು ಉಂಟಾದ ನೇತ್ರರೋಗದಲ್ಲಿಯೂ, ಅತ್ಯಂತ ತಿಮಿರಗಳುಂಟಾದ ಕಣ್ಣುಗಳಲ್ಲಿಯೂ, ಕನ್ನಡಿ ಬಹು ಕದಡಿಯಿದ್ದ ಕಣ್ಣಿನಲ್ಲಿಯೂ, ಅಲ್ಪವಾದ ಛಾಯೆಯುಳ್ಳ ಕಣ್ಣಿನಲ್ಲಿಯೂ, ಕೆಂಪಾದ ಕಣ್ಣಿನಲ್ಲಿಯೂ, ಹೆಚ್ಚಾಗಿ ಚಾರುಗಟ್ಟಿದ ಕಂಣಿನಲ್ಲಿಯೂ, ಅಂಜನಕ್ರಿಯೆ ಪ್ರಯೋಗಿಸುವುದು.

ಅಂಜನ ಗುಣಗಳು.—ಮೂರ್ಛೆಯೂ, ಭ್ರಮೆಯೂ, ಶೀತವೂ, ವಾತವೂ, ಉನ್ಮಾದವೂ, ಅಪಸ್ಮಾರವೂ, ಅಭಿಘಾತವೂ, ದೋಷತ್ರಯದಿಂದುಂಟಾದ ಸಂನಿಪಾತವೂ, ಕಣ್ಣಿನಲ್ಲಿ ಕಡ್ಡಿತಾಗಿ ಉಂಟಾದ ನೋವೂ, ಕಂಕುಣವೆಂಬ ನಾವು ಉಂಟಾದುದರಿಂದ, ಆ ಕಂಕುಣವೆಂಬ ರೋಗವೂ, ತಿಮಿರವೂ, ನೀರು ಸುರಿಯುವುದೂ, ಮಂಡೆಯಭಾರವೂ, ಖಾಸವೂ, ಇವೇ ಮುಂತಾದ ರೋಗ ಗಳನ್ನೂ ಪರಿಹರಿಸುವುದು.

ಗಂಡೂಷಗುಣ.—ಸಕಲವಾದ ಕಂಠರೋಗವನ್ನೂ, ಶ್ಲೇಷ್ಮರೋಗವನ್ನೂ, ಅಗ್ನಿಮಾಂದ್ಯವನ್ನೂ, ತೃಷೆಯನ್ನೂ, ಅರೋಚಕವನ್ನೂ, ಪೀನಸವನ್ನೂ, ಜ್ವರ ವನ್ನೂ, ಶ್ವಾಸವನ್ನೂ, ಶಿರೋವಾಯುವನ್ನೂ, ಕಂಣುನೋವು ಕಿವಿನೋವನ್ನೂ, ಕಪಾಲಶೂಲೆಯನ್ನೂ, ಕೆಮ್ಮನ್ನೂ, ಕಟವಾಯೊಳುಂಟಾದ ರೋಗವನ್ನೂ, ಸ್ವರ ಭಂಗವನ್ನೂ, ಹಲ್ಲುಕುರುವನ್ನೂ, ಹಲ್ಲುನೋವನ್ನೂ, ದಂತಚಲನ, ದಾಡೆಯೊಳಾದ ವ್ರಣವಿದ್ರಡಿ ಇವೇ ಮುಂತಾದ ರೋಗಗಳಂ ಪರಿಹರಿಸಿ, ದೃಷ್ಟಿಪ್ರಸನ್ನತೆಯ ನ್ನುಂಟುಮಾಡುವುದು.

ತ್ರಿಸ್ನೇಹದಗುಣ.—ವಾತಪಿತ್ತಶ್ಲೇಷ್ಮರೋಗಗಳಲ್ಲಿ ತ್ರಿಸ್ನೇಹ—ತ್ರಿಸ್ನೇಹ ಯೋಜನಕ್ರಮವು ವಾತಕ್ಕೆ ತ್ರಿಸ್ನೇಹವನ್ನು ಕೂಡಿಸಬೇಕಾದರೆ, ತುಪ್ಪ ಒಂದು ಪಾಲು, ಹರಳೆಂಣೆ ಎರಡುಪಾಲು, ಎಣ್ಣೆ ಮೂರುಪಾಲು ಈರೀತಿ ಕೂಡಿಸುವುದು.

ಪಿತ್ತಕ್ಕೆ ಎಣ್ಣೆ ಒಂದುಪಾಲು, ಹರಳೆಣ್ಣೆ ಎರಡುಪಾಲು, ತುಪ್ಪ ಮೂರು ಪಾಲಾಗಿ ಕೂಡಿಸುವುದು.

ಶ್ಲೇಷ್ಮಕ್ಕೆ.—ತುಪ್ಪ ಒಂದುಪಾಲು, ಎಣ್ಣೆ ಎರಡುಪಾಲು ಹರಳೆಣ್ಣೆ ಮೂರು ಪಾಲು ಕೂಡಿಸುವುದು.

ಇವುಗಳ ಗುಣ.—ರೂಕ್ಷದಾಹಗಳು ಶಮನವಾಗಿ ಸುವರ್ಣದಂತೆ ವರ್ಣ ಉಂಟಾದ ದೇಹವುಂಟಾಗಿ ಹೊಟ್ಟೆಯುಬ್ಬರವನ್ನು ಪರಿಹರಿಸಿ ದೀಪವನ್ನುಂಟು ಮಾಡಿ ಸಕಲ ರೋಗಗಳನ್ನೂ ತ್ರಿಸ್ನೇಹವನೊತ್ತಿ ಅಭ್ಯಂಗನಸ್ನಾನಮಾಡಲು ಪರಿ ಹರಿಸುವುದು.

ಧೂಮಪಾನ ಗುಣ.—ಧೂಮಪಾನಮಾಡಲು, ಶ್ವಾಸ, ಖಾಸ, ಮಲಬದ್ಧ, ಶ್ಲೇಷ್ಮವಿಷ, ಮೇಹ, ಸ್ವರಭಂಗ, ಅಗ್ನಿಮಾಂದ್ಯ, ಉದರವ್ಯಾಧಿ, ಜಲದೋಷ, ಪಾಂಡುರೋಗ, ಕಜ್ಜಿ, ದಂತಚಲನ, ದಂತಶೂಲೆ, ಇವಿಷ್ಟೂ ಗುಣವಹುದು.

ನಸ್ಯದಗುಣ.—ನಸ್ಯವಂ ಮಾಡಲು ದಾಡಾಬಂಧ, ಕಪೋಲಸ್ತಂಬ, ಅರ್ದಿತವಾತ, ಮಂಡೆಬೇನೆ, ನಡುಕ, ಮಂಡೆಕೂದಲು ಉದರುವುದು, ಮೂಗು, ಕಣ್ಣು, ಕಿವಿ, ಇವುಗಳಬಂಧನೆ, ಪೀನಸ, ಜರೆ, ಸ್ವರಭಂಗ, ಇವಿಷ್ಟನ್ನೂ ಪರಿಹರಿಸು ವುದು. ಮಂಡೆಕೂದಲೂ ಗಡ್ಡಬವರಿಯೂ ವರ್ಧಿಸಿ ಕಾಂತಿಯುಂಟಾಗುವುದು,

ಪಂಚೇಂದ್ರಿಯಗಳು ಪಟುತರವಹುವುವು. ಸಂದು ಸ್ನಾಯು ನರಗಳಿಗೆ ಬಲವುಂಟಾಗುವುದು.

ಕ್ಷೀರಧಾರಾಗುಣ.—ಇದನ್ನು ಸೇವಿಸಲು ಬಲಶಾಂತಿಗಳುಂಟಾಗುವುವು, ಶ್ರಮವೂ, ಭ್ರಮೆಯೂ, ಪಾಂಡುವೂ, ಕ್ಷಯವೂ, ಪಿತ್ತವೂ, ಉನ್ಮಾದವೂ, ಕಷ್ಟಗಳ ಭೇದವೂ, ಉಷ್ಣವೂ, ಪರಿಹಾರವಾಗುವುವು. ಅಲ್ಲದೆ ಬಹು ಲವಲವಿಕೆ ಶರೀರಕ್ಕೆ ಉಂಟಾಗುವುದು. ಶರೀರದ ಸುಖವೂ ದೀಪನವೂ ಹೆಚ್ಚುವುದು. ಪ್ರಮೇಹ, ಅರೋಚಕ, ಪೀನಸ, ವಾಯುವಿಕಾರ, ನೇತ್ರರೋಗ, ವಿಷರೋಗ ಸಹ ಗುಣಮಕ್ಕುಂ. ರಕ್ತಧಾತು ಮಾಂಸಧಾತು ವರ್ಧಿಸುವುದು; ವಾಯುವಿನಿಂದುಂಟಾದ ರೋಗಗಳೂ ಶ್ವಾಸವೂ, ಬಿಕ್ಕಳೂ ಸಹ ಪರಿಹಾರವಾಗಿ ಹೊಟ್ಟೆಯುಬ್ಬರ, ಉದರಶೂಲೆ, ಅತಿಸಾರ ಮೊದಲಾದ ವ್ಯಾಧಿಗಳು ಗುಣವಾಗಿ ಅಗ್ನಿಯುಂಟಾಗುವುದು.

## ಲಂಘನಪ್ರಾಶಸ್ತ್ಯ.

ಆವುದಾದರೊಂದು ಲಂಘನವು ದೀಪನ ಪಾಚನಗಳನ್ನುಂಟುಮಾಡಿ ವಾತಾದಿ ದೋಷಗಳನ್ನು ಪರಿಹರಿಸಿ ಜೀರ್ಣವನ್ನುಂಟುಮಾಡಿ ಆಮಾತಿಸಾರ, ಹೊಟ್ಟೆನೋವು ಜ್ವರ, ಶ್ಲೇಷ್ಮ ಮುಂತಾದ ವ್ಯಾಧಿಗಳನ್ನೂ ಲಂಘನವು ಪರಿಹರಿಸುವುದು.

ಭೋಜರಾಜಸಂಹಿತೆಯಲ್ಲಿ ದಿನಚರ್ಯೆ, ಅರಸುಗಳು ಪ್ರತಿನಿತ್ಯವೂ ನಡೆವ ಕಟ್ಟಳೆ, ಪ್ರಭಾತದರ್ಶನ ಯೋಗ್ಯ; ಅಂದರೆ ಉದಯದಲ್ಲಿ ಎದ್ದುನೋಡುವ ವಸ್ತುಗಳು. ಸೂರ್ಯನು, ಅರಸುಗಳು ಆಯುಸ್ಸು ಅಭಿವೃದ್ಧಿಯಾಗುವುದಕ್ಕೂ, ಪಾಪವು ಕ್ಷಯವಾಗಿ ಪುಣ್ಯವು ಹೆಚ್ಚುವುದಕ್ಕೂ ನಡೆವಂಥಾ ಕ್ರಮವು—ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಶೌಚವಿಧಿ ತೀರಿಸಿಕೊಂಡು ಶುಚಿಯಾಗಿ, ಸ್ವಸ್ಥಾನನಾಗಿ ಕುಳಿತುಕೊಂಬುದು; ತದನಂತರ ಸೂರ್ಯೋದಯ ಸಮಯದಲ್ಲಿ ಸೂರ್ಯನನ್ನೂ ಕಾಮಧೇನುವನ್ನೂ, ತಮ್ಮ ತಂದೆತಾಯಿಗಳು ಗುರು ಮೊದಲಾದವರನ್ನೂ, ದೋಷ ರಹಿತವಾಗಿ ಬರುವಂಥಾ ದಿವ್ಯರತ್ನವನ್ನೂ ಅಗ್ನಿಹೋತ್ರವನ್ನೂ, ಶಂಖವನ್ನೂ, ಗರುಡನನ್ನು, ಸುವರ್ಣವನ್ನೂ ಲಕ್ಷಣಶುದ್ಧವಾಗಿರುವಂಥಾ ಆನೆ, ಕುದುರೆಗಳನ್ನೂ, ದಿವ್ಯಪರ್ವತಗಳನ್ನೂ, ಬ್ರಾಹ್ಮಣರನ್ನೂ ಉದಯಕಾಲದಲ್ಲಿ ದರ್ಶನ ಮಾಡುವುದು.

## ಅನಂತರ ದಂತಧಾವನವಿಧಿ.

ಆಲ, ಯಕ್ಕ, ಹೊಂಗೆ, ಮಾವು, ಕೊರಟಿಗೆ, ಉತ್ತರಗೆ, ಕಗ್ಗಲಿ, ಜಾಜಿ, ಕಣಗಲು, ಬೇವು, ಅಂಕೋಲೆ, ಬಾಗೆ ಇವೇ ಮೊದಲಾದ ಕಾಷ್ಠಗಳಲ್ಲಿ ದಂತಧಾ

ವನವಂ ಮಾಡಿಕೊಂಡು, ಈ ಕಾಷ್ಠಗಳನ್ನು ಕೊನೆಹಲ್ಲಿನಲ್ಲಿ ಷಡ್ರಸಾಸ್ವಾದವು ಕಾಣಬರುವರೀತಿಗೆ ಮುಂಬಲ್ಲಿನಲ್ಲಿ ಜಗಿದು ದಂತಧಾವನವಂಮಾಡಿ ಕಾಷ್ಠವಂ ಬಿಸಾಟು ನೀರನ್ನು ಚನ್ನಾಗಿ ಮುಕ್ಕಳಿಸಿ ಉಗಿವುದು.

## ದಂತಧಾವನ ಗುಣ.

ಮುಖದ ದುರ್ಗಂಧವೆಲ್ಲಾಹೋಗಿ ದಂತಗಳು ನಿರ್ಮಲವಾಗಿ ಹಲ್ಲುಗಳು ಯಡೆಬಿಟ್ಟಿದ್ದರೆ ಸಂದುಗಳ ಕೂಡಿಕೊಂಡು, ದಂತಗಳಲ್ಲಿ ಹುಟ್ಟುವಂಥಾ ದೋಷ ಗಳೆಲ್ಲಾ ಶಮನವಾಗುವುವು ; ವಾತಪಿತ್ತಶ್ಲೇಷ್ಮದೋಷಗಳೂ ಮಟ್ಟಾಗುವುವು, ಹಲ್ಲುನೋವು ಹೋಗುವುದು, ಐಶ್ವರ್ಯಪ್ರದವಾಗುವುದು. ಶರೀರಾನುಗುಣ್ಯವಾಗಿ ಗಂಡೂಷವಿಧಿಯ ಮಾಡಿಸುವುದು ; ಜೇನುತುಪ್ಪ, ಎಣ್ಣೆ, ತಣ್ಣೀರು, ಮಜ್ಜಿಗೆ, ಬಿಲ್ವಪತ್ರೆಕಾಯಾದರೂ ಹಾಕಿದ ಕಷಾಯ, ಅಕ್ಕಿ ಎರಡೇಸಾರಿ ತೊಳೆದನೀರು, ಇವುಗಳಲ್ಲಿ ಅಸಹ್ಯವಿಲ್ಲದ ರೀತಿಯಲ್ಲಿ ಮುಕ್ಕಳಿಸುವುದು.

ಇದರ ಗುಣವೇನೆಂದರೆ.—ಶ್ವಾಸರೋಗ, ಕೆಮ್ಮಲು, ಗೂರ್ಲು, ಇನ್ನೂ ಶ್ಲೇಷ್ಮವಿಕಾರದ ರೋಗಗಳು, ಮುಖದಲ್ಲಿ ಹುಟ್ಟುವಂಥಾ ರೋಗಗಳು, ಶ್ಲೇಷ್ಮ ವ್ರಾತಸಂಕರರೋಗಗಳು ಶಮನವಾಗುವುವು. ಜಠರಾಗ್ನಿ ಹೆಚ್ಚುವುದು. ಅರೋಚಕ ಹೋಗುವುದು, ತ್ರಿದೋಷಯುಕ್ತವಾದ ರೋಗಗಳೂ, ಕಂಠರೋಗ ಗಳೂ ಸಹ ಗುಣವಾಗುವುವು.

ದಂತಧಾವನಕ್ಕೆ ಯೋಗ್ಯರಲ್ಲದವರು.—ಅಜೀರ್ಣಜ್ವರ, ಖಾಸರೋಗ, ಕುಷ್ಠರೋಗ, ಆಸ್ಯಪಾಕ, ಅರ್ದಿತವಾತ, ಮೂತ್ರರೋಗ, ಛರ್ದಿರೋಗ, ಕರ್ನ ರೋಗ, ಹೃದ್ರೋಗ, ವಾತರೋಗ, ಇವೇ ಮುಂತಾದ ರೋಗಗಳಿಂದ ಕೂಡಿ ದವರು ದಂತಧಾವನಕ್ಕೆ ಅನರ್ಹರೆಂದರಿವುದು.

ನಿತ್ಯಗಳ್ಲಿ ಸಂಚಾರಮಾಡುವ ಕ್ರಮ.—ನಾಲ್ಕುಗಳಿಗೆ, ಎಂಟುಗಳಿಗೆ, ಎರಡುಗಳಿಗೆ, ಈ ಪ್ರಕಾರದಲ್ಲಿ ಉದಯಕಾಲದಲ್ಲಿ ಸಂಚಾರಮಾಡುವುದು. ಹೀಗೆ ಮಾಡಿದ್ದಲ್ಲಿ ಶರೀರವು ಲಘುವಾಗಿರುವುದು ; ಕೈಕಾಲನಲ್ಲಿ ತ್ರಾಣಹುಟ್ಟು ವುದು ; ಜಠರಾಗ್ನಿ ಪ್ರಬಲವಾಗುವುದು; ತಾಮಸವಾಗಿ ತೊಪ್ಪೆಮೆಯ್ಯಾಗುವುದು. ದೃಢೀಕರಣವಾಗುವುದು, ಶರೀರದಲ್ಲಿರುವ ಅವಯುವಗಳೆಲ್ಲಾ ಬಲವಾಗಿ ಶರೀರ ಕಾಂತಿ ಹುಟ್ಟುವುದು. ಆದರೆ ಈ ಮೇರೆಗೆ ಹೆಚ್ಚಾಗಿ ಸಂಚಾರಮಾಡಿದಲ್ಲಿ ಶ್ವಾಸ ಖಾಸಗಳು, ಮತ್ತು ಮುಖರೋಗಗಳು, ಜ್ವರ, ಛರ್ದಿ, ಈ ಬಗೆ ರೋಗಗಳೆಲ್ಲಾ ಹುಟ್ಟುವುವು.

ಸಂಚಾರಕ್ಕೆ ಅಯೋಗ್ಯರು.—ಅಜೀರ್ಣ ರೋಗದವರೂ, ವಾತರೋಗ ದವರೂ, ಅತಿವೃದ್ಧರೂ, ಬಾಲರು ಮುಂತಾದವರೂ ಸಂಚಾರಕ್ಕೆ ಅಯೋಗ್ಯರು.

ಕನ್ನಡಿ ನೋಡಿಕೊಳ್ಳುವುದರಿಂದಾಗುವಗುಣ.—ಕನ್ನಡಿ ನೋಡಿಕೊಂಬಲ್ಲಿ ಶುಭವಾಗಿ ಆಯುಷ್ಯ ಹೆಚ್ಚಿ, ಮದನೋದ್ರೇಕಕರವಾಗಿ, ಸ್ತ್ರೀಯರುಗಳಿಗೆ ಮಹಾ ಪ್ರೀತಿಕರವಾಗಿ ಐಶ್ವರ್ಯಪ್ರದವಾಗುವುದು.

## ಅಭ್ಯಂಗನ ವಿಧಿ.

ಕ್ಷೌರಮಾಡಿಸಿಕೊಳ್ಳುವುದರಿಂದಾಗುವ ಗುಣ.—ಅತ್ಯಂತ ಸುಖಕರವಾಗಿ, ಲಕ್ಷ್ಮೀಕರವಾಗಿ ಕಾಂತಿಪ್ರದವಾಗಿಯೂ, ತಿಮಿರಹರವಾಗಿಯೂ, ಕ್ರಿಮಿಹರವಾಗಿಯೂ, ಕ್ಷಯಹರವಾಗಿಯೂ, ಕ್ಷೌರಮಾಡಿಸಿಕೊಂಡಲ್ಲಿ ಆಗುವುದು.

ಮರ್ದನಗುಣ.—ಅಂದರೆ ಮೈಹಿಸಿಕಿಸಿಕೊಂಡುದರ ಗುಣ. ಪ್ರತಿನಿತ್ಯವೂ ಮೈತಿಕ್ಕಿಸಿ ಅಥವಾ ಹಿಸಿಕಿಸಿಕೊಂಡಲ್ಲಿ ಶರೀರದ ವರ್ನಹೆಚ್ಚಿ ವಾತಪಿತ್ತಶ್ಲೇಷ್ಮಗಳ ಪ್ರಕೋಪಹರವಾಗಿ ಶರೀರವು ಅತಿಸಣ್ಣಗಾಗದೆ, ತೊಕ್ಕುಬಲಿತು, ಸಂದುಗಳಲ್ಲಿ ತ್ರಾಣವುಹುಟ್ಟಿ, ಅಗ್ನಿಬಲ ಉಂಟಾಗಿ, ವೀರ್ಯವೃದ್ಧಿಯಾಗಿ ಸಕಲ ರೋಗಹರವಾಗಿ ಸುಕೃತಶಾಲಿಗಳಿಗೆ ಆನಂದಕರವಾಗಿ ಮರ್ದನ ಮಾಡುವವನ ಕೈಗುಣದಿಂದ ಐಶ್ವರ್ಯ ಉಂಟಾಗಿ ಸುಖದಲ್ಲಿರುವುದು. ಇದೀಗ ನಿತ್ಯಮರ್ದನಗುಣ.

ಮರ್ದನಕ್ಕೆ ಅಯೋಗ್ಯರು.—ಪಿತ್ತರೋಗಿ, ಜ್ವರರೋಗಿ, ಹಸಿದವನು, ದಾಹರೋಗಿ, ಶೋಭೆರೋಗಿ, ರಕ್ತಪಿತ್ತರೋಗಿ, ಮೋಹರೋಗಿ ಇವೇ ಮೊದಲಾದ ರೋಗವುಳ್ಳವರು ಮರ್ದನಕ್ಕೆ ಅಯೋಗ್ಯರು.

ಅಭ್ಯಂಗನವಿಧಿ.—ಮನುಷ್ಯ ಶರೀರದ ಸತ್ವಬಲವು ವಾತಪಿತ್ತಶ್ಲೇಷ್ಮ ಪ್ರಕೃತಿಗಳೆಂಬುದನ್ನು ತಿಳಿದು, ಶರೀರದಲ್ಲಿ ಅಗ್ನಿಬಲ ಉಂಟೆ, ಇಲ್ಲವೆಯೆಂಬುದನ್ನೂ ದೇಶಕಾಲ ಇವೇ ಮೊದಲಾದುವುಗಳನ್ನೂ ತಿಳಿದು, ವೈದ್ಯಶಾಸ್ತ್ರವನ್ನು ಚೆನ್ನಾಗಿ ತಿಳಿದಂಥಾ ವೈದ್ಯನು ಎಣ್ಣೆಯ ಪ್ರಮಾಣವರಿತು ಮಾಹಣವಮಾಡಿಸುವುದು.

ಅಭ್ಯಂಗನತೈಲ ಪ್ರಮಾಣ.—ಒಂದುಸೇರು ಒಳ್ಳೆಣ್ಣೆಯನ್ನು ಪಳುಗಿದ ಮಣ್ಣುಮಡಿಕೆಯಲ್ಲಿ ಹುಯಿದು ಕಸ್ತೂರಿ, ಮೊಲ್ಲೆ, ಮಲ್ಲಿಗೆ, ಸಂಪಿಗೆ ಮೊದಲಾದ ಪರಿಮಳಗಳನ್ನು ಸೇರಿಸಿ, ಈ ಎಣ್ಣೆಯನ್ನು ಮಂಡೆಗೆ ನಾಲ್ಕುಹಲವಾದರೂ, ಎರಡುಹಲವಾದರೂ ಇರುವಹಾಗೂ, ಮೂಗಿನ ಎರಡು ಹೊಳ್ಳೆಯಿಂದಲೂ ಹನ್ನೆರಡುಬಿಂದು, ಕಿವಿಯೆರಡಕ್ಕೂ ಕಂಣುಯೆರಡಕ್ಕೂ ಎರಡೆರಡುಬಿಂದುಗಳ ಪ್ರಮಾಣ, ಈ ಪ್ರಕಾರ ಆಚರಿಸುವುದು.

ಇದಕ್ಕೆ ನೀರಿನಪ್ರಮಾಣ.—ಅರವತ್ತುನಾಲ್ಕುಸೇರು ಹಿಡಿವ ಕೊಳಗದಲ್ಲಿ ಹದಿನಾರುಕೊಳಗ ನೀರನ್ನು ಹನ್ನೆರಡುಕೊಳಗ ನೀರು ನಿಲ್ಲುವಹಾಗೆ ಕಾಸಿ ಸ್ನಾನವಂ ಮಾಡುವುದು. ಇದೀಗ ಅಭ್ಯಂಗನಮಾಡುವ ಲಕ್ಷಣ.

ಈ ತರಹ ಅಭ್ಯಂಗನದಿಂದುಂಟಾಗುವ ಗುಣ.—ಶರೀರವು ಲಘುಕರವಾಗಿ ವಾಯುಹರವಾಗಿ, ಪುಷ್ಟಿಯಾಗಿ, ಜಠರಾಗ್ನಿ ಬಲವಾಗಿ, ಚರ್ಮ ಬಲುವಿಡಿಯಾಗಿ ನಿದ್ರೆಯುಂಟಾಗಿ, ಶರೀರವು ಬಲತು, ಆಯುಸ್ಸು ಅಭಿವೃದ್ಧಿಯಾಗಿ, ಶರೀರಕ್ಕೆ ಕಾಂತಿಯುಂಟಾಗಿ ಮನೋಹರವಾಗುವುದು. ಇದು ಅಭ್ಯಂಗನದ ಗುಣ. ಬುದ್ಧಿವಂತನಾದವನು, ಶಿರಸ್ಸು, ಕಿವಿ, ಕಣ್ಣುಗಳು, ಪಾದಗಳಿಗೆ ಸಹ ಎಣ್ಣೆಹಾಕಿ ಉಜ್ಜಿಸಬೇಕು.

ಅಭ್ಯಂಗನಕ್ಕೆ ಲಕ್ಷಣಗಳು, ಗುಣಗಳು.—ಪಾದಾಭ್ಯಂಗನದಿಂದ ನೇತ್ರರೋಗವೂ, ನೇತ್ರಾಭ್ಯಂಗನದಿಂದ ಶಿರೋರೋಗವೂ, ಶಿರೋಭ್ಯಂಜನದಿಂದ ಸರ್ವರೋಗವೂ ಹರವಾಗುವುದು. ಇವೆಲ್ಲಾ ಅವಯುವಾಭ್ಯಂಗಗುಣ.

ಎಣ್ಣೆಯೊತ್ತಿ ಬಿಸಿನೀರು ಮಿಂದುದಕ್ಕೆ ಗುಣ.—ಶ್ರಮವು ಪರಿಹಾರವಾಗಿ ಶರೀರದಲ್ಲಿದ್ದ ನೋವುಗಳನ್ನು ತೆಗೆದು ಕೀಲುಕೀಲುಗಳಿಗೂ ತ್ರಾಣವನ್ನುಂಟು ಮಾಡಿ, ಗಾಯವಡದವರಿಗೂ, ಬಿದ್ದವರಿಗೂ, ಪೆಟ್ಟುತಿಂದವರಿಗೂ, ಕಜ್ಜಿ ತುರಿಯುಂಟಾದವರಿಗೂ ಸೌಖ್ಯವಾಗಿರುವುದು. ಇದು ಹ್ಯಾಗಂದರೆ:—ವೃಕ್ಷಗಳಿಗೆ ಪಾತಿಗಳ ಕಟ್ಟಿ ನೀರು ಎರೆದರೆ ನೂತನಾಂಕುರಗಳಾಗಿ ಶಾಖೋಪಶಾಖೆಗಳು ಅಭಿವೃದ್ಧಿಯಾಗುವ ತೆರದಲ್ಲಿಯೂ, ಶರೀರವು ಸಪ್ತಧಾತು ವೃದ್ಧಿಯಾಗಿ ಸ್ವಸ್ಥವಾಗಿರುವುದು ; ಇದೀಗ ನೀರಿನ ಗುಣ.

ಮುಕ್ಕಟ್ಟಿಗೆಯೆಣ್ಣೆಯನ್ನೊತ್ತಿಕೊಳ್ಳುವುದರ ಗುಣ.— ಶರೀರದಲ್ಲಿರುವ ದಾಹವೂ, ವಾತಶ್ಲೇಷ್ಮಪೈತ್ಯಗಳ ಪ್ರಕೋಪವೂ, ದಾಹವೂ, ಶರೀರದಲ್ಲಿ ಕಜ್ಜಿ ಮೊದಲಾದ ಕ್ಷುದ್ರೋಪದ್ರವಗಳೂ ಶಮನವಾಗಿ, ದೇಹದಲ್ಲಿರುವ ಅಸ್ಥಿಗಳಿಗೆ ತ್ರಾಣಹುಟ್ಟುವುದು ; ಶಿರಸ್ಸಿನಲ್ಲಿ ಹುಟ್ಟಿದ ರೋಗಗಳೆಲ್ಲಾ ಶಮನವಾಗುವುವು ; ಶರೀರಕಾಂತಿಯಹುದು ; ವೀರ್ಯವೃದ್ಧಿಯಾಗುವುದು ; ಶರೀರವು ಪುಷ್ಟಿಯಾಗಿ ಲಘುವುಂಟಾಗುವುದು ; ವಿಶೇಷ ಬುದ್ಧಿಯುಂಟಾಗುವುದು ; ಕ್ರಿಮಿದೋಷಹರ ಮಕ್ಕುಂ ; ಶರೀರಚರ್ಮ ಬಲುಉಡಿಯಾಗಿ ಸೌಖ್ಯಮಾಗಿರ್ಕುಂ ; ಇದೀಗ ತ್ರಿಸ್ನೇಹದಗುಣ.

ತ್ರಿಸ್ನೇಹ ಕೂಡಿಸುವ ಕ್ರಮ.—ಒಂದುಭಾಗ ಕೈಯೆಂಣೆ, ಎರಡುಭಾಗ ಎಳ್ಳೆಣ್ಣೆ, ನಾಲ್ಕುಭಾಗ ತುಪ್ಪ ಇದೀಗ ತ್ರಿಸ್ನೇಹಭಾಗದಕ್ರಮ.

ವಸ್ತಿಗುಣ.— ಹೃದ್ರೋಗಹರ, ಇಂದ್ರಿಯಬಾಹುಳ್ಯ, ಹಸ್ತಪಾದಗಳ ವಿದಾಹ, ಕರ್ಣರೋಗ, ಅಕ್ಷಿರೋಗ, ಮುಖರೋಗ, ಮೂರ್ಛೆರೋಗ ಮುಂತಾಗಿ ಗುಣವಾಗುವುವು, ಇದೀಗ ನಿತ್ಯವಸ್ತಿಗುಣ.

ಷಡೃತುಗಳಲ್ಲಿಯೂ ಅಭ್ಯಂಗನ ಮಾಡುವ ಕಾಲಪ್ರಮಾಣ.— ಹಿಮಂತ ರುತುವಿನಲ್ಲಿ ಎಣ್ಣೆಯನ್ನೊತ್ತಿಕೊಂಡು ಎರಡು ಗಳಿಗೆ ಇದ್ದು ಸ್ನಾನವಂ ಮಾಡು

ವುದು ; ಶಿಶಿರ ರುತುವಿನಲ್ಲಿ ಮೂರು ಗಳಿಗೆ ಇದ್ದು ಸ್ನಾನವಂ ಮಾಡುವುದು ; ವಸಂತಕಾಲದಲ್ಲಿ ಐದು ಗಳಿಗೆ ಇದ್ದು ಸ್ನಾನಮಾಡುವುದು ; ಗ್ರೀಷ್ಮರ್ತುವಿನಲ್ಲಿ ಆರುಗಳಿಗೆ ಇದ್ದು ಸ್ನಾನವಂ ಮಾಡುವುದು ; ವರ್ಷರ್ತುವಿನಲ್ಲಿ ಎಣ್ಣೆಯನ್ನೊತ್ತಿ ಕೊಂಡು ಮೂರುಗಳಿಗೆ ಇದ್ದು ಸ್ನಾನವಂ ಮಾಡುವುದು ; ಶರದೃತುವಿನಲ್ಲಿ ಐದುಗಳಿಗೆ ಇದ್ದು ಸ್ನಾನವಂ ಮಾಡುವುದು.

ಅಭ್ಯಂಗನವರ್ಜರೋಗಂಗಳು.—ಶ್ವಾಸ, ಖಾಸ, ವಾತರೋಗ, ಅಜೀರ್ಣ, ಛರ್ದಿ ಇವೇ ಮೊದಲಾದ ರೋಗವುಳ್ಳವರಿಗೆ ಅಭ್ಯಂಗನವಾಗದು.

ಶರೀರಕ್ಕೆ ಉದ್ವರ್ತನಗುಣಂ.—ಶ್ಲೇಷ್ಮಹರವಾಗಿಯೂ, ಮೇದೋಹರ ವಾಗಿಯೂ, ಅವಯವಾದಿಗಳು ಪುಷ್ಟಿಯಾಗಿಯೂ, ಶರೀರದ ಚರ್ಮ ದೃಢವಾ ಗಿಯೂ ಇರುವುದು.

ಪ್ರಾತಃಸ್ನಾನ ಮಾಡುವ ಗುಣ.—ಸಕಲಪೈತ್ಯರೋಗಹರವಾಗುವುದು. ಬುದ್ಧಿ ಹೆಚ್ಚುವುದು, ಶರೀರವು ಪುಷ್ಟಿಯಾಗುವುದು, ಜಠರಾಗ್ನಿ ವರ್ಧಿಸುವುದು, ಆಯುರಾರೋಗ್ಯಾಭಿವೃದ್ಧಿಯಾಗಿ ಸಕಲಸೌಖ್ಯಪ್ರದಮಾಗಿರುವುದು.

ಶೀತೋದಕಸ್ನಾನಗುಣ.—ಶ್ಲೇಷ್ಮಪ್ರಕೋಪವೂ, ವಾತಪ್ರಕೋಪವೂ ಆಗಿ ಇರುವುದು ; ಸಕಲ ಸ್ಥಾವರ ಜಂಗಮ ವಿಷ ಹರವಾಗುವುದು ; ಶ್ರಮ ಪರಿಹಾರ ವಾಗುವುದು ; ಸಮಸ್ತಪೈತ್ಯರೋಗಗಳೂ ಶಮನವಾಗುವುವು ; ಜಠರಾಗ್ನಿ ಹೆಚ್ಚುವುದು.

ಉಷ್ಣೋದಕಸ್ನಾನದ ಗುಣ.—ವಾತಸಂಬಂಧವಾದ ಪಾದರೋಗಂಗ ಳೆಲ್ಲಾ ಹರವಾಗುವುವು ; ಶರೀರದ ಬಲ ಕಡಿಮೆಯಾಗುವುದು ; ನೇತ್ರರೋಗಂ ಗಳಿಗೆ ಉಪದ್ರವಕರ ; ಮಂಡೆ ಕೂದಲು ಉದುರುವುದು ; ಶರೀರ ದುರ್ಗಂಧಹರ ; ಇವೆಲ್ಲಾ ಶುದ್ಧ ಉಷ್ಣೋದಕದ ನಿತ್ಯಸ್ನಾನಗುಣ. ಸ್ನಾನಮಾಡಿದ ತರುವಾಯ ಬಿಳಿಯ ವಸ್ತ್ರದಿಂದ ಮೈಯೊರಸಿಕೊಂಡಲ್ಲಿ ಶರೀರಕ್ಕೆ ಕಾಂತಿಯುಂಟಾಗಿ, ತಿಮಿರ ಹರವಾಗಿ, ದುರ್ಗಂಧಹರವಾಗಿ ಸೌಖ್ಯವಾಗಿರುವುದು.

ಶುದ್ಧಸ್ನಾನವರ್ಜರೋಗಂಗಳು.—ಉನ್ಮಾದ, ಗ್ರಹಣಿ, ಅತಿಸಾರ, ಶಿರೋ ರೋಗ, ಪೀನಸರೋಗ, ಅನ್ನದ್ವೇಷ, ನೇತ್ರರೋಗ, ಕ್ಷಯರೋಗ, ಕರ್ಣರೋಗ ಅರದಲೆನೋವು, ಈ ಬಗೆಯ ರೋಗದವರು ಶುದ್ಧ ಉಷ್ಣೋದಕ ಸ್ನಾನವಂ ವರ್ಜಿಸುವುದು. ವಿಶೇಷ ಸುಳಿಗಾಳಿ ಎದ್ದಾಗ ಸ್ನಾನವ ಮಾಡಲಾಗದು. ಮಳೆ ಹುಯ್ಯುವಾಗಲೂ, ಅಜೀರ್ಣದಲ್ಲಿಯೂ, ಭೋಜನಾನಂತರದಲ್ಲಿಯೂ, ವಾತ ರೋಗದಲ್ಲಿಯೂ ಉಷ್ಣೋದಕಸ್ನಾನವಂ ಮಾಡಲಾಗದು.

ಮಂಡೆಕೂದಲು ಪರಿಮಳಹುಟ್ಟುವಂತೆ ತೈಲಧೂಪದ ಗುಣ.—ಸಮಸ್ತ ವಾದ ಪರಿಮಳಪುಷ್ಪಗಳಿಂದಲೂ, ಕಸ್ತೂರಿ ಮೊದಲಾದ ಪರಿಮಳದ್ರವ್ಯದಿಂ

ದಲೂ, ವಾಸಿತವಾದೆಣ್ಣೆಯಿಂದಲೂ ಅಭ್ಯಂಗನ ಮಾಡಿಕೊಂಡರೆ ಸಕಲವಾದಃ ರೋಗಹರ ; ಮತ್ತು ಸ್ತ್ರೀಯರುಗಳಿಗೆ ಪ್ರೀತಿಕರ, ಶಿರಸ್ಸಿನಲ್ಲಿ ಹುಟ್ಟಿದ ರೋಗ. ಮಂಡೆಕೂದಲಲ್ಲಿ ಹುಟ್ಟಿದ ರೋಗಗಳು ಶಮನವಾಗುವುವು.

ಧೂಪಗುಣ:—ಸಾಂಬ್ರಾಣಿ, ಕಸ್ತೂರಿ, ಕರ್ಪೂರ, ಮೊದಲಾದ ದ್ರವ್ಯಗಳಿಂದ ಶಿರಸ್ಸಿಗೆ ಧೂಪಹಾಕುವಲ್ಲಿ ಧೂರ್ತಗ್ರಹಗಳಿಗೆಲ್ಲಾ ಉಚ್ಚಾಟನವಹುದು ; ಐಶ್ವರ್ಯಪ್ರದವಾಗಿಹುದು ; ಮಂಡೆಯ ಅಗುರು, ಹೇನು, ಸೀರು, ಮೊದಲಾದುವೆಲ್ಲಾ ಹೋಗುವುವು ; ಸದಾ ಮಂಗಳಕರವಾಗಿರುವುದು ; ತ್ರಿಲೋಕವಶ್ಯಕರವಹುದು ; ಇದಾದಮೇಲೆ ಸಂಧ್ಯಾವಂದನ, ಔಪಾಸನಾದಿ ಸತ್ಕರ್ಮಗಳು, ಸೂರ್ಯಪ್ರಾರ್ಥನೆ, ಮೊದಲಾದುವನ್ನು ಮಾಡಿ, ಪುರಾಣಶ್ರವಣವಂ ಮಾಡಿ, ಈ ಪ್ರಕಾರ ಪ್ರತಿದಿನವೂ ಮಾಡಲು ಆಯುರಾರೋಗ್ಯಾಭಿವೃದ್ಧಿಯಾಗಿ, ಚಕ್ಷುಷ್ಯರಾಗಿ, ಐಶ್ವರ್ಯಪ್ರದವಾಗಿರುವುದು. ಇದೀಗ ಮನುಷ್ಯರು ಸೂರ್ಯೋದಯ ಕಾಲದಲ್ಲಿ ಮಾಡುವ ಸತ್ಕೃತ್ಯಗಳು

ಇಂತು ಸಕಲವೈದ್ಯಸಂಹಿತಾಸಾರಾರ್ಣವದೊಳ್
ಪ್ರಾತಃಕಾಲಪ್ರಶಂಸಾಪರಿಪೂರ್ಣಂ.

---

## ಅಥ ವಸ್ತ್ರಧಾರಣಗುಣಂ.

ಸಾಮಾನ್ಯವಸ್ತ್ರಗುಣ.—ಮನುಷ್ಯರುಗಳಿಗೆ ಪ್ರೀತಿಕರವಾಗಿಯೂ, ಮನೋರಂಜಕವಾಗಿಯೂ, ಅಲಂಕಾರವಾಗಿಯೂ, ನೋಡಿದವರಿಗೆ ವಸ್ತ್ರವಾಗಿಯೂ ಗಾಳಿ ಬಿಸಿಲುಗಳಿಗೆ ಮರೆಯಾಗಿಯೂ, ಸಕಲವಾತರೋಗಗಳು ಶಮನವಾಗಿಯೂ, ದಾರಿದ್ರ್ಯದೋಷಗಳ ಪರಿಹರಿಸುವುದಾಗಿಯೂ, ಶರೀರದಲ್ಲಿರುವ ಕ್ಷುದ್ರರೋಗಗಳಿಗೆ ಮರೆಯಾಗಿಯೂ ಇರುವುದು ಸಾಮಾನ್ಯವಸ್ತ್ರದ ಗುಣ.

ನಿರಾಜಿಯ ದುಪ್ಪಟಿಗುಣ.— ಶ್ರೇಷ್ಠವಾಗಿಯೂ, ಸೌಖ್ಯಕರವಾಗಿಯೂ, ಶುಭಕರವಾಗಿಯೂ, ಮನ್ಮಥೋದ್ರೇಕಕರವಾಗಿಯೂ, ಮನಸ್ಸಿಗೆ ಆನಂದಕರವಾಗಿಯೂ, ವಾತಶ್ಲೇಷ್ಮಹರವಾಗಿಯೂ ಇರುವುದು.

ಬಿಳೀವಸ್ತ್ರದ ಗುಣ.—ಅತಿ ಶುಭ್ರವಾಗಿ, ಮೊಲ್ಲೆ ಮಲ್ಲಿಗೆಗಳಿಗೆ ಸಮಾನವಾದ ಬಿಳುಪುವುಂಟಾಗಿರುವ ವಸ್ತ್ರವಂ ಹೊದ್ದುಕೊಂಡಲ್ಲಿ ತ್ರಿದೋಷಹರವಾಗಿ, ಮನಸ್ಸಿಗೆ ಮಹಾ ಪ್ರೀತಿಕರವಾಗಿ, ವರ್ಷಾಕಾಲಕ್ಕೆ ಹಿತಕರವಾಗಿ, ಮಂಗಳಕರವಾಗಿ ಇರುವುದು.

ರಕ್ತವಸ್ತ್ರದ ಗುಣ.—ಕೆಂಪಾದ ದಾಸವಾಣದ ಹೂವಿಗೆ ಸಮಾನ ವರ್ಣವುಂಟಾದ ವಸ್ತ್ರವಂ ಹೊದ್ದುಕೊಳ್ಳಲು ವರ್ಷಾಕಾಲ, ಹೇಮಂತ ಶಿಶಿರ ರುತುಗಳಲ್ಲಿ ಶರೀರಕ್ಕೆ ಆರೋಗ್ಯವೂ, ಹಿತಕರವೂ ಆಗುವುದಲ್ಲದೆ ಶ್ಲೇಷ್ಮಹರವಾಗುವುದು.

ನೀಲವಸ್ತ್ರದ ಗುಣ.—ಮೇಘಕ್ಕೆ ಸಮಾನವಾದ ವರ್ಣವುಳ್ಳ ವಸ್ತ್ರವಂ ಹೊದ್ದಲ್ಲಿ ಶರೀರಕ್ಕೆ ತಂಪಾಗಿಯೂ, ನಿದ್ರಾಕರವಾಗಿಯೂ, ಸೌಖ್ಯಪ್ರದವಾಗಿಯೂ ಮನೋರಂಜಕವಾಗಿಯೂ ಇರುವುದು.

ಪೀತವಸ್ತ್ರದ ಗುಣ.—ಮನಸ್ಸಿಗೆ ಸಂತೋಷಕರವಾಗಿಯೂ, ಪಿತ್ತಹರವಾಗಿಯೂ, ಭೂತಪ್ರೇತಾದಿ ಭಯಹರವಾಗಿಯೂ, ಶುಚಿಯಾಗಿಯೂ, ತಂಪಾಗಿಯೂ, ವಾತರೋಗಹರವಾಗಿಯೂ, ಶುಭಕರವಾಗಿಯೂ ಇರುವುದು ; ಇವೆಲ್ಲಾ ಪೀತವಸ್ತ್ರವನ್ನು ಹೊದ್ದುಕೊಂಡಲ್ಲಿ ಆಗುತ್ತವೆ.

ಕಾವೀವಸ್ತ್ರದ ಗುಣ.—ಕಾವೀವಸ್ತ್ರವಂ ಹೊದ್ದುಕೊಂಡಲ್ಲಿ ಶ್ಲೇಷ್ಮಹರ, ಕಾಂತಿಪ್ರದ, ಪಿತ್ತಹರ, ಪವಿತ್ರ, ಗ್ರೀಷ್ಮಕಾಲಕ್ಕೆ ಬಹುಸೌಖ್ಯ, ಯತೀಶ್ವರರಿಗೂ, ಯೋಗಿಗಳಿಗೂ, ನಿರಂತರವೂ, ಧರಿಸುವುದಕ್ಕೆ ಯೋಗ್ಯವಾಗಿರುವುದು.

ನಾನಾಬಗೆಯ ಬಣ್ಣಗಳಿರುವ ವಸ್ತ್ರದ ಗುಣ.—ನೋಡುವುದಕ್ಕೆ ಮಹಾ ಪ್ರೀತಿಕರವಾಗಿಯೂ, ನೇತ್ರರೋಗಂಗಳಿಗೆ ಮಹಾ ಹಿತಕರವಾಗಿಯೂ, ಸ್ತ್ರೀವಶ್ಯವಾಗಿಯೂ, ಐಶ್ವರ್ಯಪ್ರದವಾಗಿಯೂ ಇರುವುದು, ಮನೋದುಃಖವೆಲ್ಲಾ ಪರಿಹಾರವಾಗಿ ಸುಖಕರವಾಗಿರುವುದು.

ಪೀತಾಂಬರವಸ್ತ್ರದ ಗುಣ.—ವಸಂತಕಾಲಕ್ಕೆ ಮಹಾ ಸೌಖ್ಯವಾಗಿರುವುದು. ಕಾಮವಿಳಾಸಕ್ಕೆ ಕಾರಣವಾಗಿರುವುದು ; ನೋಡುವಂಥಾ ಜನಗಳಿಗೆ ಪ್ರೀತಿಕರವಾಗಿರುವುದು ; ತ್ರಿದೋಷಹರವಾಗಿರುವುದು ; ವಿಷ್ಣುವಿಗೆ ಮಹಾ ಪ್ರೀತಿಕರವಾಗಿರುವುದು.

ನಾರುಸೀರೆಯ ಗುಣ.—ತಪಸ್ಸು ಮಾಡುವಂಥಾ ಋಷೀಶ್ವರರಿಗೆ ಮುಖ್ಯವಾಗಿ ಅತ್ಯುಷ್ಣಕರವಾಗಿರುವುದಲ್ಲದೆ ಪರಮಪವಿತ್ರವಾಗಿಯೂ, ಹೇಮಂತ ರುತುವಿನಲ್ಲಿ ವಾತಹರವಾಗಿಯೂ, ಶಿಶಿರ ರುತುವಿನಲ್ಲಿ ಶ್ಲೇಷ್ಮ ನಿವಾರಣವಾಗಿ ಸೌಖ್ಯವಾಗಿ ಇರುವುದು.

ದುಕೂಲವಸ್ತ್ರದ ಗುಣ.—ಇದು ಸಣ್ಣಕೆಲಸದ ವಸ್ತ್ರವಾಗಿಯೂ, ಮಹಾಲಕ್ಷ್ಮಿಗೆ ಪ್ರೀತಿಕರವಾಗಿಯೂ, ತ್ರಿದೋಷಹರವಾಗಿಯೂ, ಬಹು ಚಿತ್ರಕರವಾಗಿಯೂ, ಸ್ತ್ರೀಯರುಗಳಿಗೆ ವಶ್ಯಕರವಾಗಿಯೂ ಇರುವುದು. ಇದು ದುಕೂಲವಸ್ತ್ರದ ಗುಣ.

ಚಂದ್ರರಾಗ ಸೂರ್ಯರಾಗ ವಸ್ತ್ರದ ಗುಣ.—ಇದು ಕಾಂತಿಪ್ರದವಾಗಿ, ಶೋಕತಾಪ ಶಮನವಾಗಿ, ಮಹಾ ಪರಾಕ್ರಮ ಉಂಟುಮಾಡುವುದಾಗಿ, ಶೋಧನಕರವಾಗಿ, ಐಶ್ವರ್ಯಪ್ರದವಾಗುವುದು.

ಕುಲಾವಿ, ತಲೆಪಾಗು ಇವುಗಳನ್ನು ಧರಿಸಿಕೊಳ್ಳುವುದರಿಂದ ಆಗುವ ಗುಣಗಳು.—ಇವುಗಳನ್ನು ಧರಿಸಿದ್ದಲ್ಲಿ ಶರೀರಕಾಂತಿ ಕೆಡದೆ, ಮಳೆ, ಗಾಳಿ, ಬಿಸಿಲಿಗೆ ರಕ್ಷಣವಾಗಿಯೂ, ಶ್ಲೇಷ್ಮಹರವಾಗಿಯೂ, ದೃಷ್ಟಿಪ್ರಸಾರಕವಾಗಿಯೂ ಇರುವುದು. ಇದು ಕುಲಾವಿ ಗುಣ ; ತಲೆಪಾಗು ಸುತ್ತಿಕೊಂಡಲ್ಲಿ ಶರೀರಕ್ಕೆ ಅಲಂಕಾರವೂ, ಮೈಯ್ಯಲ್ಲಿ ವಾತಪಿತ್ತಶ್ಲೇಷ್ಮಹರವೂ, ಗಾಳಿ, ಧೂಳು, ಬಿಸಿಲು ಇವುಗಳುಪದ್ರವಹರವೂ ಆಗಿ ಮನಸ್ಸಿಗೆ ಬಹಳ ಸಂತೋಷವನ್ನು ಕೊಡುತ್ತವೆ.

## ವಾಸಮಾಡುವ ಮನೆಯ ಲಕ್ಷಣ.

ನಾನಾಬಗೆಯ ಪುಷ್ಪಗಳಿಂದಲೂ ಮೇಲುಕಟ್ಟುಗಳಿಂದಲೂ ಅಲಂಕರಿಸಲ್ಪಟ್ಟಿದ್ದಾಗಿಯೂ, ಹೇರಳೆ, ಮಾದಳ, ನಿಂಬೆ, ಅಡಿಕೆ, ತೆಂಗು, ಬಾಳೆ ಮೊದಲಾದವುಗಳಿಂದ ಕೂಡಿದ್ದಾಗಿರುವ ಮೇಲುಕಟ್ಟು ಫಲವಸ್ತು ಸಹ ಇರುವ ಮನೆಯಲ್ಲಿ ವಾಸಮಾಡಿದಲ್ಲಿ ಗುಣ.—ಅಸಿತವಾಯುಹರವಾಗುವುದು, ಜಠರಾಗ್ನಿ ವುಟ್ಟಿತರವಾಗುವುದು, ಮನಸ್ಸಿಗೆ ಸಂತೋಷಕರವಾಗುವುದು, ಅತ್ಯುಷ್ಣಹರವಾಗುವುದು, ದಾಹಶಾಂತಿಯಾಗುವುದು.

ಚಲ್ಲಣದ ಗುಣ.—ಮನಸ್ಸಿಗೆ ಧೈರ್ಯವುಂಟಾಗಿ, ಅಸಿತವಾತರೋಗಹರವಾಗಿ, ಜಠರಾಗ್ನಿ ಪ್ರಬಲವಾಗಿ ಪರಾಕ್ರಮವುಂಟಾದ ಪ್ರಸಂಗಗಳಲ್ಲಿ ಪ್ರೀತಿಯುಂಟಾಗುವುದು.

ಅಂಗಿ, ದಗಲೆ, ಚಿಲಕತ್ತು ಧರಿಸಿಕೊಂಡುದರಿಂದ ಗುಣ.—ಮನಸ್ಸಿಗೆ ಅತಿ ಧೈರ್ಯವಾಗಿ, ಶಸ್ತ್ರಾಸ್ತ್ರಗಳ ಭಯವಿಲ್ಲದೆಯೂ, ಶೀತವಾತ ಶಮನವಾಗಿಯೂ, ಸುಖಕರವಾಗಿ, ಶರೀರಕಾಂತಿಯುಂಟಾಗಿ ಶ್ರಮಹರವಾಗಿ, ನೇತ್ರಗಳಿಗೆ ಹಿತವಾಗಿ, ದುಂಬುಧೂಳುಗಳಿಗೆ ಮರೆಯಾಗಿ ಸೌಖ್ಯವಾಗಿರುವುದು ; ಇದೀಗ ಕಂಚುಕೀಗ ಣ.

ಷಡೃತುಗಳಲ್ಲಿಯೂ ವಸ್ತ್ರಗಳನ್ನು ಹೊದಿಯುವ ನೇಮ.—ಶರತ್ಕಾಲಕ್ಕೆ ಕಾವೀವಸ್ತ್ರ, ಹೇಮಂತಕಾಲಕ್ಕೆ ರಕ್ತವಸ್ತ್ರ, ವಸಂತಕಾಲಕ್ಕೆ ಬಿಳೀಬಟ್ಟೆ ಪೀತಾಂಬರ ಸಹ ಎರಡುಬಗೆ ವಸ್ತ್ರವು ; ಸಕಲ ರುತುಗಳಲ್ಲಿಯೂ ಬಣ್ಣದ ವಸ್ತ್ರವು ಯೋಗ್ಯವಾಗಿರುವುದು. ಆಯಾ ರುತುವಿನಲ್ಲಿ ಆಯಾಯ ವಸ್ತ್ರ ಧರಿಸಿದ್ದಲ್ಲಿ ಜರಾಮರಣವರ್ಜಿತರಾಗಿ, ಆರೋಗ್ಯದೃಢಗಾತ್ರರಾಗಿ ಇರುವರು.

ಹೊದೆಯುವದಕ್ಕೆ ಯೋಗ್ಯವಲ್ಲದ ವಸ್ತ್ರದ ಗುಣ:—ಅತಿ ರಕ್ತವಾಗಿಯೂ ಮಲಿನವಾಗಿಯೂ, ಜೀರ್ಣವಾಗಿಯೂ, ಅಗ್ನಿದಗ್ಧವಾಗಿಯೂ, ಇಲಿ ಕಡಿದಿರುವುದೂ, ಹುಳುವಾಡಿರುವುದೂ, ಕಳ್ಳನ ಕೈಯಲ್ಲಿ ಕೊಂಡ ವಸ್ತ್ರವೂ, ಬ್ರಹ್ಮಗ್ರಂಥಿ ಹಾಕಿದ್ದ ವಸ್ತ್ರವೂ, ಅನ್ಯಾಯವಾಗಿ ಸಂಪಾದಿಸಿದ ವಸ್ತ್ರವೂ. ಮತ್ತೊಬ್ಬರು

ಟ್ಟಿದ್ದ ವಸ್ತ್ರವೂ, ದೇವರುಗಳಿಗೆ ಮೀಸಲು ತೆಗೆದ ವಸ್ತ್ರವೂ, ಇತ್ಯಾದಿ ವಸ್ತ್ರಗಳೆಲ್ಲಾ ಧರಿಸುವುದಕ್ಕೆ ಅಯೋಗ್ಯವಾದುವುಗಳು ; ಮತ್ತು ನಿಷಿದ್ಧ ವಸ್ತ್ರಗಳು.

ಸಮುದಾಯ ಕಂಬಳಿಗಳ ಗುಣ.—ಉಷ್ಣಕರವಾಗಿಯೂ, ಶೀತಬಾಧಾ ನಿವರ್ತಕವಾಗಿಯೂ, ಅತ್ಯಂತಗಾಳಿಗೆ ಮರೆಯಾಗಿ, ಜಠರಾಗ್ನಿ ಪ್ರಬಲವಾಗಿ, ಪಿತ್ತಪ್ರಕೋಪವಾಗಿಯೂ, ಶಿಶಿರ ರುತುವಿನಲ್ಲಿ ಹೊದ್ದುಕೊಂಡರೆ ಶ್ಲೇಷ್ಮಹರವಾಗಿಯೂ ಇರುವುದು. ಇದು ಕಂಬಳಿ ಗುಣ.

ರತ್ನಗಂಬಳಿ ಗುಣ.—ನಾನಾವರ್ಣದಿಂದ ವಿಚಿತ್ರವಾಗಿಯೂ, ಶೀತಹರವಾಗಿಯೂ, ಕಂಬಳ ಶ್ರೇಷ್ಠವಾಗಿಯೂ, ಇರುವುದು. ಶರೀರಕ್ಕೆ ಶಾಂತಿಯುಂಟಾಗಿ ಬಲವುಂಟಾಗಿ, ದೀಪನ ಉಂಟಾಗಿ, ಪಿತ್ತಪ್ರಕೋಪವಾಗಿ, ಶ್ಲೇಷ್ಮಹರವಾಗಿ, ಶೀತಕಾಲಗಳಿಗೆ ಬೇಕಾಗಿ, ಅರಸುಗಳಿಗೆ ಯೋಗ್ಯವಾಗಿರುವುದು.

ನೇಪಾಳಕಂಬಳಿ ಗುಣ.—ಇಂದ್ರಗೋಪದ ಹುಳುವಿನೋಪಾದಿಯಲ್ಲಿ ಪ್ರಕಾಶಿಸುವಂಥ ಕಂಬಳಕ್ಕೆ ಗುಣ.—ಶರೀರಕ್ಕೆ ಕಾಂತಿಯುಕ್ತವಾಗಿಯೂ, ತಪಸ್ವಿಗಳಿಗೂ, ಯತಿಗಳಿಗೂ, ಯೋಗ್ಯವಾಗಿಯೂ, ವಾತಶ್ಲೇಷ್ಮಹರವಾಗಿಯೂ, ಐಶ್ವರ್ಯ ಪ್ರದವಾಗಿರುವುದು.

ಕೌದದ ಗುಣ.—ಕೌದವೆಂದರೆ ಸಕಲಾತಿ, ಇದನ್ನುಪಯೋಗಿಸಿದ್ದಲ್ಲಿ ವಾತಶ್ಲೇಷ್ಮಹರ, ಸೌಖ್ಯಕರ, ಆಯುಷ್ಯಾಭಿವೃದ್ಧಿ, ಸುಕುಮಾರತ್ವ ಇವೆಲ್ಲಾ ಉಂಟಾಗುತ್ತವೆ.

ಬೊಂತೆಗುಣ.—ತಿಮಿರವನ್ನುಂಟುಮಾಡುವುದು, ಸೀರು, ಹೇನು, ಕೂರೆ, ಇವಕ್ಕೆಲ್ಲಾ ಉತ್ಪತ್ತಿಸ್ಥಾನವಾಗಿರುವುದು ; ಶೀತವಾತಗಳನ್ನು ಹೋಗಲಾಡಿಸುವುದು, ಇವೆಲ್ಲಾ ಬೊಂತೆಗುಣ

ಹುಲಿಯ ಚರ್ಮದ ಗುಣ.—ಸಂತಾನಕರ, ಬುದ್ಧಿ ಹೆಚ್ಚುವುದು, ಮೋಕ್ಷವುಂಟಾಗುವುದು, ಸಂತೋಷಕರ, ಕಾರ್ಯಸಿದ್ಧಿ.

ಹುಲ್ಲೇಚರ್ಮದ ಗುಣ—ಮೂಲವ್ಯಾಧಿಹರ, ದಾಹಶಾಂತಿಯನ್ನುಂಟುಮಾಡುವುದು, ಪ್ರೀತಿಕರವಾಗಿರುವುದು.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೊಳ್
ವಸ್ತ್ರಧಾರಣಗುಣಪ್ರಶಂಸಾ ಸಂಪೂರ್ಣಂ.

———

## ಅಥ ಭೂಷಣಧಾರಣ ಲಕ್ಷಣಂ.

ಭೂಷಣಧಾರಣ ನಿಯಮ.—ವಿವಾಹಾದಿ ಶುಭದಿವಸಂಗಳಲ್ಲಿಯೂ, ಕಾಮೋತ್ಸವಕಾಲಂಗಳಲ್ಲಿಯೂ, ಷೋಡಶಾದಿ ಮಹಾದಾನಕಾಲಗಳಲ್ಲಿಯೂ, ಗುರು ಸಮಾನರಾದವರ ಸನ್ನಿಧಿಗೆ ಹೋಗಿ ನಮಸ್ಕಾರವ ಮಾಡುವಾಗಲೂ, ಇಷ್ಟ ದೇವತಾ ಪೂಜಾಕಾಲದಲ್ಲಿಯೂ, ಯಜ್ಞೇಶ್ವರನನ್ನು ಕುರಿತು ನೂತನವ್ರತ ಮಾಡುವಾಗಲೂ, ನಿತ್ಯಜಪತಪಾದಿ ಯೋಗಗಳನ್ನನುಸರಿಸುವಾಗಲೂ ಬುದ್ಧಿ ವಂತನಾದ ಧೈರ್ಯಪುರುಷನು ನಿತ್ಯದಲ್ಲೂ ಆಭರಣಗಳನ್ನು ಧರಿಸಬೇಕು.

ಸಾಮಾನ್ಯಭೂಷಣಗುಣ.—ಸಕಲರಿಗೂ ಅಲಂಕಾರವಾಗಿ, ಶ್ರೀವಿಷ್ಣುವಿಗೂ ಲಕ್ಷ್ಮಿದೇವಿಗೂ, ಸಂತೋಷಮಾಡುವಂಥಾದ್ದಾಗಿ ಭೂತಪ್ರೇತಪಿಶಾಚಾದಿ ಗ್ರಹ ಗಳೂ, ಶ್ವಾಸ ಮುಂತಾದ ರೋಗಗಳೂ, ಕೃತ್ರಿಮ ಮುಂತಾದ ಸ್ಥಾವರಜಂಗಮ ವಿಷಮುಂತಾದವುಗಳು ಸಕಲಕ್ಕೂ ಭಯವನ್ನುಂಟುಮಾಡುವಂಥಾದ್ದಾಗಿಯೂ, ಬುದ್ಧಿಯನ್ನೂ, ಶಾಂತಿಯನ್ನೂ, ಬಲವನ್ನೂ, ದೇಹಪುಷ್ಟಿಯನ್ನೂ ನೂತನವಾಗಿ ಉಂಟುಮಾಡುವುದು. ಮತ್ತು ಈ ಗುಣಗಳು ಸಕಲಾಭರಣಗಳಿಗೂ ಇವೆ.

ಕಿರೀಟಧಾರಣಗುಣ.—ಆವಾಗಲೂ ಕೀರ್ತಿ, ಕಾಂತಿಯಲ್ಲಿ ಮನೋಹರ ವನ್ನುಂಟುಮಾಡುತ್ತ, ಮರ್ಮಸ್ಥಾನ ರೋಗಗಳನ್ನೂ ಬಲಾಸವೆಂಬ ರೋಗ ಮುಂತಾದ್ದನ್ನೂ ಹೋಗಲಾಡಿಸಿ ವಿಶೇಷ ಕಾಂತಿಯನ್ನುಂಟುಮಾಡುವಂಥಾದ್ದಾಗಿ, ವಾತಪಿತ್ತಶ್ಲೇಷ್ಮಗಳೆಂಬ ಈ ಮೂಲದಿಂದುಂಟಾಗುವ ತ್ರಿದೋಷಗಳನ್ನೂ ನಾಶ ಮಾಡುವಂಥಾದ್ದಾಗಿ, ಸೂರ್ಯಪ್ರಕಾಶವನ್ನುಂಟುಮಾಡುವಂಥಾದ್ದಾಗಿ ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳಿಗೂ, ಶ್ರೀಲಕ್ಷ್ಮೀದೇವಿಗೂ, ಆವಾಸಸ್ಥಾನ ವನ್ನುಂಟು ಮಾಡುವುದು.

ಕರ್ಣಾಭರಣಗುಣ.—ಕಿವಿಗೆ ಆಭರಣವನ್ನು ಧರಿಸಿದ ಮಾತ್ರದಲ್ಲಿಯೇ ಸ್ತ್ರೀಯರುಗಳಿಗೆ ಅತ್ಯಂತ ಮನೋಹರ್ಷವನ್ನುಂಟುಮಾಡುತ್ತ, ಸಕಲವಾದ ದೋಷಂಗಳಂ ಪರಿಹರಿಸಿ, ಮನಸ್ಸಮಾಧಾನಪಡಿಸಿ ಮನೋವಿಲಾಸವನ್ನುಂಟು ಮಾಡುವುದು. ಕಿವಿಗೆ ವಾಲೆಯನ್ನಿಟ್ಟಮಾತ್ರದಲ್ಲಿ ಸಕಲಚಿಂತೆಯನ್ನೂ ಪರಿಹರಿ ಸುವ ಲಕ್ಷಣವನುಳ್ಳದ್ದಾಗಿ, ಲಾವಣ್ಯವನುಳ್ಳ ಯೌವನಸ್ಥರಾದ ಸ್ತ್ರೀಯರುಗಳಿಗೂ ವಿಟರುಗಳಿಗೂ, ನೂತನ ಕಾಂತಿಯನ್ನೂ, ವಯೋಧರ್ಮವನ್ನೂ ಉಂಟುಮಾ ಡುತ್ತ ಸಮಸ್ತವಾದ ಕುಶಲ ಲಕ್ಷಣಗಳಿಗೂ ಗುರುತಾಗಿ ಉಳ್ಳಂಥಾ ಸ್ತ್ರೀಪುರು ಷರುಗಳ ಮನಸ್ಸೆಂಬ ಸಮುದ್ರಕ್ಕೆ ಪೂರ್ಣಚಂದ್ರನೋಪಾದಿಯಲ್ಲಿ ಒಪ್ಪಿಸಲ್ಪ ಟ್ಟಿರುವುದೇ ತಾಟಂಕಗುಣ.

ನಾಸಿಕಾಭರಣದ ಗುಣ.—ಸ್ತ್ರೀಯರುಗಳಿಗೆ ಶುಭವನ್ನೂ ಶ್ರೇಷ್ಠತ್ವ

ವನ್ನೂ ಉಂಟುಮಾಡಿ ವಿಟರುಗಳಿಗೆ ಮನೋಹರಪ್ರೀತಿಯನ್ನುಂಟುಮಾಡುವ ಮನ್ಮಥನ ನೈದಿಶೇಬಾಣದೋಪಾದಿಯಲ್ಲಿ ಪ್ರಕಾಶಿಸುವುದೇ ನಾಸಿಕಾಭರಣದ ಗುಣ.

ಕಂಠಾಭರಣ ಗುಣ.—ಕೊರಳಿಗೆ ಮುತ್ತಿನ ಅಥವಾ ಚಿನ್ನದ ಸರಗಳನ್ನು ಧರಿಸಿದರೆ ಶರೀರಕ್ಕೆ ನೂತನ ಕಾಂತಿಯನ್ನೂ ಸೌಮ್ಯವನ್ನೂ ಉಂಟುಮಾಡುತ್ತ, ಸಕಲವಾದ ಕಲಿಕಲ್ಮಷದೋಷಗಳನ್ನೂ ವಾತಪಿತ್ತಶ್ಲೇಷ್ಮಗಳೆಂಬ ತ್ರಿದೋಷ ಗಳನ್ನೂ ಪರಿಹರಿಸುತ್ತ, ಲಕ್ಷ್ಮಿಯನ್ನುಂಟುಮಾಡುತ್ತ, ಸಕಲ ಶುಭಗುಣಗಳಿಗೂ ಶ್ರೇಷ್ಠಸ್ಥಾನವಾಗಿ ಸೂರ್ಯನಂತೆ ಕಾಂತಿಯನ್ನುಂಟುಮಾಡುವುದು ಮುಂತಾ ದ್ದೆಲ್ಲವೂ ಮೌಕ್ತಿಕ ಮಾಲಾಗುಣಗಳು.

ಚಿನ್ನದ ಸರದ ಗುಣ.—ಸುವರ್ಣಮಾಲಿಕೆಗಳನ್ನು ಧರಿಸಿದ ಮಾತ್ರ ದಲ್ಲಿಯೇ ಕಾಂತಿಯನ್ನುಂಟುಮಾಡುತ್ತ, ಆಯುರಭಿವೃದ್ಧಿಯನ್ನುಂಟುಮಾಡುತ್ತ, ವಾಯುದೋಷವನ್ನು ಪರಿಹರಿಸುತ್ತ ಬ್ರಹ್ಮರಾಕ್ಷಸಾದಿ ದುಷ್ಟಗ್ರಹಗಳ ಬಾಧೆ ಯನ್ನು ಹೋಗಲಾಡಿಸುತ್ತ ಸಮಸ್ತ ಜನರುಗಳಿಗೂ ಪ್ರಿಯವನ್ನುಂಟುಮಾಡುತ್ತ ಲಿರುವುದೇ ಸುವರ್ಣಮಾಲಿಕೆಯ ಗುಣಗಳು.

ರಜತಮಾಲಿಕೆ ಗುಣ.—ಮನೋಹರವಾದ ಬಿಳುಪಾದ ಬೆಳ್ಳಿಯಿಂದ ಮಾಡ ಲ್ಪಟ್ಟ ಸರಗಳನ್ನು ಧರಿಸಿದ್ದಲ್ಲಿ ನಿರ್ಮಲವಾದ ಕಾಂತಿಯನ್ನೂ ಆಯುರಾರೋಗ್ಯಂ ಗಳನ್ನೂ ಹರುಷವನ್ನೂ ಉಂಟುಮಾಡುತ್ತ ಸಕಲಪಾಪಸಮೂಹಂಗಳಂ ನಾಶಮಾ ಡುವುದು.

ನೀಲಸರದ ಗುಣ.—ದೇವತೆಗಳಿಗೆ ಪ್ರೀತಿಯಾಗಿ, ಪಾಪಗಳನ್ನು ಹೋಗ ಲಾಡಿಸುವುದಾಗಿ ಬರಾಸ, ಶ್ವಾಸ, ವಾಯುವೆಂಬ ಸಕಲರೋಗ ದೋಷಗಳನ್ನೂ ಪರಿಹರಿಸುವಂಥಾದ್ದಾಗಿ ಬಲವನ್ನುಂಟುಮಾಡುವುದಲ್ಲದೆ, ದುಷ್ಟಗ್ರಹಗಳ ಬಾಧೆ ಯನ್ನು ಪರಿಹರಿಸುವುದರಲ್ಲಿ ಚಮತ್ಕಾರಕರವಾಗಿರುವುದೇ ನೀಲಸರದ ಗುಣಗಳು.

ವಿಚಿತ್ರಮಾಲಾ ಗುಣಗಳು.—ಚಿನ್ನವೂ, ಹವಳವೂ, ಕೂಡಿರುವ ಏಕಾವ ಳಿಯ ಸರವಂ ಧರಿಸಿದ್ದಲ್ಲಿ ನೂತನವಾಗಿ ಶರೀರಕ್ಕೆ ಕಾಂತಿಯನ್ನುಂಟುಮಾಡುತ್ತ ವಾಯುದೋಷವನ್ನು ಪರಿಹರಿಸುತ್ತ, ರಕ್ತಪಿತ್ತಾದಿ ವ್ಯಾಧಿಗಳನ್ನು ಹೋಗಲಾಡಿ ಸುವ ಪವಿತ್ರತೆಯನ್ನುಂಟುಮಾಡುತ್ತ ಸ್ತ್ರೀಯರುಗಳಿಗೆ ಮನಃಕ್ರೀಡೆಯನ್ನುಂ ಟುಮಾಡುವುದೇ ಈ ತರಹ ಮಾಲಾಧರಿಸುವ ಗುಣ. ವಿಚಿತ್ರಮಾಲೆಯನ್ನು ಧರಿಸಿದ್ದಲ್ಲಿ ಪಂಚೇಂದ್ರಿಯಗಳಿಗೂ ಅನುಕೂಲವಾಗಿ, ವಿನೋದಸ್ತ್ರೀಯರುಗಳ ಕುಚಕುಂಭಮಧ್ಯದಲ್ಲಿ ಮನೋಹರವಾಗಿ ಚಲಿಸುವಂಥಾದ್ದಾಗಿ, ಕಾಯಾಗ್ನಿ, ಬುದ್ಧಿ, ಇಂದ್ರಿಯಬಲ, ದಾನಬುದ್ಧಿ, ಕಾಂತಿ ಮುಂತಾದವುಗಳನ್ನುಂಟುಮಾಡಿ, ಅತ್ಯಂತ ಪೈತ್ಯರೋಗಗಳನ್ನೂ ಹೋಗಲಾಡಿಸುವುದು.

ನವರತ್ನಮಾಲಾ ಗುಣ.—ಇವು ಸಕಲ ಪಾಪಸಮೂಹಗಳನ್ನೂ ಹೋಗಲಾಡಿಸುತ್ತ, ಶುಭವನ್ನುಂಟುಮಾಡುತ್ತ, ಸ್ಥಾವರಜಂಗಮ ಕೃತ್ರಿಮಗಳೆಂಬ ಮೂರುವಿಧವಾದ ವಿಷದೋಷಂಗಳನ್ನೂ, ಖಾಸರೋಗ, ವಾತರೋಗ ಮುಂತಾದವುಗಳನ್ನೂ ಪರಿಹರಿಸುವ ಔಷಧವಾಗಿದೆ.

ರುದ್ರಾಕ್ಷಿಸರ ತಾವರೇಮಣಿಗಳ ಸರ.—ಇವು ಸಕಲವಾದ ದೋಷಗಳನ್ನೂ ಹೋಗಲಾಡಿಸಿ ಪರಮೇಶ್ವರನ ಪಾದಾರವಿಂದಗಳಲ್ಲಿ ಭಕ್ತಿಯನ್ನುಂಟುಮಾಡಿ, ಗದಾಧರನಾದ ಶ್ರೀಹರಿಯಲ್ಲಿಯೂ, ಲಕ್ಷ್ಮೀದೇವಿಯಲ್ಲಿಯೂ, ಭಕ್ತಿಯನ್ನು ಹೆಚ್ಚಿಸಿ, ಸಕಲ ಪಾಪಗಳನ್ನೂ ನಿವಾರಣೆ ಮಾಡುವುವು.

ತುಲಸೀಮಣಿ, ಸ್ಪಟಿಕಮಣಿ ಮಾಲೆಗಳು.—ಸಕಲವಾದ ಪಾಪಗಳನ್ನು ಹೋಗಲಾಡಿಸುವ ಆಯುಧವಾಗಿರುವುದೇ ತುಳಸೀಮಣಿಯ ಗುಣ. ಅತಿ ಶೈತ್ಯವಾಗಿ ಜನಗಳ ಪಿತ್ತವನ್ನು ಪರಿಹರಿಸುವುದರಲ್ಲಿ ಮುಖ್ಯವಾಗಿರುವುದು ಸ್ಪಟಿಕಮಣಿಯ ಗುಣ.

ಬಾಹುಮುರಿಯ ಗುಣಗಳು.—ಶರೀರಕ್ಕೆ ಆನಂದಕರವಾಗಿ ನೃತ್ಯಮಾಡುವ ಸ್ತ್ರೀಯರುಗಳಿಗೆ ಮಂಗಳಕರವಾಗಿ ದೋಷರಹಿತವಾಗಿ ಮಾಡಲ್ಪಟ್ಟದ್ದಾಗಿ. ಸಕಲ ದುಷ್ಟರಾಕ್ಷಸಗ್ರಹಸಮೂಹಗಳಿಗೆ ಚಕ್ರಾಯುಧವಾಗಿ ಒಪ್ಪಲ್ಪಟ್ಟದ್ದಾಗಿ ಶ್ರೇಷ್ಠವಾದ ಅರಸುಗಳ ಮನಸ್ಸೆಂಬ ಸಮುದ್ರಕ್ಕೆ ಕೆರೆಯೋಪಾದಿಯಲ್ಲಿ ಪ್ರಕಾಶಿಸುವುದೇ ಬಾಹುಮುರಿಯ ಗುಣಗಳು.

ಕಡಗದ ಗುಣ.—ನವರತ್ನಗಳಿಂದ ಕೆತ್ತಿಸಲ್ಪಟ್ಟದ್ದಾಗಿ, ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತ, ರಾಕ್ಷಸಗ್ರಹಸಮೂಹಗಳಿಗೆ ಚಕ್ರಾಯುಧವಾಗಿ, ವಿಕಾರಗಳನ್ನು ನಿರ್ಮೂಲಮಾಡಿ, ಸಕಲಭಾಗ್ಯಭೋಗಸುಖಸೌಖ್ಯವನ್ನು ಹೆಚ್ಚಿಸಿ, ಐಶ್ವರ್ಯವನ್ನು ಕೊಟ್ಟು ಕಾಪಾಡುವುದು.

ಬೆರಳುಂಗುರದ ಗುಣಗಳು.—ಬೆರಳುಗಳಿಂದ ಧರಿಸಲ್ಪಟ್ಟದ್ದಾಗಿ ಸ್ತ್ರೀಯರುಗಳ ಹೃದಯಸ್ಥಾನಕ್ಕೆ ಪ್ರಕಾಶವಾದ ಸೂರ್ಯನೆನಿಸಿ ಮನ್ಮಥನು ನಾಟ್ಯವನಾಡುವ ಸ್ಥಾನವಾಗಿ ಬಾಲಗ್ರಹ ಸಮೂಹಗಳನ್ನು ಪರಾಙ್ಮುಖಮಾಡುವುದು.—ದೇವತಾಮುದ್ರೆಗಳುಳ್ಳ ಉಂಗುರುಗಳು ಸಂತೋಷವನ್ನೂ ಉತ್ಸಾಹವನ್ನೂ ಕೊಡುತ್ತ, ಸಕಲ ರತ್ನಸಮೂಹಗಳಿಂದ ಕೂಡಿ, ಶುಭವನ್ನುಂಟುಮಾಡುತ್ತ, ಕ್ಷುದ್ರ ರಾಕ್ಷಸ ಸಮೂಹಗಳಂ ಕೊಂದು ಪರಮೇಶ್ವರನ ಪಾದಂಗಳಲ್ಲಿ ಭಕ್ತಿಯನ್ನುಂಟುಮಾಡುತ್ತವೆ.

ಬಲೆ ಉಡಿದಾರದಗುಣ.—ಘಂಟೆಗಳಿಂದಲೂ ನವರತ್ನಗಳಿಂದಲೂ ಪ್ರಕಾಶಿಸುವುದಾಗಿ, ನಾಭೀಮೂಲಧಲ್ಲಿ ಧರಿಸಲ್ಪಟ್ಟದ್ದಾಗಿ ವಾತಪಿತ್ತಗಳಿರುವ ಸೀಮಾಭೂಮಿಗೆ ಸೂತ್ರವಂ ಬರೆದಂತಿರುವುದು. ಈ ಗುಣಗಳು ಮೇಖಲಾಭೂಷಣ ಗುಣಗಳೂ ಆಗುತ್ತವೆ.

ನೂಪುರದ ಗುಣ.— ಇವು ಶುಭಕರವಾಗಿರುವುದಲ್ಲದೆ, ಸ್ತ್ರೀಯರುಗಳ ವಿನೋದಕ್ಕೆ ಆವಾಸಸ್ಥಾನವಾಗಿ, ಪ್ರಕಾಶವನ್ನುಂಟುಮಾಡಿಕೊಂಡು, ಪಾಪ ದೋಷಂಗಳಂ ಹೋಗಲಾಡಿಸಿ ಮನಸಿಜನಿಂದುಂಟಾದ ಗ್ರಹನಿವಾರಣೆಮಾಡುವುವು.

ಪಾದಾಂಗುಳೀಯಕಗುಣಗಳು.— ಸ್ತ್ರೀಯರುಗಳು ಕಾಲುಬೆರಳುಗಳಲ್ಲಿ ಉಂಗುರಗಳು, ಪಿಲ್ಲಿ, ಮಂಟಿಕೆ ಮುಂತಾದವುಗಳನ್ನು ಧರಿಸಿದ್ದಲ್ಲಿ ಹೆಚ್ಚಾದ ಮಂಗಳವೂ, ಸರ್ವದುಷ್ಟಗ್ರಹೋಚ್ಚಾಟನವೂ ಸದಾ ಆನಂದವೂ ಆಗುವುವು.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೋಳ್ ಭೂಷಣ
ಧಾರಣಗುಣ ಪ್ರಶಂಸಾ ಸಂಪೂರ್ಣಂ.

---

## ಅಥ ಚಂದನಧಾರಣ ಪ್ರಶಂಸಾ.

ಚಂದನ ಧಾರಣ ವಿಧಿ.—ದೇವತೆಗಳಿಗೂ, ಗುರುಗಳಿಗೂ, ಬ್ರಾಹ್ಮಣರುಗಳಿಗೂ ಮೊದಲು ಗಂಧವಂ ಕೊಟ್ಟು ಆವೇಳೆ ತನ್ನ ಶರೀರಕ್ಕೆ ಲೇಪನ ಮಾಡಿಕೊಳ್ಳಬೇಕು. ಹೀಗೆ ಮಾಡಿದಲ್ಲಿ ಸಕಲ ಭೋಗಶರೀರಗಳಿಗೂ, ದ್ರವ್ಯಸ್ಥಾನವಾಗಿ, ಮನ್ಮಥನ ಸೂತ್ರದ ಕಟ್ಟಾಗಿ, ವರ್ನ, ಪುಷ್ಟಿ, ಬಲ ಮೊದಲಾದವುಗಳನ್ನೂ, ಪರಾಕ್ರಮವನ್ನೂ ಶರೀರಕ್ಕೆ ಸಾಧಿಸಿಕೊಟ್ಟು, ವಾತಸ್ಮಿತ್ಯಬಾಯಾರಿಕೆಬಳಲಿಕೆಗಳನ್ನೂ ಹೋಗಲಾಡಿಸುವುದು. ಇವೆಲ್ಲಾ ಶ್ರೀಗಂಧಧಾರಣಗುಣ.

ಗಂಧಧಾರಣದಲ್ಲಿ ಅನುಸರಿಸಬೇಕಾದ ಋತುನಿಯಮ.—ಹೇಮಂತಕಾಲದಲ್ಲಿ ಕರಿ ಅಗರು, ಪರಿಮಳದ ಎಣ್ಣೆಕೂಡಿದ ಕಸ್ತೂರಿಯಿಂದಲೂ, ಕುಂಕುಮದ ಹೂವಿನಿಂದಲೂ ಮರ್ದಿಸಿದಂಥಾ ಶ್ರೀಗಂಧವನ್ನು ಶರೀರದಲ್ಲಿ ಧರಿಸಿದ್ದಲ್ಲಿ ಸಕಲದೋಷಗಳನ್ನೂ ಕೆಡಿಸುವುದು.

ಶಿಶಿರ ರುತುವಿನಲ್ಲಿ ಕುಂಕುಮದ ಹೂವಿನಿಂದ ಕೂಡಿಸಿದ ಶ್ರೀಗಂಧವನ್ನು ಕರಿ. ಅಗರುಗಂಧದಿಂದಲೂ, ಜವ್ವಾಜಿ, ಕಸ್ತೂರಿ ಮುಂತಾದವುಗಳನ್ನು ಸೇರಿಸಿ ಧರಿಸಿದ್ದಲ್ಲಿ ಹೆಚ್ಚು ವಾತಾದಿದೋಷಗಳು ಪರಿಹಾರವಾಗುವುವು.

ವಸಂತಕಾಲದಲ್ಲಿ ಕಸ್ತೂರಿಯಿಂದ ಕೂಡಿ ತೇದ ಗಂಧವನ್ನು ಮಲ್ಲಿಗೆಪುಷ್ಪಗಳಿಂದ ವಾಸನೆಯುಂ ಕಟ್ಟಿದ ಪರಿಮಳಗಂಧದೊಡನೆ ಲೇಪನಮಾಡಿದ್ದಲ್ಲಿ ವಾತಪಿತ್ತಶ್ಲೇಷ್ಮಗಳೆಂಬ ತ್ರಿದೋಷಗಳನ್ನು ಹೋಗಲಾಡಿಸಿ, ಮನಸಿಜಕ್ರೀಡೆಗೆ ಜನ್ಮಭೂಮಿಯಾಗಿರುವುದು.

ಗ್ರೀಷ್ಮಕಾಲದಲ್ಲಿ ಕರ್ಪೂರಮಿಶ್ರವಾಗಿ ಮುಡಿವಾಳಸಹಿತವಾಗಿ ಪನ್ನೀರಿಂದ ತೇದ ಚಂಗಣಿಗಿಲಾದಿಯಾದ ಪರಿಮಳಪುಷ್ಪಂಗಳಿಂದ ವಾಸಿತವಾದ ಶ್ರೀಗಂಧವನ್ನು ಧರಿಸಿದ್ದಲ್ಲಿ ಜನರುಗಳ ತಾಪವನ್ನು ಪರಿಹರಿಸಿ ಕಾಮಸೌಖ್ಯವನ್ನುಂಟುಮಾಡುವಲ್ಲಿ ಮನ್ಮಥನ ನಿದಾನಸ್ಥಾನವಾಗಿರುವುದು.

ವರ್ಷಾಕಾಲದಲ್ಲಿ, ಕೃಷ್ಣಾಗರು, ಕುಂಕುಮಾಗರು, ಕಸ್ತೂರಿ ಮುಂತಾದವುಗಳಿಂದ ಕೂಡಿ ತೇದ ಸಕಲಪರಿಮಳದ್ರವ್ಯಂಗಳಿಂದಲೂ ಸಾಂಬ್ರಾಣಿಧೂಪದಿಂದಲೂ, ವಾಸಿತವಾದ ಶ್ರೀಗಂಧವನ್ನು ಧರಿಸಿದರೆ ಮನುಷ್ಯರುಗಳಿಗೆ ಹೆಚ್ಚುವ ವಾತಾದಿರೋಗಗಳನ್ನು ಕೆಡಿಸುವುದು.

ಲಾಂಛನದ ಗುಣ.—ಗೋಪೀಚಂದನವನ್ನು ಧರಿಸಿದ್ದಲ್ಲಿ ಸಕಲಪಾಪಸಮೂಹಂಗಳಂ, ಪೈತ್ಯರೋಗಗಳಂ, ರಕ್ತಪಿತ್ತ ರೋಗಗಳಂ ಜಯಿಸುವುದು. ವಿಭೂತಿಯನ್ನು ಧರಿಸಿದ್ದಲ್ಲಿ ಸಕಲವಾದ ಭೂತಬಾಧೆಗಳನ್ನು ನಿವಾರಣೆಮಾಡಿ ಐಶ್ವರ್ಯವನ್ನೂ ಶುಭವನ್ನೂ ಮಾಡಿ, ಶರೀರದ ತಾಪಗಳು, ದ್ವಿರೋಗಗಳು, ರಕ್ತಪಿತ್ತಾದಿರೋಗಗಳೂ ಶೀತಪಿತ್ತಮುಂತಾಗಿ ಸಕಲರೋಗಂಗಳೂ ನಾಶವಾಗುವುವು. ತಿರುಮಣ್ ಶ್ರೀಚೂರ್ನ (ತಿರುಚೂರ್ನ) ಇವುಗಳನ್ನು ಧರಿಸಿದ್ದಲ್ಲಿ ರಕ್ತದೋಷವನ್ನು ಪರಿಹರಿಸಿ, ದೇಹಕ್ಕೆ ಕಾಂತಿಯನ್ನುಂಟುಮಾಡಿ ಸಕಲ ದೋಷಂಗಳನ್ನೂ ಹೋಗಲಾಡಿಸುವುದು. ಅಲ್ಲದೆ ಶ್ರೀಚೂರ್ನಧಾರಣೆಯಿಂದ ಶ್ರೇಯಸ್ಸೂ ಶ್ರೀಹರಿಯಲ್ಲಿ ಭಕ್ತಿಯೂ ಹೆಚ್ಚುವುವು. ಕೆಂಪಿನ ಅಕ್ಷತೆಯನ್ನು ಧರಿಸಿದರೆ ಸಕಲವಾದ ರಾಕ್ಷಸಭಾಧೆಯೂ ತಪ್ಪಿ ಮನೋಹರತ್ವವನ್ನುಂಟುಮಾಡಿ ಮನ್ಮಥ ಕ್ರೀಡೆಯಲ್ಲಿ ಇಚ್ಛೆಯನ್ನು ಹುಟ್ಟಿಸುವುದು. ಅರಸಿನಕ್ಷತೆಯನ್ನು ಧರಿಸಿದರೆ ಸಕಲ ಶತ್ರುಸಮೂಹಂಗಳಂ ಶಿಕ್ಷಿಸಿ, ಸಮಸ್ತವಾದ ದೇವತೆಗಳಲ್ಲಿಯೂ ಪ್ರೀತಿಯನ್ನುಂಟುಮಾಡಿ, ಭೀತಿಯನ್ನು ಪರಹರಿಸುತ್ತ ಶೋಭನವಾಗಿ ರಕ್ಷಿಸುವುದು.

ತಿಲಕಧಾರಣ ಗುಣ.—ಹಣೆಯಲ್ಲಿ ತಿಲಕವಂ ಧರಿಸಿದರೆ ಸ್ತ್ರೀಯರುಗಳಿಗೂ, ವಿಟರಿಗೂ ಮಹಾಪ್ರೀತಿಕರವಾಗಿ ವಿಟರೂ ಸೊಗಸುಗಾರರೂ ನೋಡುವವರಲ್ಲಿ ಇಚ್ಛೆಯನ್ನುಂಟುಮಾಡುವವರಾಗಿ ಸ್ತ್ರೀಸಮೂಹಕ್ಕೆ ಮೋಹವನ್ನುಂಟುಮಾಡುವುದು.

ಜವಾದಿಧಾರಣಗುಣ.—ಜವಾದಿಯನ್ನು (ಪುನುಗು) ಧರಿಸಿದ್ದಲ್ಲಿ ಸುಖಭೋಗಗಳನ್ನುಂಟುಮಾಡುತ್ತ, ಸ್ತ್ರೀಯರುಗಳಿಗೆ ಅತಿವ್ಯಾಮೋಹವನ್ನುಂಟುಮಾಡಿ, ಶರೀರದಲ್ಲಿ ಕಾಮಾಗ್ನಿಯನ್ನುಂಟುಮಾಡುವುದಲ್ಲದೆ, ಬಹಳ ಶ್ರಮಗಳನ್ನೂ, ಭ್ರಮೆಯನ್ನೂ, ಭೂತಭಯಂಗಳನ್ನೂ ನಾಶಮಾಡಿ, ಶರೀರಕ್ಕೆ ಬಲವನ್ನುಂಟುಮಾಡುತ್ತ, ಬೆಮರುಗಳನ್ನೂ, ವಾತಾದಿರೋಗಗಳನ್ನೂ, ಪಾಪಗಳನ್ನೂ ಹೋಗಲಾಡಿಸುವುದು.

ಪುಣಗಿನ ಚಟ್ಟಿನ ಗುಣ.—ಸಕಲ ಪರಿಮಳಗಳಿಗೂ ಅಲಂಕಾರಭೂತವಾಗಿ, ಭೂತಭಯಂಗಳನ್ನು ಹೋಗಲಾಡಿಸಿ, ಮನ್ಮಥನ ಯಂತ್ರಮಂತ್ರಂಗಳಿಗೆ ಸೂತ್ರ ಸ್ಥಾನವಾಗಿ, ಸಕಲ ತಿಮಿರಗಳನ್ನೂ, ಶ್ಲೇಷ್ಮದೋಷಗಳನ್ನೂ, ರಕ್ತದೋಷ ಗಳನ್ನೂ ಪರಿಹರಿಸುವುದರಲ್ಲಿಯೂ, ಪೈತ್ಯಸ್ಥಾವರಾದಿ ತ್ರಿವಿಧ ವಿಷರೋಗಗಳೆ ಮೊದಲಾದವುಗಳನ್ನು ಹೋಗಲಾಡಿಸುವುದರಲ್ಲಿ ಬಹಳ ಪರಿಶ್ರಮವುಳ್ಳದ್ದು ಪುಣುಗು.

ಕಸ್ತೂರಿಯನ್ನು ಧರಿಸಿದ್ದಲ್ಲಿ.—ಸಕಲ ಭೋಗಗಳನ್ನುಂಟುಮಾಡುತ್ತ, ಶ್ಲೇ ಷ್ಮದೋಷಗಳನ್ನು ಹೋಗಲಾಡಿಸುತ್ತ, ಕಾಯಬಲವನ್ನೂ, ಅಗ್ನಿಯನ್ನೂ, ಕಾಂತಿ ಯನ್ನೂ, ಕೀರ್ತಿಯನ್ನೂ, ಪುಷ್ಟಿಯನ್ನೂ ಉಂಟುಮಾಡಿ, ಸ್ತ್ರೀಯರುಗಳನ್ನು ಒಲಿಸುವುದರಲ್ಲಿ ಮನ್ಮಥಬಾಣವಾಗಿ ಒಪ್ಪಿರುವುದು.

ಕರ್ಪೂರವನ್ನು ಧರಿಸಿದರೆ—ಮದಕರವಾಗಿ ಹಲ್ಲುಗಳ ದುರ್ಗಂಧವನ್ನು ಹೋಗಲಾಡಿಸುವಂಥಾದ್ದಾಗಿ ಸಕಲ ಸುಖಭೋಗಗಳಿಗೂ ಆವಾಸಸ್ಥಾನವಾಗಿ, ಮುಖದ ದುಷ್ಟಪರಿಮಳಗಳನ್ನು ಹೋಗಲಾಡಿಸಿ, ಸ್ತ್ರೀಯರ ರಕ್ತಸ್ರಾವಗಳನ್ನೂ, ಮೂಗು, ಕಿವಿರೋಗಗಳನ್ನೂ ಹೋಗಲಾಡಿಸುವುದು.

## ತಿಲಕಧಾರಣಗುಣ.

ಕುಂಕುಮದಹೂವನ್ನು ತಿಲಕವಾಗಿ ಧರಿಸಿದರೆ—ಶ್ಲೇಷ್ಮದೋಷಗಳನ್ನೂ, ಸ್ಥಾವರಾದಿದೋಷಗಳನ್ನೂ ಜಯಿಸಿ ಪುಣ್ಯಸಾರವನ್ನುಂಟುಮಾಡಿ, ತಿಮಿರರೋಗ, ಮೂಗಿನರೋಗ, ಶಿರೋರೋಗ ಮೊದಲಾದುವುಗಳನ್ನು ಕೆಡಿಸಿ, ಬಲವನ್ನೂ, ಶುಭವನ್ನೂ ಕೊಟ್ಟು, ಪುರುಷರುಗಳಿಗೆ ಹೆಚ್ಚಾದ ಸೌಭಾಗ್ಯವಂ ಮಾಡಿ, ಕಿವಿಯಲ್ಲಿ ಹುಟ್ಟಿದ ರೋಗಗಳಂ ಹಾಳುಮಾಡುವುದು.

ಗೋರೋಜನವನ್ನು ಧರಿಸಿದ್ದಲ್ಲಿ.—ಸೌಭಾಗ್ಯವನ್ನು ಸೂಚಿಸುವಂಥಾದ್ದಾಗಿ ಸಮಸ್ತ ಭೂತಪ್ರೇತಪಿಶಾಚಾದಿ ದುಷ್ಟಗ್ರಹಂಗಳ ಬಾಧೆಗಳಂ ಹೋಗಲಾಡಿಸಿ, ಸ್ಥಾವರಾದಿ ಮೂರುವಿಧ ದೋಷಂಗಳಂ ಪರಿಹರಿಸಿ, ಶರೀರಕ್ಕೆ ತಂಪನ್ನುಂ ಟುಮಾಡಿ ಕಿಂಚಿತ ಬಂಕರವಾಗಿ ಸೂತಿವ್ರಣ ಸಕಲವನ್ನೂ ಹೋಗಲಾಡಿಸು ವುದು.

ಕದಂಬಾದಿ ಗಂಧವಡಿಯನ್ನು ಧರಿಸಿಕೊಂಡಲ್ಲಿ.—ಸಕಲವಾದ ತಿಮಿರ ದು ರ್ಗಂಧದೋಷಗಳಂ ಹೋಗಲಾಡಿಸಿ, ಕಾಂತಿಯನ್ನುಂಟುಮಾಡಿ, ಸತ್ಪುರುಷರ ಮಧ್ಯದಲ್ಲಿ ಡಾಂಭಿಕತನವನ್ನುಂಟುಮಾಡಿ, ಸಕಳಪರಿಮಳದೊಡನೆ ಕೂಡಿ, ಶೀತೋ ಷ್ಣಗಳ ಹೆಚ್ಚಿಗೆಯನ್ನು ಕೆಡಿಸುವುದು.

ಪರಿಮಳದೆಣ್ಣೆಯಿಂತೇದ ಕಿರಿಯಗುರಗಂಧವಂ ಧರಿಸಿದರೆ.—ಶ್ಲೇಷ್ಮಹರ

ವಾಗಿ ಚರ್ಮದ ಸಂದುಗಳಲ್ಲಿ ಆಗುವ ರೋಗಗಳನ್ನು ಕೆಡಿಸಿ, ಚಿಬ್ಬು, ಬಂಗ: ಮುಂತಾದ ಚರ್ಮದೋಷಂಗಳಂ ಹೋಗಲಾಡಿಸುವುದು.

ಕೆಂಪಾದ ಚಂದನವನ್ನು ಧರಿಸಿದರೆ.— ಶರೀರಕ್ಕೆ ಮಹಾ ಶೈತ್ಯಕರವಾಗಿ, ಮನೋಹರವಾಗಿ, ಅತಿದಾಹ, ವಾತದೋಷಗಳನ್ನು ಜಯಿಸಿ, ಪಿತ್ತವನ್ನು ಕೆಡಿಸಿ. ಅಗ್ನಿಯಿಂದ ತಪಿಸಲ್ಪಟ್ಟ, ಅನೇಕ ರೋಗಗಳನ್ನೂ, ವಿಸರ್ಪರೋಗವನ್ನೂ, ಶೋಥೆ ಮೊದಲಾದ ರೋಗವನ್ನೂ ಹೋಗಲಾಡಿಸುವುದು.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೋಳ್
ಚಂದನಾದಿಗುಣಪ್ರಶಂಸಾ ಸಂಪೂರ್ಣಂ.

---

## ಅಥ ಪುಷ್ಪಧಾರಣಪ್ರಶಂಸಾ.

ಪುಷ್ಪಮಾಲೆಗಳನ್ನು ಧರಿಸುವಲ್ಲಿ.—ಮೊದಲು ದೇವರುಗಳಿಗೂ, ಗುರು, ತಂದೆ, ತಾಯಿ, ಅಣ್ಣ, ಮಾವ, ಸೋದರಮಾವ ಮುಂತಾದವರಿಗೂ, ಸ್ತ್ರೀಯರು. ಗಳಿಗೂ, ಇಷ್ಟದೇವತೆಗಳಿಗೂ ಸಮರ್ಪಿಸಿ, ಅನಂತರ ಇಷ್ಟದೇವತಾಸ್ಮರಣೆಯನ್ನು ಮನಃಪೂರ್ವಕವಾಗಿಮಾಡಿ ತಾನು ಆ ಹಾರಂಗಳಂ ಧರಿಸಿಕೊಳ್ಳಬೇಕು.

ತಾವರೇಹೂವನ್ನು ಧರಿಸುವುದರಿಂದ.—ಮನೋಹರವಾದ ಮನ್ಮಥಕ್ರೀಡಾ ವೃದ್ಧಿಯನ್ನೈದಿಸಿ, ವಿಷ್ಣುದೇವಿಗೆ ಪ್ರಿಯವಂತನಾಗಿ, ಶೃಂಗಾರಕೃತಿಗೂ, ಪರರಾಕೃಷ್ಟಿಗೂ ಕಾರಣಭೂತನಾಗಿ, ತೃಷೆಯನ್ನು ಪರಿಹರಿಸಿ, ಪುಷ್ಟಿಯನ್ನುಂಟುಮಾಡುವುದು. ಇವೆಲ್ಲಾ ಸಾಮಾನ್ಯ ತಾವರೇಹೂವಿನ ಗುಣ.

ಕೆಂಪಿನ ತಾವರೇಹೂವನ್ನು ಧರಿಸಿದರೆ.—ಹಲ್ಲಿಗೆ ತ್ರಾಣಉಂಟಾಗಿ, ಮನ್ಮಥಕ್ರೀಡಾವೃದ್ಧಿಯನ್ನುಂಟುಮಾಡಿ, ಪಿತ್ತಪ್ರಕೋಪವಂ ಶಮನ ಮಾಡುವುದು.

ನೀಲೋತ್ಪಲ ಅಥವಾ ಕನ್ನೈದಿಲೆಹೂವನ್ನು ಧರಿಸುವುದರಿಂದ.—ಸಕಲವಾದ ವಾತಪಿತ್ತದೋಷ ಮುಂತಾದ್ದು ಪರಿಹರವಾಗಿ, ಶೋಭನವಾದ ಪರಿಮಳವುಂಟಾಗಿ, ಪಂಚೇಂದ್ರಿಯಗಳೂ ಬಲವಾಗಿ, ಶ್ರೇಷ್ಠವಾಗಿಯೂ, ಮನೋಹರವಾಗಿಯೂ, ಸುಖವನ್ನೂ ಸಕಲಜನಪ್ರೀತಿಯನ್ನೂ ಮಾಡುವುದು. ಮತ್ತು ಪಿತ್ತವಂ ಪರಿಹರಿಸುವುದು.

ಮಲ್ಲಿಗೆ ಹೂವನ್ನು ಧರಿಸುವುದರಿಂದ.—ಶರೀರಕ್ಕೆ ಉಷ್ಣವಾಗಿ, ಶ್ಲೇಷ್ಮನಾಶಕರವಾಗಿ, ಕಣ್ಣುಗಳ ದೃಷ್ಟಿಯನ್ನು ನಷ್ಟಮಾಡುವುದಾಗಿ ಮತ್ತೆ ಮತ್ತೆ ಧರಿಸುವ ಮನಸ್ಸು ಹುಟ್ಟುವುದರಲ್ಲಿ ಪ್ರಶಸ್ತವಾಗಿ, ಮಂಡೆಯ ಕೂದಲುಗಳಲ್ಲಿ ಹೇನು ಸೀರು ಮುಂತಾದನ್ನು ಹೆಚ್ಚಿಸುವುದು.

ಕುಂದಪುಷ್ಪ ಅಥವಾ ಮೊಲ್ಲೆ ಹೂವನ್ನು ಧರಿಸುವುದರಿಂದ.—ಮನುಷ್ಯರ ಆನಂದವೆಂಬ ನದಿಗೆ ತೆರೆಗಳಾಗಿ, ವಾತಪಿತ್ತಶ್ಲೇಷ್ಮಗಳೆಂಬ ದೋಷಂಗಳಂ ನಿವಾರಿಸಿ, ಕಣ್ಣುಗಳಿಗೆ ಮಹಾ ಹಿತಕರವಾಗಿ, ಶಿರಸ್ಸಿಗೆ ತಂಪಾಗಿ, ಶರೀರದಿಂದ ಹುಟ್ಟುವ ಹೇನು, ಸೀರು, ಕೂರೆ ಮುಂತಾದ್ದನ್ನು ಹೋಗಲಾಡಿಸುವುದು.

ವಾಸಂತಿಕಾಪುಷ್ಪವು ಅಂದರೆ ಸೇವಂತಿಗೆಹೂವನ್ನು ಧರಿಸಿದ್ದಲ್ಲಿ.—ಬಹು ಶ್ರಮಹರವಾಗಿ, ವಾತರೋಗ, ಖಾಸರೋಗಹರವಾಗಿ, ತಂಪಾದ ಪರಿಮಳಉಂಟಾಗಿ, ಶೀಘ್ರವಾಗಿ ಒಣಗದೆ, ಶರೀರಕ್ಕೆ ತಂಪನ್ನುಂಟುಮಾಡುವುದು.

ಚಂಪಕಪುಷ್ಪ ಅಂದರೆ ಸಂಪಿಗೆಹೂವನ್ನು ಧರಿಸುವುದರಿಂದ.—ಮನಸ್ಸಿಗೆ ಪ್ರಿಯವಾದ ಪರಿಮಳವುಂಟಾಗಿ, ಬ್ರಾಹ್ಮಣರುಗಳಿಗೂ, ಅರಸುಗಳಿಗೂ, ಯೋಗ್ಯವಾಗಿ ಪಿತ್ತವನ್ನೂ ವಾತವನ್ನೂ ಹೋಗಲಾಡಿಸಿ, ಶರೀರಕ್ಕೆ ವೀರ್ಯವೃದ್ಧಿಯನ್ನುಂಟುಮಾಡುತ್ತ, ಚಿನ್ನದಂತೆ ಕಾಂತಿಯನ್ನುಂಟುಮಾಡುವುದು.

ಕೇತಕೀಪುಷ್ಪ ಅಂದರೆ ತಾಳೇಹುವ್ವನ್ನು ಧರಿಸಿದ್ದಲ್ಲಿ.—ವಾತಹರವಾಗಿ, ಶ್ಲೇಷ್ಮವನ್ನು ಬೇರುಸಹಿತ ಕೆಡಿಸುತ್ತ, ಶರೀರಕ್ಕೆ ಉಷ್ಣಕರವಾಗಿ ಪಿತ್ತವನ್ನು ಹೆಚ್ಚಿಸುವುದು.

ಜಾಜಿಪುಷ್ಪವನ್ನು ಧರಿಸುವುದರಿಂದ.—ಶ್ಲೇಷ್ಮದೋಷವನ್ನೂ, ವಾತವನ್ನೂ ಹೋಗಲಾಡಿಸಿ, ಶರೀರಕ್ಕೆ ಪುಷ್ಟಿಯನ್ನುಂಟುಮಾಡಿ, ಅತಿಶಯಪರಿಮಳವನ್ನು ಸಹ ಉಂಟುಮಾಡಿ, ಮನೋಹರವಾಗಿ ಪ್ರೌಢೆಯರಾದ ಸ್ತ್ರೀಯರುಗಳಿಗೆ ಬಹಳಮೋಹನಕರವಾಗಿ ನೇತ್ರರೋಗಂಗಳನೆಲ್ಲವನ್ನೂ ಪರಿಹರಿಸುವುದು.

ಪಾಟಲೀಪುಷ್ಪ ಅಥವಾ ಪಾದರಿಹುವ್ವನ್ನು ಧರಿಸುವುದರಿಂದ.—ಮನಸ್ಸಿನ ಕ್ಲೇಶವನ್ನು ಪರಿಹಾರಮಾಡಿ, ಉದಕದೋಷವನ್ನು ಹೋಗಲಾಡಿಸಿ, ಅತ್ಯಾಶ್ಚರ್ಯವನ್ನುಂಟುಮಾಡಿ, ಸತ್ಪುರುಷರುಗಳಿಗೆ ವಿಶೇಷಬುದ್ಧಿಯನ್ನುಂಟುಮಾಡುತ್ತ, ಸದಾ ಧರಿಸಿದವರಿಗೆ ಪಿತ್ತಪ್ರಕೋಪವನ್ನು ನಾಶಮಾಡುತ್ತ, ಮಹಾಪರಿಮಳದೊಡನೆ ಕೂಡಿರುವುದು.

ಬಕುಳಪುಷ್ಪಗಳನ್ನು ಧರಿಸಿದ್ದಲ್ಲಿ.—ಮನೋಹರವಾಗಿ, ಶಿರೋರೋಗವನ್ನು ಹಾಳುಮಾಡಿ, ಬಳಲಿಕೆ, ವಾತಪಿತ್ತಶ್ಲೇಷ್ಮಾದಿದೋಷಗಳನ್ನು ಪರಿಹರಿಸಿ, ಅತ್ಯಂತ ಕಾಂತಿ ಸೌಭಾಗ್ಯಗಳಿಗೆ ಕಾರಣವಾಗುವುದು.

ಪುನ್ನಾಗ ಅಂದರೆ ಸುರಹೊನ್ನೆಯನ್ನು ಧರಿಸಿದ್ದಲ್ಲಿ.—ಮನಸ್ಸಿನ ಚಾಂಚಲ್ಯವನ್ನು ಹೋಗಲಾಡಿಸಿ ತಲೆತಿರುಗುವುದು ಮುಂತಾದ ಜಾಡ್ಯಗಳನ್ನು ಹೋಗಲಾಡಿಸಿ, ಸ್ಥಾವರಾದಿ ಮೂರುದೋಷಂಗಳನ್ನೂ ನಾಶಮಾಡುವುದು.

ಮಾಧವೀಪುಷ್ಪವನ್ನು (ದುಂಡುಮಲ್ಲಿಗೆ) ಧರಿಸುವುದರಿಂದ.—ವಾತಶ್ಲೇಷ್ಮಗಳು ನಾಶವಾಗುವುವು, ಪಿತ್ತರಕ್ತಹರವಾಗುವುದು, ನೇತ್ರಕ್ಕೆ ಅನುಗುಣವಾಗಿ ಮನಸ್ಸಿಗೆ ಸಂತೋಷವನ್ನುಂಟುಮಾಡುವುದು.

ತೇರಣದಹುವ್ವನ್ನು (ಕುರವಕ) ಧರಿಸುವುದರಿಂದ.—ವ್ಯಾಪ್ತವಾದ ಪರಿಮಳ ಉಂಟಾಗಿ, ಈ ಲೋಕದಲ್ಲಿ ಒಂದುಕ್ಷಣದಲ್ಲಿ ವಿಚಿತ್ರವರ್ನವನ್ನುಮಾಡುವ ಎಲೆಯುಂಟಾದದ್ದಾಗಿರುವುಧು.

ಕರವೀರಪುಷ್ಪ ಅಂದರೆ ಕಣಗಿಲಹೂವು.—ಇದನ್ನು ಧರಿಸಿದ್ದಲ್ಲಿ ಶಿರಸ್ಸಿನ ತಿಮಿರವನ್ನೂ, ರಕ್ತದೋಷವನ್ನೂ ಸದಾ ಪರಿಹರಿಸಿ, ಹೇನು, ಸೀರು ಮುಂತಾದವುಗಳನ್ನು ಹೋಗಲಾಡಿಸುವುದು.

ನಂದ್ಯಾವರ್ತದಹೂವನ್ನು ಧರಿಸಿದರೆ.—ನೇತ್ರದಲ್ಲಿ ಹುಟ್ಟಿದ ಹುವ್ವು, ಕಾಯಿ ಮುಂತಾದ ರೋಗಗಳಂ ಪರಿಹರಿಸಿ ಶರೀರಕ್ಕೆ ಸಂಪತ್ತನ್ನುಂಟುಮಾಡಿ ಮನ್ಮಥ ವಿರಹವೇದನೆಯನ್ನು ಪರಿಹರಿಸುವುದು.

ಪಾರಿಜಾತಪುಷ್ಪವನ್ನುಧರಿಸಿಕೊಂಡರೆ—ಮಹಾಪಾವನವಾದದ್ದಾಗಿ, ಸಕಲ ಸೌಖ್ಯಕ್ಕೂ ಜೀವಸ್ಥಾನವಾಗಿ, ಪರಿಮಳದೊಡನೆ ಕೂಡಿಕೊಂಡು, ಶ್ರೀಹರಿಪ್ರಿಯವಾಗಿ, ವಾತಕಾರಿಯಾಗಿ ಐಶ್ವರ್ಯಮುಂತಾದವುಗಳನ್ನು ಕೊಡುವುದು.

ಮರುಗದೆಲೆಯನ್ನುಧರಿಸುವುದರಿಂದ.—ವಾತಪ್ರಕೋಪದೋಷವಂ ಹೋಗಲಾಡಿಸಿ, ಶಿರಸ್ಸಿನ ಹೇನು, ಸೀರು, ಕೂರೆ ಮುಂತಾದವುಗಳನ್ನು ಹೋಗಲಾಡಿಸಿ ಅತಿಪರಿಮಳವನ್ನುಂಟುಮಾಡುವುದು.

ದವನಪತ್ರವನ್ನು ಧರಿಸುವುದರಿಂದ.—ವಾತಶ್ಲೇಷ್ಮಪ್ರಕೋಪಗಳನ್ನು ಹೋಗಲಾಡಿಸಿ, ದೇವತೆಗಳಿಗೆ ಮಹಾಪ್ರೀತಿಯನ್ನುಂಟುಮಾಡಿ, ಪೂಜಾಯೋಗ್ಯವಾಗಿ ಶೋಭನವಾಗಿರುವುದು.

ಮಂಚಿಪತ್ರವನ್ನು ಧರಿಸುವುದರಿಂದ—ದೇವತೆಗಳಿಗೂ, ಸೂರ್ಯನಿಗೂ ಪ್ರಿಯವಾಗಿ, ಶುಭಶೋಭನವನ್ನು ಕೊಡುವಂಥಾದ್ದಾಗಿ, ವಾತದೋಷ, ಖಾಸರೋಗ, ತಿಮಿರರೋಗ, ಮೊದಲಾದುವುಗಳನ್ನುಕೆಡಿಸಿ, ಕ್ರಿಮಿರೋಗಗಳನ್ನು ಪರಿಹರಿಸಿ ಸುಖವನ್ನುಂಟುಮಾಡುವುದು.

ಹರಿತಚ್ಛವನ್ನು ಧರಿಸುವುದರಿಂದ.—ಉಷ್ಣಕರವಾಗಿ, ಕಹಿಯಾಗಿ, ಶ್ಲೇಷ್ಮ ಪ್ರಕೋಪ, ಆಮಪ್ರಕೋಪಾದಿಗುಣಗಳನ್ನು ಅಪಹಾರಮಾಡಿ, ದುಷ್ಟಭೂತಗ್ರಹಗಳನ್ನೂ, ತಿಮಿರರೋಗ, ಕ್ರಿಮಿರೋಗಗಳನ್ನೂ, ವಾತರೋಗವನ್ನೂ, ಪರಿಹರಿಸುವುದು.

ಶ್ರೀತುಲಸಿಯನ್ನು ಧರಿಸುವುದರಿಂದ.—ಸಕಲಪಾಪಗಳನ್ನೂ ನಾಶಮಾಡಿ, ಮಹಾಪವಿತ್ರವಾಗಿ, ಎಲ್ಲಾಕಾಲಗಳಲ್ಲಿಯೂ ಯೋಗ್ಯವಾಗಿ, ವಾತಶ್ಲೇಷ್ಮದೋಷಂಗಳನ್ನು ನಾಶಮಾಡುವುದು.

ದೂರ್ವೆಯನ್ನು ಧರಿಸುವುದರಿಂದ.—ಪಾಪದೋಷಗಳನ್ನು ಕೆಡಿಸಿ, ವಿಘ್ನೇಶ್ವರನಿಗೆ ಪ್ರಿಯವಾಗಿ, ಎಲ್ಲಾಕಾಲಗಳಲ್ಲಿಯೂ ಸಂತೋಷವನ್ನು ಹುಟ್ಟಿಸಿ, ಸುಖಪರಂಪರೆಯನ್ನು ಕೊಡುವುದು; ದೂರ್ವೆ ಅಂದರೆ ಗರಿಕೆ.

ಮುಡಿವಾಳವನ್ನು ಧರಿಸುವುದರಿಂದ ಶರೀರಕ್ಕೆ ತಂಪನ್ನುಂಟುಮಾಡಿ, ದಾಹವನ್ನೂ, ರಕ್ತಪಿತ್ತರೋಗವನ್ನೂ, ವಾತದೋಷವನ್ನೂ ಅಪಹರಿಸುವುದು.

ಲಾಮಂಚವನ್ನು ಧರಿಸುವುದರಿಂದ ವಾತಪಿತ್ತಶ್ಲೇಷ್ಮಗಳಂ ಕೆಡಿಸಿ ದಾಹವನ್ನೂ, ತಾಪಜ್ವರವನ್ನೂ ಹೋಗಲಾಡಿಸುವುದು.

ಆಯಾಯ ರುತುವಿನಲ್ಲಿ ಧರಿಸುವುದಕ್ಕೆ ಯೋಗ್ಯವಾದ ಪುಷ್ಪಗಳು.—ಶಿಶಿರಕಾಲಗಳಲ್ಲಿ ತಾವರೇಪುಷ್ಪವನ್ನೂ, ವಸಂತಕಾಲದಲ್ಲಿ ತಾಳೇಹೂವ್ವನ್ನೂ, ಗ್ರೀಷ್ಮಕಾಲದಲ್ಲಿ ಕೊಡಸಿಗೆಯ ಪುಷ್ಪವನ್ನೂ, ವರ್ಷಾಕಾಲದಲ್ಲಿ ಜಾಜಿಯ ಹುವ್ವನ್ನೂ, ಶರತ್ಕಾಲದಲ್ಲಿ ಪಾದರಿ, ಸಂಪಿಗೆ ಹೂವುಗಳನ್ನೂ ಎಲ್ಲಾಕಾಲದಲ್ಲಿಯೂ ಕೆಂದಾವರೆಹೂವನ್ನೂ ಧರಿಸಬೇಕು.

ಪುಷ್ಪಭೋಗನಿಯಮಕಾಲ. — ಜಾಜೀಹುವ್ವನ್ನ ನಾಲ್ಕು ಗಳಿಗೆಯೂ, ಕೊಡಸಿಗೆ ಹೂವನ್ನು ಎಂಟುಗಳಿಗೆಯೂ, ಕನ್ನೈದಿಲೆ, ಕೆಂದಾವರೆಹೂಗಳನ್ನು ಮೂರುದಿನಗಳೂ, ತಾಳೆಯ ಹೂವನ್ನು ಐದುದಿವ್ಸಗಳೂ, ಮಲ್ಲಿಗೆಹೂವನ್ನು ಹದಿನಾರು ಗಳಿಗೆಯೂ, ಬೆಳ್ದಾವರೆಯನ್ನ ಎರಡುದಿನವೂ, ಕಡಮೆ ಹೂವುಗಳನ್ನು ಒಂದೊಂದು ದಿನವೂ. ಈ ಮೇರೆ ಎಲ್ಲಾ ಹೂಗಳನ್ನ ಧರಿಸಬೇಕು.

ಮತಾಂತರೆ.—ಅಭ್ಯಂಗನವಿಲ್ಲದೆ ಶರೀರವನ್ನು ಮಾಸಿದ್ದಲ್ಲಿ, ಶರೀರವನ್ನು ನಿರ್ಮಲವಾಗಿ ಮಾಡದೇಹೋದಲ್ಲಿ, ಜಾಜಿಹುವ್ವು, ಕೊಡಸಿಗೆಹೂವು ; ಅಭ್ಯಂಗನವಾದಲ್ಲಿ ತಾಳೆಹೂವು, ರತಿಯಲ್ಲಿ ಸಕಲಪರಿಮಳವಾದ ಹುವ್ವುಗಳನ್ನೂ ಧರಿಸಬೇಕೆಂಬುದೇ ಕಾಲನೇಮ.

ಹಳಸಿದ ಹೂವಿನಸರ, ಭೂಮಿಯಲ್ಲಿ ಬಿದ್ದಸರ, ಮತ್ತೊಬ್ಬರು ಧರಿಸಿದ್ದ ಹುವ್ವು ಇವೇ ಮೊದಲಾದವುಗಳನ್ನು ಧರಿಸಲಾಗದು.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೊಳ್ ಪುಷ್ಪಧಾರಣಗುಣ.
ಪ್ರಶಂಸಾ ಸಂಪೂರ್ಣಂ

---

## ಅಥ ಕ್ರಮಪಾಕಸ್ಯ ಭೋಜನಪಾತ್ರಗುಣಂ

ಸ್ವರ್ಣಪಾತ್ರಗುಣಂ.—ಸಕಲಪಾಪಗಳನ್ನು ಕೆಡಿಸಿ ಕೀರ್ತಿಯನ್ನೂ, ಸಕಲಜನಪ್ರೀತಿಯನ್ನೂ ಉಂಟುಮಾಡಿ, ಜಠರಾಗ್ನಿಯನ್ನ ಹುಟ್ಟಿಸಿ, ಪಥ್ಯಕರವಾಗಿ, ಉಷ್ಣಕರವಾಗಿ, ಭೋಜನಕಾಲದಲ್ಲಿ ಮಂಗಳಕರವಾಗಿ, ಸೌಖ್ಯಪ್ರದವಾಗಿ, ಪಾವನವಾಗಿ, ಶೈತ್ಯರೋಗಬಾಧೆಯನ್ನೂ, ಸ್ಥಾವರಾದಿ ಮೂರುವಿಧವಾದ ವಿಷಬಾಧೆ

ಯನ್ನೂ, ಹೋಗಲಾಡಿಸಿ, ವೀರ್ಯವೃದ್ಧಿಕರವಾಗಿ, ಮನೋಹರವಾಗಿರುವುದೇ ಚಿನ್ನದ ಪಾತ್ರೆಯ ಗುಣ.

ರೌಪ್ಯಪಾತ್ರೆಯ ಗುಣ.—ಪಿತ್ತಪ್ರಕೋಪ, ಶ್ಲೇಷ್ಮದ ಹೆಚ್ಚಿಗೆಯನ್ನು ಹೋಗಲಾಡಿಸಿ, ಅಗ್ನಿಯನ್ನುಂಟುಮಾಡಿ ಮಹಾಯೋಗ್ಯವಾಗಿ, ರುಚಿಕರವಾಗಿ, ದೀಪನಕರವಾಗಿ, ಮಹಾ ಶ್ರೇಯಸ್ಸನ್ನುಂಟುಮಾಡುವುದಾಗಿ, ಇಚ್ಛೆಯನ್ನುಂಟುಮಾಡಿ, ಯಾವಾಗಲೂ ಭೋಜನಕ್ಕೆ ಯೋಗ್ಯವಾಗಿರುವುದೇ ಬೆಳ್ಳಿಯ ಪಾತ್ರೆಯ ಗುಣಗಳು.

ಕಾಂಸ್ಯ ಪಾತ್ರೆಯ ಗುಣ.—ಇವುಗಳನ್ನು ಉಪಯೋಗಿಸಿದ್ದಲ್ಲಿ ಮಹಾಜಯಪ್ರದವಾಗಿ, ರಕ್ತಪಿತ್ತ ರೋಗಗಳಲ್ಲಿ ಸಂತರ್ಪಣವನ್ನುಂಟುಮಾಡಿ, ಪ್ರೀತಿಕರವಾಗಿ ಶುಚಿಶುಚಿಗಳನ್ನುಂಟುಮಾಡಿ, ನೇತ್ರರೋಗಬಾಧೆಗಳನ್ನು ಪರಿಹರಿಸುವುದು.

ತಾಮ್ರದ ಪಾತ್ರೆಯ ಗುಣಗಳು.—ಇವುಗಳು ಕಾಂತಿಯನ್ನುಂಟುಮಾಡಿ, ಪವಿತ್ರವಾಗಿ, ರುಚಿಕರವಾಗಿ, ಶ್ಲೇಷ್ಮರೋಗವನ್ನು ಪರಿಹರಿಸಿ, ಶ್ವಾಸರೋಗವನ್ನು ಕೆಡಿಸಿ, ದೃಷ್ಟಿಪುಷ್ಟಿಗಳೆರಡನ್ನೂ ಹೆಚ್ಚಿಸಿ, ಶರೀರಕ್ಕೆ ಶಾಂತಿಕರವಾಗಿ, ಅಗ್ನಿಯನ್ನುಂಟುಮಾಡಿ ಗುಲ್ಮಶೂಲೆಯನ್ನು ಶಾಂತಿಮಾಡುವುದು.

ಗಾಜಿನಪಾತ್ರೆಯ ಗುಣ.—ಇದನ್ನು ಉಪಯೋಗಿಸುವದರಿಂದ ಭೋಜನವು ಮಹಾರುಚಿಕರವಾಗಿ, ವಾಯುವಿಗೆ ಸಮಾನವಾದ ವೇಗವನ್ನುಂಟುಮಾಡಿ, ಜಡತ್ವವನ್ನು ಹೋಗಲಾಡಿಸಿ, ಜಠರಾಗ್ನಿಯನ್ನು ಹೆಚ್ಚಿಸಿ, ನೇತ್ರಗಳಿಗೆ ಮಹಾಸಂತೋಷವನ್ನುಂಟುಮಾಡುವುದು.

ಕಾಂತ (ಅಂದರೆ) ಕಬ್ಬಿಣ.—ಈ ಪಾತ್ರೆಗಳನ್ನು ಉಪಯೋಗಿಸುವುದರಿಂದ ಛರ್ದಿರೋಗ, ಕ್ಷಯರೋಗ, ಪಾಂಡುರೋಗ ಮುಂತಾದ ರೋಗಗಳು ಹರವಾಗಿ, ಶರೀರಕ್ಕೆ ಕಾಂತಿಯನ್ನುಂಟುಮಾಡಿ, ವೀರ್ಯವೃದ್ಧಿಯನ್ನೂ, ರುಚಿಯನ್ನೂ ಪುಷ್ಟಿಯನ್ನೂ, ಜಠರಾಗ್ನಿಯನ್ನೂ ಹೆಚ್ಚಿಸುವುದು.

ಕದಳೀಪತ್ರದ ಗುಣ.—ಇವುಗಳನ್ನು ಉಪಯೋಗಿಸುವುದರಿಂದ, ಅತಿ ಶುಚಿಯಾಗಿ, ಮಹಾಪ್ರಿಯವಾಗಿ, ವಾತಶ್ಲೇಷ್ಮ ದೋಷಗಳನ್ನು ಪರಿಹರಿಸಿ, ಬಲವನ್ನೂ, ಆರೋಗ್ಯವನ್ನೂ ಉಂಟುಮಾಡಿ ರತಿಪ್ರಿಯವನ್ನೂ, ಶರೀರಕಾಂತಿಯನ್ನೂ ಮಾಡುವುದು; ಅಲ್ಲದೆ ಅನ್ನದ ಮೇಲೆ ಅತ್ಯಾಪೇಕ್ಷೆಯೂ, ಪಿತ್ತಶಾಂತಿಯೂ ಆಗುವುದು.

ಪದ್ಮಪಾತ್ರೆಯ ಗುಣ.—ತಾವರೆ ಎಲೆಯಲ್ಲಿ ಊಟಮಾಡುವುದರಿಂದ ಅತಿ ರೂಕ್ಷಕಾರಿಯಾಗಿಯೂ, ವಾತರೋಗವನ್ನುಂಟುಮಾಡುವುದಾಗಿಯೂ, ಶ್ರೀಕರವಾಗಿಯೂ, ಹೊಟ್ಟೆಯಲ್ಲಿ ಹುಟ್ಟುವ ಸಕಲರೋಗಸಮೂಹವನ್ನೂ ಹೋಗಲಾಡಿಸುವುದು.

ತ್ಯಾಗದೆಲೆಯ ಗುಣ.—ಇದರಲ್ಲಿ ಊಟಮಾಡುವುದರಿಂದ ಶೋಕಹರವಾಗಿ, ವಾತರೋಗಹರವಾಗಿ, ವಿಷರೋಗದ ಹೆಚ್ಚಿಕೆಯನ್ನು ಕೆಡಿಸಿ, ಮುಖ್ಯವಾಗಿ ಸಕಲ ರೋಗಹರವಾಗಿರುವುದು.

ಆಲದೆಲೆಯ ಗುಣ —ಇದರಲ್ಲಿ ಊಟಮಾಡುವುದರಿಂದ ಶರೀರವು ಪುಷ್ಟಿಕರವಾಗಿ, ಮಹಾರುಚಿಕರವಾಗಿ, ಮನಸ್ಸಿಗೆಪೇಕಾಗಿ, ಕ್ರಿಮಿರೋಗವನ್ನು ಹೋಗಲಾಡಿಸಿ, ಅಗ್ನಿಯನ್ನುಂಟುಮಾಡಿ, ಶರೀರಕ್ಕೆ ಕಾಂತಿಯನ್ನುಂಟುಮಾಡಿ, ಕುಷ್ಠರೋಗಹರವಾಗಿ, ಕಣ್ಣಿನಲ್ಲಿ ಹುಟ್ಟಿದ ಸಕಲರೋಗಗಳನ್ನೂ ಭೇದಿಸಿ ತಂಪಾಗಿರುವುದು.

ಮುತ್ತುಗದೆಲೆಯ ಗುಣ.—ಇದರಲ್ಲಿ ಊಟಮಾಡುವುದರಿಂದ ಗುಲ್ಮರೋಗ, ಮಹೋದರರೋಗ, ಬಲಾಸವೆಂಬ ರೋಗ, ಕ್ರಿಮಿರೋಗ, ರಕ್ತರೋಗ, ಪಿತ್ತರೋಗ ಮುಂತಾದವುಗಳು ಹರವಾಗಿ, ರುಚಿಯನ್ನೂ, ಅಗ್ನಿಯನ್ನೂ ಉಂಟುಮಾಡುವುದು.

ಅತ್ತಿ ಎಲೆಯ ಗುಣ.—ಇದರಲ್ಲಿ ಊಟಮಾಡುವುದರಿಂದ ಚಿಬ್ಬು, ಬಂಗು, ಕುಷ್ಠ ಮೊದಲಾದ ರೋಗಗಳನ್ನು ಜಯಿಸಿ, ಪವಿತ್ರಕರವಾಗಿ, ಅಗ್ನಿಯನ್ನುಂಟುಮಾಡಿ, ಪಾಪವನ್ನೂ, ಮೂಲರೋಗವನ್ನೂ ನಾಶಮಾಡುವುದು.

ಮಾವಿನೆಲೆಯಗುಣ.—ಇದರಲ್ಲಿ ಊಟಮಾಡುವುದರಿಂದ ಸುಖಸೌಭಾಗ್ಯಗಳನ್ನುಂಟುಮಾಡಿ, ಸಮಸ್ತ ವಾತಪಿತ್ತಶ್ಲೇಷ್ಮ ದೋಷಗಳನ್ನು ಪರಿಹರಿಸಿ, ರುಚಿಯನ್ನುಂಟುಮಾಡುವುದು.

ಹಲಸಿನೆಲೆಯ ಗುಣ.—ಇದರಲ್ಲಿ ಊಟಮಾಡುವುದರಿಂದ ಮಹಾಪ್ರೀತಿಕರವಾಗಿ, ವಾತಪ್ರಕೋಪವನ್ನು ಕೆಡಿಸಿ, ಅಗ್ನಿಯನ್ನುಂಟುಮಾಡಿ, ಪಿತ್ತವನ್ನು ಕೆಡಿಸಿ, ಊಟಮಾಡುವುದಕ್ಕೆ ಯಾವಾಗಲೂ ಯೋಗ್ಯವಾಗಿ, ಶ್ಲೇಷ್ಮದಿಂದ ಹುಟ್ಟಿದ ಅತ್ಯಂತ ಘೋರವಾದ ರೋಗಗಳನ್ನು ಪರಿಹರಿಸುವುದು.

ಬಸರಿ ಎಲೆಯಗುಣ.—ಇದರಲ್ಲಿ ಊಟಮಾಡುವುದರಿಂದ ಶರೀರಕ್ಕೆ ಬಲವುಂಟಾಗಿ, ಕಾಂತಿಕರವಾಗಿ, ಹೊಟ್ಟೆಯಲ್ಲಿ ಹುಟ್ಟಿದ ಸಕಲರೋಗ ಸಮೂಹಂಗಳನ್ನೂ ನಾಶಮಾಡಿ ಕೋಪವನ್ನುಂಟುಮಾಡುವುದು.

ಅರ್ಕಪತ್ರ ಅಂದರೆ ಯಕ್ಕದೆಲೆಯಗುಣ.—ಇದರಲ್ಲಿ ಊಟಮಾಡುವುದರಿಂದ ಮಹಾತ್ರಾಣವನ್ನುಂಟುಮಾಡಿ, ಸಕಲವಾದ ಕ್ರಿಮಿರೋಗ, ಶರೀರದಲ್ಲಿ ಪ್ರಬಲವಾದ ಸಮಸ್ತರೋಗಮೊದಲಾದುವುಗಳನ್ನು ಹೋಗಲಾಡಿಸುವುದು.

ಕೊಡಸಿನೆಲೆಯಗುಣ.—ಇದರಲ್ಲಿ ಊಟಮಾಡುವುದರಿಂದ ಮಹಾದೀಪಕವಾಗಿ, ವಿಶೇಷವಾದ ಮಲಬದ್ಧರೋಗ, ಕುಷ್ಠರೋಗ ಮೊದಲಾದವುಗಳನ್ನು ಜಯಿಸಿ ಮೂಲರೋಗ, ಭಗಂಧರರೋಗ ಇವೇ ಮುಖ್ಯವಾದವುಗಳನ್ನು ಹೋಗ

ಲಾಡಿಸಿ, ಪಿತ್ತಪ್ರಕೋಪವನ್ನುಂಟುಮಾಡಿ, ಅಗ್ನಿಯನ್ನುಂಟುಮಾಡಿ, ನೇತ್ರಾನಂದ: ಕರವಾಗಿ ಪೈತ್ಯರೋಗವನ್ನು ಕೆಡಿಸಿ, ಸಮಸ್ತ ತಿಮಿರಗಳನ್ನೂ ನಾಶಮಾಡುವುದು.

ಅಡಕೆಹಾಳೆಯಗುಣ.—ಇದರಲ್ಲಿ ಊಟಮಾಡುವುದರಿಂದ ಪವಿತ್ರಕರವಾಗಿ, ಕಾಂತಿಯನ್ನುಂಟುಮಾಡಿ, ಅಗ್ನಿಪುಟವನ್ನು ಹೆಚ್ಚಿಸಿ, ನೇತ್ರಾನಂದಕರವಾಗಿ, ಪೈತ್ಯರೋಗವನ್ನು ಕೆಡಿಸಿ, ವಾತಪ್ರಕೋಪವನ್ನು ಶಮನಮಾಡಿ, ಸರ್ವಾಂಗ ವಾತರೋಗಂಗಳಂ ಹೋಗಲಾಡಿಸುವುದು.

ಕರಪಾತ್ರಯಗುಣ.—ಇದರಲ್ಲಿ ಊಟಮಾಡುವುದರಿಂದ ಯೋಗಿಗಳಿಗೆ ಮಹಾ ಐಶ್ವರ್ಯಕರವಾಗಿ, ವಿಷಹರವಾಗಿ, ರುಚಿಕರವಾಗಿ, ರಾಗದುಃಖಗಳನ್ನು ನಾಶಮಾಡುವುದು.

ಹಿಪ್ಪೆ ಎಲೆಯಗುಣ.—ಇದರಲ್ಲಿ ಊಟಮಾಡುವುದರಿಂದ ಪಿತ್ತಪ್ರಕೋಪವನ್ನು ಶಮನಮಾಡಿ, ಬಲಾಸರೋಗ, ದಾಹ, ವಾತರೋಗ ಮುಂತಾದವುಗಳನ್ನು ನಾಶಮಾಡಿ, ಕಾಂತಿಕರವಾಗಿ, ಪವಿತ್ರಕರವಾಗಿರುವುದು.

ನಾನಾಪತ್ರದಗುಣ.—ತಾಳೆಎಲೆ, ವಾಲೆ, ಶ್ರೀತಾಳೆಯೆಲೆ, ತೆಂಗಿನಯೆಲೆ ಮುಂತಾದವುಗಳ ಗುಣ.—ಇವುಗಳಲ್ಲಿ ಊಟಮಾಡುವುದರಿಂದ ಮೂತ್ರಕೃಚ್ಛ್ರ, ಮೇಹ, ದಾಹ ಮುಂತಾದ ರೋಗಗಳನ್ನು ಹೋಗಲಾಡಿಸುವುದು.

ಮರದಪಾತ್ರೆ, ಶಿಲಾಪಾತ್ರೆ, ಆಮೆವೋಟೆ, ಮಣ್ಣುಪಾತ್ರೆ, ಸೋರೇಬುರುಡೆ, ತೆಂಗಿನಕರಟ ಮುಂತಾದ ಪಾತ್ರೆಗಳಲ್ಲಿ ಭೋಜನವನ್ನುಮಾಡಿದರೆ, ದಾರಿದ್ರ್ಯ ಉಂಟಾಗುವುದು.

ಇಂತು ಸಕಲವೈದ್ಯ ಸಂಹಿತಾಸಾರಾರ್ಣವದೊಳ್
ಭೋಜನಪಾತ್ರಗುಣಪ್ರಶಂಸಾ ಸಂಪೂರ್ಣಂ.

---

## ಅಥ ಭೋಜನಪ್ರಶಂಸಾ—ಭೋಜನವಿಧಿ

ಊಟಮಾಡುವುದಕ್ಕೆ ಹೋದ ಸಮಯದಲ್ಲಿ ಸಪತ್ನಿಯಿಂದಲಂಕೃತವಾದ ಮನೆಯುಂಟಾದವನಾಗಿ, ಮಾಧ್ಯಾಹ್ನಿಕಾದಿ ನಿತ್ಯಸಂಧ್ಯಾಕರ್ಮಂಗಳನ್ನು ನಿಯಮಪೂರ್ವಕವಾಗಿ ಮಾಡಿದವನಾಗಿ, ದೇವತೆಗಳನ್ನೂ ಪಿತೃಗಳನ್ನೂ ಚೆನ್ನಾಗಿ ಪೂಜಿಸಿ, ಸಕಲವಾದ ಭೂಷಣಭೂಷಿತನಾಗಿ, ದರ್ಪಣಾವಲೋಕನವಂ ಮಾಡಿ, ಅಗ್ನಿ ಕಾಣಿಸಿದ್ದನ್ನು ತಿಳಿದು ನೋಡಿ ಭೋಜನಮಾಡಬೇಕೆಂದು ಬಲ್ಲವರವ ೬ತವು. ಒಬ್ಬನೇ ಭೋಜನಮಾಡುವುದರಿಂದ ತನಗೆಮಾತ್ರ ಶ್ರೀಕರವಾಗಿರುವುದು.

ಒಬ್ಬಿಬ್ಬರು ಕೂಡಿಕೊಂಡು ಸಹಪಂಕ್ತಿಯಲ್ಲಿ ಭೋಜನಮಾಡುವುದರಿಂದ ಶುಚಿಯಾದ ವ್ರತವುಳ್ಳವನಾಗಿ, ಅಲಂಕರಿಸಲ್ಪಟ್ಟವನಾಗಿ, ಸರ್ವಾಭೀಷ್ಟಂಗಳನ್ನು ಪಡೆವನೆಂಬುದೇ ಭೋಜನವಿಧಿಯು; ಪ್ರತ್ಯೇಕಜಾತಿ ಹತ್ತುಮಂದಿ ಕೂಡಿದಬಳಿಯಲ್ಲಿಯೂ, ಬೆಳ್ದಿಂಗಳಲ್ಲಿಯೂ, ದೀಪಹೊರತಾಗಿಯೂ, ಅಶುದ್ಧಸ್ಥಾನಗಳಲ್ಲಿಯೂ, ಕೊಳ್ಳೀಬೆಳಕಿನಲ್ಲಿಯೂ, ತಿರುಗಾಡುವಮಾರ್ಗದಲ್ಲಿಯೂ, ಮನೆಯ ಬಾಗಿಲುಬಳಿಯಲ್ಲಿಯೂ, ಸಾರಿಸಿ ಗುಡಿಸದೇ ಇರುವ ಬಳಿಯಲ್ಲಿಯೂ, ಮನೆಯ ಮೂಲೆಗಳಲ್ಲಿಯೂ, ಐಶ್ವರ್ಯವನ್ನು ಬಯಸುವವನು ಊಟಮಾಡಲಾಗದು.

## ಭೋಜನಕಾಲ ನಿಯಮ

ಜಾವಕ್ಕೆ ಮೊದಲೇ ಊಟಮಾಡದೆ, ಎರಡುಜಾವ ಮೀರಿದ ಮೇಲೆಯೂ, ರಾತ್ರಿಯಲ್ಲಿ ಜಾವ ಮೀರಿದಮೇಲೆಯೂ ಊಟಮಾಡದೆ, ಹಗಲು ಜಾವ ಮೀರಿದ ಮೇಲೆಯೂ ರಾತ್ರಿ ಜಾವ ಮೀರದೆಯೂ ಭೋಜನವನ್ನು ಮಾಡಿದರೆ ಸುಖಿಯಾಗಿರುವನು.

ಭೋಜನಪ್ರಮಾಣ.—ಅನ್ನ ಎರಡುಪಾಲು, ಮೇಲೋಗರ, ಪಾನದ್ರವ್ಯಸಹ ಒಂದುಪಾಲು; ವಾತಪಿತ್ತಶ್ಲೇಷ್ಮಗಳ ಸಂಚಾರನಿಮಿತ್ತವಾಗಿ ನಾಲ್ಕನೇ ಪಾಲು ಬಿಡಬೇಕೆಂಬುದೇ ಭೋಜನನಿಯಮವು.

ಭೋಜನಗುಣ.—ಭೋಜನವನ್ನು ಮಾಡುವುದರಿಂದ ದೇಹಕ್ಕೆ ಸಕಲ ಶೋಭನವನ್ನು ಕೊಡುವುದು, ಬುದ್ಧಿ, ಕಾಂತಿ, ಬಲ, ವೀರ್ಯವೃದ್ಧಿ ಶರೀರ ಪುಷ್ಟಿ ಇವೆಲ್ಲಾ ಉಂಟಾಗುವುವು, ಶೋಕಸಂತಾಪ ಶಮನವಾಗುವುವು, ಸಕಲ ರೋಗಉಂಟಾದವರಿಗೂ ಹಿತಕರವಾಗಿರುವುದು. ಒಪ್ಪತ್ತು ಊಟಮಾಡುವುದರಿಂದ ಬುದ್ಧಿಯೂ, ಇಂದ್ರಿಯವೂ ಬಲವೂ ಕ್ಷಯವಾಗಿ, ಅಗ್ನಿಯೂ ನಿದ್ರೆಯೂ ಸ್ವಲ್ಪವಾಗಿ ವಾತಪಿತ್ತಪ್ರಕೋಪವಾಗುವುದು; ಆದರೂ ಆರೋಗ್ಯವಾಗಿರುವುದು. ಊಟದಲ್ಲಿ ಮೊದಲು ಮಧುರರಸಂಗಳನ್ನೂ ಮಧ್ಯದಲ್ಲಿ ಕಾರಕಹಿವಸ್ತುಗಳನ್ನೂ, ಅಂತ್ಯದಲ್ಲಿ ಹುಳಿಮೊದಲಾದ ಮಿಶ್ರದ್ರವ್ಯಗಳನ್ನೂ ಭುಂಜಿಸಿದರೆ ಶೀಘ್ರವಾಗಿ ಜೀರ್ಣಿಸಿ ಬಲವನ್ನುಂಟುಮಾಡುವುದು. ವಿಶೇಷದಾಹ ಉಂಟಾದವನು ಊಟಮಾಡಿ ನೀರುಕುಡಿದೇನು ಎಂದನ್ನದೆ ಮುಂಚಿತವಾಗಿ ದಾಹಶಮನಮಾಡಿಕೊಂಡು ಭೋಜನವಂ ಮಾಡದೆ ಇದ್ದರೆ ಗುಲ್ಮರೋಗಹುಟ್ಟುವುದು. ಹಸಿದಿರುವವನು ಭೋಜನಮಾಡದೆ ಭೋಜನಕ್ಕೆ ಬದಲಾಗಿ ಉದಕಪಾನವನ್ನು ಮಾಡಿದಲ್ಲಿ ಭಗಂದರ ರೋಗ ಉಂಟಾಗುವುದು.

ಅತ್ಯಾಹಾರದಿಂದ ಬುದ್ಧಿಯೂ, ಬಲವೂ, ಇಂದ್ರಿಯವೂ ಕಡಿಮೆಯಾಗುವುವು; ಸ್ವಲ್ಪವಾಗಿ ಆಹಾರ ತೆಗದುಕೊಳ್ಳುವುದರಿಂದ ಬಲಕ್ಷಯವಾಗುವುದು,

ಆದುದರಿಂದ ಯಥಾಶಕ್ತಿಯರಿತು ಮಿತವಾಗಿ, ಜೀರ್ಣಿಸುವ ರೀತಿಯನ್ನರಿತು ಭೋಜನ ಮಾಡುವಂಥಾವನೇ ಬುದ್ಧಿವಂತನು. ಭೋಜನದಲ್ಲಿ ಹೆಚ್ಚಾಗಿ ನೀರು ತೆಗೆದುಕೊಳ್ಳುವುದರಿಂದ, ಆಹಾರ ಜೀರ್ಣಿಸದೆ, ನೀರು ಹೊರತಾಗಿ ಭೋಜನವಂ ಮಾಡಿದ್ದೇ ದೋಷರೂಪವಾಗಿ ರೋಗ ಹುಟ್ಟುವುದಾದಕಾರಣ, ಅಗ್ನಿಪ್ರಬಲವಾಗುವ ನಿಮಿತ್ತ, ಭೋಜನದಲ್ಲಿ ಆಡಿಗಡಿಗೆ ನೀರುತೆಗೆದುಕೊಳ್ಳಬೇಕು. ರಾತ್ರಿಯಲ್ಲಿಯೂ, ಭೋಜನಕಾಲದಲ್ಲಿಯೂ, ಉದಕಪಾನವಂ ಮಾಡುವುದರಿಂದ, ಶರೀರಕ್ಕೆ ಹಿತವಾಗಿ, ತೆಗೆದುಕೊಂಡ ಆಹಾರವನ್ನು ಜೀರ್ಣಮಾಡುವುದು. ಉದಯಕ್ಕೆ ಮೊದಲೇ ನೀರುತೆಗೆದುಕೊಳ್ಳುವುದರಿಂದ ಸಮಸ್ತ ರೋಗಗಳೂ ಕೆಡುವುವು, ಹಗಲು ಊಟಮಾಡಿದಮೇಲೆ ನೀರು ತೆಗೆದುಕೊಂಡರೆ, ಶರೀರಕ್ಕೆ ಪುಷ್ಟಿಯೂ, ಬಲವೂ ಉಂಟಾಗುವುವು. ಭೋಜನಕ್ಕೆ ಮೊದಲೇ ನೀರುತೆಗೆದುಕೊಂಡರೆ, ಶರೀರಕ್ಕೆ ಬಲವಿಲ್ಲದೆ ಅಗ್ನಿಗೂ ಬಲವಿಲ್ಲದೆ ಇರುವುದು. ಊಟದ ಮಧ್ಯದಲ್ಲಿ ನೀರುತೆಗೆದುಕೊಂಡರೆ ಅಗ್ನಿಗೂ ಶರೀರಕ್ಕೂ ಮಹಾಬಲವುಂಟಾಗುವುದು. ಭೋಜನಸಮಯ್ಯದಲ್ಲಿ ಮೊದಲು ಘೃತಪೋಷಣಮಾಡುವುದರಿಂದ ಅಗ್ನಿಪಟು ಉಂಟಾಗಿ ಎಲ್ಲಾಕಾಲದಲ್ಲಿಯೂ ಆರೋಗ್ಯಕರವಾಗಿರುವುದು ; ಅಂಗೈ ತುಂಬ ತುಂಬಿದ ಹಸುವಿನ ತುಪವನ್ನು ಊಟಕ್ಕೆ ಮೊದಲೇ ಆಪೋಶನವಾಗಿ ತೆಗೆದುಕೊಳ್ಳಬೇಕು, ಹಸುವಿನಹಾಲ್ಪು ಹಸುವಿನತುಪ್ಪ ಮುಂತಾದವುಗಳನ್ನು ಆ ಹೊತ್ತುಕರೆದು ಕಡೆದುದನ್ನೇ ಭೋಜನ ಮಾಡಬೇಕು.

## ಅನ್ನಾದಿ ದ್ರವ್ಯಗುಣಂ.

ರೊಟ್ಟಿ ಕಡುಬು ಮುಂತಾದ ಹಿಟ್ಟಿನ ಆಹಾರವು ಅನ್ನಕ್ಕಿಂತಲೂ, ಎಂಟಮಡಿ ಬಲೀಯವಾದ ಆಹಾರ, ಹಿಟ್ಟಿನಲ್ಲಿಮಾಡಿದ ಆಹಾರವಸ್ತುಗಳಿಗಿಂತಲೂ ಹಾಲು ಎಂಟುಮಡಿ ಬಲೀಯವಾದ ಆಹಾರ,ಹಾಲಿಗಿಂತಲೂ ಉದ್ದಿನಲ್ಲಿ ಮಾಡಿದ ಭಕ್ಷ್ಯಗಳು ಎಂಟುಮಡಿ ಬಲವಾದವುಗಳು, ಉದ್ದಿನ ಭಕ್ಷ್ಯಗಳಿಗಿಂತಲೂ, ಹಸುವಿನ ತುಪ್ಪವು ಎಂಟುಮಡಿ ಬಲವಾದದ್ದು. ರಾತ್ರಿಯ ಭೋಜನದಲ್ಲಿ ಶುಂಠಿಯನ್ನೂ ಮೊಸರನ್ನೂ, ಜೇನುತುಪ್ಪವನ್ನೂ, ಬೆಲ್ಲವನ್ನೂ, ಎಣ್ಣೆಯನ್ನೂ ಸಮಸ್ತವಾದ, ಶಾಕವನ್ನೂ, ಕಹಿವಸ್ತುಗಳನ್ನೂ, ರೂಕ್ಷಾಹಾರಗಳನ್ನೂ ಬಿಡದೆ ತೆಗೆದುಕೊಳ್ಳುವುದರಿಂದ ಶರೀರಕ್ಕೆ ಅತಿ ರೂಕ್ಷಕರವಾಗಿ ಆಯುಃಕ್ಷೀಣವಾಗಿ ನಿತ್ರಾಣವಾಗುವುದು. ಅಸ್ತಮಯಕಾಲದ ಬಿಸಿಲೂ ಯಜ್ಞೇಶ್ವರಾರ್ಪಿತ ಮಂತ್ರವಶ್ಯಾದ ಹೋಮದ ಹೊಗೆಯೂ, ಯವ್ವನಸ್ತ್ರೀ ಸಂಗವೂ, ನಿರ್ಮಲೋದಕವೂ, ರಾತ್ರಿಯಲ್ಲಿ ಹಸುವಿನಹಾಲು ಕುಡಿಯುವುದೂ, ಇವಿಷ್ಟೂ ದಿನದಿನದಲ್ಲಿಯೂ ಆಯುರಭಿವೃದ್ಧಿಯನ್ನುಂಟುಮಾಡುವುವು. ಆದರೆ ಉದಯಕಾಲದ ಬಿಸಿಲೂ, ಶ್ಮಶಾನದ ಹೊಗೆಯೂ, ಮುಪ್ಪಿನ ಸ್ತ್ರೀ ಸಂಗವೂ, ಹಳೇನೀರಿನ ಪಾನವೂ, ರಾತ್ರಿಯಲ್ಲಿ

ಮೊಸರ ಭೋಜನವೂ ದಿನದಿನದಲ್ಲಿಯೂ, ಆಯುಃಕ್ಷೀಣಮಾಡುವುವು. ಆಗತಾನೆ ತಂದ ಮೀನಿನ ಮಾಂಸವೂ, ಆಗ ಕಾಸಿದ ತುಪ್ಪವೂ, ಆಗ ಕರೆದು ಕಾಸಿದ ಹಾಲೂ, ಶತಪಥವ ನಡೆವುದೂ, ಊಟದಮೇಲೆ ಮಿತಿಯಾಗಿ ತಿರುಗಾಡುವುದೂ, ಯೌವ್ವನ ಸ್ತ್ರೀಸಂಗವೂ, ಜಾಂಗಲಮಾಂಸವೂ, ಇವೆಲ್ಲಾ ಸದ್ಯಃ ಬಲವನ್ನುಂಟು ಮಾಡುವುವೆಂದರಿವುದು. ಆದರೆ ಒಣಗಿದ ಮೀನಿನ ಮಾಂಸವೂ, ವೃದ್ಧಸ್ತ್ರೀ ಸಂಗವೂ, ಆಗ ಹೆಪ್ಪುಹಾಕಿದ ಮೊಸರೂ, ಹಳಸಿದ ಅನ್ನಪಾನಾದಿಗಳೂ, ಒಣಗಿದ ಶಾಕಪಾಕಗಳೂ, ಈ ಆರೂ ಸದ್ಯಃ ಬಲಹರವಂ ಮಾಡುವುವೆಂದರಿವುದು. ಆಯುಷ್ಯವನ್ನಪೇಕ್ಷಿಸುವವನು ಹಸುವಿನ ತುಪ್ಪವನ್ನೂ, ರೋಗ ಬಯಸುವವನು ಬೆಲ್ಲವನ್ನೂ, ಮೃತ್ಯುವಿಗೆ ಒಳಗಾಗುವವನು ರೂಕ್ಷಾದಿ ವಿದಾಹದ್ರವ್ಯಗಳನ್ನೂ, ಆರೋಗ್ಯವನ್ನು ಅಪೇಕ್ಷಿಸುವವನು, ಕಹಿ, ಕಾರದ್ರವ್ಯಗಳನ್ನೂ, ಬಲವನ್ನೂ ಯೌವ್ವನವನ್ನೂ ಇಚ್ಛೈಸುವವನು ಮಾಂಸವನ್ನೂ ಹಾಲನ್ನೂ ಆಹಾರನಿಯಮವಾಗಿ ಈ ಮರ್ಯಾದೆಯಲ್ಲಿ ನಡಿಸಬೇಕು. ಶರತ್ಕಾಲದಲ್ಲಿ ಉಂಟಾದ ನಿರ್ಮಲೋದಕವಂ ಪಾನಮಾಡುವದರಿಂದಲೂ, ಹೇಮಂತರುತುವಿನಲ್ಲಿ ಉಂಟಾದ ನೂತನಧಾನ್ಯಂಗಳನ್ನು ಆಹಾರವಾಗಿ ತೆಗೆದುಕೊಂಡ ಭೋಜನದಿಂದಲೂ, ಗ್ರೀಷ್ಮರ್ತುವಿನಲ್ಲಿ ಮಾಡುವ ನಿದ್ರೆಯಿಂದಲೂ, ಸಕಲ ಜೀವಿಗಳು ಜೀವಿಸುವರು. ಊಟಮಾಡಿದನಂತರ ಸ್ವಲ್ಪಹೊತ್ತು ಬೆಂಕಿಯ ಸಮೀಪದಲ್ಲಿದ್ದು, ಆಮೇಲೆ ಎದ್ದುಬಂದು ಮೆಲ್ಲಗೆ ಶತಪಥ ನಡೆದು ನಿಯಮಕಾಲದಲ್ಲಿ ಎಡದ ಮಗ್ಗುಲಾಗಿ ನಿದ್ರೆಮಾಡಲು ಶರೀರಕ್ಕೆ ಹಿತವಾಗಿರುವುದು. ಭೋಜನಾನಂತರ ಅಗಸ್ತ್ಯರನ್ನೂ, ಕುಂಭಕರ್ಣನನ್ನೂ, ಬನ್ನಿಮರವನ್ನೂ ಬಡಬಾಗ್ನಿಯನ್ನೂ ಭೀಮಸೇನನನ್ನೂ ತೆಗೆದುಕೊಂಡಾಹಾರವು ಜೀರ್ಣಕ್ಕೆ ಬರುವ ನಿಮಿತ್ತವಾಗಿ ಸ್ಮರಣೆ ಮಾಡಬೇಕು.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೊಳ್
ಭೋಜನವಿಧಿ ಸಂಪೂರ್ಣಂ.

---

## ಅಥ ತಾಂಬೂಲವಿಧಿ.

ದೇವರುಗಳಿಗೂ, ಬ್ರಾಹ್ಮಣರಿಗೂ, ಮುತ್ತೈದೆಯರಿಗೂ ಮೊದಲು ಅಡಿಕೆ ಎಲೆಯಂ ಕೊಟ್ಟು, ಆಮೇಲೆ ಅತಿಪುಣ್ಯವಂತರನ್ನು ಸ್ಮರಣೆಮಾಡಿ, ತನ್ನಿಷ್ಟದೇವರಿಗೆ ಸಮರ್ಪಿಸಿದ ತಾಂಬೂಲವನ್ನು ತಾನು ಆಚರಿಸುವುದು. ಉದಯಾದಿಯಾಗಿ ಊಟಮಾಡುವಷ್ಟರೊಳಗೆ ತಾಂಬೂಲ ಏಳು; ಊಟವಾದ ಮೇಲೆ ಐದು; ರಾತ್ರಿ ಊಟವಾದ ಮೇಲೆ ಎರಡು ಅಥವಾ ಮೂರು; ಈ ಮರ್ಯಾದೆಯಲ್ಲಿ ದಿನ

ಒಂದಕ್ಕೆ ಹದಿನೈದು ತಾಂಬೂಲವನ್ನು ಮಾಡಬೇಕೆಂಬ ವಿಧಿಯಿರುವುದು ; ಇದರಲ್ಲಿ ಅವರವರ ಅಭ್ಯಾಸವಿದ್ದರೀತಿಯಲ್ಲಿಯೂ, ದೇಶಕಾಲವಯೋಧರ್ಮವಿದ್ದಂತೆಯೂ, ತನ್ನ ಹೆಂಡತಿಯು ಸಮೀಪದಲ್ಲಿರುವಾಗಲೂ, ಯುದ್ಧಮಧ್ಯದಲ್ಲಿಯೂ, ಧೊರೆಗಳ ಸಭೆಯಲ್ಲಿಯೂ, ವಿದ್ವಜ್ಜನಮಧ್ಯದಲ್ಲಿಯೂ ತಾಂಬೂಲ ಮಾಡದೇ ಇರುವವನೇ ಎರಡುಕಾಲಿನ ಪಶುವೆನಿಸಿಕೊಂಬನು. ಮುಂಚಿತವಾಗಿ ಬಾಯಿಯಲ್ಲಿ ವೀಳ್ಯದೆ ಲೆಯ ಮಡುಪುಯಿಲ್ಲದೆ ಅಡಿಕೆಯನ್ನು ಕಡಿದು ಆಮೇಲೆ ಅಡಿಕೆಸಂಗಡ ವೀಳೇದಲೆ ಯನ್ನೂ, ಸುಣ್ಣವನ್ನೂ ಯಾವ ಪುರುಷನು ಆಗಿಯುತ್ತಾನೋ ಅವನು ಏಳು ಜನ್ಮಪರಿಯಂತರಕ್ಕೂ ದರಿದ್ರನಾಗಿ, ಜನ್ಮಜನ್ಮಂಗಳಲ್ಲಿಯೂ, ಶರೀರಾಂತ್ಯದ ಲ್ಲಿಯೂ ವಿಷ್ಣುಸ್ಮರಣೆ ಇಲ್ಲದೆ ಹೋಗುವನೆಂದರಿವುದು.

ತಾಂಬೂಲಪರಿಮಾಣವು ಈರೀತಿ.—ಒಂದಡಕೆಗೆ ಐದೆಲೆ, ಅವರೆಯಷ್ಟು ಸುಣ್ಣ, ಈ ಪ್ರಮಾಣಕ್ಕೆ ಸರಿಯಾಗಿ ತಾಂಬೂಲವನ್ನು ಮಾಡುವುದಲ್ಲದೆ, ಈ ಕ್ರಮ ಮೀರಿ ತಾಂಬೂಲ ಮಾಡಲಾಗದು ಉದಯಕಾಲದಲ್ಲಿ ಅಡಿಕೆ ಹೆಚ್ಚಾಗಿಯೂ, ಊಟವಾದ ಮೇಲೆ ಸುಣ್ಣ ಹೆಚ್ಚಾಗಿಯೂ, ರಾತ್ರಿಯಲ್ಲಿ ಅಡಿಕೆ, ಎಲೆ ಸುಣ್ಣಸಹ, ಈ ಮೂರೂ ಸಮಾನವಾಗಿ ಈ ಪ್ರಕಾರದಲ್ಲಿ ತಾಂಬೂಲವಂ ಮಾಡುವುದರಿಂದ ಶರೀರಕ್ಕೆ ಆರೋಗ್ಯವೂ, ಬಲವೂ, ವೀರ್ಯವೃದ್ಧಿಯೂ, ಕ್ರಮಾಲಂಕಾರವಾಗಿ ಉಂಟಾಗುವುದು. ಸುಣ್ಣವೂ, ಅಡಿಕೆಯೂ, ವೀಳೆದೆಲೆಯೂ, ಸಮಾನವಾಗಿ ವೀಳ್ಯವನ್ನು ಮಾಡಿದರೆ, ಬಾಯಿ ಕೆಂಪಾಗಿ, ಸುಗಂಧವಾಗಿರುವುದು ; ಅಡಿಕೆಯೂ ಸುಣ್ಣವೂ ಹೆಚ್ಚಾದರೆ ಬಾಯಿಯ ಸುಗಂಧವು ಹೋಗಿ ದುರ್ಗಂಧವುಂಟಾಗುವುದು, ಅಡಿಕೆಯೊಂದೇ ಹೆಚ್ಚಿದರೆ ಬಾಯಿಗೆ ಪರಿಮಳವುಂಟಾಗುವುದು. ತಾಂಬೂಲರಸ ಸೇವನೆಯಿಂದ ದಂತಗಳು ಸ್ಥಿರವಾಗಿ, ಆರೋಗ್ಯವನ್ನುಂಟುಮಾಡಿಕೊಡುತ್ತ, ಮಹಾರುಚಿಕರವಾಗಿ, ಸ್ತ್ರೀಸಂಗಕ್ಕೆ ಮಹಾಬಲವನ್ನೂ, ಹರ್ಷವನ್ನೂ ಉಂಟು ಮಾಡುತ್ತ, ವಾತಹರವಾಗಿ, ಆಹ್ಲಾದಕರವಾಗಿ, ಮಂಡೆಕೂದಲುಗಳಿಗೆ ವರ್ಣ ವನ್ನು ಕೊಡುತ್ತ, ಬಲಕರವಾಗಿ, ಮುಪ್ಪನ್ನು ಹೋಗಲಾಡಿಸಿ, ಯವ್ವನವನ್ನು ಕೊಡುವ ರಸಾಯನಶ್ರೇಷ್ಠವಾಗಿ, ಮೇಢ್ರಸ್ಥಾನ, ಗುದಸ್ಥಾನ, ಶರೀರದ ಸಂದು, ಮುಂತಾದ ಸ್ಥಳಗಳಲ್ಲಿ ಹುಟ್ಟುವ ರೋಗವನ್ನಾದ್ಯಂತ ಹೋಗಲಾಡಿಸುವುದು. ಸ್ತ್ರೀಯರುಗಳಿಗೆ ಕಾಮತಂತ್ರಕ್ಕೆ ಅಧಿಕಾರವೂ, ಆದಿಕಾರಣವೂ ಆದ ಮೊದಲನೇ ವಸ್ತುವಾಗಿ, ಮಂದಾಗ್ನಿಯನ್ನು ಹೆಚ್ಚಿಸುವುದಾಗಿ, ಶ್ಲೇಷ್ಮ, ವಾತ, ಬಹಳವಾದ ಕ್ರಿಮಿರೋಗ, ವಿಷರೋಗ, ಗುದರೋಗ, ಗುಲ್ಮರೋಗ, ಹೊಟ್ಟೇಶೂಲೆ ಮೊದ ಲಾದ ಸಕಲ ರೋಗಗಳನ್ನೂ ನಾಶಮಾಡುವುದೇ ಅಡಿಕೆ ವೀಳೆದೆಲೆಗುಣ.

## ತಾಂಬೂಲ ಪ್ರಭಾವ.

ತಾಂಬೂಲವನ್ನುಪಯೋಗಿಸುವುದರಿಂದ ಅಜೀರ್ಣ, ಶೂಲೆ ಹರವಾಗಿ,

ಸಕಲ ಕ್ರಿಮಿರೋಗಗಳನ್ನು ಕೆಡಿಸಿ, ಶರೀರಕ್ಕೆ ಉಷ್ಣಕರವಾಗಿ, ಮುಖಕ್ಕೆ ಮಹಾ ಪರಿಮಳವಾಗಿ, ಹಲ್ಲುಗಳಿಗೆ ಕೆಂಪುವರ್ಣವನ್ನುಕೊಟ್ಟು, ಕಫ ಮೊದಲಾಗಿ, ನಿತ್ಯದಲ್ಲಿಯೂ ಆಚರಿಸಿಕೊಂಡುಬಂದರೆ ಮನ್ಮಥಸಮಾನವಾದ ರೂಪುಂಟಾಗುವುದು.

ತಾಂಬೂಲ ವರ್ಜರು.—ಕೃಶರೋಗದವರೂ, ಗಾಯದಿಂದಾದ ಕ್ಷಯರೋಗದವರೂ, ಬಾಯಿಯಲ್ಲಿ ಮೂಗಿನಲ್ಲಿ ರಕ್ತಬೀಳುವ ರೋಗದವರೂ, ಶೋಭೆ, ಜ್ವರವುಳ್ಳವರೂ, ಮೂರ್ಛೆರೋಗ, ಮೇಹರೋಗ, ಕ್ಷೀಣರೋಗ, ಮೂರುವಿಧವಾದ ವಿಷರೋಗದವರೂ, ರೋಗ ಕಾಣಿಸಿದ ಪ್ರಥಮಕಾಲದಲ್ಲಿಯೂ, ಪಾಂಡುರೋಗವುಳ್ಳವರೂ, ಹಸಿವಿನಿಂದಕಂಗೆಟ್ಟಿರುವವರೂ, ತಾಂಬೂಲವನ್ನುಪಯೋಗಿಸಬಾರದೆಂದರಿವುದು.

ಕಹಿಯಾಗಿ, ಶ್ಲೇಷ್ಮವಾತ ಇವೆರಡರ ದೋಷದಿಂದಾದ ರೋಗಗಳನ್ನು ಪರಿಹರಿಸುವ ಪಥ್ಯಕರವಾಗಿ ರುಚಿಯಾಗಿ ದೀಪನವನ್ನುಂಟುಮಾಡುವ, ಶರೀರಕ್ಕೆ ಕಾಂತಿಯನ್ನು ಕೊಡುವ, ಹೊಟ್ಟೆಶೂಲೆಯನ್ನು ಕೆಡಿಸುವ ನೂತನವಾಗಿರುವ, ಬಿಳುಪಾದ ವೀಳೆದೆಲೆಯನ್ನು ಆವನು ಭೋಗಿಸುವನೋ ಅವನೇ ಮನುಷ್ಯಶ್ರೇಷ್ಠನು.

ವಾತಪಿತ್ತಶ್ಲೇಷ್ಮಗಳಿಂದ ಹುಟ್ಟಿದ ರೋಗಗಳನ್ನು ನಾಶಮಾಡಿ ರುಚಿಪ್ರದವಾಗಿರುವುದೇ ಪರಿಮಳಕಟ್ಟಿದ ಅಡಿಕೆಯಗುಣ.

ಕಲ್ಲಿನಿಂದಾದ ಸುಣ್ಣವು ಶ್ಲೇಷ್ಮಹರವಾಗಿ ವಾತಪಿತ್ತಪ್ರಕೋಪವಾಗಿ, ಅತಿತೀಕ್ಷಣವಾಗಿರುವುದು. ಕಬ್ಬಿಣದ ಭರಣಿಯಲ್ಲಿ ತುಂಬಿದ ಸುಣ್ಣದಿಂದ ಶ್ವಾಸರೋಗ, ಶ್ಲೇಷ್ಮರೋಗ, ಶೋಭೆರೋಗ ಮೊದಲಾದುವು ಹರವಾಗುವುದಲ್ಲದೆ, ಕುಷ್ಠರೋಗ, ಮೇಹರೋಗ, ವಿಷರೋಗ, ಗೆಂಡೆ ಮುಂತಾದರೋಗಗಳೂ ಪರಿಹಾರವಾಗುವುವು. ಚಿನ್ನದ ಭರಣಿಯಲ್ಲಿ ತುಂಬಿದ ಸುಣ್ಣದಿಂದ ಸಕಲರೋಗವೂ ಹರವಾಗಿ, ಪಿತ್ತಕರವಾಗಿರುವುದು.

ತಾಂಬೂಲ ನಿಯಮ.—ನಿದ್ದೆಮಾಡಿ ಎದ್ದಾಗಲೂ, ಊಟಮಾಡಿದಮೇಲೆಯೂ, ಬಳಲಿಬಂದಾಗಲೂ, ದಾಹಹತ್ತಿದಾಗಲೂ, ಸ್ನಾನಮಾಡಿದಾಗಲೂ, ವಾಂತಿಯಾದಾಗಲೂ, ಸ್ತ್ರೀಸಂಗವಾದಾಗಲೂ, ಈ ಕೃತ್ಯಗಳಲ್ಲಿ ತಾಂಬೂಲ ಉಪಯೋಗಿಸಬೇಕಾದರೆ ತತ್ಕಾಲಸನ್ನಿಧಿಯಲ್ಲಿಯೇ ವೀಳ್ಯವಂ ಮಾಡದೆ, ಒಂದು ಗಳಿಗೆಯಮೇಲೆ ವೀಳ್ಯವಂ ಮಾಡಬೇಕು.

ತಾಂಬೂಲ ದಾನಕಾಲ—ಸಭಾಪ್ರವೇಶಕ್ಕೆ ಹೋಗುವ ಕಾಲದಲ್ಲಿಯೂ, ಅಧ್ಯಯನಾದಿ ವಿದ್ಯಾಪ್ರಾರಂಭ ಕಾಲದಲ್ಲಿಯೂ ವಿವಾಹದಲ್ಲಿಯೂ, ಯಜ್ಞದಲ್ಲಿಯೂ, ಕಾಳಗಕ್ಕೆ ಹೊರಡುವಾಗಲೂ, ಮಲಗುವುದಕ್ಕೆ ಹೋಗುವಲ್ಲಿಯೂ, ಗ್ರಾಮಾಂತರ ಗಮನದಲ್ಲಿಯೂ, ಅಗ್ರಹಾರಾದಿ ಗ್ರಾಮಪ್ರತಿಷ್ಠೆಯಲ್ಲಿಯೂ, ಉಪ

ನಯನಾದಿ ಬ್ರಾಹ್ಮಣ ಕಾರ್ಯಗಳಲ್ಲಿಯೂ, ದೇವತೋತ್ಸವ, ತತ್ಸಮಾರಾಧನೆ, ತತ್ಪೂಜಾಕಾಲಗಳಲ್ಲಿಯೂ ತಾಂಬೂಲಗಳನ್ನು ಬ್ರಾಹ್ಮಣರುಗಳಿಗೆ ದಾನಮಾಡ ಬೇಕೆಂದು ಮುಖ್ಯವಾಗಿ ವೇದಶಾಸ್ತ್ರಗಳಲ್ಲಿ ಹೇಳಿರುವುದು.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೋಳ್
ತಾಂಬೂಲವಿಧಿ ಸಂಪೂರ್ಣಂ.

---

## ಅಥ ಆರೋಹಣ ಗುಣವಿಧಿ.

ರಥಾರೋಹಣ ಗುಣ :—ರಥಾರೋಹಣಮಾಡಿದ್ದಲ್ಲಿ ಜನಗಳಿಗೆ ಮಹಾ ಮಂಗಳಕರವಾಗಿ ಶರೀರವನ್ನಲ್ಲೋಲಕಲ್ಲೋಲ ಮಾಡುತ್ತ ಅತಿದಾಹ ತಾಪಗಳ ನ್ನುಂಟುಮಾಡಿ ಹೆಚ್ಚಾಗಿರುವ ಶ್ಲೇಷ್ಮದೋಷವನ್ನು ಕೆಡಿಸಿ, ಪಿತ್ತಕಾರಣವಾಗಿ ಅಗ್ನಿಯನ್ನುಂಟುಮಾಡಿ ದೇಹಧರ್ಮಗಳಿಗೂ, ಅಸ್ಥಿಗಳಿಗೂ, ದುಃಖವನ್ನುಂಟು ಮಾಡುವುದು.

ಗಜಾರೋಹಣ ಗುಣ :—ಶ್ರೇಷ್ಠವಾದ ಕೊಂಬುಗಳುಳ್ಳ, ಅಲಂಕರಿಸಿದ ಭೂಷಣಂಗಳಿಂದೊಪ್ಪುವ ಆನೆಯನ್ನು ಏರುವುದರಿಂದ ಸಾಮ್ರಾಜ್ಯ ಲಕ್ಷ್ಮೀ ದೇವಿಗೆ ಆವಾಸಸ್ಥಾನವಾಗಿರುವ ಹಾಗೂ, ಮಿತಿಯಿಲ್ಲದಿರುವ, ಕೀರ್ತಿಗೆ ಕಾರಣ ವಾಗಿಯೂ, ಶರೀರದಲ್ಲಿರುವ ಶ್ಲೇಷ್ಮದೋಷವನ್ನು ಕೆಡಿಸಿ ಜಠರಾಗ್ನಿಯನ್ನು ಪ್ರಬಲಮಾಡುವುದು.

ಅಶ್ವಾರೋಹಣ ಗುಣ :—ಅಶ್ವವನ್ನಾರೋಹಣಮಾಡಿದ್ದಲ್ಲಿ ಶರೀರಕ್ಕೆ ಅಗ್ನಿ ಯನ್ನುಂಟುಮಾಡಿ ಬಲವನ್ನೂ, ಯವ್ವನವನ್ನೂ ಹೆಚ್ಚಿಸಿ, ದುರ್ಮಾರ್ಗಂಗಳಂ ಕೆಡಿಸಿ ಶ್ಲೇಷ್ಮದೋಷವನ್ನು ಹೋಗಲಾಡಿಸಿ, ಬೆವರನ್ನೂ ರೋಮಾಂಚವನ್ನೂ, ಉಂಟುಮಾಡಿ, ಆ ಕ್ಷಣ ಶರೀರಕ್ಕೆ ಕಾಂತಿಯನ್ನುಂಟುಮಾಡಿ ಕೀರ್ತಿಗೂ, ಐಶ್ವ ರ್ಯಕ್ಕೂ, ಕಾರಣವಾಗಿ ಭಗಂದರವ್ಯಾಧಿಯನ್ನು ಹುಟ್ಟಿಸುವುದಾಗಿ, ರಕ್ತಪಿತ್ತ ವ್ಯಾಧಿಗೆ ಆಸ್ಪದವಾಗಿರುವುದು.

ಅಂದಳವನ್ನೇರಿಕೊಂಡು ತಿರುಗಾಡುವುದರಿಂದ ಆಯುಸ್ಸು ಹೆಚ್ಚಿ ಮಹಾ ಗಂಭೀರಕರವಾಗಿ, ವಿಶೇಷಬುದ್ಧಿಯನ್ನುಂಟುಮಾಡಿ ಐಶ್ವರ್ಯವನ್ನು ಕೊಡುತ್ತ ಕೀರ್ತಿಯಿಂದ ಲಾಲಿಸಲ್ಪಟ್ಟು ಬಹು ಸಿದ್ಧಿಕರವಾಗಿರುವುದು. ಪಲ್ಲಕ್ಕಿಯನ್ನು ಏರುವುದರಿಂದ ಮಂಗಳಪ್ರದವಾಗಿ ನವರತ್ನ, ಹೆಚ್ಚುಬಣ್ಣದ ಚಿನ್ನಮುಂತಾದವು ಗಳಿಂದ ಪ್ರಸಿದ್ಧವಾಗಿ ವಾತಪಿತ್ತಶ್ಲೇಷ್ಮದೋಷಂಗಳಂ ಕೆಡಿಸಿ ಮನೋಹರವಾದ ಕಾಂತಿಯನ್ನೂ ಸಕಲಶ್ರೇಷ್ಠತ್ವವನ್ನೂ ಉಂಟುಮಾಡುವುದು.

## ಪಾದುಕೆಗಳ ಗುಣಗಳು.

ಸ್ವರ್ಣಪಾದುಕೆಗಳನ್ನು ಮೆಟ್ಟುವುದರಿಂದ ಶರೀರಕ್ಕೆ ಮನೋಹರವಾದ ಕಾಂತಿಯನ್ನೂ ಶುಭವನ್ನೂ ಪಾವನವನ್ನೂ ಉಂಟುಮಾಡಿ, ಪಾದಗಳಲ್ಲಿಯೂ, ಕಣ್ಣುಗಳಲ್ಲಿಯೂ, ಹುಟ್ಟಿದ ರೋಗಗಳನ್ನು ಕೆಡಿಸುವುದು. ಬೆಳ್ಳಿಯ ಹಾವುಗೆಯನ್ನು ಮೆಟ್ಟಿದರೂ ಈ ಮೇಲ್ಕಂಡ ಗುಣಗಳು ಉಂಟಾಗುವುವು. ದಂತದ ಹಾವುಗೆಗಳನ್ನು ಮೆಟ್ಟಿದರೆ ಹಲ್ಲುಗಳಲ್ಲಿಯೂ ದವಡೆಗಳಲ್ಲಿಯೂ, ಕಣ್ಣುಗಳಲ್ಲಿಯೂ ಹುಟ್ಟಿದ ಸಕಲ ರೋಗಗಳನ್ನೂ ಜಯಿಸುವುದು. ಮರದ ಹಾವುಗೆಗಳನ್ನು ಮೆಟ್ಟಿದರೆ ದಾಹವನ್ನೂ ತಾಪವನ್ನೂ ಶಮನಮಾಡಿ ಮಹಾಪಾವನಕರವಾಗಿ ಇರುವುದು. ಚರ್ಮದ ಪಾದುಕೆಗಳನ್ನೂ ಹಾಕಿಕೊಳ್ಳುವುದರಿಂದ, ಪಾದಗಳಿಗೆ ಅಲಂಕಾರವಾಗಿ ಕಾಲುಗಳಲ್ಲಿ ಹುಟ್ಟುವ ಸಕಲರೋಗಗಳನ್ನೂ ಕೆಡಿಸಿ ಮಲಮೂತ್ರಾದಿಗಳಿವು ಎಂಬ ಶಂಕೆಯನ್ನೂ ವಾತಪಿತ್ತದೋಷಗಳನ್ನೂ ಹೋಗಲಾಡಿಸುವುದಾಗಿ ಮಹಾ ಹಿತ ಕರವಾಗಿ ಇರುವುದು. ಪಾಪಾಸು, ಎಕ್ಕಡ, ಥತ್ರಿ ಮುಂತಾದವುಗಳನ್ನು ಉಪಯೋಗಿಸಿದರೆ ಮೇಲಿನ ಗುಣಗಳಾಗುವುವು. ಅಲ್ಲದೆ ಗಾಳಿ, ಬಿಸಿಲು, ಮಳೆ, ದಾಹ ಮುಂತಾದವುಗಳನ್ನು ಹೋಗಲಾಡಿಸಿ, ಕಣ್ಣುಗಳ ದೃಷ್ಟಿಗೆ ಮಹಾ ಹಿತವಾಗಿ, ಬಲವಾದ ಮುಳ್ಳುಗಳು, ಕೆಸರು, ಮುಂತಾದ ಶಂಕೆಗಳನ್ನು ಪರಿಹರಿಸಿ ಕಾಲುಕಣ್ಣುಗಳಲ್ಲಿ ಹುಟ್ಟುವ ಸಕಲರೋಗಗಳನ್ನೂ ಕೆಡಿಸುವುವು.

ಛೂಚಕ್ರ ಮತ್ತು ಆತಪತ್ರದಗುಣಂ.—ಛೂಚಕ್ರಗಳನ್ನು ಭೂಪತಿಗಳಾದ ಅರಸುಗಳು ಹಿಡಿಸಿಕೊಳ್ಳುವುದರಿಂದ ಐಶ್ವರ್ಯವುಂಟಾಗಿ ಪುಷ್ಟಿಯನ್ನು ಕೊಡುತ್ತ ಮಹಾ ಮೋಹನಕರವಾಗಿರುವುದು.

ಸತ್ತಿಗೆಗಳಗುಣಂ.—ಮುತ್ತಿನ ಸರಗಳನ್ನು ಕಟ್ಟಿದ ಬಿಳಿಯ ಸತ್ತಿಗೆಯನ್ನು ಹಿಡಿಸಿಕೊಂಬುವುದರಿಂದ ಶಿರಸ್ಸಿನಲ್ಲಿ ಉಂಟಾದ ನೋವನ್ನೂ, ವಾಯುರೋಗ ವನ್ನೂ ಹೋಗಲಾಡಿಸಿ ದೃಷ್ಟಿಗಳಿಗೂ, ನೇತ್ರರೋಗ ಪರಿಹರಿಸುವುದರಲ್ಲಿಯೂ, ಹಿತವಾಗಿ ಮಂಡೆಯ ಕೂದಲುಗಳಿಗೆ ಮಹಾ ಬಲ್ಮೆಯನ್ನುಂಟುಮಾಡುವುದು. ಸೂರ್ಯಪುಟಾದಿ ಛತ್ರವನ್ನುಪಯೋಗಿಸುವುದರಿಂದ ಸುಖವೂ ಸರ್ವಗುಣಗಳೂ ಉಂಟಾಗಿ ಕಣ್ಣುಗಳಿಗೆ ಮಹಾ ಚಿತ್ರಕರವಾಗಿ, ಪರಮಪವಿತ್ರವಾಗಿ, ಐಶ್ವರ್ಯ ವನ್ನು ಕೊಡುತ್ತ ಮನಸ್ಸಿನ ವಿಲಾಸಕ್ಕೆ ಸ್ನೇಹಗೂಡಿರುವುದು. ಮರದಿಂದಲಾಗಲಿ ಚರ್ಮದಿಂದಲಾಗಲಿ ಬಟುವಾಗಿ ಮಾಡಿದ ಹರಿಗೆಯನ್ನು ಧರಿಸುವುದರಿಂದ ಪರಮ ಮಂಗಳಪ್ರದವಾಗಿ ಬಿಸಿಲು, ಮಳೆ ಮುಂತಾದುವುಗಳನ್ನು ಹೋಗಲಾಡಿಸಿ, ಅರಸು ಗಳ ಸಕಲ ಧರ್ಮಗಳನ್ನೂ ರಕ್ಷಿಸುವುದು. ಆವಾವ ವರ್ಣದ ವಸ್ತುಗಳಲ್ಲಿ ಮಾಡಿದ ಸತ್ತಿಗೆ ಮುಂತಾದವುಗಳನ್ನು ಹಿಡಿಸಿಕೊಂಡು ತಿರುಗಾಡುವುದರಿಂದ ಆಯಾಯ ವಸ್ತುಗಳಲ್ಲಿ ಉಂಟಾದ ಗುಣಗಳೊಡನೆ ಕೂಡಿಕೊಂಡು, ಬಿಸಿಲಗೂ, ಗಾಳಿಗೂ,

ಮಳೆಗೂ, ದೂಳಿಗೂ ಮರೆಯಾಗಿ ಶರೀರಕ್ಕೆ ಹಿತಕರವಾಗಿ ದಾಹ ಶಮನಮಾಡುವುದಾಗಿರುವುದು.

ದಂಡಧಾರಣಗುಣಂ.—ದೊಣ್ಣೆಯನ್ನು ಹಿಡಿದುಕೊಂಡು ತಿರುಗಾಡುವುದರಿಂದ, ಮಹಾ ಉತ್ಸಾಹವನ್ನೂ ಸದ್ಬಲಸ್ಥೈರ್ಯಧೈರ್ಯವೀರ್ಯಮುಂತಾದ ಪರಾಕ್ರಮಾತಿಶಯಗಳನ್ನೂ ಹೆಚ್ಚಿಸಿ ಮಹಾ ಯೋಗ್ಯವಾಗಿ ದುಷ್ಟಜಂತು ಮುಂತಾದವುಗಳ ಬಾಧೆಗಳನ್ನು ಕೆಡಿಸುವಂಥಾದ್ದಾಗಿ ಇರುವುದು.

ನಾನಾಶಸ್ತ್ರಧಾರಣೆಮಾಡುವುದರಿಂದ ಲಕ್ಷ್ಮೀದೇವಿಗೆ ಆವಾಸಸ್ಥಾನವಾಗಿ ಧೈರ್ಯವೀರ್ಯಶೌರ್ಯ ಮೊದಲಾದ ಪರಾಕ್ರಮಂಗಳನ್ನುಂಟುಮಾಡಿ, ಮೋಹನಕರವಾಗಿ, ದೇವಗ್ರಹ, ಗಂಧರ್ವಗ್ರಹ, ಯಕ್ಷಗ್ರಹ ಮುಂತಾದ ದುಷ್ಟಗ್ರಹಂಗಳನ್ನೂ ಶತ್ರುಗಳಿಂದುಂಟಾಗುವ, ಹಾನಿಯನ್ನೂ ಕೆಡಿಸುವುದು.

ಚಾಪಾಭ್ಯಾಸವನ್ನು ನಿತ್ಯವೂ ರಸಾಯನ ಸೇವಿಸುವ ಮರ್ಯಾದೆಯಲ್ಲಿ ಮಾಡುವುದರಿಂದ ಶರೀರದ ದುರ್ಮಾಂಸವನ್ನು ಕೆಡಿಸಿ ವಾತಪಿತ್ತಶ್ಲೇಷ್ಮದೋಷಗಳನ್ನು ಶಮನಮಾಡಿ, ಶರೀರದಲ್ಲಿ ಅಗ್ನಿಬಲವನ್ನುಂಟುಮಾಡಿ, ಕಾಯಕ್ಕೆ ಬಹಳ ಪುಷ್ಟಿಕರವಾಗಿ, ಕಾಂತಿಯನ್ನುಂಟುಮಾಡಿ, ಆರೋಗ್ಯವನ್ನುಕೊಡುತ್ತ, ಯುದ್ಧಗಳಲ್ಲಿ ಶತ್ರುಗಳೆಂಬ ಗ್ರಹಶಕ್ತಿಯನ್ನೂ, ಜಯಿಸುವುದರಲ್ಲಿ ಶಕ್ತಿಯನ್ನೂ ಉಂಟುಮಾಡಿ, ಮುಪ್ಪನ್ನೂ ಕೆಡಿಸುವುದು.

ಶ್ವೇತ ಚಾಮರವನ್ನುಪಯೋಗಿಸುವುದರಿಂದ ಮನೋಹರವಾದ ಅಲಂಕಾರವಾಗಿ, ಲಕ್ಷ್ಮೀಕಟಾಕ್ಷಕ್ಕೆ ಆವಾಸಸ್ಥಾನವಾಗಿ ಮಸ್ತಕದೋಷ ನಿವಾರಣವಾಗಿ ಚಂದ್ರನಿಗೆ ಸಮಾನವಾದ ಬಿಳುಪು ಉಂಟಾಗುವುದು.

## ವ್ಯಜನ ಗುಣಂ.

ಬೀಸಣಿಗೆಯಿಂದ ಬೀಸಿಕೊಳ್ಳುವುದರಿಂದ ಲಕ್ಷ್ಮೀದೇವಿ ಇರುವ ಮನೆಯಾದುದ್ದಾಗಿ, ವಾತಪಿತ್ತಶ್ಲೇಷ್ಮದೋಷಗಳು ಹರವಾಗಿ ಸಭೆಯಲ್ಲಿರುವ ಜನರಿಗೆಲ್ಲಾ ಅಲಂಕಾರವಾಗಿರುವುದು. ರಾಮಂಚದ ಬೀಸಣಿಗೆಗಳನ್ನು ಉಪಯೋಗಿಸುವುದರಿಂದ ವಾತಪಿತ್ತಶ್ಲೇಷ್ಮದೋಷಗಳು ಶಮನವಾಗಿ ಮಹಾ ತಂಪು ಉಂಟಾಗುವುದು. ವಾರೆ ಬೀಸಣಿಗೆಯನ್ನು ಉಪಯೋಗಿಸುವುದರಿಂದ ಬೆವರೂ, ದಾಹವೂ ಶರೀರಶ್ರಮವೂ ಪರಿಹಾರವಾಗುವುವು. ನವಿಲುಗರಿ ಬೀಸಣಿಗೆಯನ್ನು ಉಪಯೋಗಿಸುವುದರಿಂದ ವಾತಹರವಾಗಿ ಬಲವಾಗಿ ಮಂಡೆಯ ಕೂದಲಿಗೆ ಹಿತವಾಗಿ ಉಷ್ಣಕರವಾಗಿರುವುದು.

ವಾಯುಗುಣಗಳು.—ಮೂಡಣ ಗಾಳಿಯು ಶೀತವನ್ನುಂಟುಮಾಡುವುದು, ತೆಂಕಣ ಗಾಳಿಯು ಮಹಾ ಆರೋಗ್ಯಕರವಾಗಿರುವುದು, ಪಡುವಣ ಗಾಳಿಯು ಪಿತ್ತ

ಪ್ರಕೋಪಕರವಾಗಿರುವುದು, ಬಡಗಣ ಗಾಳಿಯು ವಾತಶ್ಲೇಷ್ಮದೋಷಹರವಾಗಿರುವುದು, ಸುಳಿಗಾಳಿಯು ಮಹಾ ಮನೋಹರವಾಗಿ ಈ ನಾಲ್ಕು ದಿಕ್ಕುಗಳಲ್ಲಿಯೂ ಹಿತವಾಗಿರುವುದು, ಸುಂಟರಗಾಳಿಯು ಶ್ವಾಸರೋಗಹರವಾಗಿ ದಾಹವನ್ನೂ ಅತಿ ಭೀತಿಯನ್ನೂ ಉಂಟುಮಾಡುವುದು.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೊಳ್ ಆರೋಹಣ
ಗುಣ ಪ್ರಶಂಸಾ ಸಂಪೂರ್ಣಂ

---

## ಅಥ ಮಂದಿರ ಗುಣವಿಧಿ

ಬಿಳುಪಾದ ಸೆಜ್ಜೆಯಲ್ಲಿ ವಾಸಮಾಡಿದರೆ ವಾತಶ್ಲೇಷ್ಮದೋಷಹರವಾಗಿ, ಲಕ್ಷ್ಮೀಕರವಾಗಿ ಕೀರ್ತಿಯನ್ನೂ ಅತ್ಯಾನಂದವನ್ನೂ ಹೆಚ್ಚಿಸುವುದಕ್ಕೆ ಕಾರಣವಾಗಿರುವುದು ; ಶಿಲಾಮಂದಿರದಲ್ಲಿ ವಾಸಮಾಡುವುದರಿಂದ, ಶೀತವನ್ನೂ ಬಿಸಿಲನ್ನೂ ಹೋಗಲಾಡಿಸಿ, ಹೆಚ್ಚಿದ ಮದವನ್ನು ಕೆಡಿಸಿ, ಪಾದರೋಗಗಳ ನಾಶಮಾಡುವುದು. ಕ್ಷೀರಸುಧಾಮಂದಿರದಲ್ಲಿ ವಾಸಮಾಡಿದ್ದಲ್ಲಿ ಮಹಾ ಶುಭ್ರವಾಗಿ, ಮನೋಹರವಾಗಿ, ರಮ್ಯವಾದ ಸಾಲುಮನೆಗಳುಂಟಾಗಿ, ಚಿತ್ರಗಳಿಂದ ಕೂಡಿಕೊಂಡು ಹಾಲುಗಾರೆಯಿಂದಲೂ, ಬಿಳಿಪಾದಸುಣ್ಣದಿಂದಲೂ, ಮಹತ್ತಾದ ಕಾಂತಿಯುಂಟಾಗಿ ಶ್ಲೇಷ್ಮವಾತದೋಷಗಳನ್ನುಂಟುಮಾಡುವುದು. ಮಾಳಿಗೆ ಮನೆಗಳಲ್ಲಿ ವಾಸಮಾಡುವುದರಿಂದ, ಮಹಾಶ್ರೇಷ್ಠವಾಗಿ, ಮನೋಹರವಾಗಿ, ವಾತದೋಷವನ್ನು ಪರಿಹರಿಸಿ, ಕಾಂತಿಯನ್ನುಂಟುಮಾಡಿ, ಮನ್ಮಥಕ್ರೀಡಾವಿನೋದಂಗಳಲ್ಲಿ ಚತುರತೆಯನ್ನೈದಿ ಮಹಾ ತಂಪಾಗಿ, ದೋಷಹರವಾಗಿ, ಶರೀರಕ್ಕೆ ಮಹಾ ಲಘುತರವಾಗಿರುವುದು. ಬಹಳ ಪ್ರಕಾಶಿಸುವ ಬಲವನ್ನು ಕೊಡುತ್ತ ಸ್ತ್ರೀಯರುಗಳಿಗೆ, ಮಹತ್ತಾದ ವಿಳಾಸವನ್ನುಂಟುಮಾಡುತ್ತ, ಕಾಮಾತುರರುಗಳಿಗೆ ಬಹುಶಾಂತಿಯನ್ನು ಮಾಡುತ್ತ, ವೀರ್ಯವೃದ್ಧಿಯನುಳ್ಳದ್ದಾಗಿರುವುದೇ ಚಿತ್ರದ ಮಾಳಿಗೆಯಲ್ಲಿ ವಾಸಮಾಡುವ ಗುಣಗಳು.

ಬಿಸಿಲಿನ ಗುಣಗಳು.—ಬಿಸಿಲನ್ನೂ, ಪೈತ್ಯವನ್ನೂ ತೃಷೆಯನ್ನೂ ಕೊಡುವುದಾಗಿ, ಮೂರ್ಛೆಯನ್ನೂ, ಭ್ರಮೆಯನ್ನೂ, ಜ್ವರವನ್ನೂ, ವಿವರ್ಣವನ್ನೂ, ಉಂಟುಮಾಡುವುದು.

ಬೆಂಕಿಯಗುಣಗಳು.—ವಾತವನ್ನೂ ದೊಡ್ಡಿತ್ತಾದ ಶೂಲೆಯನ್ನೂ ಶ್ಲೇಷ್ಮದೋಷವನ್ನೂ, ಶೀತವನ್ನೂ ಹೋಗಲಾಡಿಸಿ, ದೀಪನವನ್ನೂ, ಪಿತ್ತವನ್ನೂ ಉಂಟುಮಾಡುವುದೇ ಬೆಂಕಿಯ ಗುಣಗಳು.

ಚಂದ್ರಿಕಾತಿಮರ ಗುಣಂ.—ಪಿತ್ತವನ್ನು ಶಮನಮಾಡಿ ಕಣ್ಣಿನರೋಗ, ದಾಹ, ಜ್ವರ ಮುಂತಾದುವುಗಳನ್ನು ಹೋಗಲಾಡಿಸುವುದೇ ಬೆಳ್ದಿಂಗಳ ಗುಣಗಳು.

ಕತ್ತಲೆಯ ಗುಣಗಳು.—ಕತ್ತಲೆಯು ಭೀತಿಯನ್ನುಂಟುಮಾಡಿ ರೂಕ್ಷವನ್ನೂ ಎಚ್ಚರವನ್ನೂ ನಾಶಮಾಡುವುದು.

ಇಬ್ಬನಿಯಗುಣ.—ಇಬ್ಬನಿಯು ಬಾಯಾರಿಕೆಯನ್ನೂ ಶ್ರಮವನ್ನೂ ಹೋಗಲಾಡಿಸಿ, ಅಭಿಘಾತಾದಿ ದೋಷಗಣಗಳಂ ಕೆಡಿಸಿ, ವೀರ್ಯವೃದ್ಧಿಕರವಾಗಿ ಇರುವುದು.

ಮಳೆಯಗುಣ.—ಮಳೆಯು ವಾತದೋಷವನ್ನೂ, ಮಹಾ ದೊಡ್ಡದಾದ ರೋಗವನ್ನೂ ಶೀತವನ್ನೂ, ಶ್ಲೇಷ್ಮವನ್ನೂ ಉಂಟುಮಾಡಿ, ಅಗ್ನಿಬಲವನ್ನು ಕೆಡಿಸುವುದು.

ಸೂರ್ಯಪುಟದ ಮೇಲುಕಟ್ಟಿನ ಮನೆಯಲ್ಲಿ ವಾಸಮಾಡುವುದರಿಂದ ಆರೋಗ್ಯಕರವಾಗಿ, ಕಾಂತಿಯನ್ನು ಕೊಡುತ್ತ, ಮಂಗಳವನ್ನುಂಟುಮಾಡುತ್ತ, ಮನ್ಮಥ ಕ್ರೀಡೆಗೆ ಯೋಗ್ಯವಾದ ಆನಂದ ಸಮೂಹಗಳನ್ನು ಹುಟ್ಟಿಸುತ್ತಿರುವುದು. ಅಂತರಾಳವಾದ ಗುಡಾರದ ಗುಣಗಳೂ ಈ ಬಗೆಯವುಗಳೇ.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೊಳ್
ಮಂದಿರ ಗುಣವಿಧಿ ಸಂಪೂರ್ಣಂ

---

## ಅಥ ಶಯ್ಯಾಗುಣವಿಧಿ.

ವಿಚಿತ್ರವಾದ ಗುಣಪ್ರಕಾರವಾದ ಹಾಸಿಗೆಗಳಲ್ಲಿ ಮಲಗುವುದರಿಂದ ಮಹಾವಿಭವಪ್ರದವಾಗಿರುವುದು. ವೀರ್ಯವನ್ನೂ, ಪರಾಕ್ರಮವನ್ನೂ ಕೊಡುವುದು. ಮಹಾ ಲಕ್ಷ್ಮೀಕರವಾಗಿ ಪ್ರಕಾಶಿಸುವ ಕೀರ್ತಿಯನ್ನು ಕೊಡುವುದು. ಪಿತ್ತಹರವಾಗಿ ಮನ್ಮಥ ಕ್ರೀಡೆಯಲ್ಲಿ ಬಹಳವಾದ ಇಚ್ಛೆಯನ್ನೂ, ದೇಹಪುಷ್ಟಿಯನ್ನೂ ಆವಾಗಲೂ ಮನುಷ್ಯರುಗಳಿಗೆ ಬಲವನ್ನೂ ಕಾಂತಿಯನ್ನೂ ಕೊಡುವುದು.

ಹಲಗೆಮಂಚದಮೇಲೆ, ಹಾಸಿಗೆಯಿಲ್ಲದೆ ಮಲಗಿಕೊಳ್ಳುವುದರಿಂದ ಸದಾ ಆರೋಗ್ಯಕರವಾಗಿ, ಯೋಗ್ಯಕರವಾಗಿ, ತಾಪ, ದಾಹ ಹರವಾಗಿ ಶರೀರಕ್ಕೆ ಬಲವುಂಟಾಗಿ ಶ್ರಮಪರಿಹಾರವಾಗಿ ತ್ರಿದೋಷಪರಿಹರವಾಗಿ ಶರೀರಕ್ಕೆ ಕಾಂತಿಯನ್ನೂ ಅಗ್ನಿಬಲವನ್ನೂ ಕೊಡುವುದು. ತೂಗುಮಂಚದಮೇಲೆ ಮಲಗಿಕೊಳ್ಳುವುದರಿಂದ ಶ್ರಮಹರವಾಗಿ, ಶರೀರವೃದ್ಧಿಯುಂಟಾಗಿ ಚೆನ್ನಾಗಿ ನಿದ್ದೆ

ಯುಂಟಾಗಿ, ಐಶ್ವರ್ಯಪ್ರದವಾಗಿ, ಶರೀರಕ್ಕೆ ಕಾಂತಿಯನ್ನುಂಟುಮಾಡುತ್ತ ಸ್ವಲ್ಪವಾತಕಾರಿಯಾಗಿ, ಚೆನ್ನಾಗಿ ಮೂತ್ರಪ್ರವೃತ್ತಿ ಇವೆಲ್ಲವೂ ಆಗುವುವು.

ಬೂರದ ಹತ್ತಿತುಂಬಿದ ಸುಪ್ಪತ್ತಿಗೆಯಮೇಲೆ ಮಲಗಿಕೊಳ್ಳುವುದರಿಂದ ವಾತ ಶ್ಲೇಷ್ಮಹರವಾಗುವುದು. ಶರೀರಕ್ಕೆ ಮಹಾ ಮೃದುವಾಗಿರುವುದು. ಅತ್ಯಂತ ಭಾಗ್ಯಕ್ಕೆ ಕಾರಣವಾಗುವುದು. ಮದಕರವಾಗಿ ಮನಸ್ಸಿಗೆ ಆನಂದಕರವಾಗಿರು ವುದು. ಅರಳೆಯ ಸುಪ್ಪತ್ತಿಗೆಯಮೇಲೆ ಮಲಗುವುದರಿಂದ ಶರೀರಕ್ಕೆ ಅತ್ಯಂತ ಕಾಂತಿಯುಂಟಾಗಿ, ಲಕ್ಷ್ಮೀಪ್ರದವಾಗಿ, ಶರೀರದ ರಕ್ತವನ್ನು ಹೆಚ್ಚಿಸಿ, ವಾತರೋ ಗಗಳು ಹರವಾಗಿ ಶರೀರದಬಲವೂ, ಪುಷ್ಟಿಯೂ ವೃದ್ಧಿಯಾಗುವುವು.

ಬರೀನೆಲದಮೇಲೆ ಮಲಗುವುದರಿಂದ ವಾತರೋಗಗಳು ಹರವಾಗಿ ಸ್ತಂಭನ ಉಂಟಾಗಿ, ವೀರ್ಯವೃದ್ಧಿಯಾಗಿ, ಶರೀರದ ಉರಿ ಮಟ್ಟಾಗಿ ಸಕಲಪಿತ್ತರೋಗಗಳೂ ಹರವಾಗಿ, ಅತ್ಯಂತ ತಂಪಾಗಿ, ಸೌಖ್ಯಕರವಾಗಿರುವುದು.

ನಾನಾ ಬಗೆಯಾದ ಹೂವಿನ ಹಾಸಿಗೆಯಮೇಲೆ ಮಲಗಿಕೊಳ್ಳುವುದರಿಂದ ಶರೀರವು ಪುಷ್ಟಿಯಾಗಿ ಅತ್ಯಂತ ತಂಪಾಗಿರುವುದು. ಮನಸ್ಸಿಗೆ ಬಹಳ ಹಿತವಾಗಿ ನಿದ್ರೆಯುಂಟಾಗಿ ಮಂಗಳ ಪ್ರದವಾಗಿರುವುದು. ಆಯಾಸ ಪರಿಶ್ರಮವು ಹರವಾಗಿ ಶೀತವಾಗಿರುವುದು. ಅಲ್ಲದೆ ಪಿತ್ತಪ್ರಕೋಪವೂ, ವಾತಶ್ಲೇಷ್ಮಹರವೂ, ಶರೀರಕ್ಕೆ ಪುಷ್ಟಿಯೂ ಉಂಟಾಗುವುವು.

ಮಹಾ ಶ್ರೇಷ್ಠಕರವಾಗಿ ಕೊಂಚವಾದ ಉಷ್ಣ ಉಂಟಾಗಿ ಒಂದಿಷ್ಟು ದಾಹ ಉಂಟಾಗಿ ಪಿತ್ತಪ್ರಕೋಪವಾಗಿ, ವಾತಶ್ಲೇಷ್ಮಹರವಾಗಿ, ಶರೀರಪುಷ್ಟಿ ಯನ್ನುಂಟುಮಾಡುವುದು. ಇವೆಲ್ಲವೂ ಮಂಡಲಿಗೆಯ ಗುಣಗಳು.

ಆಸನ ಗುಣಗಳು.—ಮತ್ಸ್ಯಾಸನದಿಂದ ಮನಸ್ಸಿಗೆ ಇಷ್ಟಸಿದ್ಧಿಯಾಗುವುದು. ಮನಸ್ಸಿಗೆ ಮಹಾ ಹರ್ಷವಾಗಿ, ಸಕಲಕಾರ್ಯವೂ ಜಯವಾಗಿ, ಐಶ್ವರ್ಯಪ್ರದ ವಾಗಿರುವುದೇ ಕೂರ್ಮಾಸನದ ಗುಣಗಳು. ಮಂಡಿಗಾಲಲ್ಲಿ ಕುಳಿತುಕೊಳ್ಳುವು ದರಿಂದ ಪಾಪಕ್ಷಯವಾಗಿ, ತ್ರಿದೋಷಹರವಾಗಿ, ಶರೀರಕ್ಕೆ ಕಾಂತಿಯುಂಟಾಗು ವುದು, ಪದ್ಮಾಸನದಿಂದ ಪಾಪಹರವಾಗಿ ಪವಿತ್ರವಾಗಿ, ಲಕ್ಷ್ಮೀಕರವಾಗಿ, ಸಭೆಗೆ ಯೋಗ್ಯವಾಗಿರುವುದು. ಕುಕ್ಕುಟಾಸನದಿಂದ ಮೂಲರೋಗಗಳುಂಟಾಗಿ, ವಾತಕರವಾಗಿ, ಅಗ್ನಿಮಾಂದ್ಯ ಉಂಟಾಗುವುದು.

ಮಿತಪ್ರಕಾರ ನಿದ್ದೆಮಾಡುವುದರಿಂದ ಶರೀರಕ್ಕೆ ಸೌಖ್ಯವುಂಟಾಗಿ, ಶ್ರಮ ಪರಿಹಾರವಾಗಿ ಶರೀರಕ್ಕೆ ಬಲಕರವಾಗಿ ಕಾಂತಿಯನ್ನುಂಟುಮಾಡಿ, ಸಕಲ ದೋಷಗಳನ್ನೂ ಹೋಗಲಾಡಿಸಿ ಮನುಷ್ಯರ ಶರೀರ ರಕ್ಷಣೆಯಾಗುವುದು.

ಪಾದಗಳನ್ನು ಮರ್ದನ ಮಾಡಿಸಿಕೊಳ್ಳುವುದರಿಂದ, ಶ್ರಮಪರಿಹಾರವೂ, ವಾತಹರವೂ, ವೀರ್ಯವೃದ್ಧಿಯೂ, ಶರೀರಪುಷ್ಟಿಯೂ, ಇವೆಲ್ಲಾ ಉಂಟಾಗುವುವು.

ಈ ತೆರನಾಗಿ ಪಾದಗಳನ್ನು ಶುದ್ಧಿಸಿಕೊಳ್ಳುವುದರಿಂದ ಪಾದಗಳ ಚರ್ಮಕ್ಕೂ ರಕ್ತಮಾಂಸಕ್ಕೂ ಬಲವನ್ನು ಉಂಟುಮಾಡುವುದು.

ದೇವತಾ ಯೋಗ್ಯವಾಗಿಯೂ, ಲಕ್ಷ್ಮೀಕರವಾಗಿಯೂ, ಕಳ್ಳರಿಗೆ ಭಯಂಕರವಾಗಿಯೂ, ನೋಟಕ್ಕೆ ರಮಣೀಯವಾಗಿಯೂ, ವಾತಶ್ಲೇಷ್ಮಗಳಿಂದುಂಟಾದ ರೋಗಹರವಾಗಿ, ಪಾಪಹರವಾಗಿ, ಕಾಂತಿಕರವಾಗಿರುವುದು ಇವುಗಳೆಲ್ಲಾ ದೀಪದ ಗುಣಗಳು.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೊಳ್
ಶಯ್ಯಾಗುಣವಿಧಿ ಸಂಪೂರ್ಣಂ

---

## ಅಥ ರತಿಗುಣವಿಧಿ.

ರತಿಕ್ರೀಡೆಯನಾಚರಿಸುವಲ್ಲಿ ಅಭ್ಯಂಗನವೂ, ಭೋಜನವೂ, ನೂತನ ಪರಿಮಳಧಾರಣೆಯೂ, ನೂತನ ವಸ್ತ್ರಧಾರಣೆಯೂ, ನೂತನ ಭೂಷಣವೂ, ಇವುಗಳೆಲ್ಲಾ ಆದ ನಂತರ ಸಕಲ ಪರಿಮಳ ಮಧ್ಯಮಾಲಾಲಂಕೃತನಾಗಿ, ಪುಷ್ಪಮಂಟಪಾದಿ ವಿವಿಧಾಲಂಕೃತಮಾದ ಕೇಳೀಗೃಹವನ್ನೈದಿ ತತ್ಕಾಲಯೋಗ್ಯವನ್ನರಿತು ವೀಣೆ, ತಂಬುರ, ಸರ, ಮಂಡಲ ಮುಂತಾದ ಗೀತಾವಿನೋದವಮಂ ಸೇರ್ದು, ರತಿಶಾಸ್ತ್ರಕ್ಕೆ ಟೀಕಂ ಬರೆದು, ಚಲಿಸುವಂತಿರ್ಪ ಶುಕ, ಪಿಕ ಪಾರಿವಾಳಾದಿ ಪಕ್ಷಿಗಳ ಪಟ್ಟಗಳನ್ನೂ, ಮತ್ತು ಇಚ್ಛಾವಿಷಯಗಳಾದ ಸಮಸ್ತ ವಸ್ತೂತ್ಕರಸಮೇತವಾದ, ಸರ್ವಾಭರಣಾಲಂಕೃತೆಯಾದ, ಮನೋಹರೆಯಾದ, ಅತಿ ರೂಪವತಿಯಾದ, ಯೌವನಸ್ತ್ರೀ ನೆಲಸಿರುವ ತಾಣವನ್ನು, ಕಡೆಗಣ್ಣುಗಳಿಂದ ನೋಡುತ್ತ, ಸಮಸ್ತ ಕಾಮತಂತ್ರಶಾಸ್ತ್ರಪ್ರೌಢಪಂಡಿತನಾದ ಪುರುಷನು, ಆ ಸ್ತ್ರೀ ಸಮೀಪವನ್ನೈದಿ, ದೇಶಕಾಲ ಬಲ ಶಕ್ತಿಗಳಿಗೆ ವಿರೋಧವಿಲ್ಲದಂತೆ, ವೈದ್ಯಸಮಯೋಚಿತ ಶಾಸ್ತ್ರಜ್ಞನಾಗಿ ರತಿಯನೆಸಗುವುದು ಮೊದಲಾದುದೇ ರತಿಕ್ರೀಡಾವಿಧಿ ಎನಿಸುವುದು.

ಹೆಬ್ಬೆಟ್ಟುಗಳು, ಪದತಳಗಳು, ಪೋಗಾಲು, ಹರಡು ಮೊಳಕಾಲಕೆಳಭಾಗ, ತೊಡೆಗಳು, ಕಿಬ್ಬೊಟ್ಟೆ, ತೋಳುಗಳು, ಎದೆ, ಸ್ತನಗಳು, ಕಂಕುಳು, ಕೊರಳು, ಕೆನ್ನೆ, ತುಟಿ, ಕಣ್ಣುಗಳು, ಶಿರಸ್ಸು ಮುಂತಾದ ಸ್ಥಾನಗಳೇ ಸ್ತ್ರೀಯರುಗಳಿಗೆ ಕಳಾಸ್ಥಾನಗಳೆನಿಸಿಕೊಂಬುವು. ಈ ಸ್ಥಾನಗಳ ಭೇದವರಿತು, ಆರೋಹಣಾವರೋಹಣವೆಂಬ ವಿಧಿಯಿಂದಲೂ, ಬಲ ಎಡವೆಂಬ ಪಕ್ಷವನ್ನೂ, ಕೃಷ್ಣಶುಕ್ಲವೆಂಬ ಪಕ್ಷದ್ವಯಗಳ ನಿರುಗೆಯ ತಾಣವಿವರಗಳನ್ನೂ, ಮನ್ಮಥಕ್ರೀಡಾಸಮೇತನಾದ ಪುರುಷನು ತಿಳಿದೆಸಗುವುದು.

ಸ್ತ್ರೀಯರುಗಳಿಗೆ ಹುಟ್ಟಿದ ಹದಿನಾರುವರುಷ ಪರ್ಯಂತ ಬಾಲ್ಯಕಾಲವೆನಿಸುವುದು ; ಆಮೇಲೆ ನಾಲ್ಕು ವರ್ಷಕೂಡಿ ಇಪ್ಪತ್ತು ವರ್ಷದವರೆಗೆ ತರುಣಿ ಎನಿಸಿಕೊಂಬಳು ; ಆ ಬಳಿಕ ಐದುವರ್ಷಪರ್ಯಂತರ ಕೂಟವಾಗಿ ಮೂವತ್ತು ವರ್ಷ ಪರ್ಯಂತ ಪ್ರೌಢೆ ಎನಿಸಿಕೊಂಬಳು. ಈ ವಯಸ್ಸುಗಳುಳ್ಳ ಸ್ತ್ರೀಯರುಗಳಲ್ಲಿ ಸಂಗವು ಮಾಡುವುದರಿಂದ ಈ ಕೆಳಗೆ ಕಂಡ ಗುರುತುಗಳಾಗುವುವು ; ಬಾಲಸ್ತ್ರೀ ಸಂಗದಿಂದ ಬಲಹೆಚ್ಚುವುದು ; ತರುಣಸ್ತ್ರೀ ಸಂಗದಿಂದ ಮಹಾ ಸೌಖ್ಯವುಂಟಾಗುವುದು, ಪ್ರೌಢಸ್ತ್ರೀ ಸಂಗಮದಿಂದ ಅತ್ಯಂತ ಕಾಂತಿಯುಂಟಾಗುವುದು ; ಅಲ್ಲದೇ ಸ್ತ್ರೀ ಸಂಗಮದಿಂದ ಮನೋಹರವಾಗಿ, ಪಿತ್ತ ಪ್ರಕೋಪ ಶಮನವಾಗಿ, ಸುಖವನ್ನೂ ಅಗ್ನಿ ಬಲವನ್ನೂ, ಉಂಟುಮಾಡುವಂಥಾದ್ದಾಗಿ ಮದವನ್ನು ಪರಿಹರಿಸಿ, ದಾಹವನ್ನೂ ತಾಪವನ್ನೂ ಹುಟ್ಟಿಸಿ, ಬಲವನ್ನು ಕೆಡಿಸುವುದಾಗಿರುವುದು.

ರತಿಕಾಲದಲ್ಲಿ ಸ್ತ್ರೀ ಸಮೇತವಾದ ಶಯನವೂ, ಮಿಕ್ಕಕಾಲದಲ್ಲಿ ಸ್ತ್ರೀ ವಿರಹಿತವಾದ ಶಯ್ಯಾಸ್ಥಾನ ಶಯನವೂ, ಯೋಗ್ಯವಾಗಿರುವುದು. ಸ್ತ್ರೀಯ ಮುಖದ ಉಛ್ವಾಸ ವಾಯುವು ಪುರುಷನಮೇಲೆ ಸೋಕಿತಾದೊಡೆ ಭಗಂಧರವೆಂಬ ರೋಗ ಉಂಟಾಗುವುದರಿಂದ, ಈ ನಿಯಮವನ್ನು ತಪ್ಪದೇ ನಡಿಸುವುದು.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೊಳ್
ರತಿಗುಣವಿಧಿ ಸಂಪೂರ್ಣಂ

---

## ಅಥ ಜ್ವರೋತ್ಪತ್ತಿ ಲಕ್ಷಣಂ.

ಜ್ವರವು ಸಕಲರೋಗಗಳಿಗೂ ಅರಸಾಗಿ, ಪೂರ್ವಜನ್ಮಗಳಲ್ಲಿ ಆಯಾಯ ಜನಂಗಳು ಗೈದ ಪಾಪಸ್ವರೂಪವಾಗಿ, ತಾನೇ ಮೃತ್ಯುರೂಪಾಗಿ, ಶರೀರದ ಬಲವೇ ಆಹಾರವುಳ್ಳದಾಗಿ, ಆಯಾಯ ಶರೀರಂಗಳಂ ನಾಶಮಾಳ್ಪುದು. ಅದೇತಕ್ಕೆನೆ— ಪೂರ್ವದಲ್ಲಿ ದಕ್ಷಧ್ವರಧ್ವಂಸಿಯಾದ ಪರಮೇಶ್ವರನ ಹಣೆಗಣ್ಣಿನಲ್ಲಿ ಹುಟ್ಟಿದ ಕೋಪವೇ ಜ್ವರರೂಪವಾಗಿ ವರ್ತಿಸಿರ್ಪುದು. ಈಶ್ವರನು ಲಯಕರ್ತೃವಾದುದರಿಂದ ಈ ರುದ್ರದೇವರಿಂದೊಗೆದ ಈ ಜ್ವರವು ಕಾಲಮೃತ್ಯುರೂಪವಾಗಿ ಒಪ್ಪುತ್ತದೆ. ಮತಾಂತರದೊಳ್ ಆ ರುದ್ರದೇವರ ನಿಶ್ವಾಸದಿಂದ ಪುಟ್ಟಿತೆಂದೆನ್ನುವರು.

ಈ ಜ್ವರೋತ್ಪತ್ತಿಯು ದ್ವಿವಿಧವೆಂಬದಾಗಿ ವೈದ್ಯಶಾಸ್ತ್ರದಲ್ಲಿ ವ್ಯಕ್ತವಾಗಿ ಪೇಳಲ್ಪಟ್ಟಿದೆ. ಈ ಜ್ವರಕ್ಕೆ ಮೂರುಕಾಲುಗಳೂ, ಮೂರು ಶಿರಸ್ಸೂ, ಕೆಂಪಾದ

ಕಣ್ಣುಗಳೂ ಉಂಟು ; ತನ್ನ ಈ ಆಕಾರದಿಂದ ವಿಭೂತಿಯೇ ಆಯುಧವಾಗಿ ಉಳ್ಳದ್ದು ; ಮೊದಲು ವಾತ ಪಿತ್ತ ಶ್ಲೇಷ್ಮಗಳಿಂದ ಮೂರವಿಧವಾಗಿಯೂ, ಆಮೇಲೆ ಎಂಟು ಪ್ರಕಾರವಾಗಿಯೂ, ಮತ್ತು ನೂರೊಂದು ತೆರನಾಗಿಯೂ, ಇಹು ದೆಂದು ಪೇಳ್ವರು, ಆ ಎಂಟು ಪ್ರಕಾರವಾದ ಜ್ವರಗಳಾವುವೆಂದರೆ :—

ವಾತಜ್ವರ, ಪಿತ್ತಜ್ವರ, ಶ್ಲೇಷ್ಮಜ್ವರ, ವಾತಪಿತ್ತಜ್ವರ, ಶ್ಲೇಷ್ಮಪಿತ್ತಜ್ವರ, ಶ್ಲೇಷ್ಮವಾತಜ್ವರ, ವಾತಪಿತ್ತಶ್ಲೇಷ್ಮಗಳೆಂಬ ತ್ರಿದೋಷಗಳಿಂದಲೂ ಕೂಡಿದ ಸನ್ನಿಪಾತಜ್ವರ, ಮತ್ತು ಆಗಂತುಕಜ್ವರವೆಂದು ಎಂಟು ಪ್ರಕಾರವಾಗಿರುವುದು. ಆಗಂತುಕಜ್ವರ ಒಂದೇ ಇಪ್ಪತ್ತೇಳು ತೆರನಾಗಿಯೂ, ನೂರೊಂದು ಬಗೆಯಾ ಯಾಗಿಯೂ ಇರ್ಪುದು ; ಇವುಗಳಲ್ಲಿ ಮೊದಲು ಎಂಟುತರಹ ಜ್ವರದ ಲಕ್ಷಣವಂ ಮುನ್ನಂ ಪೇಳ್ದು ಬಳಿಕ ಕ್ರಮದಲ್ಲಿ ಈ ಭೇದ ಲಕ್ಷಣಮಂ ಬಿಸ್ತರಿಸುವೆಂ

ಜ್ವರಗಳು ಹುಟ್ಟುವುದಕ್ಕೆ ಕಾರಣವಾವುವೆಂದೊಡೆ :—ವಿಷಮವಾದ ಆಹಾರ ವ್ಯವಹಾರಗಳಿಂದಲೂ, ಉದರದೊಳ್ಕೊಂಡಾಹಾರ ಜೀರ್ಣಿಸದೇ ಇರು ವುದರಿಂದಲೂ, ವಾತ, ಪಿತ್ತ, ಶ್ಲೇಷ್ಮಾದಿಗಳು ಆವುದಾದರೊಂಥು ಆದೊಡಂ ಬಳಿಕವೆರಡಾದೊಡಂ, ಆ ತ್ರಿದೋಷಗಳು ಮೂರೂ ಕೂಡಿದೊಡಂ, ಅಗ್ನಿಸ್ಥಾನ ದಲ್ಲಿರುವ ಆಮಾಶ್ರಯವನ್ನಾಶ್ರಯಿಸಿ, ಶರೀರಕ್ಕೆ ಬಲವಾದ ಆಮವನ್ನೇ ಆಹಾರ ಮಾಡಿಕೊಂಡು, ನಿಜಸ್ಥಾನದೊಳಿರ್ದ ಅಗ್ನಿಯನ್ನು ಹೊರಕ್ಕೆ ಹೊರಡಿಸಿ, ಆ ಅಗ್ನಿ ರೂಪಾದುಷ್ಣಗುಣವನ್ನೂ ಶರೀರದ ಮೇಲೆ ಎಲ್ಲಾ ಕಡೆಯಲ್ಲಿಯೂ ಪ್ರಕೋಪವನ್ನೂ ಉಂಟುಮಾಡುವುದೇ ಜ್ವರವೆನಿಸಿಕೊಂಬುದೆಂದು, ಸಾಧಾರಣ ಜ್ವರಲಕ್ಷಣವು ಈ ರೀತಿಯಾಗಿ ಪೇಳಲ್ಪಟ್ಟಿದೆ.

ಜ್ವರವು ಶರೀರಕ್ಕೆ ಬಾಧೆಗೊಳಿಪ ಲಕ್ಷಣವೆಂತೆನೆ :—ಬೆವರಿಲ್ಲದೆ ತಾಪ ಉಂಟಾಗಿ, ಮೈ ಕೈ ಸಂದುಗಳಲ್ಲಿ ನೋವು ಕಾಣಿಸಿ ವೆಗ್ಗಳವಾದ ಆಲಸ್ಯ ವುಂಟಾಗಿ, ಅರೋಚಕದೊಡನೆ ದೇಹಭಾರವಾಗಿ, ಹೆದರಿಕೆಯೊಡನೆ ಕೂಡಿದ ಬಾಯಿಯಿಂದ ಯುಕ್ತವಾಗಿ ಕಣ್ಣಿನಲ್ಲಿ ನೀರು ಸುರಿಯುತ್ತ, ಆಕಳಿಕೆಗೂಡಿ ಮೈ ಹುರುಕುಳಿಸಿ, ಮೊಳಕಾಲು ಸಂದುಗಳು ನೋಯುತ್ತ, ಬಳಲಿಕೆಯುಂಟಾಗಿ ಶರೀ ರವು ಕೊಕ್ಕರಿಸಿಕೊಂಬ ರೀತಿಯನ್ನೇ ಹೆಚ್ಚಾಗಿ ಉಂಟುಮಾಡುತ್ತ ಮಧುರಾ ಹಾರ ಮೊದಲಾದ ಭಕ್ಷ್ಯಗಳಲ್ಲಿ ದ್ವೇಷ ಉಂಟಾಗಿ, ಧ್ವನಿ ಭಾರವಾಗಿ, ಇರುವುದೇ ಜ್ವರವೆನಿಸಿಕೊಂಬುದು ; ಇದೇ ಸರ್ವಸಾಧಾರಣ ಜ್ವರವು.

ವಾತಜ್ವರಲಕ್ಷಣವೆಂತೆಂದೊಡೆ.—ಮೈ ನಡುಗುತ್ತ ಶರೀರವೆಲ್ಲವೂ ಕ್ಷಣ ಉಷ್ಣ ಕ್ಷಣ ಶೈತ್ಯವಾಗಿ ಕಾಣಿಸುತ್ತ, ತುಟಿ, ಬಾಯಿ, ಗಂಟಲು ಒಣಗುತ್ತಾ ಮಂಡೆಯೂ, ಎದೆಯೂ, ಕೂಡ ನೋಯುತ್ತ ಆಕಳಿಸುತ್ತ ನಾಲಿಗೆಯಲ್ಲಿ ಕಾಠಿಣ್ಯವೂ ಕಪ್ಪೂ ಉಂಟಾಗಿ ಬಾಯಿ ಒಪ್ಪಿಯಾಗಿ, ಶರೀರವೆಲ್ಲವೂ ಭಾರವಾಗಿ

ರುವುದೇ ವಾತಜ್ವರವೆನಿಸಿಕೊಂಬ ದು. ಈ ಜ್ವರವು ಊಟವಾದಮೇಲೆ ಕಾಣಿಸಿದರೆ ವಮನಮಾಡಿಸಲು ಶಮನವಾಗುವುದು.

ಈ ವಮನಕ್ಕೆ ಒಂದುವರಹಾತೂಕ ಬಜೆಯನ್ನು ಬಿಸಿನೀರಲ್ಲಿ ಅರೆದು ಕುಡಿಸಲು ವಮನವಾಗಿ ವಾತಜ್ವರವು ಶಮನವಾಗುವುದು. ಆಹಾರಕ್ಕೆ ಮೊದಲೇ ಜ್ವರ ಬಂದರೆ ಅಮರದವಳ್ಳಿ, ಶುಂಠಿ ಇವೆರಡರ ಕಷಾಯವನ್ನು ಕೊಡಿಸುವುದು ; ಶರೀರದಲ್ಲಿ ಜ್ವರ ಕಾಯುತ್ತಿದ್ದರೂ ಇಲ್ಲದೆ ಇದ್ದರೂ ಸಾಯಂಕಾಲದಲ್ಲಿ ಪಥ್ಯವಂ ಕೊಡಿಸುವುದು.

## ವಾತಜ್ವರಚಿಕಿತ್ಸೆ—ಕಲ್ಕಗಳು

ಜೀರಿಗೆ, ಶುಂಠಿ, ಮೆಣಸು, ಹಿಪ್ಪಲಿ, ಬೆಳ್ಳುಳ್ಳಿ, ಇವೆಲ್ಲಾ ಸಮಾನಗೊಂಡು ಬಿಸಿನೀರಿನಿಂದ ಅರೆದು, ಸೇವಿಸಲು ಶೀತಜ್ವರಪರಿಹಾರವಾಗುವುದು.

ಹಿಪ್ಪಲಿ, ಬೆಲ್ಲ, ಅಳಲೇಕಾಯಿ ಇವನ್ನು ಬಿಸಿನೀರಿನಿಂದ ಅರೆದು, ಕುಡಿದರೆ ವಾತಜ್ವಪರಿಹಾರವಾಗುವುದು.

ಜೀರಿಗೆಯನ್ನೂ ಬೆಲ್ಲವನ್ನೂ ಬಿಸಿನೀರಿನಿಂದರೆದುಕೊಡಲು ಶೀತಜ್ವರಂ ಮಾಣ್ಗುಂ.

ಅಂಬಿಲದ ತಿಳಿನೀರಿನಲ್ಲಿ ಅರಿಸಿನವನ್ನರೆದು ಪಾನಮಾಡಿಸಲು, ಶೀತಜ್ವರ ಕೆಡುವುದು. ಹೀಗೆ ಮಾಡಿದಲ್ಲಿ ದೇಶಾಂತರದಲ್ಲಿದ್ದವನಿಗಾದರೂ ಶೀತದೋಷವಿಲ್ಲ.

ಅತ್ತಿಯಬೇರಂ ಶರ್ಕರೆಯಿಂದರೆದು ಸೇವಿಸಲು ವಾತಜ್ವರಂ ಮಾಣ್ಗುಂ.

ರಾಸ್ಮೆ, ಶುಂಠಿ, ಕೊತ್ತುಂಬರಿ, ಹಿಪ್ಪಲಿ, ಇವುಗಳನ್ನು ಬಿಸಿನೀರಿನಿಂದರೆದು ಕೊಡಲು ವಾತಜ್ವರಂ ಗುಣಮಕ್ಕುಂ.

ಜೀರಿಗೆ, ಕೊತ್ತುಂಬರಿ, ಶುಂಠಿ, ಮೆಣಸು, ಹಿಪ್ಪಲಿ, ಬೆಳ್ಳುಳ್ಳಿ, ಬೇವು, ನೆಲಬೇವು, ಕಟುಕರೋಹಿಣಿ—ಇವುಗಳನ್ನು ಬಿಸಿನೀರಿನಿಂದರೆದು ಕೊಡಲು ವಾತಜ್ವರಂ ಮಾಣ್ಗುಂ.

ಶುಂಠಿ, ಹಿಪ್ಪಲಿ, ಮೆಣಸು, ಕಟುಕರೋಹಿಣಿ, ಸಬ್ಬಸಿಗೆ, ನೆಲಬೇವು, ಕೊತ್ತುಂಬರಿ, ರಾಸ್ಮೆ, ಅಳಲೇಕಾಯಿ, ಬೆಳ್ಳುಳ್ಳಿ, ಲವಂಗ, ಅರಿಸಿನ, ಚಂಗಲಕೋಷ್ಟ, ಕಿರುಗಡಸಿಗೆ, ಜೀರಿಗೆ, ಯಾಲಕ್ಕಿ, ಅಗಳುಶುಂಠಿ, ವಾದಕ್ಕಿ, ನುಗ್ಗೇಬೇರಿನ ತೊಕ್ಕು, ಲೊಕ್ಕೀಬೇರು, ಶ್ರೀತೊಳಸೀಬೇರು, ಇವಿಷ್ಟನ್ನೂ ಸಮಭಾಗವಾಗಿ, ಬಿಸಿನೀರಿನಿಂದರೆದು ಕೊಡಲು ಶೀತಜ್ವರಪರಿಹಾರಮಕ್ಕುಂ.

ಲೊಕ್ಕೀಚಿಗುರು, ಸೈಂಧವ, ಮೆಣಸು, ಈ ಮೂರನ್ನೂ ಸಮಭಾಗವಾಗಿ ಅರೆದು ಬಿಸಿನೀರಿನಿಂದ ಕೊಡಲು ವಾತಜ್ವರಪರಿಹಾರವಾಗುವುದು.

ಶುಂಠಿಯನ್ನೂ, ಬೆಳ್ಳುಳ್ಳಿಯನ್ನೂ ಅಂಬಿಲದಲ್ಲರೆದು, ಪ್ರಾತಃಕಾಲದಲ್ಲಿ ಸೇವಿಸಿದರೆ ಶೀತಜ್ವರಪರಿಹಾರವಾಗುವುದು.

## ಶೀತಜ್ವರಾಂಕುಶ

ತಾಳಕ ಮೂರುವರಹಾ ತೂಕ, ಕಲ್ಲುಸುಣ್ಣ ನಾಲ್ಕುವರಹಾ ತೂಕ ಇವನ್ನು ಲೋಳಿಸರದ ಬೇರಿನ ರಸದಲ್ಲಿ ಸಣ್ಣನಾಗಿ ಅರೆದು, ಚಿಕ್ಕಚಿಕ್ಕ ಬಿಲ್ಲೆಮಾಡಿ, ಹೊಸಮುಚ್ಚಳದಲ್ಲಿರಿಸಿ, ಮೇಲೊಂದು ಮುಚ್ಚಳವಂ ಮುಚ್ಚಿ, ಅದರ ಸಂದಿಗೆ ಸೇರ ಮಣ್ಣಂ ಕೊಟ್ಟು ಕುಕ್ಕುಟಪುಟ ಹಾಕುವುದು. ಆಮೇಲೆ ಬಿಸಿ ಚೆನ್ನಾಗಿ ಆರಿದ ವೇಳೆ ತೆಗೆದುಕೊಂಡು, ಆ ಬಿಲ್ಲೆಗಳಂ ಚೆನ್ನಾಗಿ ಮರ್ದಿಸಿ, ತಾಮ್ರದ ಭರಣಿಯಲ್ಲಿಯಾಗಲಿ, ದಂತದ ಭರಣಿಯಲ್ಲಿಯಾಗಲಿ ಇಟ್ಟುಕೊಂಡು ತೊಳಸೀಸೊಪ್ಪಿನ ರಸದಲ್ಲಿ ಗುಲಗಂಜೀತೂಕವಂ ಕಲಸಿ ದೇಹಕ್ಕೆ ಕೊಡಲು ಸಕಲವಾದ ಶೀತಜ್ವರಂ ಮಾಣ್ಗುಂ.

ನಾಯಿತೊಳಸೀಸೊಪ್ಪಂ ತಂದು, ಅಡೆಕಟ್ಟಿ ದೇಯಿಸಿ, ಅರಸಿನದ ಎರಡು ದುಡ್ಡುತೂಕ, ಒಂದು ಈರುಳ್ಳಿ, ಐದು ಮೆಣಸುಸಹ ಅರೆದುಕೊಡಲು ಶೀತಜ್ವರಂ ಮಾಣ್ಗುಂ.

ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲದಬೇರು, ಕಟುಕರೋಹಿಣಿ ಇವುಗಳನ್ನು ತುರುಚಿ ಬೇರಿನ ಕಷಾಯದಿಂದರೆದು ಕೊಡೆ ವಾತಜ್ವರಪರಿಹಾರವಾಗುವುದು.

ಚಿತ್ರಮೂಲದ ಬೇರು. ಸೈಂಧವಲವಣ, ಅಗುಳುಶುಂಠಿ, ವಾದಕ್ಕಿ, ಸಾಸವೆ ಇವಂ ಲೊಕ್ಕೀರಸದೊಳರೆದು, ಕೊಡೆ ವಾತಜ್ವರಪರಿಹಾರವಾಗುವುದು.

ಅಮರದವಳ್ಳಿ, ಭದ್ರಮುಸ್ತೆ, ಕಟುಕರೋಹಿಣಿ, ಶುಂಠಿ, ದೇವದಾರುಚಕ್ಕೆ ಹಿಪ್ಪಲಿ, ಹಿಪ್ಪಲೀಮೂಲ ಇವುಗಳನ್ನು ಸಮವಾಗಿ ಬೆಲ್ಲಗಣಿಕೆಬೇರಿನ ರಸದೊಳರೆದು ಕೊಡಲು ವಾತಜ್ವರಂ ಮಾಣ್ಗುಂ.

ಹಾಗಲದಹೂವು ಒಂಬತ್ತು, ನುಗ್ಗೇಹೂವು ಒಂಬತ್ತು, ಮೆಣಸು ಒಂಬತ್ತು, ಬೆಳ್ಳುಳ್ಳಿಬೇಳೆ ಒಂಬತ್ತು ಇವಂ ಬಿಸಿನೀರಿನಿಂದ ಅರೆದು ಕುಡಿಯೆ ವಾತಜ್ವರಂಗುಣಮಕ್ಕುಂ.

ಮತ್ತಂ ಬಿಳುಗಾರ, ಗಂಧಕ, ಇವುಗಳನ್ನು ಕ್ರಮದಿಂ ಒಂದಕ್ಕೊಂದು ಹೆಚ್ಚಾಗಿ ಕೂಡಿ, ನಾಲ್ಕುತೂಕ ಜಾಪಾಳ, ಸೈಂಧವಲವಣ, ಮೆಣಸು, ಹುಣಿಸೇಚಕ್ಕೆ ಸುಟ್ಟಬೂದಿ, ಸಕ್ಕರೆ ಇವುಗಳನ್ನು ಪ್ರತ್ಯೇಕ ವರಹಾತೂಕಸಹ ನಿಂಬೇಹಣ್ಣಿನ ರಸದಿಂದ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯುಂ ಮಾಡಿ ಶುಂಠೀರಸದಿಂದ ತೆಗೆದುಕೊಳ್ಳಲು ಶೀತಜ್ವರಂಗುಣಮಕ್ಕುಂ.

ನೆಲದಾಳೆಯಗೆಡ್ಡೆಯನ್ನರೆದು ಜೇನುತುಪ್ಪದಲ್ಲಿ ಕಲಸಿಕೊಡಲು ವಾತಜ್ವರಂ ಮಾಣ್ಗುಂ.

## ಕಷಾಯಗಳು.

ಭೂತೋಳಸೀಬೇರು, ವಿಷ್ಣುಕ್ರಾಂತಿ, ಶುಂಠಿ ಇವಂ ಸಮಾನಗೊಂಡು ಕಷಾಯವಂ ಕಾಯಿಸಿ ಹಿಪ್ಪಲಿ ಪ್ರತಿಪಾಕವಿಕ್ಕಿಕೊಡಲು ಶೀತಜ್ವರಂ ಮಾಣ್ಗುಂ.

ಶುಂಠಿ, ಕಳ್ಳಂಗಡಲೇಬೇರು, ಕೊತ್ತುಂಬರಿ, ಬೆಲ್ಲವತ್ತದಬೇರು, ಮುಡಿವಾಳ, ಗೇಕಿನಗೆಡ್ಡೆ ಇವಂ ಕಷಾಯವಿಕ್ಕಿಕೊಡಲು ಶೀತಜ್ವರಪರಿಹಾರವಾಗುವುದು.

ಬಿಳೀಹರಳೆಲೆ, ಅಮರದವಳ್ಳಿ, ಶುಂಠಿ, ಕಿರುಗುಳದ ಬೇರು, ಹೆಗ್ಗುಳದ ಬೇರು, ಚಂಗಲಕೋಷ್ಟ, ಇವುಗಳನ್ನು ಸಮಭಾಗವಾಗಿ ಕಷಾಯವಿಟ್ಟು ಅಷ್ಟಾವಶೇಷವಾಗಿ ಕಾಯಿಸಿ ಹಿಪ್ಪಲಿ ಪ್ರತಿಪಾಕವಿಟ್ಟು ಸೇವಿಸಿದರೆ ವಾತಜ್ವರಂ ತೀರ್ಗುಂ.

ಕೊತ್ತುಂಬರಿ, ಕೊಡಸಿಗೇಬೇರು, ಬಿಳಿಹರಿವೇಬೇರು, ಕಪಿಪಡವಲ, ಬಜೆ, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಬೇವಿನಕಡ್ಡಿ ಇವುಗಳನ್ನು ಸಮದಿಂ ಕಷಾಯ ಕಾಯಿಸಿ ಕೊಡಲು ವಾತಜ್ವರಂ ಮಾಣ್ಗುಂ.

ಬಿಲ್ವಪತ್ರೆಯಬೇರು, ಗುಳ್ಳದಬೇರು, ತಗ್ಗೀಬೇರು, ಪಾದರೀಬೇರು, ಬಾಗೇಬೇರು ಇವುಗಳ ಕಷಾಯವಂ ಕಾಯಿಸಿ ಸೇವಿಸಿದಲ್ಲಿ ವಾತಜ್ವರಪರಿಹರವಾಗುವುದು.

ನೆಲ್ಲೀಬೇರು, ಭದ್ರಮುಸ್ತೆ, ಬಿಲ್ವಪತ್ರೆಬೇರು, ಗೂಳದಬೇರು, ತಗ್ಗೀಬೇರು, ಪಾದರೀಬೇರು, ಬಾಗೇಬೇರು ಇವುಗಳ ಕಷಾಯವಂ ಕಾಯಿಸಿ ಸೇವಿಸಿದಲ್ಲಿ ವಾತಜ್ವರಂ ಕೆಡುಗುಂ.

ಕೊತ್ತುಂಬರಿ, ಅಮರದವಳ್ಳಿ, ಬೆಲ್ಲವತ್ತದಬೇರು, ಗುಳ್ಳದಬೇರು, ತಗ್ಗೀಬೇರು, ಪಾದರೀಬೇರು, ಬಾಗೇಬೇರು, ಇವುಗಳ ಕಷಾಯವಿಕ್ಕಿಸಿ ಸೇವಿಸಿದಲ್ಲಿ ವಾತಜ್ವರಂ ಮಾಣ್ಗುಂ.

ನೆಲಬೇವು, ಭದ್ರಮುಸ್ತೆ, ಅಮರದವಳ್ಳಿ, ನರುವಲದಬೇರು, ಹೆಗ್ಗುಳ್ಳ ನೆಲಗುಳ, ನೆಗ್ಗಿಲು, ಮೂರೆಲೆಹೊನ್ನೆ, ಶುಂಠಿ ಇವುಗಳ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ.

ಸೊಗದೇಬೇರು, ಹಿಪ್ಪಲಿ, ದ್ರಾಕ್ಷೀಹಣ್ಣು, ಸಬ್ಬಸಿಗೆ, ರೇಣುಕೆ ಇವುಗಳ ಕಷಾಯವನಿಕ್ಕಿ ತೆಗೆದುಕೊಳ್ಳಲು ವಾತಜ್ವರಂ ಮಾಣ್ಗುಂ.

ದೇವದಾರು, ಭುಜಪತ್ರೆ, ರಾಸ್ಮೆ ಸರಳದೇವದಾರು, ಕಳ್ಳಂಗಡಲೆ, ಇವುಗಳ ಕಷಾಯವನಿಕ್ಕಿ ತೆಗೆದುಕೊಳ್ಳಲು ವಾತಜ್ವರಂ ಕೆಡುಗುಂ.

ಅಮರದವಳ್ಳಿ, ಮೂರೆಲೆಹೊನ್ನೆ, ಕಳ್ಳಂಗಡಲೆ, ದ್ರಾಕ್ಷೀಹಣ್ಣು, ಬೆಣ್ಣೀಗರುಗ ಇವಂ ಕಷಾಯವಿಟ್ಟು ಸೇವಿಸಿದರೆ ವಾತಜ್ವರಂ ಕೆಡುಗುಂ.

ರಾಸ್ಮೆ, ಹಿಪ್ಪೇಬೇರು, ಶೀವನ್ನೀಬೇರು, ಕಳ್ಳಂಗಡಲೆ ಇವುಗಳ ಕಷಾಯವಿಕ್ಕಿ ತೆಗೆದುಕೊಳ್ಳಲು ಶೀತಜ್ವಪರಿಹಾರವಾಗುವುದು.

ಜಾತರಾಸೀಸಹಮೂಲ, ದ್ರಾಕ್ಷೀಹಣ್ಣು, ಶೀವನ್ನೀಬೇರು, ಅಮರದವಳ್ಳಿ, ಸಹ ಕಷಾಯುವನಿಕ್ಕಿ ತೆಗೆದುಕೊಳ್ಳಲು ಶೀತಜ್ವರಪರಿಹಾರಮಾಗುವುದು.

ಶುಂಠಿ, ಲಾವುಂಚ. ಭದ್ರಮುಸ್ತೆ, ಶ್ರೀಗಂಧ, ಮಡಿವಾಳಸಹಿತ ಕಷಾಯುಂ ಕಾಯಿಸಿ ತೆಗೆದುಕೊಳ್ಳಲು ವಾತಜ್ವರ, ಬಾಯಾರಿಕೆ, ಛರ್ಧಿ ಸಹ ಮಾಣ್ಗುಂ.

ಹೆಗ್ಗುಳ, ಕಳ್ಳಂಗಡಲೆ, ರಾಸ್ಮೆ, ಕಹಿದಸಲೆ, ಅಮರದವಳ್ಳಿ, ತಿಗಡೆ ಸಹ ಕಷಾಯಂ ಕಾಯಿಸಿ ತೆಗೆದುಕೊಳ್ಳೆ ವಾತಜ್ವರಪರಿಹಾರವಾಗುವುದು.

ಹಿಪ್ಪಲಿ, ಅಷ್ಟಮಧುಕ, ಕಳ್ಳಂಗಡಲೆ, ಶ್ರೀಗಂಧ, ಸೊಗದೇಬೇರು ಸಹಿತ ಕಷಾಯವಂ ತೆಗದುಕೊಂಡಲ್ಲಿ ಶೀತಜ್ವರಂಮಾಣ್ಗುಂ.

ಹಸುವಿನ ಹಾಲಿನಲ್ಲಿ ಬೆಲ್ಲವತ್ತದ ತಿರುಳನಿಕ್ಕಿ ಕಾಯಿಸಿ, ಆ ಹಾಲಂ ಕುಡಿಯೆ ಕೊಡಲು ವಾತಜ್ವರ, ಹೊಟ್ಟೇಶೂಲೆ ಸಹ ಗುಣಮಕ್ಕುಂ.

ಹರಳಬೇರನ್ನು ಹಾಲಿನಲ್ಲಿ ಹಾಕಿ ಕಾಯಿಸಿ, ಆ ಹಾಲಂ ಕುಡಿಯಲು ವಾತ ಜ್ವರ, ಹೊಟ್ಟೇನೋವು ಸಹ ಮಾಣ್ಗುಂ.

ಕಳ್ಳಂಗಡಲೆಬೇರು, ಕೊತ್ತುಂಬರಿ, ಶುಂಠಿ ಇವು ಪ್ರತ್ಯೇಕ ಎರಡು ವರಹಾ ತೂಕವಂ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಗುಣವಾಗುವುದು.

ಕೊತ್ತುಂಬರಿ, ಶುಂಠಿ, ಪ್ರತ್ಯೇಕ ಎರಡು ವರಹಾತೂಕವಂ ಕಷಾಯಂ ಕಾಯಿಸಿ ಕುಡಿಯೆ ವಾತಜ್ವರಂ ಮಾಣ್ಗುಂ.

ಗಂಡು ತುರುಚೇಬೇರು, ಅಮರದವಳ್ಳಿ, ಕೊಡನಾರೀಗೆಡ್ಡೆ ಇವಂ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ.

ಹಿಪ್ಪಲೀಮೂಲ, ಅಮರದವಳ್ಳಿ, ಶುಂಠಿ ಸಹ ಕಷಾಯವಿಕ್ಕಿ ಕುಡಿಯೆ ವಾತಜ್ವರಂ ಮಾಣ್ಗುಂ.

ಅಮರದವಳ್ಳಿ, ಬೆಲ್ಲವತ್ತದಬೇರು, ಕೊಡನಾರೀಗೆಡ್ಡೆ, ಕಳ್ಳಂಗಡಲೆಬೇರು, ಕೊತ್ತುಂಬರಿಸಹ ಕಷಾಯವಂ ಮಾಡಿ, ಕುಡಿಸಿದರೆ ವಾತಜ್ವರಂ ಕೆಡುಗುಂ.

ಜೀರಿಗೆ, ಶುಂಠಿ, ಮೆಣಸು, ಹಿಪ್ಪಲಿ, ಬೆಳ್ಳುಳ್ಳಿ, ಇವಂ ಸಮಾಂಶ ಕಷಾಯವಿಕ್ಕಿ ಸೇವಿಸೆ ಶೀತಜ್ವರಂ ಕೆಡುಗುಂ.

ಅರಳೀಪೊಳನಾರು, ಶುಂಠಿ, ಬಜೆ, ಬೇವಿನಕಡ್ಡಿ, ಎಲುವನಸಂದೀಬೇರು, ಬೋಳಂಗಡಲೇ ಬೇರು ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಶೀತಜ್ವರಂ ಗುಣಮಕ್ಕುಂ.

ವಿಷ್ಣುಕ್ರಾಂತಿ, ಸಹದೇವೀಬೇರು, ಶುಂಠಿ, ನೆಲಬೇವು, ಸೊಗದೇಬೇರು, ಇವುಗಳ ಕಷಾಯಂ ಕಾಯಿಸಿ ಹಿಪ್ಪಲಿ, ಜೇನುತುಪ್ಪ ಪ್ರತಿಪಾಕವನಿಕ್ಕಿ ಸೇವಿಸಿದರೆ ಶೀತಜ್ವರಪರಿಹಾರವಾಗುವುದು.

ಯಲಚಿಸೊಪ್ಪು, ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಶುಂಠಿ,

ಸೊಗದೇಬೇರು, ಭದ್ರಮುಸ್ತೆ, ಪರ್ಪಾಟಕ, ಎಲುವನಸಂದೀಬೇರು, ಸಹದೇವೀ ಬೇರು ಇವುಗಳನ್ನು ಸಮಭಾಗ ಕಷಾಯವನಿಕ್ಕಿ ತೆಗೆದುಕೊಳ್ಳಲು ವಾತಜ್ವರಂ ಗುಣಮಕ್ಕುಂ.

ಅಮರದವಳ್ಳಿ, ಸೊಗದೇಬೇರು, ಭದ್ರಮುಸ್ತೆ, ಕೊತ್ತುಂಬರಿ, ಕಟುಕರೋಹಿಣಿ, ಶುಂಠಿ ಇವೆಲ್ಲಾ ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ವಾತಜ್ವರ ಪರಿಹಾರವಾಗುವುದು.

ಪರ್ಪಾಟಕ, ಅಳಲೇಕಾಯಿ, ಶುಂಠಿ, ಗಂಟುಭಾರಂಗಿ, ನೆಲಗುಳ್ಳದ ಬೇರು, ಹಿಪ್ಪಲಿ, ಇವುಗಳನ್ನೆಲ್ಲಾ ಬಿಳ್ಳ ನೀರಿನಲ್ಲಿ ಹಾಕಿ ಅಷ್ಟಾವಶೇಷಕಷಾಯಂ ಕಾಯಿಸಿ ಕೊಡಲು ಶೀತಜ್ವರ, ವಿಷಜ್ವರ, ಬಾಯಿಯಲ್ಲಿ ನೀರಡಿಕೆ, ಶೋಭೆ, ಕೆಮ್ಮು, ಅರೋಚಕ ಸಹ ಮಾಣ್ಗುಂ.

ಬೆಲ್ಲವತ್ತದಬೇರು, ನರುವಲದಬೇರು, ಹೊಮ್ಮರದಬೇರು, ಶೀವನ್ನೀಬೇರು, ಪಾದರೀಬೇರು, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಔಡಲದಬೇರು, ಗುಳ್ಳದ ಬೇರು, ನೆಲಗುಳದಬೇರು, ಕಳ್ಳಂಗಡಲೆ, ಚಂಗಲಕೋಷ್ಟ, ಶುಂಠಿ, ಹಿಪ್ಪಲಿ ಮೆಣಸು, ಹಿಪ್ಪಲೀಮೂಲ ಇವುಗಳ ಕಷಾಯವಿಕ್ಕಿ ಕೊಡಲು ಶೀತಜ್ವರಂ ಕೆಡುಗುಂ.

ಅಮರದವಳ್ಳಿ, ಕೊಡನಾರೀಗೆಡ್ಡೆ, ಶುಂಠಿ ಇವುಗಳ ಕಷಾಯವಿಕ್ಕಿ ಕೊಡಲು ಶೀತಜ್ವರಂ ಮಾಣ್ಗುಂ.

ಶುಂಠಿ, ಹಿಪ್ಪಲೀಮೂಲ, ಅಮರದವಳ್ಳಿ ಇವಂ ಕಷಾಯವಿಟ್ಟು ಕುಡಿಯೆ ವಾತಜ್ವರಂ ತೀರ್ಗುಂ.

ಬೆಲ್ಲವತ್ತದಬೇರು, ನರುವಲದಬೇರು, ಶೀವನ್ನೀಬೇರು, ಪಾದರೀಬೇರು ಹೊಮ್ಮರದಬೇರು, ಅಮರದವಳ್ಳಿ, ನೆಲ್ಲೀಚಟ್ಟು, ಕೊತ್ತುಂಬರಿ ಇವುಗಳ ಕಷಾಯಂ ಕಾಯಿಸಿ ಕುಡಿಯೆ ವಾತಜ್ವರಂ ಮಾಣ್ಗುಂ.

ಅಮರದವಳ್ಳಿ, ಬೆಲ್ಲವತ್ತದಬೇರು, ಕೊಡನಾರೀಗೆಡ್ಡೆ, ಕಳ್ಳಂಗಡಲೇಬೇರು ಕೊತ್ತುಂಬರಿ, ಶುಂಠಿ ಇವಂ ಕಷಾಯವಿಕ್ಕಿ ಸೇವಿಸೆ ವಾತಜ್ವರಂ ಕೆಡುಗುಂ.

ದ್ರಾಕ್ಷೀಹಣ್ಣು, ಅಮರದವಳ್ಳಿ, ಲಾಮಂಚ, ಭದ್ರಮುಸ್ತೆ, ಶುಂಠಿ, ಪುಷ್ಕರ ಮೂಲಸಹ ಸಮಭಾಗ ಕಷಾಯಕಾಯಿಸಿ, ಪ್ರಾತಃಕಾಲದಲ್ಲಿ ಕೊಡಲು ವಾತಜ್ವರಂ ತೀರ್ಗುಂ.

ಮುಡಿವಾಳ, ಭದ್ರಮುಸ್ತೆ, ಪರ್ಪಾಟಕ, ಶುಂಠಿ, ಶ್ರೀಗಂಧ, ಕೊತ್ತುಂಬರಿ, ದೇವದಾರು, ಲವಂಗ, ನೆಲಬೇವು ಇವಂ ಸಮಭಾಗಮಾಡಿ ಕಷಾಯವಿಕ್ಕಿ ಸೇವಿಸಿದರೆ ಶೀತಜ್ವರಂ ಮಾಣ್ಗುಂ.

ಎಕ್ಕೇಬೇರು, ರೊಕ್ಕೀಬೇರು, ತಗ್ಗೀಬೇರು, ಶುಂಠಿ, ಕಟುಕರೋಹಿಣಿ ಇವಂ ಕಷಾಯವಿಟ್ಟು ಹಿಪ್ಪಲಿಯನದರೊಳ್ ಗಂಟುಗಟ್ಟಿಹಾಕಿ, ಕಾಯಿಸಿ ಅಷ್ಟಾವ

ಶೇಷವಾಗಿಳುಹಿ, ಆ ಹಿಪ್ಪಲಿಯನ್ನರೆದು ಕದಡಿ, ಆ ಕಷಾಯವಂ ಕೊಡಲು ಶೀತ ಜ್ವರಶಮನವಾಗುವುದು.

ಚಿಟ್ಟಾಡಲದಬೇರು, ಕೋಲುಹೊನ್ನೆ, ಶುಂಠಿ, ತಗ್ಗೀಬೇರು, ಹಂಸಪಾದೀ ಬೇರು ಇವಂ ಸಮನಾಗಿ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಗುಣಮಕ್ಕುಂ.

ತಗ್ಗೀಬೇರು, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಕಿರುಗುರು ಟಿಗೇಬೇರು, ವಿಷ್ಣುಕ್ರಾಂತಿ, ಶುಂಠಿ, ಇವುಗಳನ್ನು ಸಮಾಂಶಗೂಡಿ ಕಷಾಯಂ ಕಾಯಿಸಿ ಕುಡಿಯೆ ವಾತಜ್ವರಂತೀರ್ಗುಂ.

ಆಲದಬೀಳು, ಮುಡಿವಾಳ, ನೆಲ್ಲೀಬೇರು, ತಗ್ಗೀಬೇರು, ಅರಿಸಿನ, ಶುಂಠಿ, ತಾರೇಕಾಯಿ, ಇವೆಲ್ಲಾ ಸಮವಾಗಿ ಕಷಾಯಮಾಡಿ ಕುಡಿಯೆ ವಾತಜ್ವರಂ ತೀರ್ಗುಂ.

ಕೊಡಸಿಗೆಬೇರು, ಕೊತ್ತುಂಬರೀಬೀಜ, ಕಹಿಪಡವಲಬೀಜ, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಕಿರುಗುರಟಿಗೇಬೇರು, ವಿಷ್ಣುಕ್ರಾಂತಿ, ಶುಂಠಿ ಇವು ಗಳನ್ನು ಸಮಾಂಶವಾಗಿ ಕಷಾಯ ಕಾಯಿಸಿ ಕುಡಿಯೆ ವಾತಜ್ವರಂ ತೀರ್ಗುಂ.

ಕೊಡಸಿಗಬೇರು, ಕೊತ್ತುಂಬರೀಬೀಜ, ಕಹಿಪಡವಲದ ಬೀಜ, ಅಳಿಲೇ ಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಇವನ್ನೆಲ್ಲಾ ಸಮಭಾಗವಾಗಿ, ಎರಡು ಮಾನ ನೀರಿನಲ್ಲಿ ಹಾಕಿ, ಅಷ್ಟಾವಶೇಷವಾಗಿ ಕಾಯಿಸಿ, ಹಿಪ್ಪಲಿಯಂ ಚೂರ್ಣಿಸಿ, ಕದಡಿ ಊಟವಾದ ಎರಡುಗಳಿಗೆ ಮೇಲೆ ತೆಗೆದುಕೊಳ್ಳಲು ಶೀತಜ್ವರಂ ಮಾಣ್ಗುಂ.

ಕೊತ್ತುಂಬರೀಬೀಜ, ಶುಂಠಿ, ಅಮರದವಳ್ಳಿ, ಇವಂ ಸಮಾನವಾಗಿ ಕಷಾಯವಿಟ್ಟು ಅಷ್ಟಾವಶೇಷವಾಗಿ ಕಾಯಿಸಿ, ಬೆಲ್ಲದ ಪ್ರತಿಪಾಕವಿಟ್ಟು ಕೊಡಲು ವಾತಜ್ವರಂ ಬಿಡುವುದು.

ಒಂದುಮಾನ ನೀರು, ಒಂದುಮಾನ ಹಾಲುಸಹ ಕೂಡಿಸಿ ನೆಲಾವರಿಕೆ ಎಲೆಯನ್ನು ಅರೆದು ಕದಡಿ, ಕಾಯಿಸಿ, ಹಿಪ್ಪಲೀಪ್ರತಿಪಾಕವಿಕ್ಕಿ ಸೇವಿಸಿದರೆ ಶೀತ ಜ್ವರಪರಿಹಾರವಾಗುವುದು.

ಹಿಡಿಹಿಡಿಕೇಬೇರು, ತಗ್ಗೀಬೇರು, ಪಾಷಾಣಭೇದಿ ಇವುಗಳನ್ನರೆದು, ಮಜ್ಜಿಗೆಯಲ್ಲಿ ಕದಡಿ ಇಂಗನಿಕ್ಕಿ ಕಾಯಿಸಿ ಕುಡಿಯೆ ಶೀತಜ್ವರಂ ತೀರ್ಗುಂ.

ಹರಳಬೇರಂ ಹಾಲಿನಲ್ಲಿ ಹಾಕಿ ಕಾಯಿಸಿ ಕುಡಿಯಲು ಶೀತಜ್ವರ, ಹೊಟ್ಟೇ ಶೂಲೆಸಹ ಗುಣವಾಗುವುವು.

ಬೆಲ್ಲ, ಶುಂಠಿ, ಕಳ್ಳಂಗಡಲೆ, ಗುಳ್ಳ, ನೆಗ್ಗಲು ಸಹ ಹಾಲಿನಲ್ಲಿ ಹಾಕಿ ಕಷಾಯ ಕಾಯಿಸಿ ಕುಡಿಯೆ ವಾತಜ್ವರ, ಶೋಭೆ, ಮೂತ್ರಸಿಕ್ಕುಸಹ ಪರಿಹಾರವಾಗುವುವು.

ಅಮರದವಳ್ಳಿ, ರಾಷ್ಮೆ, ದೇವದಾರು, ಔಡಲದಬೇರು, ಶುಂಠಿ, ಇವಂ ಸಮಾನವಾಗಿ ಕೂಡಿ ಇಷ್ಟರ ಸಮಾಂಶ, ಗುಗ್ಗುಳದ ಧೂಪವನ್ನು ಸಹ ತುಪ್ಪ ದಲ್ಲಿ ಅಟ್ಟು ವರಹಾ ತೂಕವಂ ಸೇವಿಸಲು ವಾತಜ್ವರಂ ಮಾಣ್ಗುಂ.

ಗಂಟುಭಾರಂಗಿ, ವಿಷ್ಣುಕ್ರಾಂತಿ, ಅಕಲಗರೆ, ದೇವದಾರು, ತಗ್ಗಿ, ಚಂಗಲಕೋಷ್ಟ, ಚಿತ್ರಮೂಲ, ಹಂಸಪಾದಿ, ಹೊಂಗಬೀಜ, ಬೂದಗುಂಬಳ, ತಿಗಡೆ, ಮತ್ತಿ, ಕಹಿಪಡವಲ, ಬಿದುರು, ಇವಂ ಸಮತೂಕ ಹಾಕಿ ಕಷಾಯ ಕಾಯಿಸಿ ಕೊಟ್ಟಲ್ಲಿ ಶೀತಜ್ವರ, ವಿಷಮಜ್ವರ, ದೋಷಜ್ವರವೂ ಸಹ ಮಾಣ್ಗುಂ.

ಹೇರಳೇಹಣ್ಣು, ಶುಂಠಿ, ಎಗಚೀಬೇರು, ರಾಮಗುಳ್ಳ, ಅಮರದವಳ್ಳಿ ಸಹದೇವಿ, ಬೇವು, ವಿಷ್ಣುಕ್ರಾಂತಿ, ಜೀರಿಗೆ, ಇವಿಷ್ಟನ್ನು ಕಷಾಯಹಾಕಿ ತೆಗೆದುಕೊಂಡರೆ, ಅಥವಾ, ಮೆಣಸಿನಪುಡಿ, ಸಕ್ಕರೆ ತುಪ್ಪ ಸಹ ಕಲಸಿಕೊಂಡು ಒಳಕೆ ತೆಗೆದುಕೊಂಡರೆ ಶೀತಜ್ವರ, ವಿಷಮಜ್ವರ, ದೋಷಜ್ವರವೂ ಸಹ ಮಾಣ್ಗುಂ.

* ಆರವೇರು, *ರಂಗುವೇರು, ನೆಲಗುಳ್ಳ, *ಚಿಟ್ಟುಮುಟ್ಟವೇರು, ಶುಂಠಿ, ಅಳಿಲೇಕಾಯಿ, ಇವಂ ಕಷಾಯಂ ಕಾಯಿಸಿಕೊಡಲು ವಾತಜ್ವರಂ ಗುಣಮಕ್ಕುಂ.

ನೆಲಬೇವು, ರಾಮಗುಳ್ಳ, ಹಿಪ್ಪಲಿ, ಕರಿಬೇವು, ತಾರೆಕಾಯಿ, ಅರಳೀಚಕೆ ಅಥವಾ ಹತ್ತಿಬೇರು, ಅಥವ ಅರಕೀರೆ, ಇವುಗಳ ಕಷಾಯುವಂ ಹಾಕಿ ಸಕ್ಕರೆವೆರಸಿ ಕೊಡಲು ಶೀತಜ್ವರ, ವಿಷಮಜ್ವರ, ದಾಹಜ್ವರವೂ ಸಹ ಗುಣಮಕ್ಕುಂ.

ಕರ್ಕಾಟಕಶ್ರಂಗಿ, ಮರದರಿಸಿನ, ನೆಲಗುಳ್ಳ, ರಾಮುಗುಳ್ಳ, ತುಂಗಮುಸೆ, ಅಗುಳುಶುಂಠಿ, ಅಮರದವಳ್ಳಿ, ಹಿಪ್ಪಲೀಮೂಲ, ಯಷ್ಟಿಮಧುಕ, ಶುಂಠಿ, ಕಹಿಪಡವಲ, ಆಡುಸೋಗೆ, ಮೆಣಸು, ತಾರೇಬೇರು, ತಕ್ಕಲಿ ಇವಂ ಕಷಾಯವಿಟ್ಟು ಕೊಡಲು ವಾತಜ್ವರ ನಿಲ್ಲುವುದು..

ರಾಸ್ಮೆ, ಬೇಲದಹಣ್ಣು, ದೇವದಾರು, ಅಷ್ಟಮಧುಕ, ದ್ರಾಕ್ಷಿ, ಹಿಪ್ಪಲಿ, ರೇಣುಕೆ, * ಗಲಜರವೇರು, ಬಜೆಕರಕು, ಜಟಾಮಾಂಸಿ, ನಾಗದಾಳಿ, ಕೊನ್ನಾರಿಗೆಡ್ಡೆ, ಕುಂಬಳ, ಸೊಗದೇಬೇರು, ಅಮರದವಳ್ಳಿ, ಕೊತ್ತುಂಬರಿ, ಶುಂಠಿ ಇವಂ ಕಷಾಯಂ ಕಾಯಿಸಿ ಕೊಟ್ಟರೆ ವಾತಜ್ವರಂ ಕೆಡುಗುಂ.

ಧಾತಕೀಕುಸುಮ, ಎಗಟೀಚಕ್ಕೆ, ನೆಲಗುಳ್ಳ, ಚಿಟ್ಟೆಮುಟ್ಟಿ, ಶುಂಠಿ, ಅರಿಸಿನ ಇವಂ ಕಷಾಯವಿಕ್ಕಿಕೊಡಲು ವಾತಜ್ವರಂಮಾಣ್ಗುಂ.

## ವಾತಜ್ವರಹರ ಚೂರ್ನಗಳು.

### ಅಯಿಪತ್ತಿಚೂರ್ನ.

ಇಂಗು ವರಹಾತೂಕ, ಬಜೆ ಎರಡುವರಹಾತೂಕ, ಚಿತ್ರಮೂಲ ಮೂರು ವರಹಾತೂಕ, ಶುಂಠಿ ನಾಲ್ಕು ವರಹಾತೂಕ, ಬಿಸಿಮಾಡಿದ ಜೀರಿಗೆ ಐದುವರಹಾತೂಕ, ಅಳಿಲೇಕಾಯಿ ಆರು ವರಹಾತೂಕ, ಅಜಾವೋದ ಏಳುವರಹಾತೂಕ, ಚಂಗಲಕೋಷ್ಟ ಎಂಟುವರಹಾ ತೂಕ, ಲಾಳಕತಿ ಗೆಡ್ಡೆ ಒಂಬತ್ತು ವರಹಾತೂಕ

* ತೆಲಗು.

ಈ ಪ್ರಕಾರದಿಂ ಕೂಡಿ ಚೂರ್ಣವಂ ಮಾಡಿ, ಇಷ್ಟರಸಮ ಸಕ್ಕರೆಪೆರಸಿ ಮೂರು ಬೆರಳಿಂದೊತ್ತಿ ಬಂದಷ್ಟುಚೂರ್ಣವಂ ಉದಯದಲ್ಲಿ ಬಿಸಿ ನೀರಿನಿಂದ ಕಲಸಿ ಸೇವಿಸಲು ವಾತಜ್ವರ ಗುಣಮಕ್ಕುಂ.

## ನಸ್ಯವಿಧಿ.

ನಿಂಬೇಹಣ್ಣಿನರಸ, ಎಕ್ಕದಹಾಲು, ಬೆರಣಿಬೂದಿ ಇವುಗಳನ್ನು ಎಕ್ಕದಹಾಲನಲ್ಲಿ ಹಾಕಿ ನಸ್ಯವಿಧಿಯಂತೆಮಾಡಲು ಶೀತಜ್ವರವು ಬಿಟ್ಟುಹೋಗುವುದು.

ಸೈಂಧವ ಲವಣ, ಕೊನ್ನಾರಿಗೆಡ್ಡೆ, ಗುಳದ ಹಣ್ಣು, ಯಷ್ಟಿಮಧುಕ ಇವಂ ಚೂರ್ಣಮಾಡಿ ನಸ್ಯವಂ ಮಾಡೆ ಶೀತಜ್ವರಂ ಮಾಣ್ಗುಂ.

## ದೂಪ.

ಒಂದೆಲಗನ ಸೊಪ್ಪು, ಗಾಂಧಾರಿ ಸೊಪ್ಪು, ಎಕ್ಕೆಹಣ್ಣಿರ, ಹರಳೆಲೆ, ಗಣಿಗಲೆ ಸೊಪ್ಪು, ಆಡಿನ ಹಿಕ್ಕೆ ಇವುಗಳನ್ನೆಲ್ಲಾ ದಳಿಗೆಯಲ್ಲಿ ಹಾಕಿ ಹತ್ತು ಪೊಗೆ ಅಂಬಿಲವಂ ಹುಯ್ದು ಕುದಿಬರುವಹಾಗೆ ಕಾಯಿಸಿ, ಆ ಹೊಗೆಯಿಂದುಬ್ಬೆಯಕಾಯಿಸಲು ವಾತಜ್ವರಂ ತೀರ್ಗುಂ.

## ಶಾಕ.

ಮೊಸರು, ಗೋಮೂತ್ರ, ಅಂಬಿಲ ಇವುಗಳನ್ನು ಕುದಿಬರುವಂತೆ ಕಾಯಿಸಿ ಉಪಯೋಗಿಸಲು ಅತಿತೀವ್ರವಾದ ಶೀತಪರಿಹಾರವಾಗುವುದು.

## ಲೇಪ.

ಶ್ರೀತೊಳಸಿಯನ್ನೂ ನುಗ್ಗೇದೇರನ್ನೂ ಮಜ್ಜಿಗೆಯಿಂದರೆದು ಲೇಪ ಮಾಡೆ ಶೀತಜ್ವರಂ ಮಾಣ್ಗುಂ.

ಪುತ್ರಜೀವೀತಿರುಳನ್ನು ಚೆನ್ನಾಗಿ ಕುಟ್ಟಿ ಮುದ್ದೆಯಾಗುವಂತೆ ಒರಳಲ್ಲಿ ಇಡಿದು, ಇದರೆಂಟುಮಡಿ ನೀರು ಹುಯ್ದು, ಒಲೆಯ ಮೇಲಿಟ್ಟು ಇಡಿದ ಮುದ್ದೆಯಂ ಹಾಕಿ, ಹರಳನಡುವಂತೆ ಅಟ್ಟು, ಹದವ ನೋಡಿ, ಬಸಿದುಕೊಂಡು ಆ ಎಣ್ಣೆಯಿಂ ಸರ್ವಾಂಗಲೇಪನವಂ ಮಾಡಿಕೊಂಡರೆ, ವಾತಜ್ವರ, ತಾಪಜ್ವರ, ಸುಖಸನ್ನಿ, ಪೈತ್ಯದೋಷ ಮುಂತಾಗಿ ಪರಿಹಾರವಾಗುವುವು.

ಸಹದೇವೀರಸದಲ್ಲಿ ಕಟುಕರೋಹಿಣಿಯನ್ನರೆದು, ಅಪಾದಮಸ್ತಕ ಪರ್ಯಂತ ಲೇಪವಂ ಮಾಡಲು, ವಾತಜ್ವರ, ತಾಪಜ್ವರ, ತರುಣಜ್ವರಸಹ ಮಾಣ್ಗುಂ.

ಕಟುಕರೋಹಿಣಿ, ಅಗಿಲು, ಖಚೋರ, ಸಹದೇವಿ, ಬಜೆ, ಕುಂಕುಮಾದ ಹೂವು ಇವುಗಳನ್ನು ಅರೆದು ಸಂದುಗಳಲ್ಲಿ ಪೂಸಿದರೆ ಶೀತಜ್ವರಪರಿಹಾರವಾಗುವುದು.

ಹೆಬ್ಬುಲಿ, ಕಿರುಬುಲಿ, ಸುರುಸುರಿಗೆ ಈ ಸೊಪ್ಪುಗಳ ರಸ ಒಂದು ಮಾನವಂ ಹಿಂಡಿ ಜ್ವರಬಂದವರ ನೆತ್ತಿಯೊಳ್ ಸುತ್ತಲೂ ಎರಡುಪಕ್ಕೆಕ್ಕೂ ಪೊರವಾರಿಗೂ ಹಿಮ್ಮಡಿಪರ್ಯಂತವೂ ತೊಡೆಯಲು ಮೂರುದಿನಕ್ಕೆ ಶೀತಜ್ವರಂ ಗುಣಮಕ್ಕುಂ.

ಗಾಂಧಾರೀಸೊಪ್ಪಿನರಸವಂ ನಸುಬಿಸಿಯಂ ಮಾಡಿ ನೆತ್ತಿಗೊತ್ತೆ ವಾತ ಜ್ವರಪರಿಹಾರವಾಗುವುದು.

## ತೈಲಗಳು.

ಒಂದು ಬಳ್ಳಮಜ್ಜಿಗೆ, ಒಂದುಬಳ್ಳ ಎಣ್ಣೆಸಹ ಕೂಡ ಹನಿಸಿ ಕಾಯಿಸುವಾಗ ಹಾಕುವ ಕಲ್ಕದ್ರವ್ಯ.—ರಾಸ್ಮೆ, ಶುಂಠಿ, ಚಂಗಲಕೋಷ್ಟ, ಶ್ರೀಗಂಧ, ಸಬ್ಬಸಿಗೆ, ಯಷ್ಟಿಮಧುಕ, ಕೊಡನಾರೀಗೆಡ್ಡೆ, ಹಿಪ್ಪಲಿ, ಕಳ್ಳಂಗಡಲೆಬೇರಿನ ತೊಕ್ಕು, ಅರಗು, ಸೈಂಧವ, ಸೊಗದೇಬೇರು, ಕೊರಟಿಗೆಸಹಮೂಲ, ದೇವದಾರು, ತಾರೇಕಾಯಿ, ಲಾಮಂಚ, ಸಮುದ್ರದನೊರೆ, ಕಟುಕರೋಹಿಣಿ, ಮುಡಿವಾಳ, ಇವುಗಳನ್ನು ಪ್ರತ್ಯೇಕವಾಗಿ ಮೂರುಹೊನ್ನುತೂಕವನ್ನು ಚೂರ್ಣಿಸಿ, ಕಷಾಯ ಹಾಕಿ ತೈಲ ಪಾಕದಿಂದ ಇಳುಹಿಕೊಂಡು, ಅಭ್ಯಂಗನವಂ ಮಾಡೆ, ಶೀತಜ್ವರ, ತಾಪಜ್ವರ, ಸಂತಾಪಗಳು ಸಹ ಮಾಣ್ಗುಂ. ಇದು ರಾಸ್ಮಾದಿತೈಲವೆನಿಸಿಕೊಂಬುದು.

## ಸಹದೇವೀತೈಲ.

ಸಹದೇವೀ ಸೊಪ್ಪಿನರಸ ಒಂದುಬಳ್ಳ, ಅಂಬಿಲ ಒಂದು ಬಳ್ಳ ಇವುಗಳನ್ನು ಒಂದುಗೂಡಿ ಹನಿಸಿ, ಒಲೆಯಮೇಲೆ ಇಟ್ಟು ಇದರಲ್ಲಿ ಹಾಕುವ ಕಲ್ಕದ್ರವ್ಯಗಳು :— ಶ್ರೀಗಂಧ, ಕಟುಕರೋಹಿಣಿ, ಚಿತ್ರಮೂಲ, ಮೆಣಸು, ಸಬ್ಬಸಿಗೆ, ಮರದರಿಸಿನ, ಶುಂಠಿ, ಇವುಗಳು ಪ್ರತ್ಯೇಕವಾಗಿ, ನಾಲ್ಕುವರಹಾತೂಕ ವನ್ನು ಚೂರ್ಣಿಸಿಹಾಕಿ ಒಂದು ಬಳ್ಳ ಎಣ್ಣೆಯನ್ನು ಹುಯ್ದು, ಕಾಯಿಸಿ, ಹದದಲ್ಲಿಳುಹಿ, ದೇಹಲೇಪವಂ ಮಾಡಲು, ಶೀತಜ್ವರ, ಗರ್ಭಿಣೀಜ್ವರಸಹ ಮಾಣ್ಗುಂ.

## ಹಸ್ತಿಕರ್ಣಿತೈಲ.

ಮೊಗವಾಳೆಯೆಲೆ, ಮೊಗವಾಳೆದಂಟು, ಮೊಗವಾಳೆ ಗೆಡ್ಡೆ ಇವುಗಳನ್ನು ಚೆನ್ನಾಗಿ ಕತ್ತರಿಸಿದ ಹೋಳು ಒಂದು ಕೊಳಗದಷ್ಟನ್ನು ನಾಲ್ಕುಕೊಳಗ ಅಂಬಿಲದಲ್ಲಿ ಕಷಾಯವೆತ್ತಿ ಚಾತುರ್ಭಾಗಾವಶೇಷವಾಗಿ ಕಾಯಿಸಿ, ಇಳುಹಿ, ಶೋಧಿಸಿಕೊಂಡು ಈ ತೈಲ ನಾಲ್ಕರಲ್ಲಿ ಒಂದು ಭಾಗಕ್ಕೆ ಹಸಿ ಮೊಗವಾಳೆ ಗೆಡ್ಡೆಯಂ ಚೂರ್ಣಮಾಡಿ ಒಂದು ಕೊಳಗ ಹಾಲಿನಲ್ಲಿ ಹಾಕಿ, ಅದರಲ್ಲಿ ಒಂದು ಬಳ್ಳ ಎಣ್ಣೆಯನ್ನು ಹನಿಸಿ ಪಾಕವಂ ಮಾಡಿ, ತೈಲಶೇಷವಾಗಿಳುಹಿ, ಮೊದಲು ಶೋಧಿಸಿದ ಕಷಾಯದಲ್ಲಿ

ಈ ತೈಲದಿಂದ ಅಭ್ಯಂಗನ ನಸ್ಯಗಳಂ ಮಾಡಿಸಲು, ಶೀತಜ್ವರ, ವಿಷಮಜ್ವರ, ಸಂತತ ಜ್ವರ, ಛಳಿಗೂಡಿದ ಜ್ವರ ಸಹ ಗುಣಮಕ್ಕುಂ.

## ಮಹಾಹಸ್ತಿಕರ್ಣಿ ತೈಲ.

ಮೊಗವಾಳಿಗೆಡ್ಡೆ, ಕಳ್ಳಂಗಡಲೆ, ತುರುಚನಬೇರು, ನೀಲೀಬೇರು, ರಾಸ್ನೆ, ದೇವದಾರು, ಗಾಂಧಾರಿ, ಸಹದೇವಿ, ಶ್ರೀತೊಳಸಿ, ಲೊಕ್ಕಿ ಇವು ಪ್ರತ್ಯೇಕ ಹತ್ತು ಹಲಗಳನ್ನಿಡಿದು, ನಾಗಳ (ನಾಲ್ಕುಕೊಳಗ)ನೀರಿನಲ್ಲಿಹಾಕಿ ಕಷಾಯವಿಕ್ಕಿ ಚಾತುರ್ಭಾಗಾವಶೇಷವಾಗಿ ಕಾಯಿಸಿ ಶೋಧಿಸಿಕೊಂಡು, ಅದರಲ್ಲಿ ಎರಡುಬಳ್ಳ ಎಣ್ಣೆಯಂ ಹನಿಸಿ, ಈ ಎಣ್ಣೆಸಮಾನ ಗಾಂಧಾರೀರಸವಂ ಹುಯ್ದು, ಬಳ್ಳಮಜ್ಜಿಗೆಯಂ ಕದಡಿ ಪಾಕಮಾಡುವಾಗ ಹಾಕುವ ಕಲ್ಕದ್ರವ್ಯ—ಕೊಡಸಿಗೆ, ಅತಿಬಜೆ, ಭದ್ರಮುಸ್ತೆ, ರಾಸ್ನೆ, ರೇಣುಕೆ, ಕಹಿಪಡವಲ, ಚಂಗಲಕೋಷ್ಟ ಕರಿದೇವಿನಸೊಪ್ಪು, ದೇವದಾರು, ಅಗಳುಶುಂಠಿ, ಮರದರಿಸಿನ, ಶುಂಠಿ, ಮೆಣಸು, ಹಿಪ್ಪಲಿ, ವಾದಕ್ಕಿ, ಚಿತ್ರಮೂಲ, ಲವಂಗ, ತುಳಸಿ, ಕಟುಕರೋಹಿಣಿ, ಕರ್ಪೂರ ಶುಂಠಿ, ಅಗಿಲು, ಮಂಜಿಷ್ಟೆ, ಸಬ್ಬಸಿಗೆ, ತಕ್ಕೋಲ, ಗಂಟುಭಾರಂಗಿ, ಹಿಪ್ಪಲೀಮೂಲ, ಚವ್ಯ, ಉಳ್ಳಿ ಇಲ್ಲಣ ಇವುಗಳನ್ನೆಲ್ಲಾ ಪ್ರತ್ಯೇಕವಾಗಿ ನಾಲ್ಕು ವರಹಾತೂಕವಂ ಚೂರ್ಣಿಸಿ ವಸ್ತ್ರಗಾಳಿತವಂ ಮಾಡಿಹಾಕಿ ಪಾಕದಲ್ಲಿಳುಹಿಕೊಂಡು, ಈ ತೈಲದಿಂದ ಅಭ್ಯಂಗನ, ನಸ್ಯಂಗಳಂ ಮಾಡಲು, ಶೀತಜ್ವರ, ಚಾತುರ್ಥಿಕಜ್ವರ, ಕ್ಷಯವ್ಯಾಧಿ, ಉದರರೋಗ ಸಹ ಗುಣಮಕ್ಕುಂ.

## ಅಶ್ವಗಂಧಿ ಬಲಾಕ್ಷ್ಯಾದಿತೈಲ.

ಹಿರೇಮದ್ದಿನ ಬೇರು, ಅರಗು ಇವು ಪ್ರತ್ಯೇಕ ಎರಡುಬಳ್ಳ, ಚಂಗಲ ಕೋಷ್ಟ, ಕಟುಕರೋಹಿಣಿ, ಗಂಟುಭಾರಂಗಿ ಇವು ಪ್ರತ್ಯೇಕ ಹತ್ತುಹಲ, ವಿಷ್ಣು ಕ್ರಾಂತಿ, ನೆಲಗುಳ್ಳ, ಬೇವಿನ ಚಕ್ಕೆ, ಶ್ರೀಗಂಧ, ಅಮರದವಳ್ಳಿ, ಪಾದರೀ ಬೇರು, ನೆಗ್ಗಿಲುಬೇರು, ಅರಳೀಚಕ್ಕೆ, ತಪಸೀನಾರು, ಲೊಕ್ಕೀಬೇರು, ಚಿತ್ರಮೂಲ, ಮುಳ್ಳುತೊಗ್ಗಿ, ಹಿಪ್ಪೆಹೂವು ಇವುಗಳು ಪ್ರತ್ಯೇಕ ಐದುಹಲ, ಇಂಗಲದ ಚಕ್ಕೆ ಕೋಲುಮುರಕನ ಚಕ್ಕೆ, ಲೊಕ್ಕೀಬೇರು, ತಪಸೀನಾರು, ಚಿತ್ರಮೂಲ, ಮುಳ್ಳು ತೊಗ್ಗೆ, ಶತ್ರುಪತ್ರಬೇರು, ಉಪ್ಪೇಬೇರು, ಪೊಡಪತ್ರೆ, ಈಶ್ವರೀ ಇವುಗಳು ಪ್ರತ್ಯೇಕ ನಾಲ್ಕುಹಲ, ಈ ಪ್ರಕಾರ ಮೂಲಿಕೆಗಳನೊಟ್ಟುಗೂಡಿ, ಇದರ ನಾಲ್ಕುಮಡಿ ನೀರು ಹಾಕಿ ಕಷಾಯವನಿಟ್ಟು, ಅಷ್ಟಾವಶೇಷವಾಗಿ ಇಳುಹಿಕೊಂಡಮೇಲೆ ಹಾಕುವ ರಸಗಳು—ಒಂದೆಲಗನರಸ, ಸಹದೇವೀರಸ, ಎಲುವನಸಂದೀರಸ, ಶಿಪರಿಗೆಡ್ಡೆರಸ ಇವುಗಳು ಪ್ರತ್ಯೇಕ ಎರಡುಬಳ್ಳ ಪ್ರಕಾರದಲ್ಲಿ ಹನಿಸಿ, ಆ ಬಳಿಕ

ಹಾಕುವ ಕಲ್ಕದ್ರವ್ಯಗಳು—ಗಂಟುಭಾರಂಗಿ, ದ್ರಾಕ್ಷಿ, ನೆಲಬೇವು, ಹೆಗ್ಗುರಟಿಗೆ, ಅರಿಸಿನ, ಮರದರಿಸಿನ, ಭದ್ರಮುಸ್ತೆ, ಹಿಪ್ಪಲಿ, ಅಜಾವೋದ, ಮೆಂತ್ಯ, ಯಷ್ಟಿಮಧುಕ, ಜಟಾಮಾಂಸಿ, ಇವುಗಳು ಪ್ರತ್ಯೇಕ ಒಂದೊಂದು ಹಲವಂ ಚೂರ್ಣಿಸಿ ಹಾಕಿ, ಈ ಚೂರ್ಣದ ನಾಲ್ಕುಮಡಿ ಅಚ್ಚೆಳ್ಳೆಣ್ಣೆಯನ್ನು ಹುಯ್ದು, ತೈಲಪಾಕದಲ್ಲಿ ಳುಹಿಕೊಂಡು, ಸೇವಿಸಲು ಶೀತಜ್ವರಂ ಶಮನಮಕ್ಕುಂ.

ಸೈಂಧವಲವಣಂ ಯವಕ್ಷಾರ ಇವೆರಡನ್ನೂ ಅರೆದು, ಅಂಬಿಲ, ಎಳ್ಳೆಣ್ಣೆ ಸಮಾನವಾಗಿ ಮಾಡಿ ಇದರಲ್ಲಿ ಕದಡಿ ಎಣ್ಣೆಯುಳಿವಷ್ಟು ಅಭ್ಯಂಗನ ಸ್ನಾನಂಗೆಯ್ಯೆ ಶೀತಜ್ವರಂ ಶೀರ್ಗುಂ.

## ಸಹದೇವೀ ತೈಲ. (೨)

ಸಹದೇವೀರಸ, ಎಕ್ಕದಸೊಪ್ಪಿನರಸ, ತುಳಸೀರಸ ಇವು ಪ್ರತ್ಯೇಕ ಒಂದು ಬಳ್ಳ, ಅಂಬಿಲ ಒಂದುಕೊಳಗ, ಎಣ್ಣೆ ಒಂದುಬಳ್ಳ ಸಹ ಹುಯ್ದು ಪಾಕಮಾಡುವಾಗ ಹಾಕುವ ಕಲ್ಕದ್ರವ್ಯಗಳು—ಭದ್ರಮುಸ್ತೆ, ಹಿರೇಮದ್ದಿನಬೇರು, ಅರಿಸಿನ, ಯಷ್ಟಿಮಧುಕ, ಲಾಮಂಚ, ಶ್ರೀಗಂಧ, ಕಟುಕರೋಹಿಣಿ, ಅಮರದವಳ್ಳಿ, ಚಿತ್ರಮೂಲ, ಮೆಣಸು, ಮರದರಿಸಿನ, ಸಬ್ಬಸಿಗೆ, ಶುಂಠಿ, ಹಿಪ್ಪಲಿ ಇವುಗಳಂ ಪ್ರತ್ಯೇಕಂ ಎರಡುವರಹಾತೂಕವಂ ಚೂರ್ಣಿಸಿ ಹಾಕಿ ಕಾಯಿಸಿ, ಹದದಲ್ಲಿಳುಹಿಕೊಂಡು ಅಭ್ಯಂಗನವಂ ಮಾಡಲು ಶೀತಜ್ವರಂ ಮಾಣ್ಗುಂ.

ಇದೇ ಶೀತಜ್ವರಕ್ಕೆ ಮುಖ್ಯವಾದ ತೈಲ. ಈ ತೈಲವೇ ಬಾಣಂತಿಯರಿಗೂ ಬಾಲಕರಿಗೂ, ಮುಪ್ಪಿನವರಿಗೂ ಎಲ್ಲರಿಗೂ ಅತ್ಯಂತ ಹಿತಕರಮಪ್ಪುದು. ಗರ್ಭಿಣಿಯರಿಗೆ ಈ ತೈಲವೇ ಮಹಾಲೇಸಕ್ಕುಂ. ಯಕ್ಷರಾಕ್ಷಸಭೂತಪಿಶಾಚಾದಿಗಳಿಗೆ ಉಚ್ಚಾಟನಮಕ್ಕುಂ ಇದೇ ಸಕಲಕ್ಕೂ ಉತ್ತಮ ತೈಲಮಕ್ಕುಂ.

## ಹಸ್ತಿಕರ್ಣಿತೈಲ.

ಬಲರಾಕ್ಷಸ ಗೆಡ್ಡೆ, ಕಳ್ಳಂಗಡಲೆ, ನೊಸಗೊನ್ನೆ, ರಾಸ್ಮೆ, ನೀಲಿ, ದೇವದಾರು, ಗಾಂಧಾರಿ, ಸಹದೇವಿ, ತುಲಸಿ, ನಾವಲಗೆಡ್ಡೆ ಇವಿಷ್ಟು ಪ್ರತ್ಯೇಕವಾಗಿ ಹತ್ತು ಪಲಂಗಳು (ಪಲಂ=ಮೂರುರೂಪಾಯಿತೂಕ) ತೂಕ ಸೇರಿಸಿ ಒಂದು ಕೊಪ್ಪರಿಗೆಯಲ್ಲಿ ಹಾಕಿ, ನಾಲ್ಕುಕೊಳಗ ನೀರನ್ನು ಹುಯ್ದು ಚಾತುರ್ಭಾಗವಾಗುವ ಹಾಗೆ ಕಷಾಯವಂ ಕಾಯಿಸಿ, ಶೋಧಿಸಿಕೊಂಡು ಬೇರೊಂದು ಕೊಪ್ಪರಿಗೆಯಲ್ಲಿ ಹಾಕಿ, ಎಣ್ಣೆ ಎಂಟುಸೇರನ್ನೂ, ಗಾಂಧಾರೀರಸ ಎಂಟು ಸೇರನ್ನೂ, ಮಜ್ಜಿಗೆ ಎಂಟು ಸೇರನ್ನೂ, ಕ್ಯಾದಿಗೆಬೇರಿನರಸ ಹದಿನಾರು ಸೇರನ್ನೂ, ಅಂಬಿಲದ (ಅಕ್ಕಿತೊಳೆದ) ನೀರು ಎಂಟುಸೇರನ್ನೂ, ಆ ಕೊಪ್ಪರಿಗೆಯಲ್ಲಿ ಹಾಕಿ ಕಾಯಿಸಿ

ಅದರಲ್ಲಿ ಈ ಕೆಳಗೆಕಂಡ ಕಲ್ಕದ್ರವ್ಯಗಳು—ಕೊಡಸಿಗೆಬೀಜ, ಅತಿಬಜೆ, ಕೊನ್ನಾರಿ ಗಡ್ಡೆ, ರೇಣುಕ, ರಾಸ್ನೆ, ಕಹಿಪಡವಲ, ಚಂಗಲಕೋಷ್ಟ, ಕರಿಬೇವಿನ ಬೀಜ, ವಾಯುವಿಳಂಗ, ಅಗುಳುಶುಂಟಿ, ಮರದರಿಸಿನ ಶುಂಠಿ, ಹಿಪ್ಪಲಿ, ಮೆಣಸು, ವಾದಕ್ಕಿ, ಚಿತ್ರಮೂಲ, ಲವಂಗ, ತ್ರಿಫಲ, ತುಳಸಿ, ಕಟುಕರೋಹಿಣಿ, ಖರ್ಜೂರ, ಅಗಿಲುಚಕ್ಕೆ, ಮಂಜಿಷ್ಟೆ, ನಾಗದಾಳಿಸೊಪ್ಪು, ಗಂಟುಧಾರಂಗಿ, ಹಿಪ್ಪಲಿಮೂಲ, (ಮೋಡಿ), ಚವ್ಯ, ಬೆಳ್ಳುಳ್ಳಿ, ಅಗರಧೂಮ ಇವುಗಳನ್ನು ನಾಲ್ಕುನಾಲ್ಕುತೂಕ ಚೂರ್ನವಂ ಮಾಡಿ ವಸ್ತ್ರಗಾಳಿತವಂ ಮಾಡಿ ಕೊಪ್ಪರಿಗೆಯಲ್ಲಿ ಹಾಕಿ ಕಾಯಿಸಿ ಇದರಿಂ ಬಂದ ತೈಲವನ್ನು ಅಭ್ಯಂಗನಕ್ಕೆ ಉಪಯೋಗಿಸಲು ಶೀತಜ್ವರ, ಏಕಾಹಿಕಜ್ವರ, ದ್ವ್ಯಾಹಿಕಜ್ವರ, ವಿಷಮಜ್ವರ ಮೊದಲಾದವುಗಳು ನಾಶವಾಗುವುವು.

ಸಹದೇವೀ ತೈಲ. (೩)

ಸಹದೇವೀರಸ ಒಂದು ಪಡಿ, ಎಕ್ಕದೆಲೆರಸ ಒಂದು ಪಡಿ, ಹುಣಿಸೆಯ ತೊಕ್ಕಿನ ರಸ ಒಂದುಪಡಿ, ತುಳಸೀರಸ ಒಂದುಪಡಿ, ಒಳ್ಳೆಣ್ಣೆ ಒಂದುಪಡಿ ಇವೆಲ್ಲ ವನ್ನುಹಾಕಿ ಕಾಯಿಸಿ ಅದರೊಳಗೆ ಹಾಕತಕ್ಕ ಕಲ್ಕದ್ರವ್ಯಗಳು—ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲ, ಅರಿಸಿನ, ಬಜೆ, ಕಟುಕರೋಹಿಣಿ, * ಬಂದಾರೀವೇಳ್ಳು, ಸಾಸವೆ, ಬೇವಿನಬೀಜ, ಹಾಲುಕೊರಟಿಗೆ ಬೇರು, ಅಗಿಲು ಗಂಧ, ಸಜ್ಜರಸ ಕರ್ಪೂರ, ಶುಂಠಿ, ಚಂಗಲುಕೋಷ್ಟ ಇವಿಷ್ಟೂ ಪ್ರತ್ಯೇಕ ನಾಲ್ಕು ತೂಕವನ್ನು ಚೂರ್ಣಿಸಿ, ಕಾಯಿಸಿ ಬಂದ ತೈಲವನ್ನು ಶರೀರಕ್ಕೆ ಲೇಪನವಂ ಮಾಡಲು ಶೀತಜ್ವರ, ವಿಷಮಜ್ವರ, ಏಕಾಹಿಕ, ದ್ವ್ಯಾಹಿಕ, ತ್ರ್ಯಾಹಿಕ, ಚಾತುರ್ಥಿಕ ವಿಷಮಜ್ವರ ಸಹ ಮಾಣ್ಗುಂ. ಸನ್ನಿಪಾತಜ್ವರಸಹ ಮಾಣ್ಗುಂ.

ಅಂತು ವಾತಜ್ವರ ಬಗೆ ಒಂಡಕ್ಕೆ ಕಷಾಯ ಚೂರ್ಣ ನಸ್ಯ ಧೂಪ ಶಾಖ ಲೇಪ ತೈಲ ಇವುಗಳೆಲ್ಲಾ ಪ್ರಯೋಗಗಳು.

ಇಂತು ಸಕಲವೈದ್ಯಸಂಹಿತಾಸಾರಾರ್ಣವದೊಳ್
ತರಂಗಾಶ್ವಾಸಂ ಸಂಪೂರ್ಣಂ

---

## ಛಳಿಜ್ವರ ಚಿಕಿತ್ಸೆಗಳು.

(ಕಲ್ಕಗಳು)

ಎಕ್ಕದಹೂವು ಮೂರು, ಗಜ್ಜುಗದಕುಡಿ ಮೂರು, ಹಿಪ್ಪಲಿ, ಮೆಣಸು ಏಳು ಇವುಗಳನ್ನೆಲ್ಲಾ ಅರೆದು ಮೂರು ಗುಳಿಗೆಯಂ ಮಾಡಿ, ಮೂರುದಿನ ಛಳಿ ಬರುವ ಸಮಯದಲ್ಲಿ ಒಂದೊಂದು ಗುಳಿಗೆಯನ್ನು ಕೊಡಲು ಛಳಿಜ್ವರಂಮಾಣ್ಗುಂ.

* ತೆಲಗು.

ಗರುಗದಸೊಪ್ಪಿನಲ್ಲಿ ಒಂದು ಪಾವು ರಸವಂ ಹಿಂಡಿ ಥಳಿಬರುವ ಸಮಯದಲ್ಲಿ ಕೊಡಲು ಥಳಿಜ್ವರಂ ಮಾಣ್ಗುಂ.

ಜೀರಿಗೆಯಂ ಹುರಿದು ಪುಡಿಮಾಡಿ, ಬೆಲ್ಲವೆರಸಿ ಸಣ್ಣನಾಗಿ ಅರೆದು, ಗಜ್ಜುಗದ ಪ್ರಮಾಣ ಗುಳಿಗೆಯಂ ಮಾಡಿ, ಮೆಲ್ಲಲು ಥಳಿಜ್ವರ ಬಿಡುವುದು.

ಜೀರಿಗೆ, ಶುಂಠಿ, ಮೆಣಸು, ಹಿಪ್ಪಲಿ, ಬೆಳ್ಳುಳ್ಳಿ ಇವುಗಳನ್ನು ಬೆರಸಿ ನೀರಿನಿಂದರೆದು ಥಳಿ ಬರುವ ವೇಳೆಯಲ್ಲಿ ಕುಡಿಯಕೊಡೆ ಥಳಿಜ್ವರ ಬಿಡುವುದು.

ಹಾಗಲದಹೂವು ಒಂಬತ್ತು, ನುಗ್ಗೇಹೂವು ಒಂಬತ್ತು, ಮೆಣಸು ಒಂಬತ್ತು, ಬೆಳ್ಳುಳ್ಳಿ ಒಂಬತ್ತು ಇವುಗಳನ್ನು ಬಿಸಿನೀರಿನಿಂದರೆದು ಕೊಡಲು ಥಳಿಜ್ವರಂಮಾಣ್ಗುಂ

ಜಾಪಾಳದೊಳಗಿನ ಪೊಳೆಯಂ ತೆಗೆದು ಆ ತಿರುಳು ಒಂದನ್ನು ಓಮು ಸಹಿತವಾಗಿ ಬಿಸಿನೀರಿನಿಂದ ಸಣ್ಣನಾಗರೆದು ಗುಂಜೀಪ್ರಮಾಣ ಗುಳಿಗೆಯಂ ಮಾಡಿ ನೆಲ್ಲೀಕಾಯಿಯಷ್ಟು ಬೆಣ್ಣೆಯಲ್ಲಿ ಕಲಸಿಕೊಟ್ಟು ಒಂದುಶಾರೆ ಬಿಸಿನೀರನ್ನು ಕುಡಿಯ ಕೊಡಲು (ಸಣ್ಣವರಾದರೆ ಹೆಸರುಪ್ರಮಾಣವಂ ಕೊಡಲು) ಥಳಿಜ್ವರ ಬಿಡುವುದು.

ಸುಣ್ಣದಕಲ್ಲನ್ನರಳಿಸಿ ಶೋಧಿಸಿಕೊಂಡು ಆ ಸುಣ್ಣದ ಎರಡು ತೂಕವಂ ಬಿಳೀ ಪಾಷಾಣ ಎರಡು ತೂಕವನ್ನೂ ಸಹ ಆ ಸುಣ್ಣದ ನೀರಿನಲ್ಲಿ ಕುದಿಸಿಕೊಂಡು, ಹಾಗಲದ ಕಾಯಿಯ ರಸದಲ್ಲಿ ಸಣ್ಣನಾಗಿ ಮರ್ದಿಸಿ, ಹೆಸರು ಪ್ರಮಾಣ ಗುಳಿಗೆಯಂ ಮಾಡಿ, ಶುಂಠಿರಸದಿಂ ಕೊಡಲು ಥಳಿಜ್ವರ ನಿಲ್ಲುವುದು.

ಹೊಸಸುಣ್ಣದ ನೀರನ್ನೂ, ಬೆಲ್ಲದಪಾಕವನ್ನೂ ಒಲೆ ಮೇಲಿಕ್ಕಿ, ಎರಡುತೂಕ ಬಿಳೀ ಪಾಷಾಣವನ್ನುಹಾಕಿ ಕುದಿಸಿ, ನೀರಿರುವಲ್ಲಿಯೆ ಇಳುಹಿಕೊಂಡು, ಶ್ರೀಗಂಧ ಎರಡು ತೂಕವನ್ನು ಹಾಕಿ, ಆ ಮಿಕ್ಕ ನೀರನ್ನು ಸಣ್ಣನಾಗಿ ಮರ್ದಿಸಿ, ಹೆಸರು ಪ್ರಮಾಣ ಗುಳಿಯಂ ಮಾಡಿ, ಶುಂಠೀರಸದಲ್ಲಿ ಕೊಡಲು ಥಳಿಜ್ವರಂನಿಲ್ಗುಂ.

ಗಂಧಕ, ಸುಣ್ಣ ಇವುಗಳನ್ನು ಕಲಸಿ, ವೀಳೇದೆಲೆಗೆ ಸವರಿ ವೀಳ್ಯವನ್ನು ಹಾಕಿಕೊಂಡಲ್ಲಿ ಥಳಿ ಬರುವುದಿಲ್ಲ.

ಹಾಲುಕುರಟಿಗೆಸೊಪ್ಪು, ಮೆಣಸು ೪೯, ಎರಡನ್ನೂ ಥಳಿ ಬರುವಾಗ ಅಗಿದು ನುಂಗಿದಲ್ಲಿ ಥಳಿ ಬರುವುದಿಲ್ಲ.

ಬೆಳ್ಳುಳ್ಳಿ, ಮೆಣಸುಪುಡಿ ಇವುಗಳನ್ನು ಬೆಳ್ಳುಳ್ಳಿಯ ತೈಲದಲ್ಲಿ ತೆಗೆದುಕೊಳ್ಳಲು ಥಳಿಜ್ವರವು ನಿಲ್ಲುವುದು.

ಹಾಲುಕುರಟಿಗೆಸೊಪ್ಪು ಆರು, ಹೊಸ ಸುಣ್ಣ, ಎರಡನ್ನೂ ಅರೆದು ಶೋಧಿಸಿ ಮಾತ್ರೆ ಮಾಡಿಕೊಟ್ಟಲ್ಲಿ ಥಳಿಜ್ವರ ಬಿಡುವುದು.

ಬೂರುಗದಚಕ್ಕೆ, ಬೂರುಗದ ಎಲೆ ಇವುಗಳನ್ನು ನೀರಿನಲ್ಲಿ ಬೇಯಿಸಿ, ಉಾರು ಹಾಕಿ ಕಟ್ಟನೀರನ್ನು ಚೆಲ್ಲಿ ಜೀರಿಗೆ, ಯಾಲಕ್ಕಿ ಪ್ರತಿಪಾಕವಿಕ್ಕಿ ಅರೆದು ಕೊಡಲು ಥಳಿಜ್ವರ ಬಿಡುವುದು.

ಹೊಂಗೇಬೀಜ, ಕಹಿಗುಳ್ಳ ಮೂರುಬೆಳ್ಳುಳ್ಳಿ, ಮೂರುಮೆಣಸು, ಇವುಗಳನ್ನು ಥಳಿ ಬರುವಲ್ಲಿ ಅಗಿದು ನುಂಗಿದರೆ ಥಳಿ ನಿಲ್ಲುವುದು.

## ಕಷಾಯಗಳು.

ಎರಡುಸೇರು ನೀರಿನಲ್ಲಿ ಇಪ್ಪತ್ತೈದು ಹೇರಳೆ ಎಲೆಯನ್ನು ಹಾಕಿ, ಒಲೆಯ ಮೇಲಿಟ್ಟು ಶುಂಠಿಕೊನೆ ಮೂರು, ಹಿಪ್ಪಲಿ ಮೂರು, ಮೆಣಸುಮೂರು ಸಹ ಅದರೊಳಗೆ ಗಂಟು ಕಟ್ಟಿ ಹಾಕಿ, ಚಾತುರ್ಭಾಗಾವಶೇಷವಾಗಿ ಕಾಯಿಸಿ, ಇಳುಹಿ, ಅದರಲ್ಲಿ ಹಾಕಿರುವ ಗಂಟನ್ನು ತೆಗೆದು, ಅದರಲ್ಲಿರುವ ಮೂರು ಬಗೆಯನ್ನೂ ಅರೆದು ಆ ಕಷಾಯದಲ್ಲಿ ಕದಡಿ ಕುಡಿಸೆ ಥಳಿಜ್ವರಂಮಾಣ್ಗುಂ.

ಎಲುವನಸಂದಿಯಮೂಲ, ಕಳ್ಳಂಗಡಲೆ ಸಹಮೂಲ, ಶುಂಠಿ, ಹಿಪ್ಪಲಿ, ಮೆಣಸು ಇವುಗಳನ್ನು ಕಷಾಯವಿಕ್ಕಿ ಕೊಡಲು ಥಳಿ ಮಾಣ್ಗುಂ.

ಶುಂಠಿ, ಹಿಪ್ಪಲಿ, ಮೆಣಸು, ಗೇಕಿನಗೆಡ್ಡೆ, ಕೊತ್ತುಂಬರಿ ಇವುಗಳ ಕಷಾಯವಿಕ್ಕಿ ಕುಡಿಯೆ ಥಳಿಜ್ವರಂ ಗುಣಮಕ್ಕುಂ.

ಅಮರದವಳ್ಳಿ, ಆಡುಸೋಗೆ, ಎಲವನಸಂದಿ, ಶುಂಠಿ, ಹಿಪ್ಪಲಿ, ಮೆಣಸು ಇವುಗಳ ಕಷಾಯವಿಕ್ಕಿ ಕೊಡೆ ಥಳಿಜ್ವರಂ ಮಾಣ್ಗುಂ.

ನೆಲಬೇವು, ಕಟುಕರೋಹಿಣಿ, *ಚಾಗವೆಳ್ಳ, ನೆಲ್ಲೀಸೊಪ್ಪು, ಕಹಿಪಡವಲ, ಶುಂಠಿ, * ವಾಸರವೇಳ್ಳು ಇವುಗಳನ್ನು ಸಮಾನವಾಗಿ ಹಾಕಿ ಕಷಾಯ ಹಾಕಿ ಕೊಡಲು ಥಳಿ ಹೋಗುವುದು.

ತಾವರೇಎಲೆ, ನೆಲಕೊಳವಳಿಕೆ, ಅಶ್ವಗಂಧಿಗೆಡ್ಡೆ, ಚಿತ್ರಮೂಲ, ಶುಂಠಿ ಇವುಗಳನ್ನು ಸಮವಾಗಿ ಕಷಾಯವಿಕ್ಕಿ ಕೊಡಲು ಥಳಿ ನಿಲ್ಲುವುದು.

ನುಗ್ಗೇಬೇರನ್ನು ಚೆನ್ನಾಗರೆದು ಮೆಣಸು, ಬೆಳ್ಳುಳ್ಳಿಹಾಕಿ ವಾದಕ್ಕಿಯಲ್ಲಿ ಕಲಸಿ, ಅನ್ನದಲ್ಲಿ ಕಲಸಿ ತಿನ್ನಲು ಥಳಿ ನಿಲ್ಲುವುದು.

## ಮೂಲಿಕಾ ಪ್ರಯೋಗ.

ಹಿರಿಯಮದ್ದಿನ ಬೇರನ್ನು ಅಷ್ಟವಿಧಾರ್ಚನೆಯಿಂ ಮಾಡಿ ತೋಳಿಗೆ ಕಟ್ಟಲು ಥಳಿಜ್ವರಂ ಮಾಣ್ಗುಂ.

ತುರುವೆಯ ಬಡಗಹರಿದಬೇರಂ ತಂದು ಕಿವಿಗೆ ಕಟ್ಟಲು ಥಳಿಬಿಡುವುದು

ಯಕ್ಕದಬಡಗಹರಿದಬೇರಂ ಆದಿತ್ಯವಾರ ಮೌನದಲ್ಲಿ ತಂದು ಮಣಿಯಂ ಮಾಡಿ, ಕೊಡಗೂಸು ನೂತ ನೂಲಿನಲ್ಲಿ ಹುರಿಯಂಮಾಡಿ, ಈ ಹುರಿಯಲ್ಲಿ ಆ ಮಣಿಯಂ ತೋಳಿಗೆ ಕಟ್ಟಲು, ಥಳಿಜ್ವರ ಬಿಡುವುದು.

ಸಹದೇವೀಬೇರಂ ಉಷಃಕಾಲದಲ್ಲಿ ತಂದು ಕಿವಿಯಲ್ಲಿ ಕಟ್ಟಿದರೆ ಥಳಿಜ್ವರಂ ಮಾಣ್ಗುಂ.

* ತೆಲಗು.

ಉತ್ತರಣೆಯ ಬೇರನ್ನು ಶನಿವಾರ ಆರ್ಜಿಸಿ, ಆದಿತ್ಯವಾರ ತಂದು ಕಿವಿಗೆ ಕಟ್ಟಲು ಥಳಿಜ್ವರ ಮಾಣುವುದು.

ಬಜೆ ಒಂದು ಹಣತೂಕ, ಬೆಳ್ಳುಳ್ಳಿ ಮೂರು, ಕೊಂಬೇಬೇರು, ಮೆಣಸು ಮೂರು, ನುಗ್ಗೇಬೇರಿನಚಕ್ಕೆ, ಇವುಗಳನ್ನು ಚೆನ್ನಾಗಿ ಅರೆದು ಪೊಟ್ಟಣ ಕಟ್ಟಿ ಕಟ್ಟಿ ಕೊಳ್ಳಲು ಥಳಿಜ್ವರ ನಿಲ್ಲುವುದು.

ಚಿತ್ರಮೂಲದಬೇರಿನ ಪಟ್ಟೆ, ಇದರ ಕೊನೆ, ತಪಸೀಬೇರಿನಪಟ್ಟೆ, ಹಾಲುಕೊರ ಟಿಗೆಬೇರಿನ ಪಟ್ಟೆ, ಇದರಕೊನೆ, ಮೆಣಸು, ಬೆಳ್ಳುಳ್ಳಿ ಇವುಗಳನ್ನರೆದು ಪೊಟ್ಟಣಕಟ್ಟಿ ಕಟ್ಟಿಕೊಳ್ಳಲು ಥಳಿಜ್ವರ ನಿಲ್ಲುವುದು.

## ಥಳಿಜ್ವರ ಕಲ್ಕಗಳು.

### ನಸ್ಯವಿಧಿ.

ರೊಕ್ಕೀಸೊಪ್ಪಿನರಸದಿಂ ಥಳಿಬಂದ ಸಮಯದಲ್ಲಿ ನಸ್ಯಂಗೆಯ್ಯಲು ಥಳಿ ಮಾಣುವುದು.

### ಅಂಜನ.

ಸಮುದ್ರಫಳ ಕಾಯಿಯನ್ನು ನಿಂಬೇಹಣ್ಣಿನರಸದಲ್ಲಿ ತೇದು ಅಂಜನ ಮಾಡಿ ಉಪಯೋಗಿಸಲು ಥಳಿಜ್ವರ ನಿಲ್ಲುವುದು.

## ಪೈತ್ತ್ಯಜ್ವರಲಕ್ಷಣಂ.

ಜ್ವರವೇಗವು ಬಹು ತೀಕ್ಷ್ಣವಾಗಿ, ಕಿಂಚಿದತಿಸಾರ ಉಂಟಾಗಿ, ಅಲ್ಪನಿದ್ರೆ ಯುಳ್ಳದ್ದಾಗಿ, ವಾಂತಿಭ್ರಮೆಯಿಂದ ಕೊರಳು, ತುಟಿ, ಬಾಯಿ, ಮೂಗು ಸಹ, ಒಣಗುತ್ತ ಶರೀರದಲ್ಲೆಲ್ಲಾ ಬೆಮರುಂಟಾಗಿ, ಬಾಯಿಯಲ್ಲಿ ಕಾರವಾಗಿ, ಪ್ರಲಾಪ, ಮೂರ್ಛೆ, ಸಂತಾಪ, ಮದ, ಬಾಯಾರಿಕೆ, ಕಾಣಿಸಿ, ಮಲಮೂತ್ರಗಳು, ಕಣ್ಣು ಗಳು, ದೇಹ ಇವುಗಳು ಅರಿಸಿನ ವರ್ಣವಾಗಿ, ಈ ಲಕ್ಷಣಗಳುಂಟಾಗುವುದೇ ಉಗುರು ಪೈತ್ತ್ಯಜ್ವರವೆನಿಸಿಕೊಳ್ಳುವುದು.

ಮತಾಂತರೆ—ಮೈಯೆಲ್ಲಾ ಬಹಳ ಉರಿಯಾಗಿ ತಾಪವೂ, ಬಾಯಾರಿ ಕೆಯೂ ಉಂಟಾಗಿ, ಮುಖ, ಕಣ್ಣು, ಮಲಮೂತ್ರ ಇವುಗಳು ಅರಿಸಿನ ಬಣ್ಣ ವಾಗಿ, ಮೆಯ್ಯಲ್ಲಿ ಗಂದೆಗಳೇಳುವುದೇ ಪೈತ್ತ್ಯಜ್ವರವೆಂದು ಹೇಳಲ್ಪಟ್ಟಿದೆ.

### ಚಿಕಿತ್ಸೆಗಳು.

ಏಲಕ್ಕಿ, ಜೀರಿಗೆ, ಕೊತ್ತುಂಬರಿ, ಕಗ್ಗುಂಬಳದ ಬೀಜದತಿರುಳು, ಸಕ್ಕರೆ, ದ್ರಾಕ್ಷೀಹಣ್ಣು, ಯಷ್ಟಿಮಧುಕ ಇವುಗಳನ್ನು ಸಮತೂಕವಾಗಿ ಅಂಬಿಲದಲ್ಲರೆದು ಸೇವಿಸಿದರೆ ಪಿತ್ತಜ್ವರಂ ಗುಣಮಕ್ಕುಂ.

ಚಂಗಲಕೋಷ್ಠ, ಯಷ್ಟಿಮಧುಕ, ಹಿಪ್ಪಲಿ, ಕೊಡನಾರೀಗೆಡ್ಡೆ, ಮುಡಿವಾಳ, ಲಾಮಂಚ, ಕಟುಕರೋಹಿಣಿ, ದ್ರಾಕ್ಷೀಹಣ್ಣು, ಖರ್ಜೂರದ ಹಣ್ಣು ಇವುಗಳನ್ನೆಲ್ಲವನ್ನೂ ಸಮತೂಕವಾಗಿ ಕಾದಾರಿದನೀರಿನಲ್ಲರೆದು ಕೊಡಲು ಪಿತ್ತಜ್ವರಂತೀರ್ಗುಂ. ಸಕ್ಕರೆ ಬೆರಸಿ ಮೊಲೆವಾಲುಂ ಕುಡಿಯೆ ಪಿತ್ತಜ್ವರಂ ಮಾಣ್ಗುಂ. ದಾಳಿಂಬದ ಹಣ್ಣಿನರಸಮುಂ ಶರ್ಕರೆವೆರಸಿ ಕುಡಿಸೆ ಪಿತ್ತಜ್ವರಪರಿಹಾರವಾಗುವುದು.

ಯಾಲಕ್ಕಿ, ಲವಂಗಪತ್ರೆ, ಜೀರಿಗೆ, ದೇವದಾರುಚಕ್ಕೆ ಇವುಗಳನ್ನು ಸಮತೂಕವಾಗಿ ಗರಿಕೆಬೇರಿನ ರಸದೊಳರೆದು ಕೊಡಲು, ಪೈತ್ತ್ಯಜ್ವರ ನಿಲ್ಲುವುದು.

ತಾಪಾದಿ ದಾಹದಲ್ಲಿಕೂಡಿದ ಪೈತ್ತ್ಯಜ್ವರಕ್ಕೆ—ಏಲಕ್ಕಿ ಕಲ್ಕ.—ಏಲಕ್ಕಿ, ಲವಂಗಚಕ್ಕೆ, ಲವಂಗಪತ್ರೆ, ಯಷ್ಟಿಮಧುಕ, ಶ್ರೀಗಂಧಚಕ್ಕೆ, ಶುಂಠಿ, ಸುಗಂಧಿಪಾಲ, ದ್ರಾಕ್ಷೀಹಣ್ಣು ಖರ್ಜೂರ, ಲಾಮಂಚ, ಸರಳುದೇವದಾರು, ಹಿಪ್ಪಲಿ ಇವುಗಳನ್ನು ಲೆಕ್ಕದಲ್ಲಿ ಕೂಡಿಸಿ, ಶರ್ಕರೆ ಕೂಡಿ ಎಳನೀರಲ್ಲಿಗಳುಪಿ, ತೆಗೆದುಕೊಳ್ಳೆ ವಿದಾಹ, ಛರ್ದಿಯಿಂದಕೂಡಿದ ಪೈತ್ತ್ಯಜ್ವರಂ ಮಾಣ್ಗುಂ.

## ದಾಹಜ್ವರಕಲ್ಕ

ಕೇದಿಗೇಬೀಳಿನ ರಸದಲ್ಲಿ ನೆಲದಾಳವನ್ನರೆದು ಕುಡಿಯೆ ದಾಹಜ್ವರ ಪರಿಹಾರವಾಗುವುದು.

ಜೇನಿಕರ್ಪೂರ, ಯಷ್ಟಿಮಧುಕ, ಶ್ರೀಗಂಧ, ಬೆಲ್ಲ, ದ್ರಾಕ್ಷೀ ಹಣ್ಣು ಇವುಗಳನ್ನು ಅಕ್ಕಿಗಚ್ಚಿನಿಂದರೆದು ಕುಡಿಯೆ ದಾಹಜ್ವರಪರಿಹಾರವಾಗುವುದು.

ಪರ್ಪಾಟಕದ ಚೂರ್ಣ.—ಬಿಳಿಗಣಿಜೆ, ಜೀರಿಗೆಸಹ, ಹಳೇನೀರಿನಲ್ಲರೆದು, ಕದಡಿ ಕುಡಿಯೆ ಮೂರುದಿನಕ್ಕೆ ದಾಹಜ್ವರ ಬಿಡುವುದು.

ದಾಹಕ್ಕೆ ಹಳೇನೀರಂ ಬೆಚ್ಚಗೆಮಾಡಿ ಕುಡಿಸು ಕೊಡುವುದು. ಹುರಿಯಕ್ಕೀ ಗಂಜೀ ಪಥ್ಯವನುಂಬುದು.

ಸಾರಗದ ಕೊಂಬನ್ನು ಮೊಲೆಹಾಲಿನಲ್ಲಿ ತೇದು ಕದಡಿ ಸೇವಿಸಿದರೆ ದಾಹಜ್ವರಂ ಗುಣಮಕ್ಕುಂ.

ಅರಳೀಚಕ್ಕೆಯ ಒಳನಾರು, ಹಿಪ್ಪಲಿ, ಶುಂಠಿ, ಜೀರಿಗೆ ಇವುಗಳನ್ನು ಮೊಸರಿನಿಂದರೆದು ಕೊಡಲು ದಾಹಜ್ವರಶಮನವಾಗುವುದು.

ಆಡಿನಹಾಲಿನಲ್ಲಿ ಸಕ್ಕರೆವೆರಸಿ ತೆಗೆದುಕೊಳ್ಳೆ ದಾಹಜ್ವರಂ ಗುಣಮಕ್ಕುಂ.

ಎಳನೀರಿನಲ್ಲಿ ಸಕ್ಕರೆಕೂಡಿ ಕುಡಿಯಲು ದಾಹಜ್ವರ ಬಿಡುವುದು.

ಪೈತ್ತ್ಯಜ್ವರ, ಛರ್ದಿ, ವಿದಾಹ ಮುಂತಾದುದಕ್ಕೆ ಬಿಲ್ವಾದಿಕಲ್ಕ.—ಬಿಲ್ವಪತ್ರೆಬೇರು, ಜೀರಿಗೆ, ಹಿಪ್ಪಲಿ, ಯಷ್ಟಿಮಧುಕ, ದ್ರಾಕ್ಷೀಹಣ್ಣು, ಶುಂಠಿ, ಕೊತ್ತುಂಬರಿ, ಕಟುಕರೋಹಿಣಿ, ಮೆಣಸು, ನೆಲಬೇವು, ಗೋರೋಜನಂ, ಲೋಳಿಸರ, ಪರ್ಪಾಟಕ,

ಕರೀಜೀರಿಗೆ, ಮರದರಿಸಿನ, ಭೂನೆಲ್ಲಿ, ವಾಯುವಿಳಂಗ, ಅಂಜನ, *ಉರುಮುವೆಳ್ಳು ಹೆಮ್ಮರಚಕ್ಕೆ, ಲಾಮಂಚ, ಲವಂಗ, ಖರ್ಜೂರ, ಕುಂಕುಮದ ಹೂವು, ಅಗುಳು ಶುಂಠಿ, ಚಿತ್ರಮೂಲ, ಪುತ್ರಜೀವಿ, ಚಿಲ್ಲದಬೀಜ, ಒಂದೆಲಗ—ಇವೆಲ್ಲವನ್ನೂ ಬಿಸಿ ನೀರಿನಲ್ಲಿ ಹಾಕಿ ಶೋಧಿಸಿಕೊಂಡು ಒಂದುತೂಕ ಸಕ್ಕರೆ ಬೆರಸಿ ತೆಗದುಕೊಂಡಲ್ಲಿ ಛರ್ದಿ, ದಾಹಗೂಡಿದ ಪೈತ್ಯಜ್ವರಂ ಮಾಣುವುವು.

## ಲವಂಗಾದಿಕಲ್ಕ.

ಲವಂಗ, ಶುಂಠಿ, ಕೊಮ್ಮೇಬೇರು, ಕೊತ್ತುಂಬರಿ, ಜೀರಿಗೆ, ಹಿಪ್ಪಲಿ, ರಾಸ್ತ್ರ ಪರ್ಪಾಟಕ, ಗ್ರಂಥಿಗತಗರ ಇವಿಷ್ಟನ್ನೂ ಸಮಭಾಗವಾಗಿಕೂಡಿ ಒಂದುತೂಕ ಸಕ್ಕರೆಬೆರಸಿ, ಬಿಸಿನೀರಲ್ಲಿ ಕಲೆಸಿ ತೆಗೆದುಕೊಂಡರೆ ವಾತಪಿತ್ತಶ್ಲೇಷ್ಮ, ದ್ವಂದ್ವ ಜ್ವರ, ಸನ್ನಿಪಾತಜ್ವರ, ದೋಷತ್ರಯ, ದಾಹ, ಮೂರ್ಛೆ, ಛರ್ದಿ, ಅತಿಸಾರ ಮೊದಲಾದ ಪೈತ್ಯಜ್ವರಂ ಮಾಣುವುವು. ಇದು ಸಿದ್ಧಪ್ರಯೋಗವು.

ಶ್ರೀತೊಳಸಿ, ಹೊಮ್ಮಗಳು, ನಲ್ಲವಾರಿ *, ಆಕಳಹಾಲು, ಲವಂಗ, ದ್ರಾಕ್ಷೀ ಹಣ್ಣು, ಯಾಲಕ್ಕಿ, ಯಷ್ಟಿಮಧುಕ, ಆಕಲಕರೆ, ಪುತ್ರಜೀವಿ, ದೇಶಾವಾರದ ಜೀರಿಗೆ ಇವಿಷ್ಟನ್ನೂ ಅರೆದು ಕೊಡಲು, ದಾಹಜ್ವರ, ಮೈನೋವು, ತಲೆ ಭಾರ ವಾಗಿರುವುದು ಸಹ ನಿಲ್ಲುವುವು.

## ಕಡುಜ್ವರಕ್ಕೆ.

ಕುಂಕುಮದ ಹೂವು ಒಂದು ತೂಕ, ಗೋರೋಜನ ಅಡ್ಡತೂಕ, ಯಷ್ಟಿ ಮಧುಕ ಒಂದು ಹಣತೂಕ, ಏಲಕ್ಕಿ ಒಂದು ಹಣತೂಕ ಇವುಗಳನೆಲ್ಲವನ್ನೂ ಮೊಲೆಹಾಲಿನಲ್ಲಿ ಅರೆದು ಕೊಡಲು ಕಡುಜ್ವರಂ ಮಾಣುವುದು.

ಜೇನುತುಪ್ಪ, ಯಷ್ಟಿಮಧುಕ, ಇಪ್ಪೇಹೂವು, ಖರ್ಜೂರದ ಹಣ್ಣು, ಲಾಮಂಚದ ಬೇರು, ಮುಡಿವಾಳದ ಬೇರು, ಲವಂಗ, ನೆಲ್ಲೀಚಟ್ಟು, ಕಸ್ತೂರಿರಿಸಿನ, ಹಿಪ್ಪಲಿ, ಲೋಧ್ರ, ಭದ್ರಮುಸ್ತೆ, ಜೀರಿಗೆ ಇವುಗಳನ್ನೆಲ್ಲಾ ಸಮಭಾಗವಾಗಿ ಚೂರ್ಣಿಸಿ, ಇಷ್ಟರಸಮ ಸಕ್ಕರೆಗೂಡಿ ಕಲಸಿ, ನೆಲ್ಲೀಕಾಯಿಪ್ರಮಾಣ ಗುಳಿಗೆ ಯನ್ನು ಮಾಡಿ, ಈ ಗುಳಿಗೆಯನ್ನು ಕೊಡಲು ಪ್ರಳಯಾಗ್ನಿಗೆ ಸಮಾನವಾದ ಉಷ್ಣಜ್ವರವೂ, ತಾಪಜ್ವರ, ಕಡುಜ್ವರಗಳೂ ಸಹ ಮಾಣುವುವು.

ಬಹಳವಾಗಿ ತಾಪವಾದರೆ ಬೇವಿನ ಕೊರಡನ್ನು ಬಿಸಿನೀರಿನಲ್ಲಿ ಗಂಧದ ಹಾಗೆ ತೇದು ಅಡಿಕೆತೋರವನ್ನು ಶರ್ಕರೆ ಸಹಿತವಾಗಿ ನೀರಲ್ಲಿ ಕದಡಿ ಕೊಡಲು ತಾಪವು ಮಾಣುವುದು.

---

* ತೆಲಗು.

ಮತ್ತು ಲೋಳೆಸರದ ಬೇರಿನ ಮೇಲಣ ತೊಕ್ಕನ್ನೂ, ತುರುವೇಸೊಪ್ಪನ್ನೂ ಕೂಡ ಅರೆದು ಹಸುವಿನ ಮಜ್ಜಿಗೆಯಲ್ಲಿ ಕೊಡಲು ತಾಪವು ಬಿಡುವುದು.

## ಕಷಾಯುಗಳು.

ಕಟುಕರೋಹಿಣಿ, ಶೀವನ್ನೀಹಣ್ಣು, ಕೋಲುಮುತ್ತಿನಬೀಜ, ಭದ್ರಮುಸ್ತೆ ಇವುಗಳ ಕಷಾಯುವನ್ನು ಕಾಯಿಸಿ, ಸಕ್ಕರೆಬೆರಸಿ ತಗೆದುಕೊಳ್ಳಲು ಜ್ವರಪರಿಹಾರ ವಾಗುವುದು.

ನೆಲ್ಲೀಬೇರು, ದ್ರಾಕ್ಷೀಹಣ್ಣು, ಲಾಮಂಚ, ನೆಲಬೇವು ಇವುಗಳ ಕಷಾಯ ಮಾಡಿ ಸೇವಿಸೆ ಪೈತ್ಯಜ್ವರವು ಮಾಣುವುದು.

ಕಳವಿಗೇಬೇರು, ಬೇವು, ದ್ರಾಕ್ಷೀಹಣ್ಣು, ಯಷ್ಟಿಮಧುಕ ಸಹ ಕಷಾಯು ವನ್ನು ತೆಗೆದುಕೊಳ್ಳಲು ಪಿತ್ತಜ್ವರ ಪರಿಹಾರವಾಗುವುದು.

ಭದ್ರಮುಸ್ತೆ, †ದುರಾಲಭ, ಕಳವಿಗೆಬೇರು, ಪರ್ಪಾಟಕ ಇವುಗಳ ಕಷಾಯು ವಿಕ್ಕಿ ಸೇವಿಸೆ ಪಿತ್ತಜ್ವರ ಪರಿಹಾರವಾಗುವುದು.

ಕೊಡಶಿಗೇಬೇರು, ಕಳವಿಗೆಬೇರು, ಲಕ್ಕೀಬೇರು, ಭದ್ರಮುಸ್ತೆ ಸಹ ಕಷಾಯುವಿಟ್ಟು ತೆಗೆದುಕೊಳ್ಳಲು ಪಿತ್ತಜ್ವರವು ಕೆಡುವುದು.

ಲೋಧ್ರ, ನೈದಿಲೆ, ಅಮರದವಳ್ಳಿ, ತಾವರೆಕುಸುಮ, ಸುಗಂಧೀಬೇರು ಸಹ ಕಷಾಯುವಿಟ್ಟು ಶರ್ಕರೆಗೂಡಿ ತೆಗೆದುಕೊಳ್ಳಲು ಪಿತ್ತಜ್ವರ ನಾಶವಾಗುವುದು.

ಪರ್ಪಾಟಕ, ಶುಂಠಿ ಕಷಾಯುವಿಟ್ಟು ಸಕ್ಕರೆಬೆರಸಿ ಸೇವಿಸೆ ಪಿತ್ತಜ್ವರವು ಬಿಡುವುದು.

ಪರ್ಪಾಟಕ ಒಂದನ್ನೇ ಕಷಾಯುಮಾಡಿ ಸಕ್ಕರೆಸೇರಿಸಿ ಕುಡಿಯಲು ಪಿತ್ತ ಜ್ವರವು ಗುಣವಾಗುವುದು.

ಹಲಸಂದೆ, ಪರ್ಪಾಟಕ, ಕರ್ಪಾಳ, ಕಳವಿಗೆಬೇರು, ನೇಲಬೇವು ತುರು ಚನಬೇರು ಇವುಗಳನ್ನು ಕಷಾಯುಕಾಯಿಸಿ ಜೇನುತುಪ್ಪವೆರಸಿ ಕುಡಿಯಲು ಪಿತ್ತಜ್ವರ ಪರಿಹಾರವಾಗುವುದು.

ಶ್ರೀಗಂಧ, ಸೊಗದೇಬೇರು, ಲಾಮಂಚ, ಕಬ್ಬಿನಕಂಡಿಕೆ, ಆಷಾಢಿಗೆಣಸು ಸಹ ಕಷಾಯುವಿಟ್ಟು ಇದರ ಸಮಾನ ಹೆಸರಕಟ್ಟನ್ನುಕೂಡಿ ಸಕ್ಕರೆವೆರಸಿ ಕುಡಿ ಯಲು ಪಿತ್ತಜ್ವರ ದಾಹ ಸಹ ಮಾಣುವುವು.

ಭದ್ರಮುಸ್ತೆ, ಅಳಲೇಕಾಯಿ, ದ್ರಾಕ್ಷೀಹಣ್ಣು, ಕಕ್ಕೆಹಣ್ಣು, ಪರ್ಪಾಟಕ ಸಹ ಕಷಾಯುವಿಟ್ಟು ಸೇವಿಸಲು ಪಿತ್ತಜ್ವರ ಪರಿಹಾರವಾಗುವುದು.

ಶ್ರೀಗಂಧ, ಸೊಗದೇಬೇರು, ಲಾಮಂಚ, ಬೆಲ್ಲವತ್ತದಬೇರು, ಭದ್ರಮುಸ್ತೆ,

---

† ಸಂಸ್ಕೃತ.

ಶುಂಠಿ ಇವುಗಳನ್ನು ಸಮಾನವಾಗಿ ಕಷಾಯ ಕಾಯಿಸಿ ಸೇವಿಸೆ ಪಿತ್ತಜ್ವರವು ಗುಣವಾಗುವುದು

ಭದ್ರಮುಸ್ತೆ, ನೈದಿಲೆಗೆಡ್ಡೆ, ಅಮರದವಳ್ಳಿ, ದ್ರಾಕ್ಷೀಹಣ್ಣು, ಸೊಗದೇಬೇರು, ಹಿಪ್ಪಲಿ, ಶ್ರೀಗಂಧ, ಪರ್ಪಾಟಕ ಸಹ ಕಷಾಯಕಾಯಿಸಿ ತೆಗೆದುಕೊಳ್ಳಲು ಪಿತ್ತ ಜ್ವರ ಪರಿಹಾರವಾಗುವುದು.

## ಷಡಂಗವಾರಿಕಷಾಯ

ಭದ್ರಮುಸ್ತೆ, ಶ್ರೀಗಂಧ, ಶುಂಠಿ, ಮುಡಿವಾಳ, ಪರ್ಪಾಟಕ ಸಹ ಕಷಾಯ ಕಾಯಿಸಿ ಕುಡಿಯಲು ಪೈತ್ಯಜ್ವರ, ಬಾಯಾರಿಕೆ ಸಹ ಮಾಣುವುವು.

## ಗೋಪಾಂಗನಾಕಷಾಯ

ಸೊಗದೇಬೇರು, ಕಟುಕರೋಹಿಣಿ, ಶ್ರೀಗಂಧ, ಲಾಮಂಚ, ಭದ್ರಮುಸ್ತೆ, ಯಷ್ಟಿಮಧುಕ, ಮುಡಿವಾಳ, ನೈದಿಲೆಗೆಡ್ಡೆ, ಇಪ್ಪೇಬೇರು, ಆಷಾಢೀಬೇರು ಇವಿಷ್ಟನ್ನೂ ಪ್ರತ್ಯೇಕ ಸಮತೂಕ ಕಷಾಯ ಕಾಯಿಸಿ, ಜೇನುತುಪ್ಪ, ಶರ್ಕರೆ ಗೂಡಿ ಕುಡಿಯಲು ಅತ್ಯಂತ ದಾಹವುಳ್ಳ ಪಿತ್ತಜ್ವರವು ನಾಶವಾಗುವುದು.

ಕಾಡಹೆಸರು, ಭದ್ರಮುಸ್ತೆ, ಮುಡಿವಾಳ, ಅಮರದವಳ್ಳಿ, ಶುಂಠಿ, ಕಳ್ಳಂಗಡಲೆ, ಬೋಳಂಗಡಲೆ, ಜೀರಿಗೆ ಇವಂ ಸಮಭಾಗ ಕಷಾಯವಿಕ್ಕಿ ಕೊಡಲು ಪೈತ್ಯ ಜ್ವರವು ಗುಣವಾಗುವುದು.

ಲಾಮಂಚ, ಭದ್ರಮುಸ್ತೆ, ಚಂಗಲಕೋಷ್ಟ, ಶ್ರೀಗಂಧ, ಶುಂಠಿ ಇವಂ ಸಮವಾಗಿ ಕಷಾಯವಿಕ್ಕಿ ಸೇವಿಸೆ ಪೈತ್ಯಜ್ವರ ನಿಲ್ಲುವುದು.

ಎಲುವನಸಂದಿಬೇರು, ಕೊಳವಳಿಕೇಬೇರು, ಕಳ್ಳಂಗಡಲೆ, ಲಾಮಂಚ, ಭದ್ರಮುಸ್ತೆ, ಶುಂಠಿ, ನೆಲ್ಲೀಚಟ್ಟು, ಕೊತ್ತುಂಬರಿ ಇವುಗಳನ್ನು ಸಮಾಂಶ ಕಷಾಯಮಾಡಿ ಸೇವಿಸಲು ಪಿತ್ತಜ್ವರ ಗುಣವಾಗುವುದು.

ಹಾವುಮೆಕ್ಕೇಬೇರು, ಕಾಡಹೆಸರು, ಅಮರಡವಳ್ಳಿ, ಜಟಾಮಾಂಸಿ, ಭದ್ರ ಮುಸ್ತೆ, ಕಳ್ಳಂಗಡಲೆ, ಯಷ್ಟಿಮಧುಕ ಇವುಗಳನ್ನು ಸರಿಯಾಗಿ ಕಷಾಯ ಮಾಡಿ ಕೊಡಲು ಪಿತ್ತಜ್ವರ ಕೆಡುವುದು.

ಸಬ್ಬಸಿಗೆ, ಜಾಜೀಬೇರು, ಕೊತ್ತುಂಬರಿ, ಯಷ್ಟಿಮಧುಕ, ರಾಸ್ನೆ, ಭದ್ರ ಮುಸ್ತೆ, ಅಷಾಢಿಗಣಸು, ಹಾವುಮೆಕ್ಕೇಬೇರು, ಮುಡಿವಾಳ, ಶುಂಠಿ ಇವೆಲ್ಲಾ ಸಮಾಂಶವಾಗಿ ಕಷಾಯವಿಟ್ಟು ತೆಗೆದುಕೊಳ್ಳಲು ಪಿತ್ತಜ್ವರ ನಾಶವಾಗುವುದು.

ಕೊನ್ನಾರೀಗೆಡ್ಡೆ, ಶ್ರೀಗಂಧ, ಮುಡಿವಾಳ, ಲಾಮಂಚ, ಶುಂಠಿ, ಸೊಗದೇ ಬೇರು, ಚಂಗಲಕೋಷ್ಟ, ಯಷ್ಟಿಮಧುಕ ಇವುಗಳನ್ನು ಕಷಾಯವಿಕ್ಕಿ ಅಷ್ಟಾವ

ಶೇಷವಾಗಿ ಕಾಯಿಸಿ, ಶೋಧಿಸಿಕೊಂಡು, ಜೇನುತುಪ್ಪಗೂಡಿಸಿ, ಸೇವಿಸಲು ಪಿತ್ತಜ್ವರ ಮಾಣುವುದು.

ಸೊಗದೇಬೇರು, ಲಾಮಂಚ, ಕೊನ್ನಾರಿಗೆಡ್ಡೆ, ಮುಡಿವಾಳ, ಬೆಲ್ಲವತ್ತದಬೇರು, ಕೊತ್ತುಂಬರಿ, ಹಿಪ್ಪಲಿ ಇವುಗಳನ್ನು ಕಷಾಯ ಮಾಡಿ ಕುಡಿಯಲು ಪಿತ್ತಜ್ವರ ಪರಿಹಾರವಾಗುವುದು.

ದ್ರಾಕ್ಷೀಹಣ್ಣು, ಯಷ್ಟಿಮಧುಕ, ಇಪ್ಪೇಹೂವು, ಲೋಧ್ರದ ಚಕ್ಕೆ, ಸೊಗದೇಬೇರು, ಕೊನ್ನಾರೀಗೆಡ್ಡೆ, ನೆಲ್ಲೀಚಟ್ಟು, ಮುಡಿವಾಳ, ತಾವರೆಕುಸುರು, ತಾವರೆಗೆಣಸು, ಶ್ರೀಗಂಧ, ನೈದಿಲೆಗೆಡ್ಡೆ ಇವಿಷ್ಟನ್ನೂ ಕಷಾಯ ಕಾಯಿಸಿ, ಶರ್ಕರೆ, ಜೇನುತುಪ್ಪ, ಭತ್ತದರಳಿನ ಚೂರ್ಣ ಸಹ ಸೇರಿಸಿ ಕೊಡಲು ವಾಂತಿ ಕೂಡಿದ ಪೈತ್ಯಜ್ವರವು ನಾಶವಾಗುವುದು.

ಭದ್ರಮುಸ್ತೆ, ನೈದಿಲಗೆಡ್ಡೆ, ಅಮೃತವಳ್ಳಿ, ದ್ರಾಕ್ಷೀಹಣ್ಣು, ಸೊಗದೇಬೇರು, ಹಿಪ್ಪಲಿ, ಶ್ರೀಗಂಧ, ಪರ್ಪಾಟಕ ಇವಂ ಕಷಾಯವಿಕ್ಕಿ ಸೇವಿಸಲು ಪಿತ್ತಜ್ವರ ಬಿಡುವುದು.

ಭದ್ರಮುಸ್ತೆ, ಶ್ರೀಗಂಧ, ಶುಂಠಿ, ಮುಡಿವಾಳ, ಪರ್ಪಾಟಕ, ಲಾಮಂಚ ಇವುಗಳನ್ನು ಅಷ್ಟಾವಶೇಷವಾಗಿ ಕಷಾಯ ಕಾಯಿಸಿ ಕೊಡಲು ಪಿತ್ತಜ್ವರ ಬಿಡುವುದು.

ಕಟುಕರೋಹಿಣಿ, ಶ್ರೀಗಂಧ, ಲಾಮಂಚ, ಭದ್ರಮುಸ್ತೆ, ಯಷ್ಟಿಮಧುಕ, ಮುಡಿವಾಳ, ನೈದಿಲೆಗೆಡ್ಡೆ, ಇಪ್ಪೇಬೇರು, ಆಷಾಢೀಬೇರು ಇವುಗಳನ್ನೆಲ್ಲಾ ಕಷಾಯವಿಕ್ಕಿ ಸಕ್ಕರೆಬೆರಸಿ ಜೇನುತುಪ್ಪದಿಂದ ಕೂಡಿಸಿ ಕೊಡಲು ದಾಹ ತೃಷೆಯುಳ್ಳ ಪೈತ್ಯಜ್ವರ ಬಿಡುವುದು.

ಹಿಪ್ಪಲಿ, ಸಬ್ಬಸಿಗೆ ಬೀಜ, ಶುಂಠಿ, ಶರ್ಕರೆ, ಹಸುವಿನಹಾಲು ಇವುಗಳನ್ನೆಲ್ಲಾ ಸಮಾನವಾಗಿ ಕೂಡಿ ಕಷಾಯ ಕಾಯಿಸಿ ಕುಡಿಯಲು ಪಿತ್ತಜ್ವರ ಪರಿಹಾರವಾಗುವುದು.

ಪರ್ಪಾಟಕ, ಕಹಿಪಡವಲ, ಬೇವಿನೆಲೆ ಇವುಗಳನ್ನು ಸಮನಾಗಿ ಕಷಾಯ ಕಾಯಿಸಿ, ಶೋಧಿಸಿಕೊಂಡು, ಕಟುಕರೋಹಿಣಿ, ಸಕ್ಕರೆ ಪ್ರತಿಪಾಕವಿಕ್ಕಿ, ತೆಗೆದುಕೊಳ್ಳಲು ಪಿತ್ತಜ್ವರ ನಾಶವಾಗುವುದು.

ದ್ರಾಕ್ಷೀಹಣ್ಣು, ಪರ್ಪಾಟಕ, ಗುಳ್ಳದಬೇರು, ಮುತ್ತುಗದ ಕೊಂಬು, ಕಕ್ಕೆಹಣ್ಣು ಇವಂ ಸಮಾನಗೊಂಡು, ಅಷ್ಟಾವಶೇಷವಾಗಿ ಕಾಯಿಸಿ ಕುಡಿಯೆ ಪಿತ್ತಜ್ವರ ಪರಿಹಾರವಾಗುವುದು.

ಕಾಡಹೆಸರು, ಭದ್ರಮುಸ್ತೆ, ಜಟಾಮಾಂಸಿ, ಅಮರದವಳ್ಳಿ, ಶುಂಠಿ, ಕಳ್ಳಂಗಡಲೇಬೇರು, ಜೀರಿಗೆ ಇವುಗಳನ್ನು ಸಮಾನವಾಗಿ, ಕಷಾಯವಿಟ್ಟು ಕೊಡಲು ಪೈತ್ಯಜ್ವರ ಪರಿಹಾರವಾಗುವುದು.

ಶುಂಠಿ, ಬೆಲ್ಲವತ್ತದಕಾಯಿ, ಕೊತ್ತುಂಬರಿ, ಅಮರದವಳ್ಳಿ, ಚವ್ಯ, ಎಲವನ ಸಂದೀಬೇರು ಇವೆಲ್ಲವನ್ನು ಸಮಭಾಗವಾಗಿ ಎರಡು ಸೇರು ನೀರಿನಲ್ಲಿ ಕಷಾಯ ವಿಟ್ಟು ಅಷ್ಟಾವಶೇಷವಾಗಿ ಕುಡಿಯೆ ಪಿತ್ತಜ್ವರ ಪರಿಹಾರವಾಗುವುದು.

ಅಮರದವಳ್ಳಿ, ಬಿಲ್ವಪತ್ರೆಕಾಯಿ, ಶುಂಠಿ, ನೆಲ್ಲೀಚಟ್ಟು, ಶ್ರೀಗಂಧ, ಜೀರಿಗೆ ಕೊತ್ತುಂಬರಿ ಇವುಗಳನ್ನು ಸಮಾನವಾಗಿ ಕಷಾಯ ಕಾಯಿಸಿ, ಹಿಪ್ಪಲಿ ಪ್ರತಿಪಾಕ ಗೊಂಡು ಸೇವಿಸೆ, ಪಿತ್ತಜ್ವರ, ಉಷ್ಣಜ್ವರ, ಉರಿಮೂತ್ರ, ವಾಂತಿ ಕೈಕಾಲುಗ ಳುರಿತ, ಅಸ್ಥಿಗತಜ್ವರ ಮೂತ್ರಕೃಚ್ಛ್ರ ಮೊದಲಾದ ರೋಗಗಳು ಗುಣವಾಗುವುವು.

ಶಾರಿಬಾದಿಗಣದ ಕಷಾಯಂಗಳನ್ನು ಸಕ್ಕರೆಸಹ ಸೇವಿಸೆ, ಪಿತ್ತಜ್ವರ ಗುಣ ವಾಗುವುದು.

ಉತ್ಪಲಾದಿ ಗಣದ ಕಷಾಯಂಗಳಂ ಸಕ್ಕರೆಗೂಡಿ ಸೇವಿಸೆ, ಪೈತ್ಯಜ್ವರ ಗುಣವಾಗುವುದು.

ಕೊಡಸಿಗೆಬೀಜ, ಹಿಪ್ಪಲಿ, ಶೀಗೆ, ಕಹಿಪಡವಲ, ಪರ್ಪಾಟಕ, ನಸು ಗೊನ್ನೆಬೇರು ಇವಂ ಕಷಾಯವಿಕ್ಕಿ ಕೊಡಲು, ಪೈತ್ಯಜ್ವರ, ವಿಷಮಜ್ವರ, ದೋಷ ಜ್ವರ ಸಹ ಗುಣವಾಗುವುವು.

ಕಾಡುಹೆಸರುಬೇರು, ಕೊನ್ನಾರಿಗೆಡ್ಡೆ, ಮುಡಿವಾಳ, ಅಮರದವಳ್ಳಿ ಶುಂಠಿ, ಕಳ್ಳಂಗಡಲೇಬೇರು, ಜೀರಿಗೆ ಇವುಗಳನ್ನು ಕಷಾಯವಿಕ್ಕಿಕೊಡಲು ಪೈತ್ಯ ಜ್ವರ ಮಾಣುವುದು.

ಕೊನ್ನಾರಿಗೆಡ್ಡೆ, ಶ್ರೀಗಂಧದಚಕ್ಕೆ, ರಾಮಂಚ, ಅಮರದವಳ್ಳಿ, ಶುಂಠಿ, ಸೊಗದೇಬೇರು, ಚಂಗಲಕೋಷ್ಟ, ಅಷ್ಟಮಧುಕ ಇವುಗಳನ್ನು ಸಮಾನವಾಗಿ ಕಷಾಯವಿಕ್ಕಿ ಒಂದು ದುಡ್ಡುತೂಕ ಜೇನುಬೆರಸಿ ಕೊಡಲು ಪೈತ್ಯಜ್ವರ ಮಾಣುವುದು.

ಅಗಿಲುಶುಂಠಿ, ಕೊನ್ನಾರಿಗೆಡ್ಡೆ, ಶ್ರೀಗಂಧದಚಕ್ಕೆ, ಲಾಮಂಚ, ದ್ರಾಕ್ಷಿ, ವಾದಕ್ಕಿ, ಶುಂಠಿ, ನಸುಗೊನ್ನೆ, ಬೆಲ್ಲವತ್ತದಬೇರು ಇವುಗಳನ್ನು ಸಮಾನವಾಗಿ ಕಷಾಯವಿಕ್ಕಿ ಕೊಡಲು, ವಾಂತಿಗೂಡಿದ ಪೈತ್ಯಜ್ವರವು ನಿಲ್ಲುವುದು.

ಅಳಿಲೇಕಾಯಿ, ಪರ್ಪಾಟಕ, ಕೊನ್ನಾರಿಗೆಡ್ಡೆ, ಕಟುಕರೋಹಿಣಿ, * ರೇಲ ಪಂಡ್ಲು ಇವುಗಳನ್ನು ಕಷಾಯ ಹಾಕಿ, ಶೋಧಿಸಿ ದ್ರಾಕ್ಷೀಹಣ್ಣುಹಾಕಿ ಕೊಡಲು, ಪ್ರಲಾಪ, ಮೂರ್ಛೆ, ಭ್ರಮೆ, ದಾಹಕೂಡಿದ ಪೈತ್ಯಜ್ವರ ಮಾಣುವುವು.

## ತಾಪಜ್ವರಕ್ಕೆ.

ನೆಲಕೊಳವಳಿಕೆ ಸಹಮೂಲ, ಅತ್ತಿಕಾಯಿ ಈ ಎರಡರಲ್ಲಿಯೂ ರಸವನ್ನು ತೆಗೆದು ಈ ರಸದಲ್ಲಿ ಜೀರಿಗೆ ಒಂದುತೂಕ ಕಲ್ಲುಸಕ್ಕರೆ ಒಂದುತೂಕ ಅರೆದು ಪುಡಿಮಾಡಿ ಹಾಕಿ ತೆಗೆದುಕೊಂಡಲ್ಲಿ ತಾಪಜ್ವರ ಮಾಣುವುದು.

* ತೆಲಗು

## ಉಷ್ಣಜ್ವರಕ್ಕೆ.

ಸುರಸುರಗಿ ಚಟ್ಟನ್ನು ಹಸುವಿನ ಹಾಲನಲ್ಲಿ ಜಜ್ಜಿ ರಸ ತೆಗೆದು ಕೊತ್ತುಂಬರಿ ಜೀರಿಗೆ, ಕಲ್ಲುಸಕ್ಕರೆ ಅರೆದು ಮೂರುದಿನ ತೆಗೆದುಕೊಂಡಲ್ಲಿ ಉಷ್ಣಜ್ವರ ಬಿಡುವುದು.

ಯಾಲಕ್ಕಿ, ಲವಂಗಪತ್ರೆ, ಲವಂಗಚಕ್ಕೆ, ಯಷ್ಟಿಮಧುಕ, ಶ್ರೀಗಂಧಚಕ್ಕೆ ಶುಂಠಿ, ಸೊಗದೇಬೇರು, ದ್ರಾಕ್ಷೀಹಣ್ಣು, ಖರ್ಜೂರ, ಲಾಮಂಚ, ದೇವದಾರು, ಹಿಪ್ಪಲಿ ಇವನ್ನು ಸಮಾನವಾಗಿ ಸೇರಿಸಿ, ಎಳನೀರಲ್ಲಿ ಅರೆದು ಶೋಧಿಸಿ ಎರಡ ತೂಕ ಸಕ್ಕರೆವೆರಸಿ ತೆಗೆದುಕೊಳ್ಳಲು ಉಷ್ಣತಾಪಜ್ವರ ಬಿಡುವುದು

ಮೈಯಲ್ಲಿ ಅಗ್ನಿಜ್ವಾಲೆಯುಂಟಾದವರಿಗೆ ನಾಯಿಬೇಲ, ನಾಯಿಬೇಲದ ತೊಕ್ಕು, ಸಕ್ಕರೆ ಇವುಗಳನ್ನು ಕಿವಿಚಿ ಬಂದ ನೀರಿಗೆ ಸಣ್ಣಜೀರಿಗೆ ಚೂರ್ಣಮಾಡಿ ಸೇರಿಸಿ ಸೇವಿಸಿದಲ್ಲಿ ಬಿಡದೇ ಇರತಕ್ಕ ಉಷ್ಣತಾಪವು ಬಿಡುವುದು.

## ದಾಹಜ್ವರಕ್ಕೆ

ಗೇಕಿನಗೆಡ್ಡೆ, ನೈದಿಲೆಗೆಡ್ಡೆ, ಅಮರದವಳ್ಳಿ, ದ್ರಾಕ್ಷಿಹಣ್ಣು, ಕಹಿಹಾಲೆಬೇರು, ಶ್ರೀಗಂಧ, ಹಿಪ್ಪಲಿ, ಕಹಿಪಡವಲ ಇವುಗಳನ್ನು ಸಮಾನವಾಗಿ ಕಷಾಯ ಕಾಯಿಸಿ ಕೊಡಲು ದಾಹಜ್ವರ ಮಾಣುವುದು.

ಕೊತ್ತುಂಬರಿ ಮತ್ತು ಹೆಸರು ಇವು ಪ್ರತ್ಯೇಕ ಒಂದುಪಡಿಯನ್ನು ಹಸುವಿನ ಬೆಣ್ಣೆಯಲ್ಲಿ ಹುರಿದು ಪುಡಿಮಾಡಿ ಇರಿಸಿಕೊಂಡು ಎರಡುಸೇರು ನೀರನ್ನು ಕಷಾಯ ವಿಕ್ಕಿ ಒಂದುಸೇರು ನಿಲ್ಲುವಂತೆ ಕಾಯಿಸಿ ಆಮೇಲೆ ಮತ್ತೊಂದು ಮಡಿಕೆಯನ್ನು ಒಲೆಯಮೇಲೆ ಇರಿಸಿ, ಈ ಮಡಿಕೆಗೆ ಮೇಲ್ಕಂಡ ಕಷಾಯುವನ್ನು ಹುಯ್ದು ಅನಂತರ ಮೇಲೆಹೇಳಿದ ಪುಡಿಯನ್ನೂ ಹಾಕಿ, ಇವುಗಳೆಲ್ಲವನ್ನೂ ಬೇರೊಂದು ಚಟ್ಟಿಯಲ್ಲಿ ಹಸುವಿನಬೆಣ್ಣೆಸಹಿತ ಒಗ್ಗರಿಸಿ ಈ ಕಷಾಯವನ್ನು ಕೊಡಲು ದಾಹಜ್ವರ ಬಿಡುವುದು.

ಯಷ್ಟಿಮಧುಕ, ಬಿಳಿಜೋಳ, ಹಿಪ್ಪಲಿ ಇವುಗಳನ್ನು ನೀರಿನಲ್ಲರೆದು ನೀರಿನಲ್ಲಿ ಕದಡಿ ಅಷ್ಟಾವಶೇಷವಾಗಿ ಕಾಯಿಸಿ ಕುಡಿಯೆ ದಾಹಜ್ವರ ಮಾಣುವುದು.

ಒಂದುಹಿಡಿ ಮಾವಿನಕಡ್ಡಿ, ಕೊತ್ತುಂಬರಿಬೀಜ, ನೆಲ್ಲೀಚಟ್ಟು ಇವುಗಳನ್ನು ಅಷ್ಟಾವಶೇಷವಾಗಿ ಕಷಾಯಕಾಯಿಸಿ ಕೊಡಲು ದಾಹಜ್ವರಪರಿಹಾರವಾಗುವುದು.

ರುದ್ರಾಕ್ಷಿ, ಅಮರದವಳ್ಳಿ, ಶುಂಠಿ, ಕೊತ್ತುಂಬರಿ, ಮುಡಿವಾಳ, ಲಾಮಂಚ ಇವುಗಳ ಕಷಾಯವಂ ಕಾಯಿಸಿ ಕುಡಿಯೆ ದಾಹಜ್ವರ ಪರಿಹಾರವಾಗುವುದು.

ಬೇವು, ಅಮರದವಳ್ಳಿ, ಭದ್ರಮುಸ್ತೆ, ಮುಡಿವಾಳ, ಲಾಮಂಚ, ಇವುಗಳನ್ನು ಕಷಾಯವಿಕ್ಕಿ ಕುಡಿಯೆ ದಾಹಜ್ವರ ನಾಶವಾಗುವುದು.

ಅತ್ತಿ, ಆಲ, ಅರಳಿ ಈ ಮೂರು ಮರಗಳ ಚಿಗುರುಗಳನ್ನು ಕಷಾಯಕಾಯಿಸಿ ಕುಡಿಯೆ ದಾಹಜ್ವರ ಮಾಣುವುದು.

ಊರುದ್ರಾಕ್ಷಿ, ಕೊನ್ನಾರೀಗೆಡ್ಡೆ, ಬೇವು, ಅಮರದವಳ್ಳಿ, ಭದ್ರಮುಸ್ತೆ, ಮುಡಿವಾಳ, ಲಾಮಂಚ, ಇವುಗಳನ್ನು ಕಷಾಯವಿಟ್ಟು ಸೇವಿಸೆ ದಾಹಜ್ವರ ನಾಶವಾಗುವುದು.

ಸಿಹಿಹಾಲಿಬೇರನ್ನು ಜಜ್ಜುಗುಟ್ಟಿ ಕಷಾಯವಂ ಮಾಡಿ ತುಪ್ಪವೆರಸಿ ಸೇವಿಸೆ ದಾಹಜ್ವರ ನಾಶವಾಗುವುದು.

ಆಲದಬೀಳು, ಎಲಚೀಚಿಗುರು, ಚಿಟಿಕೆಸೊಪ್ಪು, ಸೊಗದೇಬೇರು, ಹೆಸರು, ಪರ್ಪಾಟಕ, ರಸದಾಳೀಕಟ್ಟು, ಇಪ್ಪೇಹೂವು ಇವುಗಳ ಕಷಾಯವಿಕ್ಕಿ, ಸಕ್ಕರೆ ಗೂಡಿ ಸೇವಿಸೆ ದಾಹಜ್ವರಂ ಗುಣಮಕ್ಕುಂ.

ಅಮರದವಳ್ಳಿ, ಬೇವು, ಭದ್ರಮುಸ್ತೆ ಇವುಗಳನ್ನು ಕಷಾಯವಿಟ್ಟು ಹಿಪ್ಪಲಿ ಚೂರ್ಣವೆರಸಿ ಕುಡಿಯೆ ದಾಹಜ್ವರಂ ನಾಶವಾಗುವುದು.

## ಅಂತರ್ದಾಹಕ್ಕೆ ಕಷಾಯಗಳು.

ಕಳಿಂಗರಾಸ್ನೆ, ಜಟಾಮಾಂಸಿ, ಯಷ್ಟಿಮಧುಕ, ಕೊತ್ತುಂಬರಿ, ಏಲಕ್ಕಿ, ಚವ್ಯ, ಹಾಲೇಬೇರು, ಬಿಲ್ವಪತ್ರೆಯಬೇರು ಇವುಗಳನ್ನು ಸಮಾನವಾಗಿ ಕಷಾಯವಿಟ್ಟು ಸೇವಿಸೆ ಅಂತರ್ದಾಹ ಹೋಗುವುದು.

ಯಷ್ಟಿಮಧುಕ, ಜೀರಿಗೆ, ಚವ್ಯ, ಮುಡಿವಾಳ, ಲಾಮಂಚ, ಚಂಗಲಕೋಷ್ಠ ಕೊತ್ತುಂಬರಿ, ಶುಂಠಿ, ಇವುಗಳನ್ನು ಸಮವಾಗಿ ಕಷಾಯವಿಕ್ಕಿ ಸೇವಿಸಲು ಅಂತರ್ದಾಹ ಪರಿಹಾರವಾಗುವುದು.

ಮಾವಿನಚಕ್ಕೆ, ಅರಳೀಚಕ್ಕೆ, ನೇರಿಲೆಚಕ್ಕೆ, ಈ ಮೂರರ ಚಿಗುರು, ಯಷ್ಟಿಮಧುಕ, ಜೀರಿಗೆ ಇವುಗಳನ್ನು ಸಮಭಾಗವಿಕ್ಕಿ ಕಷಾಯಕಾಯಿಸಿ ಕೊಡಲು ಅಂತರ್ದಾಹ ಶಮನವಾಗುವುದು.

ಇಲವಿಂದದ ಚಿಗುರು, ಯಷ್ಟಿಮಧುಕ, ಚಂಗಲಕೋಷ್ಟ, ಮುಡಿವಾಳ, ಹಾಲೇಬೇರು, ಹಸಿಅರಿಸಿನ, ಕೊತ್ತುಂಬರಿ, ಜೀರಿಗೆ, ಇವುಗಳನ್ನು ಕಷಾಯವಂ ಮಾಡಿ ಸೇವಿಸೆ ಅಂತರ್ದಾಹ ಪರಿಹಾರವಾಗುವುದು.

ಯಷ್ಟಿಮಧುಕ, ಜೀರಿಗೆ, ಮುಡಿವಾಳ, ಚಂಗಲಕೋಷ್ಟ, ಕೊತ್ತುಂಬರಿ, ಸಬ್ಬಸಿಗೆ ಬೀಜ ಇವುಗಳ ಕಷಾಯವನ್ನು ಹಾಕಿಕೊಡಲು ಅಂತರ್ದಾಹ ಗುಣವಾಗುವುದು.

ಪಾದರೀ ಹೂವು, ಯಷ್ಟಿಮಧುಕ, ತಾವರೆಗೆಡ್ಡೆ, ಲಾಮಂಚ, ಶ್ರೀಗಂಧ, ನೆಲ್ಲೀಚಟ್ಟು, ಚಂಗಲಕೋಷ್ಠ ಇವುಗಳನ್ನು ಸಮಾನವಾಗಿ ಕಷಾಯವಿಕ್ಕಿ ಕೊಡಲು ಅಂತರ್ದಾಹವು ಪರಿಹಾರವಾಗುವುದು.

## ಚೂರ್ಣಗಳು.

ಏಲಕ್ಕಿ, ನಾಗಕೇಸರ, ಲವಂಗಚಕ್ಕೆ, ಲವಂಗಪತ್ರೆ, ಶುಂಠಿ, ಹಿಪ್ಪಲಿ, ಮೆಣಸು, ತವಕ್ಷೀರ, ದ್ವೀಪದ್ರಾಕ್ಷಿ, ಖರ್ಜೂರದ ಹಣ್ಣು, ದಾಳಿಂಬ, ಕರ್ಪೂರಶುಂಠಿ, ಕರ್ಕಾಟಕಶೃಂಗಿ. ಅಳಲೇಕಾಯಿ, ಜೀರಿಗೆ, ಮುಡಿವಾಳ ಇವುಗಳನ್ನು ಸಮಭಾಗ ವಾಗಿ ಚೂರ್ಣವನ್ನು ಮಾಡಿ ವಸ್ತ್ರಗಾಳಿತವಂ ಗೈದು, ಇಷ್ಟರ ಸಮ ಸಕ್ಕರೆವೆರಸಿ ಎಲಚೀಕಾಯಿಯ ಪ್ರಮಾಣವನ್ನು ಸೇವಿಸೆ ಪಿತ್ತಜ್ವರ, ಉಷ್ಣರೋಗ, ರಕ್ತವಾತ, ಕ್ಷಯರೋಗ, ಸರ್ವಾಂಗಶೂಲೆ, ಕರ್ಣನಾಸಿಕ ರೋಗಗಳು ಸಹ ಗುಣವಾ ಗುವುವು.

## ದ್ರಾಕ್ಷೀಚೂರ್ಣ.

ದ್ರಾಕ್ಷೀಹಣ್ಣು, ಕೊತ್ತುಂಬರಿ, ಇಪ್ಪೇಹೂವು, ಲಾಮಂಚ, ಖರ್ಜೂರದ ಹಣ್ಣು, ಯಷ್ಟಿಮಧುಕ, ಹಿಪ್ಪಲಿ, ಏಲಕ್ಕಿ, ತಮಾಲಪತ್ರೆ, ನೆಲ್ಲೀಚಟ್ಟು, ಮುಡಿ ವಾಳ, ಕೊನ್ನಾರೀಗೆಡ್ಡೆ, ಶ್ರೀಗಂಧ, ಜೀರಿಗೆ ಇವುಗಳನ್ನು ಸಮಾನವಾಗಿ ಚೂರ್ಣಿಸಿ, ವಸ್ತ್ರಗಾಳಿತವನ್ನುಮಾಡಿ, ಸಕ್ಕರೆಬೆರಸಿ ನಿತ್ಯವೂ ಉದಯಕಾಲದಲ್ಲಿ ಸೇವಿಸೆ ಪಿತ್ತಜ್ವರ, ಪಾಂಡುಕಾಮಾಲೆ ಸಹ ಮಾಣ್ಗುಂ.

## ತೈಲಗಳು (ಚಂದನಾದಿ ತೈಲ.)

ಶ್ರೀಗಂಧ, ಯಷ್ಟಿಮಧುಕ, ಅಗಿಲು, ದ್ರಾಕ್ಷೀಹಣ್ಣು, ಕುರುಟಿಗೇ ಬೇರು, ಇವುಗಳನ್ನು ಪ್ರತ್ಯೇಕ ನಾಲ್ಕುವರಹಾ ತೂಕವನ್ನು ಚೂರ್ಣಿಸಿ, ಒಂದುಕೊಳಗ ತಣ್ಣೀರಿನಲ್ಲಿ ಹಾಕಿ, ಒಂದು ಬಳ್ಳ ಎಣ್ಣೆಯನ್ನು ಹನಿಸಿ ಕಾಯಿಸಿ ಪಾಕದಲ್ಲಿಳುಹಿ ಕೊಂಡು ದೇಹಕ್ಕೆ ಲೇಪವನ್ನುಮಾಡಲು ಪಿತ್ತಜ್ವರ, ದಾಹಜ್ವರ ಸಹ ಮಾಣುವುವು.

## ಮಹಾಚಂದನಾದಿ ತೈಲ.

ಶ್ರೀಗಂಧ, ಮುಡಿವಾಳ, ಯಷ್ಟಿಮಧುಕ, ನೆಲ್ಲೀಚಟ್ಟು, ಇಪ್ಪೆಹೂವು, ಸೊಗ ದೇಬೇರು, ಕಳ್ಳಂಗಡಲೇಬೇರು ಇವುಗಳನ್ನು ಪ್ರತ್ಯೇಕ ಹತ್ತು ಹಲಗಳನ್ನು ನಾಲ್ಕು ಕೊಳಗ ನೀರಿನಲ್ಲಿ ಹಾಕಿ ಚಾತುರ್ಭಾಗಾವಶೇಷವಾಗಿ ಕಾಯಿಸಿ ಶೋಧಿಸಿ ಇದರಲ್ಲಿ ಹಸುವಿನ ಹಾಲು, ಒಂದೆಲಗದ ಸೊಪ್ಪಿನ ರಸ, ಆಷಾಢೀರಸ, ಲೋಳ ಸರದ ರಸ, ಎಳನೀರು, ಎಳ್ಳೆಣ್ಣೆ ಇವುಗಳನ್ನು ಪ್ರತ್ಯೇಕವಾಗಿ ಹನಿಸಿ ಕಾಯಿಸು ವಾಗ ಹಾಕುವ ಕಲ್ಕದ್ರವ್ಯಗಳು—ಮಂಜಿಷ್ಟೆ, ಧಾತಕೀಕುಸುಮ, ತಾವರೇ ಕುಸುಮ, ನೈದಿಲೇಗೆಡ್ಡೆ, ತಾವರೇಗೆಣಸು, ಅಶ್ವಾಲಯನ ದರ್ಭೆ ಬೇರು, ಕೊಳ ವಳಿಕೆ ಬೇರು, ಸಿಹಿಹಾಲೆ, ಕೊಡ್ಡಿ, ಹಾಲರೊಡ್ಡಿ, ಮೇಧೆ, ಮಹಾಮೇಧೆ, ಕಾಡು

ಹೆಸರು, ಕಾಡು ಉದ್ದು, ಯಷ್ಟಿಮಧುಕ ಇವುಗಳನ್ನು ಪ್ರತ್ಯೇಕ ಎರಡು ವರಹಾ ತೂಕವನ್ನು ಚೂರ್ಣಿಸಿ ಹಾಕಿ ಕಾಯಿಸಿ ಪಾಕದಲ್ಲಿಳುಹಿ ಶರೀರಕ್ಕೆ ಲೇಪಿಸೆ ಪಿತ್ತ ಜ್ವರ, ಉನ್ಮಾದ, ಮೂರ್ಛೆ ಸಹ ಮಾಣುವುವು.

## ಸಹದೇವಿ ಘೃತ.

ಒಂದುಕೊಳಗ ಸಹದೇವೀ ಸಮೂಲವನ್ನೂ ಮತ್ತು ಎರಡುಬಳ್ಳ ಅಮರದ ವಳ್ಳೀರಸವನ್ನೂ ಕೂಡಿಸಿ, ಇದರಲ್ಲಿ ಒಂದುಬಳ್ಳ ತುಪ್ಪವನ್ನೂ ಹನಿಸಿ ಕಾಯಿಸುವಾಗ ಹಾಕುವ ಕಲ್ಕದ್ರವ್ಯಗಳು :—ಯಷ್ಟಿಮಧುಕ, ಚಂಗಲಕೋಷ್ಟ, ಲವಂಗ, ಏಲಕ್ಕಿ, ಮಂಜಿಷ್ಟೆ, ಕಟುಕರೋಹಿಣಿ, ಸಂಪಿಗೆಮೊಗ್ಗು, ಶ್ರೀಗಂಧ, ರಾಮಂಚ, ಸೊಗದೇಬೇರು, ಅಷಾಢೀಗೆಣಸು, ಖರ್ಜೂರ, ಮುಡಿವಾಳ, ಕೊನ್ನಾರಿಗೆಡ್ಡೆ, ಇವುಗಳನ್ನು ಪ್ರತ್ಯೇಕ ಒಂದು ವರಹಾ ತೂಕದಲ್ಲಿ ಚೂರ್ಣಿಸಿಹಾಕಿ ಕಾಯಿಸಿ ಪಾಕದಲ್ಲಿಳುಹಿಕೊಂಡು ಪ್ರತಿನಿತ್ಯವೂ ಎರಡು ವರಹಾತೂಕವನ್ನು ಸೇವಿಸಲು ಪಿತ್ತಜ್ವರ, ಅಂತರ್ದಾಹ, ಶಿರೋದಾಹ, ಅಂಗದಾಹ, ಸನ್ನಿಪಾತಜ್ವರ ಸಹ ಗುಣಮಕ್ಕುಂ.

## ಗಂಡೂಷ.

ದ್ರಾಕ್ಷೀಹಣ್ಣು, ರುದ್ರಾಕ್ಷಿ, ಯಷ್ಟಿಮಧುಕ, ಚಂಗಲಕೋಷ್ಟ, ಹಿಪ್ಪಲಿ, ಲವಂಗ, ಚಿರಾಯಿಕ, ನೆಲಬೇವು, ಬೆಲ್ಲವತ್ತದಬೇರು, ಇವುಗಳೆಲ್ಲವನ್ನೂ ಮೊಲೆ ಹಾಲಿನಲ್ಲಿ ಪ್ರತ್ಯೇಕವಾಗಿ ತೇದು ಸಕ್ಕರೆಬೆರಸಿ ಜಿಹ್ವೆಗೆ ಲೇಪನಮಾಡೆ ತಾಪಜ್ವರ, ದಾಹಜ್ವರ ಸಹ ಶಮನವಾಗುವುವು.

ಚಿನ್ನ, ಬೆಳ್ಳಿ, ಕಸ್ತೂರಿ, ಹವಳ, ಇಂದ್ರನೀಲ, ಪುಷ್ಯರಾಗ, ರಾಜಾವರ್ತ ಆಡುಸೋಗೆ ಹೂವು, ಆಕಲಗರೆ, ಯಷ್ಟಿಮಧುಕ, ಪುಲ್ಲಂಪುರುಚಿ, ಸೈಂಧವಲವಣ, * ವೆರುಪನಚಕ್ಕ, ಸಕ್ಕರಗುಂಬಳದಕಡ್ಡಿ, ಕೊಮ್ಮೇಬೇರು, ಬಿಲ್ವಪತ್ರದ ಬೇರು, ಲವಂಗ, ರುದ್ರಾಕ್ಷಿ, * ಶೀಗಡೀದೂಲಗೋಮೀವೇರು, ಪಚ್ಚಕರ್ಪೂರ, ಅಭ್ರಕಭಸ್ಮ ಇವಿಷ್ಟನ್ನೂ ಸಮಾಂಶವಾಗಿ ಸೇರಿಸಿ ಇವುಗಳನ್ನು * ಅಟಿಕೆ ಮಾಮಿಡಿಆಕುರಸಂ, * ಜಾತರಾಸಿ ಆಕುರಸಂ, ಕುಂಕುಮದಹೂವು, ನೀಲಿ ಆಕುರಸಂ, ಮೊಲೆಹಾಲು ಇವುಗಳಲ್ಲಿ ನಾಲಿಗೆಗೆ ಗಂಡೂಷವನ್ನು ಮಾಡಲು ಪಿತ್ತಜ್ವರ, ಎಳವುದೋಷ, ಸನ್ನಿಪಾತ, ಪೈತ್ಯ, ಭ್ರಮೆ ಶಿರೋರೋಗ, ಛರ್ದಿ, ಅರೋಚಿಕೆ, ಜಿಹ್ವಾರೋಗ ಇವುಗಳೇ ಮೊದಲಾದುವು ಗುಣವಾಗುವುವು.

---

* ತೆಲಗು.

## ಲೇಪ.

ಪಾಲ್ಮರದ ಚಕ್ಕೆ ಐದನ್ನು ಅಂಬಿಲದಲ್ಲಿ ಅರೆದು ಮೈಗೆ ಪೂಸಲು ದಾಹಜ್ವರ ಮಾಣುವುದು.

ಹರಳೆಲೆಯಂ ತುಳಿದು ನೀರೊಳು ಕಲಸಿ ಬಂದ ನೊರೆಯನ್ನು ಕೈಕಾಲು ತಳಗಳಿಗೆ ಪೂಸಿ ನೆತ್ತಿಯೊಳೊತ್ತೆ ದಾಹಜ್ವರ ಮಾಣುವುದು.

ಎಲಚೀ ಸೊಪ್ಪನ್ನು ತುಳಿದು ನೀರೊಳು ಕಲಸಿ ಹಸ್ತದಿಂ ಜಾರಿಸಿ ಬಂದ ನೊರೆಯನ್ನು ಕೈಕಾಲು ತಳವನ್ನು ಪೂಸಿ ನೆತ್ತಿಯೊಳೊತ್ತಲು ದಾಹಜ್ವರವು ಬಿಡುವುದು.

ದೇವದಾರು, ಅಮರದವಳ್ಳಿ, ಕಳವಿಗೆ ಬೇರು, ಖಜೋರ, ಅಳಿಲೆಕಾಯಿ, ಶುಂಠಿ, ಪಾಲ್ಮರದ ಚಕ್ಕೆಐದು, ಹತ್ತಿಯಕಾಯಿ ಸಹ ಅರೆದು ಹೊಸ ಅಳಿಗೆಯಲ್ಲಿ ಹಾಕಿ ನೀರು ಹುಯ್ದು ಕಾಯಿಸಿ ಆ ನೀರನ್ನು ಮೈಗೆರೆಯಲು ದಾಹಜ್ವರ ಮಾಣುವುದು.

## ನಸ್ಯ.

ಜಿನಕ, ಕರ್ಪೂರ, ಯಷ್ಟಿಮಧುಕ, ಶ್ರೀಗಂಧ, ಬೆಲ್ಲ, ದ್ರಾಕ್ಷೀಹಣ್ಣು ಇವುಗಳನ್ನು ಅಕ್ಕಿಗಟ್ಟಿನಿಂದರೆದು ಮೊಲೆಹಾಲಿನಿಂದ ನಸ್ಯಂಗೆಯ್ಯಲು ದಾಹಜ್ವರ ಮಾಣುವುದು.

## ಗುಳಿಗೆ.

ಜೀರಿಗೆ, ಕಲ್ಲುನಾರು, ಕರೀಜೀರಿಗೆ, ಯಷ್ಟಿಮಧುಕ, ಏಲಕ್ಕಿ, ತವಕ್ಷೀರ, ಸಹಸ್ರವೇದಿ, ನೆಲ್ಲೀಚಟ್ಟು, ಬಂಜಹಾಗಲದಗೆಡ್ಡೆ, ತುರುಚನಬೇರಿನ ತಿಗುಡು, ಇವುಗಳನ್ನು ಸಮತೂಕದಲ್ಲಿ ಚೂರ್ಣಿಸಿ ನಿಂಬೇಹಣ್ಣಿನ ರಸದಿಂದ ಅರೆದು ಕಡಲೇಗಾತ್ರ ಗುಳಿಗೆಯನ್ನು ಮಾಡಿ ನೆಳಲಲ್ಲಿ ಒಣಗಿಸಿ ಇಟ್ಟುಕೊಂಡು ಪ್ರತಿದಿನವೂ ಒಂದೊಂದು ಗುಳಿಗೆಯನ್ನು ನುರುಹಿ ಹಸುವಿನ ಬೆಣ್ಣೆ ಮತ್ತು ಸಕ್ಕರೆಯಲ್ಲಿ ಮಿಶ್ರಮಾಡಿ ಕೊಡಲು ದಾಹಜ್ವರ ಗುಣವಾಗುವುದು. ಇದೇ ಗುಳಿಗೆಯನ್ನು ಎಳನೀರಿನಲ್ಲಿ ಸಕ್ಕರೆಗೂಡಿ ಕೊಡಲು ದಾಹಜ್ವರವು ಬಿಡುವುದು. ಮತ್ತು ಇದೇ ಗುಳಿಗೆಯನ್ನ ಹತ್ತಿಯಸೊಪ್ಪಿನ ರಸದಲ್ಲಿ ಸಕ್ಕರೆಗೂಡಿ ಕೊಡಲು ದಾಹಜ್ವರ ಮಾಣುವುದು.

## ಶ್ಲೇಷ್ಮಜ್ವರ ಲಕ್ಷಣಂ.

ಬಾಯಿಯು ಸಿಹಿಗೂಡಿ, ಆಲಸ್ಯವಾಗಿ, ಮಲಮೂತ್ರಗಳು ಬಿಳುಪಾಗಿ ಹೋಗುತ್ತ, ರೋಮಾಂಚವಾಗಿ, ಬಾಯಲ್ಲಿ ನೀರುಸುರಿಯುತ್ತ ಮೈಯ್ಯಲ್ಲಿ ಸ್ವಲ್ಪ

ವಾಗಿ ಕಾವು ಉಂಟಾಗಿ, ಬಾಯಿಯಲ್ಲಿ ಉಪ್ಪುದೋರುತ್ತ, ವಾಂತಿಯುಂಟಾಗಿ ಈ ಲಕ್ಷಣಗಳೊಡನೆ ಬೆರಸಿರ್ಪುದೇ ಶ್ಲೇಷ್ಮಜ್ವರವೆನಿಸಿಕೊಳ್ಳುವುದು.

ಈಜ್ವರಕ್ಕೆ ಹುರಳೀಕಟ್ಟು, ಕಡಲೇ ಕಟ್ಟು ಮತ್ತು ಆರಿದ ಅನ್ನ ಇವುಗಳನ್ನು ಪಥ್ಯಕೊಡಿಸುವುದು.

## ಚಿಕಿತ್ಸೆಗಳು (ಕಲ್ಕಗಳು)

ಕಟುಕರೋಹಿಣಿ, ಕೊತ್ತುಂಬರಿ, ಶುಂಠಿ, ರಾಸ್ನೆ, ಹಿಪ್ಪಲಿ, ಲವಂಗ ಕೊನ್ನಾರೀಗೆಡ್ಡೆ, ಜೀರಿಗೆ ಇವುಗಳನ್ನು ಸಮಭಾಗವಾಗಿ ಬಿಸಿನೀರಿನಿಂದ ರೆದು ಕೊಡಲು ಶ್ಲೇಷ್ಮಜ್ವರ ನಾಶವಾಗುವುದು.

ಜೀರಿಗೆ, ಶುಂಠಿ, ಹಿಪ್ಪಲಿ, ಮೆಣಸು, ಅಳಲೇಕಾಯಿ, ಅರಿಸಿನ, ರಾಸ್ನೆ ಬೆಳ್ಳುಳ್ಳಿ, ಕೊತ್ತುಂಬರಿ, ನೆಲಬೇವು ಇವುಗಳನ್ನು ಬಿಸಿನೀರಿನಿಂದರೆದು ಕೊಡಲು ಶ್ಲೇಷ್ಮಜ್ವರ ನಾಶವಾಗುವುದು.

ನೆಲಗುಳ್ಳ, ಕೊಗ್ಗೀಬೇರು, ಅತಿಬಜೆ, ಶುಂಠಿ, ಜೀರಿಗೆ, ಹಿಪ್ಪಲಿ ಇವುಗಳನ್ನು ಸಮತೂಕದಲ್ಲಿ ಅರೆದು:ಕೊಡಲು ಶ್ಲೇಷ್ಮಜ್ವರ ಪರಿಹಾರವಾಗುವುದು.

ಶುಂಠಿ, ಹಿಪ್ಪಲಿ, ತಾಳೀಸಪತ್ರೆ, ಚಂಗಲಕೋಷ್ಟ, ಒಂದೆಲಗ, ಕಟುಕರೋಹಿಣಿ, ಜೀರಿಗೆ, ಲವಂಗ, ಇವುಗಳನ್ನು ಸಮಾಂಶವಾಗಿ ಅರೆದು ಜೇನುತುಪ್ಪಗೂಡಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು.

ಕಹಿಪಡವಲ, ನೆಲಬೇವು, ಅಳಿಲೆಕಾಯಿ, ತಾರೆಕಾಯಿ, ನೆಲ್ಲೀಚಟ್ಟು, ಬೊಕಣಿಕೆಕಾಯಿ, ಶುಂಠಿ, ಭದ್ರಮುಸ್ತೆ, ಜೀರಿಗೆ, ಪರ್ಪಾಟಕ, ಶ್ರೀ ತೊಳಸಿ ಇವುಗಳನ್ನು ಸಮಾಂಶವಾಗಿ ಅರೆದುಕೊಡಲು ಶೇಷ್ಮಜ್ವರ ಬಿಡುವುದು.

ತಾಳೀಸಪತ್ರೆ, ಶುಂಠಿ, ಹಿಪ್ಪಲಿ, ಮೆಣಸು, ಗಂಟುಭಾರಂಗಿ, ರಾಸ್ನೆ, ಸೈಂಧವಲವಣ, ಬಿಳುಗಾರ, ಅಳಿಲೆಕಾಯಿ ಇವುಗಳನ್ನು ಗರುಗದ ಸೊಪ್ಪಿನರಸದಿಂದ ಅರೆದು ಸೇವಿಸಲು ಶ್ಲೇಷ್ಮಜ್ವರ ಬಿಡುವುದು.

ಆಡುಸೋಗೆ, ನೆಲ್ಲೀಚಟ್ಟು, ಭದ್ರಮುಸ್ತೆ, ತುಪ್ಪದೇವದಾರು, ಅಳಿಲೇಕಾಯಿ, ಶುಂಠಿ, ಮರದರಿಸಿನ ಇವುಗಳನ್ನೆಲ್ಲಾ ಆಡುಸೋಗೆ ಸೊಪ್ಪಿನರಸದಿಂದ ಅರೆದು ಸಕ್ಕರೆವೆರಸಿ ಜೇನುತುಪ್ಪದಿಂ ತೆಗೆದುಕೊಳ್ಳಲು ಶೇಷ್ಮಜ್ವರ ಬಿಡುವುದು.

ರಾಸ್ನೆ, ತಾವರೆ ಗೆಣಸು, ತಾವರೆ ಕುಸುಮ, ಲವಂಗ, ಹಿಪ್ಪಲಿ ಇವುಗಳನ್ನು ಅಕ್ಕೀ ಗಚ್ಚಿನಿಂದ ಅರೆದುಕೊಡಲು ಶೇಷ್ಮಜ್ವರವು ಪರಿಹಾರವಾಗುವುದು.

ದ್ರಾಕ್ಷೀಹಣ್ಣು, ಅಳಿಲೇಕಾಯಿ, ಹಿಪ್ಪಲಿ, ಕರ್ಕಾಟಕಶೃಂಗಿ, ಕಳ್ಳಂಗಡಲೆ ಇವುಗಳನ್ನು ಅರೆದು ಜೇನುತುಪ್ಪದಿಂ ಸೇವಿಸಲು ಶೇಷ್ಮಜ್ವರ ಬಿಡುವುದು.

ಅಳಿಲೇಕಾಯಿ, ಕೊತ್ತುಂಬರಿ, ಭದ್ರಮುಸ್ತೆ, ಶುಂಠಿ, ಗಂಡು ಹಂಚೇ

ಬೇರು, ಪರ್ಪಾಟಕ, ಅತಿಬಜೆ, ಗಂಟುಭಾರಂಗಿ, ಲವಂಗೆ, ಯಷ್ಟಿಮಧುಕ, ಅಗುಳುಶುಂಠಿ, ಕಕ್ಕೇಬೇರು, ಹಿಪ್ಪಲೀಮೂಲ, ನೆಲಗುಳ್ಳ, ಬೇವು, ಲವಂಗಪತ್ರೆ ಇವುಗಳನ್ನು ಹಸಿಶುಂಠಿಯರಸದಿಂದ ಅರೆದು ಸಕ್ಕರೆವೆರಸಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ನಾಶವಾಗುವುದು.

ರಾಶ್ಮೆ, ಹಿರೇಮದ್ದಿನಬೇರು, ಅತಿಬಜೆ, ಕೋಲುಮುರಕನಚಕ್ಕೆ, ಕಕ್ಕೆಕಾಯಿ, ಗಂಟುಭಾರಂಗಿ, ಶುಂಠಿ, ಹಿಪ್ಪಲಿ, ಮೆಣಸು, ಈಶ್ವರೀಬೇರು, ಕೊಮ್ಮೆಬೇರು, ಚಿತ್ರಮೂಲ, ಜೀರಿಗೆ, ನೆಲಬೇವು, ಶ್ರೀತೊಳಸಿ, ನುಗ್ಗೆಚಕ್ಕೆ, ಭದ್ರಮುಸ್ತೆ, ಪರ್ಪಾಟಕ, ಇವುಗಳನ್ನು ಸಮನಾಗಿ ಶ್ರೀತೊಳಸಿರಸದಿಂದ ಅರೆದು ಸಕ್ಕರೆ ಬೆರಸಿಕೊಡಲು ಶ್ಲೇಷ್ಮಜ್ವರ ಪರಿಹಾರವಾಗುವುದು.

## ಕಷಾಯಗಳು.

ನೆಲಗುಳ್ಳ, ಗಂಡುತುರಚೇಬೇರು, ಗಂಟುಭಾರಂಗಿ, ಶುಂಠಿ, ಅಮರದ ವಳ್ಳಿ, ಕೊನ್ನಾರೀಗೆಡ್ಡೆ ಇವುಗಳನ್ನು ಕಷಾಯಕಾಯಿಸಿ ಕುಡಿಯೆ ಶ್ಲೇಷ್ಮಜ್ವರ ಮಾಣುವುದು.

ಅಳಿಲೇಕಾಯಿ, ಗುಳದಬೇರು, ಶುಂಠಿ, ಕೊನ್ನಾರೀಗೆಡ್ಡೆ, ಹಿಪ್ಪಲಿ, ನೆಲ ಬೇವು, ಕೊತ್ತುಂಬರಿ, ದೇವದಾರು, ಗಂಟುಭಾರಂಗಿ, ಕರ್ಕಾಟಕಶೃಂಗಿ ಸಹ ಕಷಾಯಕಾಯಿಸಿ, ಆರಿದಬಳಿಕ ಜೇನುತುಪ್ಪಬೆರಸಿ, ಒಂದು ಹಣತೂಕ ಇಂಗನಿಕ್ಕಿ ಸೇವಿಸೆ ಶ್ಲೇಷ್ಮಜ್ವರ, ಹೊಟ್ಟೇನೋವು, ಶ್ವಾಸ, ಅರುಚಿ, ದಾಹಂಗಳು ಸಹ ಮಾಣುವುವು.

ನೆಲಗುಳ್ಳದಬೇರು, ಮುಳ್ಳುಕೊಗ್ಗೆಬೇರು, ಆಡುಸೋಗೆ ಕಡ್ಡಿ. ಮುಳ್ಳು ಗೊರಟೆ, ಶುಂಠಿ ಇವುಗಳನ್ನು ಸಮನಾಗಿ ಕಷಾಯವಿಟ್ಟು ಹಿಪ್ಪಲಿ ಪ್ರತಿಪಾಕವಿಕ್ಕಿ ಜೇನುತುಪ್ಪವೆರಸಿ ಕುಡಿಯೆ ಶ್ಲೇಷ್ಮಜ್ವರ ಗುಣವಾಗುವುದು.

ಆಡುಸೋಗೆಕಡ್ಡಿ, ಬಜೆ, ಮಂಗರವಳ್ಳಿ, ಗುಳದಬೇರು, ಶುಂಠಿ, ಕಟುಕ ರೋಹಿಣಿ ಇವುಗಳನ್ನು ಸಮನಾಗಿ ಕಷಾಯಕಾಯಿಸಿ, ಹಿಪ್ಪಲೀ ಚೂರ್ಣವೆರಸಿ, ಜೇನುತುಪ್ಪ ಗೂಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರವು ಪರಿಹಾರವಾಗುವುದು.

ನೆಲಗುಳ್ಳದಬೇರು, ಹೆಗ್ಗುಳದಬೇರು, ಬಜೆ, ಮುಳ್ಳುಗೋರಂಟಿ ಬೇರು, ಶುಂಠಿ ಸಹ ಕಷಾಯಕಾಯಿಸಿ ಸೇವಿಸಲು ಶ್ಲೇಷ್ಮಜ್ವರ ನಾಶವಾಗುವುದು.

ಕಹಿಪಡವಲ, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಕುರಟಿಗೆಬೇರು ಮರದರಿಸಿನ, ಕಟುಕರೋಹಿಣಿ, ಶುಂಠಿ, ಗುಳದಬೇರು, ನೆಲಗುಳ್ಳದಬೇರು, ಆಡುಸೋಗೆಕಡ್ಡಿ ಇವುಗಳನ್ನು ಸಮಕಷಾಯಕಾಯಿಸಿ ಕುಡಿಯೆ ಶ್ಲೇಷ್ಮಜ್ವರ ನಾಶವಾಗುವುದು.

ನೆಲಗುಳ್ಳ, ಗರುಗ, ಎಸಗದಬೇರು, ಗುಳದಬೇರು, ಬಜೆ, ಶುಂಠಿ, ಓಮು ಇವುಗಳನ್ನು ಕಷಾಯಕಾಯಿಸಿ, ಹಿಪ್ಪಲೀಚೂರ್ಣವೆರಸಿ, ಜೇನುತುಪ್ಪ ಗೂಡಿ ಕುಡಿಯೆ ಶ್ಲೇಷ್ಮಜ್ವರಂ ನಾಶವಾಗುವುದು.

ರಾಮಂಚ, ಕೊತ್ತುಂಬರಿ, ನೆಲಗುಳ್ಳದಬೇರು, ಎಲುವರಸಂದೀಬೇರು, ತುರಚನಬೇರು, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಶುಂಠಿ ಇವುಗಳನ್ನು ಸಮನಾಗಿ ಕಷಾಯವಿಕ್ಕಿ ಸೇವಿಸೆ ಶ್ಲೇಷ್ಮಜ್ವರ ಪರಿಹಾರವಾಗುವುದು.

ಆಡುಸೋಗೆ, ಚಿತ್ರಮೂಲ, ಕೊತ್ತುಂಬರಿ, ಶುಂಠಿ, ಅಗುಳುಶುಂಠಿ, ಕಟುಕರೋಹಿಣಿ, ರಾಸ್ಮೆ ಇವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಒಂದು ತೂಕವನ್ನು ಜಜ್ಜಿಕುಟ್ಟಿ, ನೀರಿನಲ್ಲಿ ಹಾಕಿ, ಅಷ್ಟಾವಶೇಷವಾಗಿ ಕಾಯಿಸಿದ ಕಷಾಯವನ್ನು ಜೇನುತುಪ್ಪವೆರಸಿ ಕುಡಿಯಲು ಶ್ಲೇಷ್ಮಜ್ವರ ಗುಣವಾಗುವುದು.

ಶುಂಠಿ, ಪುಷ್ಕರಮೂಲ, ನೆಲಗುಳ್ಳ, ಅಮರದವಳ್ಳಿ ಇವುಗಳನ್ನು ಕೂಡಿ ಅಷ್ಟಾವಶೇಷವಾಗಿ ಕಷಾಯಕಾಯಿಸಿ ಜೇನುತುಪ್ಪಗೂಡಿ ಸೇವಿಸೆ ಶ್ಲೇಷ್ಮಜ್ವರ ಗುಣವಾಗುವುದು.

ನೆಲಗುಳ್ಳ, ಗಂಡು ತುರಚೇಬೇರು, ಗಂಟುಭಾರಂಗಿ, ಕರ್ಕಾಟಕಶೃಂಗಿ, ಅಮರದವಳ್ಳಿ, ಕೊನ್ನಾರೀಗೆಡ್ಡೆ ಇವುಗಳನ್ನು ಅಷ್ಟಾವಶೇಷವಾಗಿ ಕಷಾಯ ಕಾಯಿಸಿ ಹಿಪ್ಪಲೀ ಪ್ರತಿಪಾಕವಿಕ್ಕಿ ಕುಡಿಯೆ ಶ್ಲೇಷ್ಮಜ್ವರವು ನಾಶವಾಗುವುದು.

ಅಳಿಲೇಕಾಯಿ, ಶೀವನ್ನೀಬೇರು, ಶುಂಠಿ, ಕೊನ್ನಾರೀಗೆಡ್ಡೆ, ಹಿಪ್ಪಲಿ, ನೆಲಬೇವು, ಕೊತ್ತುಂಬರಿ, ದೇವದಾರು, ಗಂಟುಭಾರಂಗಿ, ಕರ್ಕಾಟಕ ಶೃಂಗಿ, ಇವುಗಳನ್ನು ಕಷಾಯವಿಕ್ಕಿ ಆರಿಸಿ ಜೇನುತುಪ್ಪವೆರಸಿ ಒಂದು ಹಣತೂಕ ಇಂಗಿನ ಚೂರ್ಣವನ್ನು ಹಾಕಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ಗುಣವಾಗುವುದು.

ಕಕ್ಕೆಹಣ್ಣು, ಆಡುಸೋಗೆ, ನೆಲಗುಳ್ಳದ ಸಮೂಲ, ನೆಲಬೇವು, ಭದ್ರಮುಸ್ತೆ, ಶುಂಠಿ, ದೇವದಾರು, ಬೇವಿನತಿಗಡು ಇವುಗಳನ್ನು ಸಮತೂಕದಲ್ಲಿ ಹಾಕಿ ಅಷ್ಟಾವಶೇಷವಾಗಿ ಕಾಯಿಸಿ ಹಿಪ್ಪಲೀ ಪಾಕವಿಕ್ಕಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು.

ಅಳಿಲೇಕಾಯಿ, ಶುಂಠಿ, ಶೀವನ್ನೀಬೇರು, ಕೊನ್ನಾರೀಗೆಡ್ಡೆ, ಹಿಪ್ಪಲಿ, ನೆಲಬೇವು, ಕೊತ್ತುಂಬರಿ, ದೇವದಾರು, ಗಂಟುಭಾರಂಗಿ, ಕರ್ಕಾಟಕಶೃಂಗಿ ಇವುಗಳನ್ನು ಕಷಾಯಕಾಯಿಸಿ ಆರಿಸಿ ಜೇನುತುಪ್ಪವೆರಸಿ ಒಂದು ಹಣತೂಕ ಇಂಗನ್ನೂ ಹಾಕಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ, ಹೊಟ್ಟೇನೋವು ಶ್ವಾಸ, ಖಾಸ, ಅಗ್ನಿಮಾಂದ್ಯ, ಅರೋಚಕ, ಬಾಯಾರಿಕೆ ಸಹ ಗುಣವಾಗುವುವು.

ನೆಲಗುಳ್ಳ, ತೊರೆ ಇಂಗಳ, ಗಂಟುಭಾರಂಗಿ, ಶುಂಠಿ, ಅಮರದವಳ್ಳಿ ಗೇಕಿನಗೆಡ್ಡೆ ಇವುಗಳನ್ನು ಕಷಾಯ ಕಾಯಿಸಿ ಹಿಪ್ಪಲಿ ಪ್ರತಿಪಾಕ ವಿಕ್ಕಿ ಸೇವಿಸೆ, ಶ್ಲೇಷ್ಮಜ್ವರ ನಾಶವಾಗುವುದು.

ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಕಾಯಿ, ಬೇವು, ಹೆಗ್ಗುಳ್ಳ, ಕಹಿಪಡವಲ, ಅರಿಸಿನ, ಭದ್ರಮುಸ್ತೆ, ಅಮರದವಳ್ಳಿ ಬರಗರುಗ ಇವಂ ಕಷಾಯವಿಟ್ಟು ಸೇವಿಸೆ ಶ್ಲೇಷ್ಮಜ್ವರಂ ತೀರ್ಗುಂ.

ಮಾದಳದ ಬೇರು, ಅಮರದವಳ್ಳಿ, ಶುಂಠಿ, ಹಿಪ್ಪಲಿ ಸಹ ಕಷಾಯ ಮಾಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ಪರಿಹಾರವಾಗುವುದು.

ಹಿಪ್ಪಲ್ಯಾದಿ ಗಣದ ಕಷಾಯವನ್ನು ಯವಕ್ಷಾರವೆರಸಿ ಸೇವಿಸೆ ಶ್ಲೇಷ್ಮಜ್ವರ ಪರಿಹಾರವಾಗುವುದು.

ಕಟುಕರೋಹಿಣಿ, ಅಳಿಲೇಕಾಯಿ, ಚವ್ಯ, ದೇವದಾರು, ಅರಿಸಿನ ಇವುಗಳನ್ನು ಕಷಾಯ ಕಾಯಿಸಿ ಕುಡಿಯೆ ಶ್ಲೇಷ್ಮಜ್ವರ ನಾಶವಾಗುವುದು.

ಅಂಬಟೇಬೇರು, ಕಟುಕರೋಹಿಣಿ, ಹೆಗ್ಗುರುಟಿಗೆ, ಹುರುಗಿಲು ಬೇರು, ಕಹಿಪಡವಲ ಸಹ ಕಷಾಯವಂ ಮಾಡಿ ತೆಗೆದುಕೊಳ್ಳಲು ಶ್ಲೇಷ್ಮಜ್ವರ ನಾಶವಾಗುವುದು.

ಶುಂಠಿ, ಅತಿಬಜೆ, ಭದ್ರಮುಸ್ತೆ, ದೇವದಾರು, ತುರಚನಬೇರು, ಚಂಗಲಕೋಷ್ಟ, ಸಹ ಕಷಾಯ ಕಾಯಿಸಿ ಕುಡಿಯೆ ಶ್ಲೇಷ್ಮಜ್ವರ ಮಾಣುವುದು.

ಹುರುಗಿಲು, ಶೀವನ್ನೀಬೇರು, ಸರಳದೇವದಾರು, ಅಮರದವಳ್ಳಿ ಸಹ ಕಷಾಯಂ ಕಾಯಿಸಿ ಸೇವಿಸೆ ಶ್ಲೇಷ್ಮಜ್ವರವು ಬಿಡುವುದು.

ನಾಗಕೇಸರ, ಅರಿಸಿನ, ಮರದರಿಸಿನ, ಶುಂಠಿ, ಹಿಪ್ಪಲಿ, ಮೆಣಸು, ಕಟುಕರೋಹಿಣಿ, ಕೋಲಮುರಕನಚಕ್ಕೆ ಸಹ ಕಷಾಯವಿಟ್ಟು ಸೇವಿಸೆ ಶ್ಲೇಷ್ಮಜ್ವರವು ಬಿಡುವುದು.

ಶುಂಠಿ, ತುರುಚನಬೇರು, ಆಡುಸೋಗೆ, ಭದ್ರಮುಸ್ತೆ ಇವುಗಳನ್ನು ಕಷಾಯಕಾಯಿಸಿ, ಸೇವಿಸೆ ಶ್ಲೇಷ್ಮಜ್ವರವು ನಾಶವಾಗುವುದು.

ಕಕ್ಕೆಬೇರು, ಕೊಡಸಿಗೆ ತಿಗುಡು, ಹೆಗ್ಗುರಟಿಗೆಬೇರು, ತುಳಸೀಸೊಪ್ಪು ಸಹ ಕಷಾಯ ಕಾಯಿಸಿ, ತೆಗೆದುಕೊಳ್ಳಲು ಶ್ಲೇಷ್ಮಜ್ವರವು ನಾಶವಾಗುವುದು.

ಬೇವು, ಶುಂಠಿ, ಅಮರದವಳ್ಳಿ, ದೇವದಾರು, ಖಚೋರ ನೆಲಬೇವು, ಪುಷ್ಕರಮೂಲ, ಹಿಪ್ಪಲಿ, ಗುಳದಬೇರು, ಇವುಗಳನ್ನು ಕಷಾಯಮಾಡಿ ಕೊಡಲು ಶ್ಲೇಷ್ಮಜ್ವರ ಗುಣವಾಗುವುದು.

ಶುಂಠಿ, ಭದ್ರಮುಸ್ತೆ, ವಾಯುವಿಳಂಗ, ದೇವದಾರು, ಬೆಲ್ಲವತ್ತದಬೇರು ಇವುಗಳನ್ನು ಕಷಾಯಕಾಯಿಸಿ ಕುಡಿಯೆ ಶ್ಲೇಷ್ಮಜ್ವರ ಶಮನವಾಗುವುದು.

ಏಳೆಲೆಬಾಳೆ, ಅಮರದವಳ್ಳಿ, ಬೇವು, ಭುಜಪತ್ರೆ, ಸಹ ಕಷಾಯಕಾಯಿಸಿ ಜೇನುತುಪ್ಪಗೂಡಿ ಸೇವಿಸೆ ಶ್ಲೇಷ್ಮಜ್ವರವು ನಾಶವಾಗುವುದು.

ಹುರುಗಿಲು, ಚಿತ್ರಮೂಲ, ಮಂಜಿಷ್ಟೆ, ಕನ್ನೈದಲೆಬೇರು, ಬಿಲ್ವಪತ್ರೆ

ಬೇರು, ಕಹಿಪಡವಲ, ಗುಳ್ಳ, ಹೆಗ್ಗುಳ್ಳ, ಶುಂಠಿ, ಹಿಪ್ಪಲಿ, ಮೆಣಸು ಇವುಗಳನ್ನು ಕಷಾಯ ಕಾಯಿಸಿ ಸೇವಿಸೆ, ಶ್ಲೇಷ್ಮಜ್ವರ ನಾಶವಾಗುವುದು.

ಬಿಳೀತುರಚೆ, ಪರ್ಪಾಟಕ, ಭದ್ರಮುಸ್ತೆ, ನೆಲಬೇವು ಇವುಗಳನ್ನು ಕಷಾಯವಿಕ್ಕಿಕೊಡಲು ಶ್ಲೇಷ್ಮಜರ, ಪಿತ್ತಜ್ವರ ಸಹ ಮಾಣುವುವು.

ಭದ್ರಮುಸ್ತೆ, ಆಡುಸೋಗೆ, ಶುಂಠಿ, ಬಿಳೀತುರಚೆ ಇವುಗಳನ್ನು ಕಷಾಯವಿಕ್ಕಿ ಕೊಡಲು ಶ್ಲೇಷ್ಮಜ್ವರವು ಪರಿಹಾರವಾಗುವುದು.

ಹೆದ್ದುರಚೆ, ಕಟುಕರೋಹಿಣಿ, ಭದ್ರಮುಸ್ತೆ, ಕಹಿಪಡವಲ, ನೆಲಬೇವು ಇವುಗಳನ್ನು ಕಷಾಯವಿಕ್ಕಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು.

ಆಡುಸೋಗೆಯೆಲೆಯ ಕಡ್ಡಿ, ಬಜೆ, ಮುಂಗರವಳ್ಳಿ, ರಾಮಗುಳ್ಳ, ಶುಂಠಿ, ಕಟುಕರೋಹಿಣಿ ಇವುಗಳನ್ನು ಸಮಭಾಗ ಕಷಾಯಕಾಯಿಸಿ ಕೊಡಲು ಶ್ಲೇಷ್ಮಜ್ವರವು ಗುಣವಾಗುವುದು.

ಅರಿಸಿನ, ಕೊಡಸಿಗೆಬೀಜ, ಸಣ್ಣ ನಾಗಕೇಸರ, ಶುಂಠಿ, ಹಿಪ್ಪಲಿ, ಮೆಣಸು, ನೆಲಗುಳ್ಳ, ನೆಲಬೇವು, ಹೆಗ್ಗುಳ್ಳ, ಕೊನ್ನಾರಿಗೆಡ್ಡೆ, ಅಗುಳುಶುಂಠಿ, ಇವುಗಳ ಕಷಾಯಕಾಯಿಸಿ ಶೋಧಿಸಿಕೊಂಡು, ಇದರಲ್ಲಿ ಸ್ವಲ್ಪ ಹೆಜ್ಜೇನುತುಪ್ಪ ಬೆರಸಿ ಕೊಟ್ಟಲ್ಲಿ ಶ್ಲೇಷ್ಮಜ್ವರ ಮಾಣುವುದು.

ನೆಲಗುಳ್ಳ, ಕಹಿಪಡವಲ, ಅಳಿಲೇಕಾಯಿ, ನೆಲ್ಲೀಚಟ್ಟು, ಕೊನ್ನಾರಿಗೆಡ್ಡೆ, ಅಗುಳುಶುಂಠಿ, ದ್ರಾಕ್ಷಿ, ಹಿಪ್ಪಲಿ, ಶುಂಠಿ, ಪರ್ಪಾಟಕ, ನೆಲಬೇವು, ಅಮರದವಳ್ಳಿ, ಲಾಮಂಚ ಇವುಗಳನ್ನು ಸಮಭಾಗ ಕಷಾಯಕಾಯಿಸಿ, ಸ್ವಲ್ಪಜೇನುತುಪ್ಪಬೆರಸಿ ಕೊಡಲು, ಶ್ಲೇಷ್ಮಜ್ವರ, ಪೈತ್ಯಜ್ವರ ಸಹ ಗುಣವಾಗುವುವು.

## ಚೂರ್ಣಗಳು (ರಾಸ್ನ್ಯಾದಿ ಚೂರ್ಣ.)

ರಾಸ್ಮೆ, ನೆಲಗುಳ್ಳದ ಬೇರು, ಗಂಟುಭಾರಂಗಿ, ಶುಂಠಿ, ಹಿಪ್ಪಲಿ, ಮೆಣಸು, ಅಗುಳುಶುಂಠಿ, ಅತಿಬಜೆ, ಮರದರಿಸಿನ, ಯಷ್ಟಿಮಧುಕ, ಚಂಗಲಕೋಷ್ಟ, ಜೀರಿಗೆ ಅಳಿಲೆಕಾಯಿ ಇವುಗಳನ್ನು ಸಮಭಾಗವಾಗಿ ಚೂರ್ಣಿಸಿ ಜೇನುತುಪ್ಪದಿಂ ಕಲಸಿ ಸೇವಿಸೆ ಶ್ಲೇಷ್ಮಜ್ವರ, ಕೆಮ್ಮು ಶ್ವಾಸ, ಖಾಸ ಸಹ ಮಾಣುವುವು.

ಸಿದ್ಧಿವಾರದದಿನ ನೆಲಡೆಂಗ ತಂದು ಕತ್ತರಿಸಿ ನೆಳಲಲ್ಲಿ ಒಣಗಿಸಿ ಇಡಿದು ವಸ್ತ್ರಗಾಳಿತಮಾಡಿ ಒಳ್ಳೆಣ್ಣೆಯಲ್ಲಿ ಮೂರುದಿನಗಳು ಸೇವಿಸೆ ಶ್ಲೇಷ್ಮಜ್ವರ ಗುಣವಾಗುವುದು.

## ತೈಲಗಳು.

ರಾಸ್ನೆ, ಶುಂಠಿ, ಚಂಗಲಕೋಷ್ಟ, ಶ್ರೀಗಂಧ, ಬಜೆ, ಯಷ್ಟಿಮಧುಕ, ಕೊನ್ನಾರೀಗೆಡ್ಡೆ, ಹಿಪ್ಪಲಿ, ಕಳ್ಳಂಗಡಲೆ, ಅರಗು, ಸೈಂಧವ, ಸೊಗದೇಬೇರು,

ಕುರಟಿಗೇಬೇರು, ದೇವದಾರು, ತಾರೇಕಾಯಿ, ಲಾಮಂಚ, ಕಡಲನಾಲಿಗೆ, ಕಟು ಕರೋಹಿಣಿ ಇವುಗಳನ್ನೆಲ್ಲಾ ಸಮಭಾಗಮಾಡಿ ಒಳ್ಳೆಣ್ಣೆಯಲ್ಲಿ ಆರು ಬಳ್ಳ ಮಜ್ಜಿ ಗೆಯುನ್ನು ಹನಿಸಿ, ಮಂದಾಗ್ನಿಯಿಂದ ಕಾಯಿಸಿ, ಪಾಕದಲ್ಲಿಳುಹಿ ಅಭ್ಯಂಜನವನ್ನು ಮಾಡಿಸಲು ಶ್ಲೇಷ್ಮಜ್ವರ ಪರಿಹಾರವಾಗುವುದು.

ಹುಳಿ ಅಂಬಿಲ. ಮೊಸರನೀರು, ಮಜ್ಜಿಗೆ, ಮಾದಲದ ಹಣ್ಣಿನರಸ ಇವುಗ ಳನ್ನು ಪ್ರತ್ಯೇಕವಾಗಿ ಸಮಭಾಗದಲ್ಲಿಕೂಡಿ ಇಷ್ಟರ ಸಮಾಂಶ ಎಣ್ಣೆಯನ್ನು ಹನಿಸಿ ಇದರಲ್ಲಿ ಹಿಪ್ಪಲ್ಯಾದಿಗಣವನ್ನು ಅರೆದಿಕ್ಕಿ ಪಾಕಂಗೈದು ಹದದಲ್ಲಿಳುಹಿಸಿಕೊಂಡು ಈ ತೈಲದಿಂದ ಅಭ್ಯಂಗನವಂ ಮಾಡೆ ಶ್ಲೇಷ್ಮಜ್ವರ ವಾತದಿಂದ ಹುಟ್ಟಿದ ಜ್ವರ ಸಹ ಗುಣವಾಗುವುವು.

## ಶ್ಲೇಷ್ಮಪಿತ್ತಜ್ವರ ಲಕ್ಷಣಂ.

ಬಾಯಿಯಲ್ಲಿ ಅಂಟುಗೂಡಿ, ಕಹಿಯಾಗಿ, ಮರವೆಗೂಡಿ ಕೆಮ್ಮು ಉಂಟಾಗಿ ಅರೋಚಕದೋರಿ, ಅಡಿಗಡಿಗೆ ದಾಹವೂ ಮತ್ತು ಅಡಿಗಡಿಗೆ ಶೀತವೂ ತೋರುತ್ತ ಈ ಲಕ್ಷಣಗಳೊಡಗೂಡಿರ್ಪುದೇ ಶ್ಲೇಷ್ಮಪಿತ್ತಜ್ವರವೆನಿಸಿಕೊಳ್ಳುವುದು. ಈ ಜ್ವರಕ್ಕೆ ಎಳೆಯಬದನೇಕಾಯಿಯ ತಾಳದ, ಮಜ್ಜಿಗೆಅನ್ನ ಸಹ ಪಥ್ಯವನ್ನು ಕೊಡಿಸುವುದು.

## ಚಿಕಿತ್ಸೆಗಳು (ಕಲ್ಕ).

ಪರ್ಪಾಟಕ, ಶುಂಠಿ, ಹಿಪ್ಪಲಿ, ಕಟುಕರೋಹಿಣಿ, ಕೊನ್ನಾರೀಗೆಡ್ಡೆ, ಜೀರಿಗೆ, ಏಲಕ್ಕಿ, ಕೊತ್ತುಂಬರಿ ಇವುಗಳನ್ನು ಬಿಸಿನೀರಿನಿಂದ ಅರೆದುಕೊಡಲು ಶ್ಲೇಷ್ಮಜ್ವರ, ಪಿತ್ತಜ್ವರ ಬಿಡುವುವು.

## ಕಷಾಯಗಳು.

ಕಳ್ಳಂಗಡಲೇಬೇರು, ಬೇವು, ಕಹಿಪಡವಲ, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ತಿಗಡೆ ಇವಂ ಕಷಾಯುವಿಟ್ಟು ಸೇವಿಸೆ, ಶ್ಲೇಷ್ಮಪಿತ್ತಜ್ವರ ಶಮನ ವಾಗುವುದು,

ಕಹಿಪಡವಲ, ಕಟುಕರೋಹಿಣಿ, ಶ್ರೀಗಂಧ, ಕೊರಟಿಗೆ ಬೇರು, ಅಮರದ ವಳ್ಳಿ, ಅಗುಳುಶುಂಠಿ ಸಹ ಕಷಾಯಂ ಕಾಯಿಸಿ ಸೇವಿಸೆ, ಶ್ಲೇಷ್ಮಪಿತ್ತಜ್ವರ, ಅಷ್ಟಾದಶಕುಷ್ಠ, ಸಕಲವಿಷ ಛರ್ದಿ, ಅರೋಚಕ ಸಹ ಪರಿಹಾರವಾಗುವುವು.

ಗಂಟುಭಾರಂಗಿ, ಅಳಿಲೇಕಾಯಿ, ಪರ್ಪಾಟಕ, ಶುಂಠಿ, ಬೆಲ್ಲವತ್ತದಬೇರು ನರುವಲದ ಬೇರು, ಹೆಮ್ಮರದಬೇರು ಶೀವನ್ನೀಬೇರು, ಪಾದರೀಬೇರು, ಒಂದೆಲೆ ಹೊನ್ನೆ, ಮೂರೆಲೆ ಹೊನ್ನೆ, ಔಡಲದಬೇರು, ಗುಳ್ಳದಬೇರು, ನೆಲಗುಳ್ಳದ

ಬೇರು, ಹಿಪ್ಪಲಿ ಇವುಗಳನ್ನು ಅಷ್ಟಾವಶೇಷವಾಗಿ ಕಷಾಯ ಕಾಯಿಸಿ ತೆಗದು ಕೊಳ್ಳಲು ಶ್ಲೇಷ್ಮಪಿತ್ತಜ್ವರವು ಶಮನವಾಗುವುದು.

ಅಮರದವಳ್ಳಿ, ಭದ್ರಮುಸ್ತೆ, ಬಿಳೀದುರುಚಿ, ಶುಂಠಿ ಇವಂ ಕಷಾಯವಿಕ್ಕಿ ಕೊಡಲು ಶ್ಲೇಷ್ಮಪಿತ್ತಜ್ವರ ಮಾಣುವುದು.

ಹೆದ್ದುರಚಿ, ಕಟುಕರೋಹಿಣಿ, ಭದ್ರಮುಸ್ತೆ, ಕಹಿಪಡವಲ, ನೆಲಬೇವು ಇವಂ ಕಷಾಯವಿಟ್ಟು ಸೇವಿಸೆ ಶ್ಲೇಷ್ಮಪಿತ್ತಜ್ವರ, ದ್ವಂದ್ವ, ಅಜೀರ್ಣದೋಷ ಸಹ ಗುಣವಾಗುವುವು.

## ಚೂರ್ಣಗಳು—ರಾಸ್ನಾದಿ ಚೂರ್ಣ.

ಇದನ್ನು ಹಿಂದೆಯೇ ಹೇಳಿದೆ.

ನೆಲ್ಲೀಚಟ್ಟು, ಜೀರಿಗೆ, ಕೊತ್ತುಂಬರಿ, ಏಲಕ್ಕಿ, ರಾಸ್ನೆ, ಅಕಲಗರೆ, ಶುಂಠಿ, ಹಿಪ್ಪಲಿ ಇವಂ ಸಮತೂಕ ಚೂರ್ಣಮಾಡಿ ಎರಡುವರಹಾ ತೂಕವನ್ನು ಜೇನು ತುಪ್ಪದಿಂದ ತೆಗೆದುಕೊಳ್ಳಲು ಶ್ಲೇಷ್ಮಪಿತ್ತಜ್ವರ ಗುಣವಾಗುವುದು.

## ವಾತಪಿತ್ತಜ್ವರಲಕ್ಷಣಂ.

ಬಾಯಾರಿಕೆಯುಂಟಾಗಿ, ಮೂರ್ಛೆದೋರುತ್ತ, ಭ್ರಮೆಯೊಡನೆ ಕೂಡಿ ಕಣ್ಣುಗಳಿಗೆ ನಿದ್ರೆತೋರದೆ, ಶಿರೋಭಾರಕಾಣಿಸಿ, ರೋಮಾಂಚವಾಗುತ್ತ ಅರೋಚಕ ಪುಟ್ಟಿ, ಆಕಳಿಕೆಯುಂಟಾಗಿ ಈ ಲಕ್ಷಣಗಳಿಂದ ಕೂಡಿರುವುದೇ ವಾತಪಿತ್ತಜ್ವರವೆನಿಸುವುದು. ಈ ಜ್ವರಕ್ಕೆ ತೊಗರಿಬೇಳೆಯ ರಸದಿಂದ ಪಥ್ಯವನ್ನು ಕೊಡಿಸುವುದು.

## ಚಿಕಿತ್ಸೆಗಳು (ಕಲ್ಕಗಳು)

ಜೀರಿಗೆ, ಕಟುಕರೋಹಿಣಿ, ಕೊತ್ತುಂಬರಿ, ಶುಂಠಿ, ಹಿಪ್ಪಲಿ, ಕೊನ್ನಾರೀ ಗೆಡ್ಡೆ, ರಾಸ್ನೆ, ನೆಲಬೇವು ಇವಂ ಬಿಸಿನೀರಿನಿಂದ ಅರೆದು ನೀರಿನಲ್ಲಿ ಕದಡಿ ಕೊಡಲು ವಾತಪಿತ್ತಜ್ವರ ಗುಣವಾಗುವುದು.

ಯಷ್ಟಿಮಧುಕ, ಸೊಗದೇಬೇರು, ದ್ರಾಕ್ಷೀಹಣ್ಣು, ಇಪ್ಪೇಹೂವು, ಶ್ರೀಗಂಧ, ನೈದಿಲೆ, ಸೀವನ್ನೀಬೇರು, ಪದ್ಮಕ, ಲೋಧ್ರ, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ತಾವರೇಕುಸುಮ, ಖರ್ಜೂರ, ತಾವರೇನಾಳ, ರಾಸ್ನೆ, ಅತಿಬಜೆ ಇವುಗಳನ್ನೆಲ್ಲಾ ಜಜ್ಜಿಕುಟ್ಟಿ ನೀರಿನಲ್ಲಿ ಹಾಕಿ ಶರ್ಕರೆಯನ್ನು ಅದರೊಳಿಟ್ಟು ಹಾಲುಹಾಕಿ ರಾತ್ರಿಯಲ್ಲಿ ನೆನೆದುದನ್ನು ಉದಯದಲ್ಲಿ ತೆಗೆದು ಶೋಧಿಸಿಕೊಂಡು ಅದರಲ್ಲಿ ಮಧುಬೆರಸಿ ಸೇವಿಸಲು ವಾತಪಿತ್ತಜ್ವರವು ಪರಿಹಾರವಾಗುವುದು. ಮತ್ತು

ಪ್ರಚಂಡವಾಯುವಿನಿಂದೊಡ್ಡಿತ್ತಾದ ಮೇಘಮಂಡಲವು ಪಱಿದು ಪೋಪಂತೆ ದಾಹ, ಮೂರ್ಛೆ, ಭ್ರಮೆ, ರಕ್ತಪೈತ್ಯ ಮುಂತಾದ ಸಕಲ ರೋಗಗಳೂ ತತ್ ಕ್ಷಣವೇ ನಾಶವಾಗುವುವು.

## ಕಷಾಯಗಳು.

ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಎಲುವನಸಂಧಿ, ರಾಸ್ಮೆ ಕಕ್ಕೇಬೇರು, ಆಡುಸೋಗೆಬೇರು ಇವುಗಳನ್ನು ಕಷಾಯ ಕಾಯಿಸಿ ತೆಗೆದು ಕೊಳ್ಳಲು ವಾತಪಿತ್ತಜ್ವರ ನಾಶವಾಗುವುದು.

ಶುಂಠಿ, ಪುಷ್ಕರಮೂಲ, ಅಮರದವಳ್ಳಿ, ನೆಲಗುಳ್ಳ ಸಹ ಕಷಾಯವಿಟ್ಟು ಸೇವಿಸೆ ವಾತಪಿತ್ತಜ್ವರ ನಾಶವಾಗುವುದು.

ಗುಳ್ಳದಬೇರು, ಅಮರದವಳ್ಳಿ, ಶುಂಠಿ, ಪುಷ್ಕರಮೂಲ ಇವುಗಳನ್ನು ಸಮ ಭಾಗದಲ್ಲಿ ಕಷಾಯ ಕಾಯಿಸಿ ಸೇವಿಸೆ ವಾತಪಿತ್ತಜ್ವರ, ಶ್ಲೇಷ್ಮಜ್ವರ, ಕೆಮ್ಮು, ಶ್ವಾಸ, ಅರೋಚಕ, ವಾತದಿಂದುಂಟಾದ ನೋವು ಸಹ ಗುಣವಾಗುವುವು.

ಶುಂಠಿ, ಹಿಪ್ಪಲಿ, ಸೊಗದೇಬೇರು, ಲಾವಂಚ, ಕೊನ್ನಾರೀಗೆಡ್ಡೆ, ಜೆಲ್ಲ ವತ್ತದಬೇರು, ಕೊತ್ತುಂಬರಿ, ಅಮರದವಳ್ಳಿ ಇವುಗಳನ್ನು ಕಷಾಯವಿಟ್ಟು ಅಷ್ಟಾವ ಶೇಷವಾಗಿ ಕಾಯಿಸಿ ಜೇನುತುಪ್ಪ ಬೆರಸಿ ಸೇವಿಸೆ ವಾತಪಿತ್ತಜ್ವರಂ ನಾಶವಾಗು ವುದು.

ದ್ರಾಕ್ಷೀಹಣ್ಣು, ಯಷ್ಟಿಮಧುಕ, ಇಪ್ಪೇಹೂವು, ಲೋಧ್ರ, ಶಿವನ್ನೀಬೇರು, ಕೊನ್ನಾರೀಗೆಡ್ಡೆ, ನೆಲ್ಲೀಚಟ್ಟು, ಮುಡಿವಾಳ, ತಾವರೇಕೇಸರ, ಪದ್ಮಕ, ತಾವರೇ ಗೆಣಸು, ಚಂದನ, ಲಾವಂಚ, ಕನ್ನೈದಿಲೆಗೆಡ್ಡೆ, ಖರ್ಜೂರ ಇವುಗಳನ್ನೆಲ್ಲಾ ಕಷಾಯವಿಟ್ಟು ಸಕ್ಕರೆ ಮತ್ತು ಜೇನುತುಪ್ಪ ಬೆರಸಿ, ಜಾಜಿ ಮಲ್ಲಿಗೆ ಮುಂತಾದ ಹೂವಿನ ಪರಿಮಳವಂ ಕಟ್ಟಿ ಛತ್ತದರಳಿನ ಚೂರ್ಣವನ್ನು ಹಾಕಿ ತಗೆದುಕೊಳ್ಳಲು ವಾತಪಿತ್ತಜ್ವರ, ಛರ್ದಿ, ಮೂರ್ಛೆ, ದಾಹ, ಬಳಲಿಕೆ, ಭ್ರಮೆ, ಊರ್ಧ್ವಗತವಾದ ರಕ್ತಪಿತ್ತ, ಕಾಮಾಲೆ ಸಹ ಗುಣವಾಗುವುವು.

ಶುಂಠಿ, ಪುಷ್ಕರಮೂಲ, ಅಮರದವಳ್ಳಿ, ನೆಲಗುಳ್ಳ ಇವಂ ಕಷಾಯಮಾಡಿ ಕುಡಿಯೆ ವಾತಪಿತ್ತಜ್ವರ ಬಿಡುವುದು.

ಪರ್ಪಾಟಕ, ಕಟುಕರೋಹಿಣಿ, ಕಕ್ಕೇಹಣ್ಣು ಇವುಗಳನ್ನು ಸಮತೂಕದಲ್ಲಿ ಹಾಕಿ ಅಷ್ಟಾವಶೇಷವಾಗಿ ಕಾಯಿಸಿ, ಹಿಪ್ಪಲಿ ಅನುಪಾನವಿಕ್ಕಿ ತೆಗೆದುಕೊಳ್ಳಲು ವಾತಪಿತ್ತಜ್ವರಂ ಮಾಣ್ಗುಂ.

ಅಮರದವಳ್ಳಿ, ಭದ್ರಮುಸ್ತೆ, ಬಿಳೀದುರುಚೇಬೇರು, ಶುಂಠಿ ಸಹ ಕಷಾಯ ವನಿಕ್ಕಿ ಸೇವಿಸೆ ವಾತಪಿತ್ತಜ್ವರವು ಶಮನವಾಗುವುದು.

ಕಟುಕರೋಹಿಣಿ, ಬೇವಿನ ಒಳನಾರು, ಕಹಿಪಡವಲದಬೀಜ ಇವುಗಳ ನ್ನೆಲ್ಲಾ ಸಮತೂಕದಲ್ಲಿ ಅಷ್ಟಾವಶೇಷವಾಗಿ ಕಷಾಯ ಕಾಯಿಸಿ ಸಕ್ಕರೆಕೂಡಿ ತೆಗೆದುಕೊಳ್ಳಲು ವಾತಪಿತ್ತಜ್ವರವು ಗುಣವಾಗುವುದು.

ದ್ರಾಕ್ಷೀಹಣ್ಣು, ಅಮರದವಳ್ಳಿ, ಪರ್ಪಾಟಕ, ಕಟುಕರೋಹಿಣಿ, ಭದ್ರ ಮುಸ್ತೆ, ಶುಂಠಿ ಇವಂ ಕಷಾಯವಿಕ್ಕಿ ತೆಗೆದುಕೊಳ್ಳಲು ವಾತಪಿತ್ತಜ್ವರ, ಶಿರೋ ಭ್ರಮಣ, ತಲೆನೋವು, ದಾಹ ಸಹ ಗುಣವಾಗುವುವು.

ದ್ರಾಕ್ಷೀಹಣ್ಣು, ಯಷ್ಟಿಮಧುಕ, ಇಪ್ಪೆಮೂಲ, ಲೋಧ್ರದಚಕ್ಕೆ, ಕುಂಬಳ, ಸೊಗದೇಬೇರು, ಕೊನ್ನಾರಿಗಡ್ಡೆ, ನೆಲ್ಲೀಚಟ್ಟು, ಮುಡಿವಾಳ, ತಾವರೇಹೂವು, ನೈದಿಲೇಬೇರು, ಅರಳು ಇವಿಷ್ಟನ್ನೂ ಅಷ್ಟಾವಶೇಷವಾಗಿ ಕಷಾಯ ಕಾಯಿಸಿ ಸಕ್ಕರೆ ಮತ್ತು ಜೇನುತುಪ್ಪ ಬೆರಸಿಕೊಡಲು ವಾತಪಿತ್ತಜ್ವರ, ನಿಸ್ಸತ್ವ, ವಾಂತಿ, ಮೂರ್ಛೆ, ದಾಹ, ಬಳಲಿಕೆ, ತಲೆತಿರುಗುವುದು, ರಕ್ತವಾಂತಿ, ಕಾಮಾಲೆ ಇವಿಷ್ಟು ರೋಗಗಳೂ ಪರಿಹಾರವಾಗುವುವು.

* ವೇಣುವೇಳ್ಳು, * ನೇಮಿಲಿ ಅಡುಗುನಾರು, ಹೊಂಗೆ ಒಳನಾರು, * ಜೇಗುಡವೇಳ್ಳು, * ಕೊರಾದವೇಳ್ಳು, ಗಜಬೇರು, ಹಬ್ಬುಸೊಂಡೆ, ಚಿತ್ರಮೂಲ, ಗರುಗನಸೊಪ್ಪು, ಈಶ್ವರೀಬೇರು, ಶುಂಠಿ, ಹಿಪ್ಪಲಿ ಇವುಗಳ ಕಷಾಯ ಕಾಯಿಸಿ, ಹಿಪ್ಪಲಿ ಪ್ರತಿಪಾಕವಿಕ್ಕಿ ಕೊಡಲು ವಾತಪಿತ್ತಜ್ವರ, ಶ್ಲೇಷ್ಮಜ್ವರ, ಕ್ಷಯ, ಶ್ವಾಸ ರೋಗ, ಸರ್ವವಾಯುರೋಗ ಸಹ ಗುಣವಾಗುವುವು.

## ಚೂರ್ಣಗಳು.

ಒಂದು ತೂಕ ಲವಂಗ, ಎರಡುತೂಕ ನಾಗಕೇಸರ, ನಾಲ್ಕುತೂಕ ಏಲಕ್ಕಿ, ಎಂಟು ತೂಕ ಮೆಣಸು, ಹದಿನಾರು ತೂಕ ಹಿಪ್ಪಲಿ, ಮೂವತ್ತೆರಡು ತೂಕ ಶುಂಠಿ, ಅರವತ್ತುನಾಲ್ಕು ತೂಕ ಹಿರೇಮದ್ದಿನಬೇರು ಈ ಪ್ರಕಾರದಲ್ಲಿ ಇವುಗಳೆಲ್ಲವನ್ನೂ ಕೂಡಿ ಚೂರ್ಣಮಾಡಿ ಇಷ್ಟರಸಮಸಕ್ಕರೆವೆರಸಿ ಪ್ರಾತಃಕಾಲದಲ್ಲಿ ಎರಡು ಗದ್ಯಾಣ ತೂಕವನ್ನು ಹಸುವಿನ ತುಪ್ಪದಲ್ಲಿ ಸೇವಿಸಲು ವಾತಪಿತ್ತಜ್ವರವು ಗುಣವಾಗು ವುದು.

## ತೈಲಗಳು.

ಒಂದು ಕೊಳಗ ಅಂಬಿಲದಲ್ಲಿ ಒಂದು ಬಳ್ಳ ಎಣ್ಣೆಯನ್ನು ಹುಯ್ದು ಆಮೇಲೆ ಅದರಲ್ಲಿ ಒಂದು ಕೊಳಗ ಮಜ್ಜಿಗೆಯನ್ನು ಹನಿಸಿ ಪಾಕಮಾಡುವಲ್ಲಿ ಅದರೊಳಗೆ ಹಾಕುವ ಕಲ್ಕದ್ರವ್ಯಗಳು :—ಕಟುಕರೋಹಿಣಿ, ಶ್ರೀಗಂಧ, ಸಬ್ಬಸಿಗೆ, ಮರದರಿ ಸಿನ, ಕೊನ್ನಾರೀಗೆಡ್ಡೆ, ಯಷ್ಟಿಮಧುಕ, ರೇಣುಕೆ, ಖಚೋರ, ಅರಿಸಿನ ಇವು ಗಳನ್ನು ಪ್ರತ್ಯೇಕವಾಗಿ ನಾಲ್ಕು ತೂಕವನ್ನು ಚೂರ್ಣಿಸಿ ತೈಲಗೂಡಿದ ಆ ಕಷಾ

---

* ತೆಲುಗು

ಯದಲ್ಲಿ ಕದಡಿ ತೈಲ ಉಳಿವಂತೆ ಮೃದ್ವಗ್ನಿಯಿಂದ ಪಾಕಮಾಡಿ ತರಪಾಕದಲ್ಲಿಳುಹಿಕೊಂಡು,ಆ ತೈಲವನ್ನು ಮೈಗೆ ಪೂಸೆ ವಾತಪಿತ್ತಜ್ವರ, ವಿಷಮಜ್ವರ ಸಹ ಬಿಡುವುವು.

## ಲೋಹಸಿಂಧೂರ.

ಲೋಹದ ಅರಹುಡಿಯನ್ನು ಗೋಮೂತ್ರ[illegible] ದಿನ ನೆನೆಯಿಕ್ಕಿ ಒಣಗಿಸಿ ಖಪ್ಪರಯಂತ್ರದಿಂದ ಕಿರುಪುಟವನ್ನು [illegible]ಂಗೀರಸದಿಂದ ಭಾವನೆಯನ್ನುಮಾಡಿ ಆರಿಸಿ ಖಪ್ಪರಯಂತ್ರದಿಂದ ಸಣ್ಣಪುಟವನಿಕ್ಕಿ, ಲೋಳಿಸರದ ರಸ ಮುಂಡಗಳ್ಳಿಹಾಲು, ಎಕ್ಕೆಹೂವು ಇವು ಮೂರರಿಂದಲೂ ಪ್ರತ್ಯೇಕ ಭಾವನೆಯನ್ನು ಮಾಡಿ ಆರಿಸಿ, ತಿರುಗಿ ಪ್ರತ್ಯೇಕವಾಗಿ ಖಪ್ಪರಯಂತ್ರದಿಂದ ಲಘುಪುಟವನ್ನು ಹಾಕಿ, ಹಸುವಿನಹಾಲಿನಲ್ಲಿ ನಾಲ್ಕುದಿನ ನೆನೆಯಿಕ್ಕಿಕೊಂಡಿದ್ದು ಆರಿಸಿ, ಕಲ್ವದೊಳಿಕ್ಕಿ ಸೂಕ್ಷ್ಮಚೂರ್ಣ ಮಾಡಲು ಶುದ್ಧಸಿಂಧೂರವಾಗುವುದು. ಈಲೋಹಸಿಂಧೂರದ ಹತ್ತು ತೂಕಕ್ಕೆ ಶುಂಠಿ, ಹಿಪ್ಪಲಿ, ಮೆಣಸು, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಜಾಯಿಕಾಯಿ, ಜಾಯಿಪತ್ರೆ, ಲವಂಗ ಇವುಗಳನ್ನು ಪ್ರತ್ಯೇಕ ಹನ್ನೆರಡು ವರಹಾತೂಕ ಮಾಡಿ, ಜೇನುತುಪ್ಪದಿಂದ ಮರ್ದಿಸಿ, ಅಡಿಕೆಪ್ರಮಾಣ ಗುಳಿಗೆಯನ್ನು ಮಾಡಿ ನಿತ್ಯವೂ ಸೇವಿಸೆ ವಾತಪಿತ್ತಜ್ವರ, ಶ್ಲೇಷ್ಮ, ಹೊಟ್ಟೇಕುಟ್ಟು, ಪಂಚಗುಲ್ಮ ಶ್ವಾಸಖಾಸ, ಅತಿಸಾರ, ಪಾಂಡುರೋಗ, ಪ್ರಮೇಹ, ಕಾಮಾಲೆ, ಪಿತ್ತರೋಗ, ಪಾರ್ಶ್ವಶೂಲೇ, ಊರ್ಧ್ವಶ್ವಾಸ, ವಾತರೋಗಗಳು ಸಹ ಗುಣವಾಗುವುವು.

## ಅಂಜನ.

ಬೆಳ್ಳುಳ್ಳಿ, ಮೆಣಸು, ಹಿಪ್ಪಲಿ, ಸೈಂಧವಲವಣ, ಬಜೆ, ಶುಕತರುಫಲಬೀಜ, ಯವೆ ಗೋಧಿ ಇವುಗಳನ್ನು ನಿಂಬೇಹಣ್ಣಿನ ರಸದಿಂದ ತೇದು ಕಣ್ಣಿಗೆ ಹಚ್ಚಲು ವಾತಪಿತ್ತ, ಶ್ಲೇಷ್ಮವಾತ, ರಕ್ತಪಿತ್ತ, ಪ್ರಮೇಹ, ಮುಖರೋಗಗಳು ಸಹ ಶಮನವಾಗುವುವು.

## ವಾತಶ್ಲೇಷ್ಮಜ್ವರಲಕ್ಷಣಂ.

ಮೈಯಲ್ಲಿ ಬಡತನದೋರಿ ಅವಯುವದ ಸಂದುಗಳಲೆಲ್ಲವೂ ತೊಡರುಗೊಂಡು ನಿದ್ರಾಭಂಗವಾಗಿ ದೇಹಕ್ಕೆ ಸಂತಾಪ ಕಾಣಿಸಿ, ಮಧ್ಯಮವಾದ ಜ್ವರವೇಗ ವುಂಟಾಗಿರುವುದೇ ವಾತಶ್ಲೇಷ್ಮಜ್ವರವೆನಿಸಿಕೊಳ್ಳುವುದು

## ಚಿಕಿತ್ಸೆಗಳು.

### (ಕಲ್ಕ)

ಶುಂಠಿ, ರಾಸ್ನೆ, ಕಟುಕರೋಹಿಣಿ, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀ

ಚಟ್ಟು, ಅತಿಬಜೆ, ನೆಲಬೇವು, ಯಷ್ಟಿಮಧುಕ, ಜೀರಿಗೆ ಇವುಗಳನ್ನು ಬಿಸಿನೀರಿನಿಂದ ಅರೆದುಕೊಡಲು ವಾತಶ್ಲೇಷ್ಮಜ್ವರವು ಗುಣವಾಗುವುದು.

## ಕಷಾಯಗಳು.

ಹಿಪ್ಪಲಿ ಮತ್ತು ದ್ರಾಕ್ಷೀ ಹಣ್ಣುಗಳ ಕಷಯವನ್ನು ಹಾಕಿ ಜೇನುತುಪ್ಪ ಬೆರಸಿ ಸೇವಿಸಲು ವಾತಶ್ಲೇಷ್ಮಜ್ವರಪರಿಹಾರವಾಗುವುದು.

ಆರಗ್ವಧಾದಿಗಣದ ಕಷಾಯವನ್ನು ಕಾಯಿಸಿ ಜೇನುತುಪ್ಪಗೂಡಿ ಸೇವಿಸೆ ವಾತಶ್ಲೇಷ್ಮಜ್ವರ ಪರಿಹಾರವಾಗುವುದು.

ಕರ್ಕಾಟಕಶೃಂಗಿ, ಗಂಟುಭಾರಂಗಿ, ಭದ್ರಮುಸ್ತೆ, ಬಜೆ, ಕೊತ್ತುಂಬರಿ, ಸೀವನ್ನೀಬೇರು, ಅಳಲೇಕಾಯಿ, ಶುಂಠಿ ಇವುಗಳನ್ನು ಕಷಾಯ ಕಾಯಿಸಿ, ಜೇನುತುಪ್ಪ ಬೆರಸಿ ಕುಡಿಯೆ ವಾತಶ್ಲೇಷ್ಮಜ್ವರ, ಬಿಕ್ಕಳು, ಶ್ವಾಸ, ಗಂಟಲು ನೋವು, ಖಾಸ, ಮೈಬಡತನ ಮುಂತಾದವುಗಳೆಲ್ಲವೂ ಗುಣವಾಗುವುವು.

ನೆಲಗುಳದದೇರು, ಗಂಡುತುರಚನಬೇರು ಸಹ ಕಷಾಯವನ್ನು ಕಾಯಿಸಿ ಹಿಪ್ಪಲೀಚೂರ್ಣವೆರಸಿ ಕುಡಿಯೆ ವಾತಶ್ಲೇಷ್ಮಜ್ವರ, ಶ್ವಾಸ, ಖಾಸ, ಪೀನಸ ಸಹ ಶಮನವಾಗುವುವು.

ಕಕ್ಕೇಹಣ್ಣು, ಹಿಪ್ಪಲೀಮೂಲ, ಭದ್ರಮುಸ್ತೆ, ಕಟುಕರೋಹಿಣಿ, ಅಳಲೇ ಕಾಯಿ ಇವುಗಳನ್ನು ಸಮಭಾಗ ಕಷಾಯವಿಟ್ಟು ಸೇವಿಸೆ ವಾತಶ್ಲೇಷ್ಮಜ್ವರ, ಆಮಶೂಲೆ ಸಹ ಪರಿಹಾರವಾಗುವುವು.

ನೆಲಗುಳ್ಳ, ಶುಂಠಿ, ಅಮರದವಳ್ಳಿ ಇವಂ ಕಷಾಯವಿಕ್ಕಿ ಅಷ್ಟಾವಶೇಷವಾಗಿ ಕಾಯಿಸಿ ಹಿಪ್ಪಲಿಚೂರ್ಣವೆರಸಿ ತೆಗೆದುಕೊಳ್ಳಲು ವಾತಶ್ಲೇಷ್ಮಜ್ವರ, ಶ್ವಾಸ, ಖಾಸ, ಪೀನಸ, ಮೈನೋವು ಸಹ ಶಮನವಾಗುವುವು.

## ಚೂರ್ಣಗಳು.

ಓಮು, ವಿಳಂಗ, ನೆಲ್ಲೀಕಾಯಿ, ಅಳಲೇಕಾಯಿ, ಶುಂಠಿ, ಹಿಪ್ಪಲಿ, ಮೆಣಸು ಇವುಗಳನ್ನು ಪ್ರತ್ಯೇಕ ಒಂದು ತೂಕದಲ್ಲಿಯೂ ಮತ್ತು ತಿಗಡೆಯನ್ನು ಮೂರು ತೂಕದಲ್ಲಿಯೂ ಚೂರ್ಣವನ್ನು ಮಾಡಿ ತುಪ್ಪದಿಂದ ಸೇವಿಸಲು ವಾತಶ್ಲೇಷ್ಮ ಗುಣ ವಾಗುವುದು, ವಾತಗುಲ್ಮ ಪರಿಹಾರವಾಗುವುದು.

ಭುಜಪತ್ರೆ, ಚಂಗಲಕೋಷ್ಟ, ದೇವದಾರು, ಅರಿಸಿನ, ಹಾಲುಕುರಟಿಗೆ ಬೇರು, ಬೇವಿನಪಟ್ಟೆ, ಅಮರದವಳ್ಳಿ, ಆಡುಸೋಗೆ, ಕಪಿಪಡವಲ, ನೆಲಗುಳ್ಳ, ಅಗು ಳುಶುಂಠಿ, ಶುಂಠಿ, ಕೊಡಸಿಗೆಬೀಜ, ಹಿಪ್ಪಲಿ, ಮೆಣಸು, ತಾರೇಕಾಯಿ, ನೆಲ್ಲೀ ಚಟ್ಟು ಕೊನ್ನಾರೀಗೆಡ್ಡೆ, ತೀಟಕಸಂಧೀಬೇರು, ಕಕ್ಕೇಪಟ್ಟೆ, ಗುಗ್ಗುಳ, ಲಾಮಂಚ

ಇವುಗಳ ಕಷಾಯವನ್ನು ಹಾಕಿ ತೆಗೆದುಕೊಳ್ಳಲು ವಾತಶ್ಲೇಷ್ಮಜ್ವರ ಪರಿಹಾರ ವಾಗುವುದು.

## ಸನ್ನಿಪಾತಜ್ವರಲಕ್ಷಣಂ.

ತಂದ್ರೆ, ನಿದ್ರಾಭಂಗ, ಗಂಟಲಲ್ಲಿ ಗೊರಕು, ಬಾಯಾರಿಕೆ, ಕ್ಷಣಕ್ಕೆ ಶೀತ, ಕ್ಷಣಕ್ಕೆ ಉಷ್ಣ, ಮೂರ್ಛೆ, ಭ್ರಮೆ, ತಾಪ, ಅರೋಚಕ, ಮೈ ನೋವು, ಜಾಡ್ಯ, ಮಾತನಾಡದೇ ಇರುವುದು, ಮಂಡೆನೋವು, ಪಿತ್ತವನ್ನೂ ಮತ್ತು ರಕ್ತವನ್ನೂ ಕಾರುವುದು, ಕಣ್ಣುಗಳು ಹಳ್ಳ ಬಿದ್ದಿರುವುದು, ನಾಲಿಗೆಯಲ್ಲಿ ಕಾಠಿನ್ಯ, ಗಂಟಲ ನೋವು ಇವಿಷ್ಟೂ ಉಂಟಾಗಿರುವುದೇ ಸನ್ನಿಪಾತಜ್ವರಲಕ್ಷಣವೆಂದರಿವುದು.

ಮತ್ತು ಔಷಧ ಮಂತ್ರತಂತ್ರ ಕೃತ್ರಿಮಗಳಿಂದ ಬಂದ ಜ್ವರವು ಆಗಂತುಕ ಜ್ವರವೆನಿಸಿಕೊಳ್ಳುವುದು. ಇದು ಆಮಾಶಯದಲ್ಲಿರುವ ಅಗ್ನಿಯಚಲನವನ್ನು ಮಾಳ್ಪ ಭೇದದಿಂದಲೇ ಉಂಟಾಗುವ ಜ್ವರವು. ಇದು ಆಮಜ್ವರಾದಿಭೇದದಿಂದ ಅನೇಕ ವಿಧವಾಗಿ ನೂರೊಂದು ತರಹವಾಗಿ ಇದೆಯೆಂದು ಹೇಳಲ್ಪಟ್ಟಿದೆ.

## ಆಮಜ್ವರಲಕ್ಷಣಂ.

ಅರೋಚಕ, ಅತಿದಾಹ, ಗಂಟಲು, ತುದಿನಾಲಿಗೆ ಸಹ ಒಣಗುವುದು, ಬಹು ತಾಪ, ಸಂದುಗಳಲ್ಲಿ ಒಡತ, ಬಳಲಿಕೆ, ಬಹಳವಾಗಿ ಮೂತ್ರವಿಸರ್ಜನೆಯಾಗು ವುದು ಈ ಲಕ್ಷಣಗಳಿರುವುದೇ ಆಮಜ್ವರವೆನಿಸಿಕೊಳ್ಳುವುದು.

## ಮತಾಂತರದಲ್ಲಿ.

ಜೊಲ್ಲು ಸುರಿಯುವುದು, ನಾಲಿಗೆ ಉಪ್ಪಾಗಿರುವುದು, ಹುಳಿ, ಸಿಹಿ, ಕಹಿ ಮುಂತಾದ ರುಚಿ ತೋರದೇ ಇರುವುದು, ಮನಸ್ಸು ಕದಡಿಯಿರುವುದು, ಹೇವರಿಕೆ, ತಂದ್ರೆ, ಆಲಸ್ಯ, ಶರೀರ ವಿವರ್ಣವಾಗಿರುವುದು, ಮೈಭಾರ ಸಹ ಉಂಟಾಗಿ, ಬಹಳವಾಗಿ ಮೂತ್ರಹೋಗುವುದು ಈ ಲಕ್ಷಣಗಳಿರುವುದೇ ಆಮಜ್ವರಲಕ್ಷಣವು.

ಈ ಆಮಜ್ವರದಲ್ಲಿ ಔಷಧವನ್ನು ಕೊಡಲಾಗದು ; ಮುಖ್ಯವಾಗಿ ಲಂಘನ ವನ್ನು ಮಾಡಿಸಬೇಕು. ಅಲ್ಪವಾಗಿ ಬಿಸಿನೀರನ್ನು ಮಾತ್ರ ಕುಡಿಸುವುದು.

## ಪಕ್ವವಾಗುತ್ತಿರುವ ಜ್ವರಲಕ್ಷಣಂ.

ಜ್ವರವು ಬಹು ವೇಗವಾಗಿ, ಅತಿದಾಹ, ಬಹಳಪ್ರಲಾಪ, ಶ್ವಾಸ, ಭ್ರಮೆ ಮಲಪ್ರವೃತ್ತಿ, ವೆಗ್ಗಳವಾದ ಬಳಲಿಕೆ ಇವುಗಳೆಲ್ಲಾ ಇರುವುದೇ ಪಕ್ವಜ್ವರವೆನಿಸಿ ಕೊಳ್ಳುವುದು.

ಹಸಿವು, ಬಾಯಾರಿಕೆ, ಶರೀರಲಾಘವ, ಅಲ್ಪಜ್ವರ, ಮಲದಲ್ಲಿಪಿತ್ತಶ್ಲೇಷ್ಮ ಗಳ ಪ್ರವೃತ್ತಿ, ಮನೋತ್ಸಾಹವಿಲ್ಲದಿರುವುದು ಇವುಗಳೆಲ್ಲಾ ವಿರಾಮಜ್ವರ ಲಕ್ಷಣಗಳು.

ಈ ಜ್ವರದಲ್ಲಿ ಔಷಧಪ್ರಯೋಗಗಳನ್ನು ಮಾಡುವುದು.

## ಅಭಿಘಾತಜ್ವರಲಕ್ಷಣಂ.

ದೂರವಾಗಿ ಸಂಚಾರಮಾಡುವುದರಿಂದ ಬಹಳವಾಗಿ ಜ್ವರವು ಬರುವುದು. ಇದನ್ನು ಅಭಿಘಾತಜ್ವರವೆಂದು ತಿಳಿಯುವುದು. ಅತ್ಯಂತದಾಹ, ಸರ್ವಾಂಗ ನಿಸ್ತ್ರಾಣ, ಮರವೆ, ತಂದ್ರೆ, ಮತಿಭ್ರಮೆ, ಶೈತ್ಯೋಪಚಾರಗಳಲ್ಲಿ ಇಚ್ಛೆ ಇವುಗಳೆಲ್ಲವೂ ಅಭಿಘಾತಜ್ವರಲಕ್ಷಣಗಳು.

## ವಿಷಮಜ್ವರಲಕ್ಷಣಂ.

ಕ್ಷಣಹೊತ್ತು ಮೈ ತಣ್ಣಗಾಗುತ್ತ, ಮತ್ತೊಂದುಕ್ಷಣಕ್ಕೆ ಉಷ್ಣತೋರುತ್ತ, ಕೂಡಲೇ ಒಂದು ಕ್ಷಣಕ್ಕೆ ಜ್ವರಬರುವುದು, ಒಂದುದಿನ ರಾತ್ರಿ ಜ್ವರ ಬರುವುದು, ಒಂದುದಿನ ಹಗಲು ಜ್ವರಬರುವುದು, ದಿನಬಿಟ್ಟು ದಿನ ಜ್ವರ ಬರುವುದು, ಎರಡು ದಿನಕ್ಕೊಂವೆ್ಮ ಜ್ವರ ಬರುವುದು ಇವುಗಳೆಲ್ಲಾ ವಿಷಮಜ್ವರ ಲಕ್ಷಣಗಳು.

ಈ ವಿಷಮಜ್ವರವು ಸಂತತ, ಸತತಗ, ಅನ್ಯೇದ್ಯುಕ, ತ್ರ್ಯಾಹಿಕ, ಚಾತುರ್ಥಿಕವೆಂದು ಐದು ಪ್ರಕಾರವಾಗಿರುವುದು. ಸಂತತವೆಂಬ ಜ್ವರವು ತ್ವಕ್ಕನ್ನಾಶ್ರಯಿಸಿಕೊಂಡು ಎಲ್ಲಾ ವೇಳೆಯಲ್ಲಿಯೂ ಕಾಣಿಸುವುದು. ಸತತಗವೆಂಬ ಜ್ವರವು ರಕ್ತವನ್ನಾಶ್ರಯಿಸಿಕೊಂಡು ಒಳಗೇ ಇರುವುದು. ಇದು ಪ್ರತಿದಿನವೂ ಎರಡುವೇಳೆ ಬಂದಿರ್ಪುದೇ ಏಕಾಹಿಕ ಜ್ವರವೆನಿಸಿಕೊಳ್ಳುವುದು. ಅನ್ಯೇದ್ಯುಕವೆಂಬುದು ಮಾಂಸವನ್ನು ಆಶ್ರಯಿಸಿಕೊಂಡು ಬರುವುದು. ತ್ರ್ಯಾಹಿಕವೆಂಬ ಜ್ವರವು ಮೇಧಸ್ಸನ್ನು ಆಶ್ರಯಿಸಿಕೊಂಡು ಬರುವುದು. ಚಾತುರ್ಥಿಕವೆಂಬ ಜ್ವರವು ಅಸ್ಥಿಮಜ್ಜಗಳೆರಡನ್ನೂ ಆಶ್ರಯಿಸಿ ಮೂರುದಿನ ಬಿಟ್ಟು ನಾಲ್ಕುದಿನಕ್ಕೊವೆ್ಮ ತಪ್ಪದೆ ಬರುವುದು.

## ಮತಾಂತರದಲ್ಲಿ.

ಬಿಡದೆ ಯಾವಾಗಲೂ ಕಾಯುವ ಜ್ವರವನ್ನು ಸಂತತವೆಂತಲೂ, ಏಳುದಿನ, ಹತ್ತುದಿನ, ಹನ್ನೆರಡುದಿನ ಒಂದೇಮಿತಿಯಾಗಿ ಬಂದು ಜ್ವರ ಕಾಣಿಸಿ, ತಿರುಗಿ ಏಳುದಿನ, ಹನ್ನೆರಡು ದಿನಕ್ಕೊವೆ್ಮ ತಪ್ಪದೇ ಬರುವ ಜ್ವರವನ್ನೇ ಸತತಗವೆಂದೂ, ಹಗಲಾದರೂ ಇರುಳಾದರೂ ಒಂದುವೇಳೆ ಕಾಣಿಸಿ ಬಿಡುವ ಜ್ವರವು ದ್ವ್ಯಾಹಿಕ ಜ್ವರವೆಂದೆನಿಸಿಕೊಂಬುದೆಂತಲೂ, ಒಂದುದಿನ ಬಿಟ್ಟು ಒಂದುದಿನ ಬರುವ ಜ್ವರವು

ತ್ರ್ಯಾಹಿಕವೆಂದೂ, ಎರಡುದಿನ ಬಿಟ್ಟು ಮೂರನೇದಿವಸ ಬರುವ ಜ್ವರವು ಚಾತುರ್ಥಿಕವೆಂದೂ ಹೇಳಲ್ಪಟ್ಟಿದೆ.

## ಅಂತರ್ಗತ ಜ್ವರಲಕ್ಷಣಂ.

ದೇಹದೊಳಗೆ ಬಹಳ ಕಾವು ಹುಟ್ಟಿ ಬಾಯಾರಿಕೆ, ಪ್ರಲಾಪ, ಶ್ವಾಸ, ಭ್ರಮೆ, ಸಂದುಗಳ ಎಲವುಗಳ ಕೊಡತ, ಬೆಮರಿಲ್ಲದೇ ಇರುವುದು, ಮಲಬದ್ಧ ಇವುಗಳೆಲ್ಲವೂ ಅಂತರ್ಗತಜ್ವರ ಲಕ್ಷಣಗಳು.

## ಬಹಿರ್ವೇಗಜ್ವರಲಕ್ಷಣಂ.

ದೇಹದಲ್ಲಿ ಅಧಿಕವಾದ ಕಾವುದೋರಿ ಅಲ್ಪವಾದ ದಾಹ ಉಂಟಾಗಿರುವುದೇ ಬಹಿರ್ವೇಗಜ್ವರಲಕ್ಷಣವು.

## ಸಪ್ತಧಾತುಗಳು.

ಧಾತುಗಳು ರಸಧಾತು, ರಕ್ತಧಾತು, ಮಾಂಸಧಾತು, ಮೇಧೋಧಾತು, ಅಸ್ಥಿಧಾತು, ಮಜ್ಜಧಾತು, ಶುಕ್ಲಧಾತು ಎಂದು ಏಳು ತೆರನಾಗಿವೆ. ಇವುಗಳಿಗೆ ಸಪ್ತಧಾತುಗಳೆಂದು ಹೆಸರು. ಈ ಏಳು ಧಾತುಗಳಲ್ಲಿ ಯಥಾಕ್ರಮವಾಗಿ ಒಂದೊಂದು ಧಾತುವಿನಲ್ಲಿ ಮೂರುದಿನ ವ್ಯಾಪಿಸಿದ ಜ್ವರವು ಮತ್ತೊಂದು ಧಾತುವನ್ನು ಈ ಕೆಳಗೆ ಕಂಡ ರೀತಿಯಲ್ಲಿ ಆಶ್ರಯಿಸುವುದು.

## ರಸಗತಜ್ವರ.

ಬಹಳ ವಾತಶ್ಲೇಷ್ಮ ಉಂಟಾಗಿ, ಮೈಯಲ್ಲಿ ಭಾರಕಾಣಿಸಿ, ದೇಹದಲ್ಲಿ ಉರಿದೋರಿ, ದೈನ್ಯವಾದ ಮಾತುಗಳುಂಟಾಗಿ, ಆಕಳಿಸುತ್ತ, ಬಾಯಿಯಲ್ಲಿ ಅರೋಚಕ ಪುಟ್ಟಿ, ವಾಂತಿಯಾಗುತ್ತ, ದಾಹ ಉಂಟಾಗಿರುವುದೇ ರಸಗತಜ್ವರವೆನಿಸಿಕೊಂಬುದು.

## ರಕ್ತಗತಜ್ವರ.

ಜ್ವರದ ಉಷ್ಣ, ಅತ್ಯಂತವಾದ ದಾಹ, ಮದ, ಆಲಸ್ಯ, ಬುದ್ಧಿಭ್ರಮೆ, ಮೈನೋವು, ಮೂರ್ಛೆ ಇವುಗಳೆಲ್ಲಾ ಇರುವುದೇ ರಕ್ತಗತಜ್ವರದ ಲಕ್ಷಣಗಳು.

## ಮೇಧೋಗತಜ್ವರ.

ಅತಿ ತೀವ್ರವಾದ ಜ್ವರವುಂಟಾಗಿ, ದೇಹದಲ್ಲಿ ಬೆವರುಕಾಣಿಸಿ ಆಕಳಿಸುತ್ತ, ಶ್ವಾಸವೂ, ಮೈನೋವೂ ಉಂಟಾಗಿರುವುದೇ ಮೇಧೋಧಾತುಗತ ಜ್ವರಲಕ್ಷಣ.

## ಅಸ್ಥಿಗತಜ್ವರ.

ಶರೀರದೊಳಗೆ ದಾಹ, ಹೊರಗೆ ಶೈತ್ಯ ಇವು ಅರಿಯದಂತೆ ಬಂದು ಯಾವಾಗಲೂ ಜ್ವರ ಕಾಯುತ್ತಿರುವುದು, ಮುಖ ಬಿಳುಪಾಗಿರುವುದು ಇವುಗಳೆಲ್ಲಾ ಅಸ್ಥಿಗತ ಜ್ವರಲಕ್ಷಣಗಳು.

## ಮಜ್ಜಾಗತಜ್ವರ.

ಬಿಕ್ಕಳಿಸುತ್ತ, ಶ್ವಾಸ, ಭ್ರಮೆ ಉಂಟಾಗಿ ಅತಿದಾಹ ಮೈನೋವು ಸಹ ಕಾಣಿಸಿ, ಪ್ರಾಣಾಪಾನವಾಯುನಿರೋಧದಿಂದ ಉಬ್ಬಸದೋರಿರುವುದೆಲ್ಲಾ ಮಜ್ಜಾಧಾತುಗತ ಜ್ವರಲಕ್ಷಣಗಳು.

## ಶುಕ್ಲಗತಜ್ವರ.

ಅಧಿಕವಾದ ನಿದ್ರೆಯುಂಟಾಗಿ, ಪ್ರಲಾಪದೋರಿ, ಬುದ್ಧಿಭ್ರಮಣೆಯಾಗಿ, ಮೈನಡುಗುತ್ತ ಇರುವುದು ಇವೆಲ್ಲಾ ಶುಕ್ಲಧಾತುಗತ ಜ್ವರಲಕ್ಷಣಗಳು. ಈ ಜ್ವರವನ್ನು ಅಸಾಧ್ಯವೆಂದು ತಿಳಿವುದು.

## ತ್ವಗ್ಗತಜ್ವರ.

ದೇಹದಲ್ಲಿ ಅಲ್ಪವಾದ ಜ್ವರ ಮತ್ತು ದಾಹ ಉಂಟಾಗಿ, ನಾಡಿಗಳ ಪಟುತ್ವವಿಲ್ಲದೆ ಮಾಂದ್ಯವಾಗಿ, ಮೈಯ್ಯಲ್ಲಿ ಒಂದಾನೊಂದು ಸ್ಥಳದಲ್ಲಿ ನೋವು ಕಾಣಿಸುತ್ತ, ಇನ್ನೊಂದು ಸ್ಥಳದಲ್ಲಿ ಬೆಮರುಂಟಾಗಿರುವುದೇ ತ್ವಗ್ಗತಜ್ವರ ಲಕ್ಷಣಗಳು.

## ಜ್ವರೋಪದ್ರವಲಕ್ಷಣಂ.

ಶ್ವಾಸ, ಮೂರ್ಛೆ, ಅರೋಚಕ, ಛರ್ದಿ, ಅತ್ಯಂತದಾಹ, ಅತಿಸಾರ, ಬಿಕ್ಕಳಿಕೆ, ಮೈನೋವು, ಮಲಬಂಧ, ಕಾಸ ಮುಂತಾದ ಹತ್ತು ಗುಣಗಳೂ ಜ್ವರೋಪದ್ರವಗಳೆನಿಸಿಕೊಳ್ಳುವುವು.

## ಅಸಾಧ್ಯಜ್ವರಲಕ್ಷಣಂ.

ಹಣೆಯಲ್ಲಿ ಬೆಮರು ಹುಟ್ಟಿ, ಮೈ ಸಣ್ಣನಾಗಿ, ಶರೀರದಲ್ಲೆಲ್ಲಾ ಅಂಟುದೋರಿಕೊಂಡು, ಆಹಾರಗಳು ಒಳಕ್ಕೆ ಹೋಗದೆ ಗಂಟಲಲ್ಲಿರುವುದು ಇವೆಲ್ಲವೂ ಯಾವ ಮನುಷ್ಯನಿಗೆ ಉಂಟಾಗುವವೋ ಅವನು ಯಮಸ್ಥಾನವನ್ನೈದುವನು.

## ಮತಾಂತರದಲ್ಲಿ.

ಯಾವಮನುಷ್ಯನಿಗೆ ಮೂಗಿನ ಎರಡು ಹೊಳ್ಳೆಗಳಲ್ಲಿಯೂ ಒಂದೇವೇಳೆ ಶೀಘ್ರವಾಗಿ ಶ್ವಾಸ ಹೊರಡುತ್ತದೆಯೊ ಆ ಮನುಷ್ಯನು ಮೂರುದಿನಗಳೊಳಗೆ,

ಮರಣವನ್ನೈದುವನೆಂದರಿವುದು. ಮತ್ತು ಶ್ವಾಸ, ಬಿಕ್ಕಳಿಕೆ, ಭ್ರಮೆ, ಮೈನೋವು, ಬಹಳವಾದ ಹೊಟ್ಟೇನೋವು, ಬಲಹಾನಿ, ಕಾಮಾಲೆ, ಛರ್ದಿ, ಕೆಮ್ಮು, ಅತಿಸಾರ ಇವುಗಳಿಂದ ಕೂಡಿದ ಜ್ವರವು ಅಸಾಧ್ಯವೆಂದರಿವುದು.

## ಶೀತಜ್ವರೋತ್ಪತ್ತಿ.

ಬಹಳ ಭಯಂಕರವಾದ ಬಾಣಾಸುರನ ಯುದ್ಧದಲ್ಲಿ ಮಾಹೇಶ್ವರಜ್ವರದಿಂದ ತಪ್ಪಿಸಲ್ಪಟ್ಟು ಕೋಪಿಸಿದ ಸರ್ವಾಂತರ್ಯಾಮಿಯಾದ ವಿಷ್ಣುವು ಶೀತಜ್ವರವನ್ನುಂಟುಮಾಡಿದನು.

## ಶೀತಜ್ವರವು ದೇಹವನ್ನು ಪ್ರವೇಶಿಸುವ ಕ್ರಮ.

ತ್ವಕ್ಕನ್ನಾಶ್ರಯಿಸಿರುವ ಶ್ಲೇಷ್ಮವಾಯುಗಳು ಆದಿಯಲ್ಲಿ ಶೀತಜ್ವರವನ್ನುಂಟುಮಾಡುವುವು; ಕಡೆಯಲ್ಲಿ ಪಿತ್ತದೋಷವು ಆ ವಾತಶ್ಲೇಷ್ಮಗಳನ್ನು ಶಮನ ಮಾಡುವನಿಮಿತ್ತ ದಾಹವನ್ನುಂಟುಮಾಡುವುದು.

## ಉಷ್ಣಜ್ವರವು ದೇಹವನ್ನು ಪ್ರವೇಶಿಸುವ ಕ್ರಮ.

ಆದಿಯಲ್ಲಿ ಪಿತ್ತದೋಷವು ದಾಹವನ್ನುಂಟುಮಾಡುವುದು. ಆ ಪಿತ್ತಶಾಂತ್ಯರ್ಥವಾಗಿ ವಾತಶ್ಲೇಷ್ಮಗಳು ಕಡೆಯಲ್ಲಿ ಶೈತ್ಯವನ್ನುಂಟುಮಾಡುವುವು. ಶೀತಪಿತ್ತಾದಿಜ್ವರಗಳು ದೋಷಸಂಸರ್ಗದಿಂದುಂಟಾಗುವುವು.

## ವಾತಾದಿಜ್ವರಗಳು ಪಕ್ವವಾಗುವ ಕ್ರಮ.

ಆರುರಾತ್ರಿಯಲ್ಲಿ ಪೈತ್ಯಜ್ವರವೂ, ಏಳುರಾತ್ರಿಯಲ್ಲಿ ವಾತಜ್ವರವೂ, ಹತ್ತುರಾತ್ರಿಯಲ್ಲಿ ಶ್ಲೇಷ್ಮಜ್ವರವೂ ಪಕ್ವವಾಗುವುವು.

## ಜ್ವರಬಿಟ್ಟ ಲಕ್ಷಣಂ.

ಅನ್ನದಮೇಲೆ ಅಪೇಕ್ಷೆತೋರಿ, ಮಂಡೆಯಲ್ಲಿ ತೀಟೆಯುಂಟಾಗಿ, ಮೂಗಿನಲ್ಲಿ ಸೀನು ಹುಟ್ಟುತ್ತ, ದೇಹ ಹಗುರವಾಗಿ, ಶರೀರ ಬೆವರುತ್ತ ಮುಖದಲ್ಲಿ ಜೋಲು ತೆಗೆಸು ಬೆವರುಗೂಡಿ ಇರಲು ಜ್ವರವು ಬಿಟ್ಟಿರುವುದೆಂದರಿವುದು.

## ಮೂರು ತೆರನಾದ ಅಜೀರ್ಣಜ್ವರ ಲಕ್ಷಣಂಗಳು.

ಅಜೀರ್ಣಜ್ವರವು ಮೂರು ತೆರನಾಗಿರುವುದು. ಶ್ಲೇಷ್ಮದೋಷದಿಂದಾದ ಅಜೀರ್ಣಜ್ವರವು ಆಮಾಜೀರ್ಣವೆಂತಲೂ, ವಾತದೋಷದಿಂದುಂಟಾದ ಅಜೀರ್ಣ

ಜ್ವರವು ವಿಷ್ಟಬ್ಧಾಜೀರ್ಣಜ್ವರವೆಂದೂ, ಪಿತ್ತದೋಷದಿಂದ ಹುಟ್ಟಿದ ಅಜೀರ್ಣ ಜ್ವರವು ವಿದಗ್ಧಾಜೀರ್ಣಜ್ವರವೆಂದೂ ಹೇಳಲ್ಪಟ್ಟಿದೆ.

## ಲಂಘನಂ.

ಆಮಾಶಯದಲ್ಲಿರುವ ವಾತಾದಿದೋಷವು ಅಗ್ನಿಯನ್ನು ಕೆಡಿಸಿ, ನಾಡೀಮಾರ್ಗಗಳನ್ನು ನಿರೋಧಿಸಿ ಜ್ವರವನ್ನುಂಟುಮಾಡುವುದು. ಆದಕಾರಣ ಆಮಾಶಯದಲ್ಲಿರುವ ವಾತಶ್ಲೇಷ್ಮಗಳು ತಮ್ಮ ತಮ್ಮ ಸ್ವಸ್ಥಾನಗಳಲ್ಲಿ ನಿಂತು ಅಗ್ನಿಯುಂಟಾಗುವಪರ್ಯಂತ ಲಂಘನವನ್ನು ಮಾಡತಕ್ಕದ್ದು ಪ್ರಶಸ್ತವೆಂದು ಬಾಹಟಾಚಾರ್ಯರೆ ಆದಿಯಾದ ಪುರಾತನ ವೈದ್ಯರಿಂದ ಮುಖ್ಯವಾಗಿ ಹೇಳಲ್ಪಟ್ಟಿದೆ. ವಾತಜ್ವರದಲ್ಲಿ ಮೂರು ದಿನಗಳೂ, ಪಿತ್ತಜ್ವರದಲ್ಲಿ ಒಂದು ದಿನವೂ, ಶ್ಲೇಷ್ಮಜ್ವರದಲ್ಲಿ ಆರು ರಾತ್ರಿಗಳು ಅಥವಾ ಏಳು ರಾತ್ರಿಗಳು ಲಂಘನವನ್ನು ಮಾಡಿಸುವುದು ಉತ್ತಮ.

## ಲಂಘನಪ್ರಾಶಸ್ತ್ಯಂ.

ಭೂಮಿಯಲ್ಲಿ ಹುಟ್ಟದೆ ಆಕಾಶದಲ್ಲಿ ಹುಟ್ಟದೆ ಎಲ್ಲರಿಗೂ ಹೃದ್ಯವಾಗಿ ರಸವಿಲ್ಲದ ಉತ್ತಮವಾದ ಔಷಧವೇ ಲಂಘನವೆಂದು ಪೂರ್ವಾಚಾರ್ಯರಿಂದ ಹೇಳಲ್ಪಟ್ಟಿದೆ.

## ಲಂಘನಗುಣಂ.

ಲಂಘನವು ದೀಪನಪಾಚನಂಗಳನ್ನುಂಟುಮಾಡುವುದು. ವಾತಾದಿ ತ್ರಿದೋಷಗಳನ್ನು ಪರಿಹರಿಸುವುದು, ಅಜೀರ್ಣವನ್ನು ಜಯಿಸುವುದು, ಆಮಾತಿಸಾರ, ಹೊಟ್ಟೇನೋವು, ಜ್ವರ, ಶ್ಲೇಷ್ಮ ಇವೇ ಮೊದಲಾದ ವ್ಯಾಧಿಗಳನ್ನು ಪರಿಹರಿಸುವುವೆಂದು ಬುದ್ಧಿವಂತರಾದ ವೈದ್ಯರಿಂದ ಹೇಳಲ್ಪಟ್ಟಿದೆ. ಅಲ್ಲದೆ ಜ್ವರವು ಹುಟ್ಟಿದ ಆದಿಯಲ್ಲಿಯೂ, ಆಮಾತಿಸಾರ, ಶ್ಲೇಷ್ಮವಿಕಾರ, ರಕ್ತಪಿತ್ತರೋಗ, ಛರ್ದಿ, ಶಿರೋರೋಗ, ಬಲಾಸವೆಂಬ ರೋಗ, ಯಕ್ಷರಾಕ್ಷಸ ಸಂಬಂಧದಿಂದ ಹುಟ್ಟಿದ ರೋಗ, ಶ್ಲೇಷ್ಮದೋಷದಿಂದ ಹುಟ್ಟಿದ ಅಜೀರ್ಣವೆಂಬ ವಿಷೂಚಿ, ಘೋರವ್ಯಾಧಿ ಇವುಗಳಲ್ಲಿಯೂ ಮತ್ತು ಮುಖದಲ್ಲಿ ಹುಟ್ಟಿದ ಪೀನಸ ಮೊದಲಾದ ವ್ಯಾಧಿಯುಳ್ಳವನಿಗೂ, ಆಗತಾನೆ ಹೆತ್ತ ಬಾಣಂತಿಯರುಗಳಿಗೂ, ಶೋಭೆಯಲ್ಲಿಯೂ, ಪ್ರಾಯವಾದವರಲ್ಲಿಯೂ ದೇಹಬಲಾನುಗುಣವಾಗಿ ಲಂಘನವನ್ನು ಮಾಡಿಸುವುದು ಉತ್ತಮವೆಂದು ವೈದ್ಯರು ಹೇಳುವರು.

## ಲಂಘನಕ್ಕೆ ಯೋಗ್ಯರು.

ಕಣ್ಣುಬೇನೆಯುಳ್ಳವರು, ಹೊಟ್ಟೆಯ ಬೇನೆಯುಳ್ಳವರು, ಜ್ವರವುಳ್ಳವರು, ವ್ರಣವುಳ್ಳವರು ಇವರೆಲ್ಲಾ ಲಂಘನಯೋಗ್ಯರು. ಇವರಿಗೆ ಲಂಘನವು ಹಿತವನ್ನುಂಟುಮಾಡುವುದು.

## ಲಂಘನಕ್ಕೆ ಅಯೋಗ್ಯರು.

ವೃದ್ಧರು, ಪೈತ್ಯರೋಗದವರು, ಉಪವಾಸದಿಂದ ದಾರಿಯನ್ನು ನಡೆದುದರಿಂದ ಶರೀರ ಬಡವಾಗಿರುವವರು, ಅಲ್ಪವಾದ ವಾತಾದಿದೋಷಗಳುಳ್ಳವರು, ಬಾಲಕರು, ಯೌವನಸ್ತ್ರೀಯರು, ಭಯಪಟ್ಟಿರುವವರು, ಗರ್ಭಿಣಿಯರು, ವಿಷ ತಾಕಿ ಬಡವಾಗಿರುವವರು ಇವರುಗಳಿಗೆ ಲಂಘನವನ್ನು ಮಾಡಿಸಲಾಗದು. ಜ್ವರದೊಡನೆ ಕೂಡಿರುವವರಿಗೂ ಮತ್ತು ಜ್ವರ ಬಿಟ್ಟಿರುವವರಿಗೂ ಸಾಯಂಕಾಲದಲ್ಲಿಯೇ ಲಘುವಾಗಿ ಪಥ್ಯವನ್ನು ಕೊಡಿಸುವುದು.

## ತರುಣಜ್ವರ.

ಪಾಲ್ಗುಡಿವ ಮಕ್ಕಳಿಗೆ ಮೂರುದಿನ, ಹಾಲನ್ನೂ ಅನ್ನವನ್ನೂ ಉಂಬುವ ಬಾಲಕರಿಗೆ ಐದುದಿನ, ಅನ್ನವನ್ನುಂಬುವ ಹರೆಯದವರಿಗೆ ಏಳುದಿನ, ಸಕಲರಿಗೂ ಬಹಳವಾದ ರೋಗಗಳಲ್ಲಿ ಒಂಬತ್ತುದಿನ ಪರ್ಯಂತ ಬರುವ ಜ್ವರವು ತರುಣ ಜ್ವರವೆನಿಸಿಕೊಂಬುದು.

## ಔಷಧಕಾಲ.

ಕೆಲವರು ಏಳು ದಿನದಮೇಲೆ ಔಷಧವನ್ನು ಕೊಡಬಹುದೆಂದು ಹೇಳುವರು. ಕೆಲವರು ಹತ್ತು ದಿನದಮೇಲೆ ಔಷಧವನ್ನು ಕೊಡಬೇಕೆನ್ನುವರು. ಮತ್ತೆ ಕೆಲವರು ಉಲ್ಬಣವಾದ ಆಮಜ್ವರದಲ್ಲಿ ಲಘುಪಥ್ಯವನಿಕ್ಕಿ ಔಷಧವನ್ನು ಕೊಡಿಸುವುದೆಂದು ಹೇಳುವರು.

## ಕಷಾಯಕ್ರಮ.

ಕೊತ್ತುಂಬರಿ ಮತ್ತು ಶುಂಠಿ ಇವುಗಳನ್ನು ಇಪ್ಪತ್ತುನಾಲ್ಕು ಹಲ ನೀರಿನಲ್ಲಿ ಕಷಾಯವನ್ನು ಕಾಯಿಸಿ ಅಷ್ಟಾವಶೇಷವಾದ ಪಾವುಕಷಾಯವನ್ನಾಗಲಿ, ಷಡಂಗವಾರಿ ಕಷಾಯವನ್ನಾಗಲಿ ಕುಡಿಸುವುದು, ಕಷಾಯದ್ರವ್ಯ ಒಂದುಹಲವಾಗಿಯೂ, ಉದಕವು ಎಂಟುಹಲವಾಗಿಯೂ ಕಷಾಯವನ್ನು ಕಾಯಿಸಿ ಕಷಾಯದ್ರವ್ಯದಷ್ಟವಾಗಿ ನಿಂತದ್ದರಲ್ಲಿ ಒಂದುಪಾವು ಕಷಾಯವನ್ನು ಪಾನಮಾಡಿಸುವುದೆಂದು ಪೇಳುವರು.

## ಕ್ಷೀರಪಾನಯೋಗ್ಯರು.

ಹಾಲು ಅಭ್ಯಾಸವುಳ್ಳವರು, ಅಲ್ಪವಾದ ಶ್ಲೇಷ್ಮರೋಗದವರು, ದಾಹತೃಷೆಗಳುಳ್ಳವರು, ವಾತಪಿತ್ತಗಳಿಂದ ಕಂಗೆಟ್ಟಿರುವರು, ಅತಿಸಾರ ರೋಗದವರು ಇವರುಗಳಿಗೆಲ್ಲಾ ಹಾಲು ಅಮೃತಕ್ಕೆ ಸಮಾನವಾದುದೆಂದು ಪೂರ್ವಾಚಾರ್ಯರ ಹೇಳಿದ್ದಾರೆ.

## ಕ್ಷೀರಪಾನಕ್ಕೆ ಯೋಗ್ಯರಲ್ಲದವರು.

ತರುಣಜ್ವರವುಳ್ಳವರು ಕ್ಷೀರಪಾನವನ್ನು ಮಾಡಲು ವಿಷಸಮಾನವೆಂದು ಪೂರ್ವಾಚಾರ್ಯರು ಹೇಳಿದ್ದಾರೆ.

## ಜ್ವರದವರಿಗೆ ಪಥ್ಯದ್ರವ್ಯಗಳು.

ಹುರಳೀಕಟ್ಟು, ತೊಗರೀಕಟ್ಟು, ಹೆಸರುಕಟ್ಟು, ಕಡಲೇಕಟ್ಟು, ಹಳೇಅಕ್ಕೀ ಅನ್ನ, ಹೊನಗೊನೆಸೊಪ್ಪು, ಹಾಲುಸೋರೆಕುಸಿ, ಹಾಲೆಸೊಪ್ಪು, ಎರಡೆಲೆಹೊನ್ನೆ ಚಕ್ರವರ್ತದಸೊಪ್ಪು, ಚಿಲಿಕೀರೆಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯ ಗಳು.

ನರುವಲದಸೊಪ್ಪು, ಪುಳ್ಳಂಪುರಚಿ, ಒಂದೆಲಗ, ಕೊಮ್ಮೇಸೊಪ್ಪು, ಬೆಲ್ಲಗ ಣಿಕೆಸೊಪ್ಪು, ಹಾಗಲಕಾಯಿ, ಕತ್ತರಿಬದನೆಕಾಯಿ, ತೊಂಡೆಕಾಯಿ, ಪಡವಲ ಕಾಯಿ, ಹೀರೆಕಾಯಿ, ಬಳ್ಳಿಸೊಂಡೆ, ಬೂದಿಗುಂಬಳಕಾಯಿ, ಎಳೆಮೂಲಂಗಿ, ಹಸಿಶುಂಠಿ, ಹಳೆಕೀರೆಸೊಪ್ಪು, ಪಗಚೇಸೊಪ್ಪು, ಈರುಳ್ಳಿ ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳೆಂದು ಮತಾಂತರದಲ್ಲಿ ಹೇಳಲ್ಪಟ್ಟಿದೆ.

## ಜ್ವರಬಂದವರಿಗೆ ಅಪಥ್ಯದ್ರವ್ಯಗಳು.

ಎಣ್ಣೆ, ಮೊಸರು, ಮಜ್ಜಿಗೆ, ತುಪ್ಪ, ಜೇನುತುಪ್ಪ, ಮೆಣಸು, ಹಗಲುನಿದ್ದೆ, ಪಥ್ಯವನ್ನು ತೆಗೆದುಕೊಂಡಾಕ್ಷಣವೇ ನಿದ್ರೆ, ಸ್ನಾನ, ಅಭ್ಯಂಗನ, ಸ್ತ್ರೀಸಂಗ್ಯ ವಾಯುಸ್ಪರ್ಶ, ಸಂಚಾರ, ತೊಗರು, ಹುಳಿ ಇವುಗಳೆಲ್ಲವೂ ಜ್ವರದಲ್ಲಿ ಅಪಥ ದ್ರವ್ಯಗಳೆನಿಸಿಕೊಂಬುವು.

## ಭೋಜನ ಮತ.

ತಾಂಬೂಲ, ಕಂಪಿನಹೊದ್ದಿಕೆ, ಪರಿಮಳದ ಪುಷ್ಪ, ಕಸ್ತೂರಿಮೊದಲಾದ ಪರಿಮಳಲೇಪ, ಕುಂಕುಮ, ಕರ್ಪೂರ, ಮಂಚದಲ್ಲಿ ಶಯನ, ಸುಪ್ಪತ್ತಿಗೆ, ಮೃಷ್ಟಾನ್ನಭೋಜನ, ಇಷ್ಟವಾದ ಸ್ತ್ರೀದರ್ಶನಸ್ಪರ್ಶನಗಳು, ಶೋಕ, ಬೆಳ ದಿಂಗಳು, ಕೂಗಿ ಮಾತಾಡುವುದು ಇವುಗಳೆಲ್ಲವನ್ನೂ ಜ್ವರದಿಂದ ತಪ್ತವಾದ ಶರೀರವುಳ್ಳವನು ಬಿಡತಕ್ಕುದೆಂದು ಭೋಜನ ಮತ.

## ಮತಾಂತರದಲ್ಲಿ.

ಬಲಿತ ಪಡವಲಕಾಯಿ, ಎಳೆಬೂದಿಗುಂಬಳಕಾಯಿ, ಬಸಲೇಸೊಪ್ಪು, ಕರೀ ಕೆಸವು, ಬಿಳೀಕೆಸವು, ಬೆಳ್ಳುಳ್ಳಿ, ಅವರೆ, ಸವತೇಕಾಯಿ, ಬಲಿತ ಬದನೆಕಾಯಿ,

ಉದ್ದು, ಹಿಂಡಿ, ಸಾಸವೆ, ಸೋರೆಕಾಯಿ, ಬಾಳೆಹಣ್ಣು, ಹಲಸಿನಹಣ್ಣು, ಹೊಸ ಅಕ್ಕಿ ಅನ್ನ, ಇವುಗಳೆಲ್ಲವೂ ಜ್ವರಬಂದವರಿಗೆ ಅಪಥ್ಯದ್ರವ್ಯಗಳು.

## ಜ್ವರಚಿಕಿತ್ಸೆ.

ಜ್ವರದ ಆದಿಯಲ್ಲಿ ಲಂಘನವನ್ನು ಮಾಡಿಸುವುದು ಲೇಸು, ಜ್ವರದ ಮಧ್ಯದಲ್ಲಿ ಹುರಿಯಕ್ಕಿ ಗಂಜಿ, ಅರಳುಗಂಜಿ ಮೊದಲಾದ ಲಘುಧಾನ್ಯಗಳಿಂದ ಪಥ್ಯವನ್ನು ಕೊಡಿಸುವುದು ; ಜ್ವರದ ಕಡೆಯಲ್ಲಿ ಕಷಾಯಂಗಳನ್ನು ಕೊಡಿಸುವುದು ; ಜ್ವರವು ಬಿಟ್ಟಮೇಲೆ ವಿರೇಚನವನ್ನು ಮಾಡಿಸುವುದು. ಜ್ವರದಿಂದ ಕೃಶನಾದವನಿಗೆ ವಮನ ವಿರೇಚನಗಳನ್ನು ಮಾಡಿಸಲಾಗದು.

## ವಿರೇಚನವಂ ಮಾಡಿಸುವ ಕ್ರಮ.

ತಿಗಡೆ, ಅಳಲೆಕಾಯಿ, ಬೆಲ್ಲ, ಶುಂಠಿ, ಇವೆಲ್ಲವನ್ನೂ ಪ್ರತ್ಯೇಕ ಒಂದೊಂದು ವರಹಾತೂಕದಲ್ಲಿ ಬಿಸಿನೀರಿಂದ ಅರೆದುಕೊಡಲು ವಿರೇಚನವಾಗಿ ಜ್ವರದೋಷ ಮಂಡೆಭಾರ, ಶ್ಲೇಷ್ಮ ಇವುಗಳು ಪರಿಹಾರವಾಗುವುವು. ಜೀರ್ಣಜ್ವರದಲ್ಲಿ ಮೃದುವಾಗಿ ನಸ್ಯವನ್ನು ಮಾಡಿಸುವುದು.

## ಔಷಧಂಗಳನ್ನು ತೆಗೆದುಕೊಂಬಲ್ಲಿ ಹೇಳುವ ಮಂತ್ರ.

ಓಮ್, ಹ್ರೀಂ, ನಃ, ಅಮೃತಂ ಕುರು, ಶ್ರೀ ಭೈರವಾಯ ನಮಃ ಎಂಬ ಮಂತ್ರದಿಂದ ಏಳುಬಾರಿ ಅಭಿಮಂತ್ರಿಸಿದ ಔಷಧಿಯನ್ನು ಕೊಡಲು ಆ ಮಂತ್ರಾಭಿಮಾನದೇವತೆಗಳೇ ಆ ಔಷಧವನ್ನು ಸೇವಿಸಿದವರಿಗೆ ಆಯುರಾರೋಗ್ಯಂಗಳನ್ನುಂಟುಮಾಡುವರು.

## ಜ್ವರಚಿಕಿತ್ಸಾ ಪ್ರಯೋಗಗಳು.

### ವಿಷಮಜ್ವರಕ್ಕೆ—ಕಲ್ಕಗಳು.

ಆದಿವಾರದ ದಿವಸ ನೆಲದೆಂಗನ್ನು ತಂದು ಕತ್ತರಿಸಿ ನೆಳಲಲ್ಲಿ ಒಣಗಿಸಿ ಇಡಿದು ವಸ್ತ್ರಗಾಳಿತವಂ ಮಾಡಿ ತಣ್ಣೀರಿನಲ್ಲಿ ಮೂರುದಿನ ತೆಗದುಕೊಳ್ಳಲು ತ್ರ್ಯಾಹಿಕ ಜ್ವರವು ಪರಿಹಾರವಾಗುವುದು.

### ಪಂಚಸಾರ ಪ್ರಯೋಗ.

ಹಿಪ್ಪಲಿ, ಶರ್ಕರೆ, ಕಾದಹಾಲು, ಜೇನುತುಪ್ಪ, ಹೊಸದಾಗಿ ಕಾಯಿಸಿದ ತುಪ್ಪ ಇವುಗಳನ್ನೆಲ್ಲವನ್ನೂ ಸೌಟಿನಲ್ಲಿ ಹಾಕಿ ತೊಳಸಿ ಪಾನವಂ ಮಾಡಲು ವಿಷಮಜ್ವರ,

ಕೆಮ್ಮು, ಎದೇನೋವು, ಜೀರ್ಣಜ್ವರ ಸಹ ಪರಿಹಾರವಾಗುವುವು. ಅಮೃತ ಸಮಾನವೆಂದು ಯೋಗವನ್ನು ಹೇಳುವರು.

ಕಟುಕರೋಹಿಣಿ ಒಂದನ್ನೇ ಕಲ್ಕಮಾಡಿಕೊಡಲು ವಾತಪಿತ್ತಶ್ಲೇಷ್ಮ ಜ್ವರವು ಮಾಣುವುದು.

## ತರುಣಜ್ವರಕ್ಕೆ

ಒಂದು ಗದ್ಯಾಣದತೂಕ ಶುಂಠಿಯನ್ನೂ ಒಂದು ಗದ್ಯಾಣತೂಕ ಕಟುಕರೋಹಿಣಿಯನ್ನೂ ಅರೆದು ಕೊಡಲು ತರುಣಜ್ವರ ಗುಣವಾಗುವುದು.

## ಸಕಲಜ್ವರಕ್ಕೆ

ಬಜೆ, ಮಡುವಾಗಲಗೆಡ್ಡೆ, ಜೀರಿಗೆ ಸಹ ನೀರಿನಲ್ಲಿ ಅರೆದು ಕೊಡಲು ಎಂತಹ ಜ್ವರವಾದರೂ ಬಿಡುವುದು.

ಬೇವಿನಬಳನಾರು, ಬೇವಿನಹಗಿನು ಇವುಗಳನ್ನು ಹಳೇನೀರಿನಲ್ಲಿ ಅರೆದು ಕೊಡಲು ಸಕಲಜ್ವರಪರಿಹಾರವಾಗುವುದು.

ಕಟುಕರೋಹಿಣಿ, ರಾಸ್ಮೆ ಇವುಗಳನ್ನು ಬಿಸಿನೀರಿನಿಂದ ಅರೆದು ಕೊಡಲು ಸಕಲಜ್ವರ ಪರಿಹಾರವಾಗುವುದು.

ವಾದಕ್ಕಿ, ಶುಂಠಿ, ಹಿಪ್ಪಲಿ, ಮೆಣಸು, ರಾಸ್ಮೆ, ಗಂಟುಭಾರಂಗಿ ಇವುಗಳನ್ನು ಸಮವಾಗಿ ತುಳಸೀಸೊಪ್ಪಿನ ರಸದಿಂದ ಅರೆದು ಹಸೀಶುಂಠೀರಸದಲ್ಲಿ ಕದಡಿ ಕೊಡಲು ತ್ರಿದೋಷಜ್ವರವು ಗುಣವಾಗುವುದು.

## ವಿಷಮಜ್ವರಕ್ಕೆ.

ಹಾಲಿನಲ್ಲಿ ಹಿಪ್ಪಲಿಯನ್ನು ಅರೆದು ಸೇವಿಸಲು ವಿಷಮಜ್ವರಂಮಾಣುವುದು.

ತುಪ್ಪ, ಜೇನುತುಪ್ಪ, ಸಕ್ಕರೆ, ಹಿಪ್ಪಲಿ ಇವುಗಳನ್ನು ಹಾಲಿನಲ್ಲಿ ಬೆರಸಿ ಕುಡಿಯಲು ವಿಷಮಜ್ವರವು ಪರಿಹಾರವಾಗುವುದು.

ಪಾರಿವಾಣದಬೇರು, ಬಲ್ಲವತ್ತದ ತಿರುಳು ಇವುಗಳನ್ನು ತುಪ್ಪದಲ್ಲಿ ಅರೆದು ಕೊಡಲು ವಿಷಮಜ್ವರ ಗುಣವಾಗುವುದು.

## ರಾಸ್ಮ್ಯಾದಿಕಲ್ಕ.

ರಾಸ್ಮೆ, ವಾಯುವಿಳಂಗ, ಮೆಣಸು, ಹಿಪ್ಪಲಿ, ಶುಂಠಿ. ಹೇರಳೇಬೀಜ, ಬೇವಿನಬೀಜ, ಜೀರಿಗೆ, ಬೇವಿನಕಡ್ಡಿ, ಕರಿಬೇಹೂವು, ಕೊತ್ತುಂಬರಿ, ಲಕ್ಕಿ, ಕಹಿಗುಳ್ಳ, ಬೆಳ್ಳುಳ್ಳಿ ಇವುಗಳನ್ನು ಕುಟ್ಟಿ ಅರೆದು ಕೊಡಲು ವಾತದೋಷಜ್ವರ ಮತ್ತು ಬಾಲಜ್ವರಸಹ ಪರಿಹಾರವಾಗುವುವು.

ಮಾಚಪತ್ರೆ, ಹೀರೇತೂಕ್ಕು ಇವುಗಳೆರಡನ್ನೂ ಉಂಡೆಮಾಡಿ, ಕೆಂಡದ ಮೇಲೆ ಇರಿಸಿ ರಸತೆಗೆದುಕೊಂಡು ಸಕ್ಕರೆವೆರಸಿ ಕೊಡಲು ಜ್ವರತಾಪ ಮತ್ತು ದಾಹ ಇವೆರಡೂ ನಿಲ್ಲುವುವು.

* ಗಾರಪಂಡ್ಲು ಮತ್ತು ಮೆಣಸು ಇವೆರಡನ್ನು ಅರೆದು ನೀರಿನಲ್ಲಿ ಕೊಡಲು ಜ್ವರವು ಬಿಡುವುದು.

ಅತ್ತಿಚಕ್ಕೆ, * ಲೋನಾರು, ಜೀರಿಗೆ, ಯಾಲಕ್ಕಿ, ಇವುಗಳನ್ನೆಲ್ಲವನ್ನೂ ಅರೆದು ನೀರಿನಲ್ಲಿ ಕೊಡಲು ಜ್ವರನಿಲ್ಲುವುದು.

## ರೋಹಿಣ್ಯಾದಿ ಕಲ್ಕ.

ಕಟುಕರೋಹಿಣಿ, ಕೊತ್ತುಂಬರಿ, ಶುಂಠಿ, ಜೀರಿಗೆ, ಮೆಣಸು, ರಾಸ್ಮೆ, ಹಿಪ್ಪಲಿ ಉತ್ತರಾಣಿಬೇರು, ಕರಿಬೇವು, ಕರಿಬೇವಿನಕಡ್ಡಿ, ಹುಣಿಸೇಕಡ್ಡಿ, ಬೇವಿನಕಡ್ಡಿ, ಗೋರೋಜನ ಇವುಗಳನ್ನು ಸಮವಾಗಿಸೇರಿಸಿ, ಕಲ್ಕಮಾಡಿ ಸಹದೇವಿರಸವನ್ನು ಸೇರಿಸಿಕೊಟ್ಟಲ್ಲಿ ಸರ್ವಜ್ವರವು ಬಿಡುವುದು.

## ಸಕಲಜ್ವರಕ್ಕೆ ಕಷಾಯಗಳು

### ವಿಷಮಜ್ವರಕ್ಕೆ.

ಚಿತ್ರಮೂಲ, ಬೆಳ್ಳುಳ್ಳಿ, ಪಾಪಚೀಬೇರು, ಕಹಿಪಡವಲ, ನೆಲಗುಳದಬೇರು, ಬೇವಿನಕಡ್ಡಿ, ಪರ್ಪಾಟಕ, ಚವ್ಯ, ಶುಂಠಿ, ಅಮರದವಳ್ಳಿ, ಚೇಳುಡಕಿಲಬೇರು, ವಿಷ್ಣುಕ್ರಾಂತಿ, ಜೀರಿಗೆ ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಶೋಧಿಸಿಕೊಂಡು, ರಾಯಪುಡಿಸಕ್ಕರೆ ಮತ್ತು ಹಸುವಿನ ತುಪ್ಪದಲ್ಲಿ ಪ್ರತಿಪಾಕವನಿಕ್ಕಿ ಕೊಡಲು ವಿಷಮಜ್ವರ ಗುಣವಾಗುವುದು.

ಕೊಡಸೀಗೇಬೀಜ, ಅಮರದವಳ್ಳಿ, ಕಹಿಪಡವಲ, ಪರ್ಪಾಟಕ, ತುರಚನಬೇರು, ನೆಲಬೇವು, ಭದ್ರಮುಸ್ತೆ, ಶುಂಠಿ, ಚಂಗಲಕೋಷ್ಟ, ಅಡುಸೋಗೆಕಡ್ಡಿ ಇವುಗಳನ್ನು ಸಮಭಾಗವಾಗಿ ಕಷಾಯವಿಟ್ಟು ಕೊಡಲು ಸರ್ವದೋಷಜ್ವರ ಗುಣವಾಗುವುದು.

ಕಟುಕರೋಹಿಣಿ, ಎಲುವನಸಂಧಿ, ಕಹಿಪಡವಲ, ಅಷಾಡಿಗೆಣಸು, ಕೊತ್ತುಂಬರಿ, ಗುಳದಬೇರು, ಅಳಲೇಕಾಯಿ, ನೆಲ್ಲೀಚಟ್ಟು, ಅಡುಸೋಗೇಕಡ್ಡಿ ಇವುಗಳನ್ನು ಸಮಭಾಗದಲ್ಲಿ ಕಷಾಯವಿಟ್ಟು ಕೊಡಲು ವಿಷಮಶೀತಜ್ವರ ಶಮನವಾಗುವುದು.

* ತೆಲುಗು.

ಅರಳೀಮರದ ಒಳನಾರನ್ನು ಕಷಾಯವಿಕ್ಕಿ ಕೊಡಲು ದಾಹಸಹಿತವಾದ ವಿಷಮಜ್ವರ, ಪುರಾತನಜ್ವರ , ಜ್ವರಾತಿಸಾರ ಸಹ ಶಮನವಹುದು. ೬

ಕಳ್ಳಂಗಡಲೆ, ಬೋಳಂಗಡಲೆ, ನಾಗಮುತ್ತು, ಪುಲಂಗ, ಎಲುವನಸಂದೀ ಬೇರು, ಶುಂಠಿ, ನೆಲದಾಳುಗೆಡ್ಡೆ, ಸೊಗದೇಬೇರು, ಅಮರದವಳ್ಳಿ, ಕಟುಕ ರೋಹಿಣಿ, ಮರದರಿಶಿನ ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಪಂಚಾಹಿಕಜ್ವರ ಗುಣಮಕ್ಕುಂ. ೭

*ಪುಲ್ಲಂಗವೇರು, ಎಲುವನಸಂದೀಬೇರು, ನೆಲಬೇವು, ಬೇವಿನ ಕಡ್ಡಿ, ಕಟುಕರೋಹಿಣಿ, ಇವುಗಳನ್ನೆಲ್ಲಾ ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಪಂಚಾಹಿಕಜ್ವರ ಗುಣಮಕ್ಕುಂ. ೮

ಹುರುಳಿಎಲೆ, ಹೊಮ್ಮುಗುಳು, ತುಂಬೇಹೂವು, ವಿಷ್ಣುಕ್ರಾಂತಿ, ಸಹದೇವಿ, ನೆಗ್ಗಿಲಬೇರು, ನೆಲಮಾವು ಇವುಗಳನ್ನು ಕಷಾಯವಿಟ್ಟು ಶುಂಠಿ, ಹಿಪ್ಪಲಿ, ಲವಂಗ ಜೀರಿಗೆ ಇವುಗಳನ್ನು ಗಂಟುಕಟ್ಟಿ ಹಾಕಿದ್ದು ತೆಗೆದು, ಆ ಕಷಾಯದಲ್ಲಿ ಅರೆದು ಕದಡಿ. ಉದಯದಲ್ಲಿ ಇವುಗಳ ಕಲ್ಕವನ್ನೂ, ರಾತ್ರಿಯಲ್ಲಿ ಇವುಗಳ ಕಷಾಯವನ್ನೂ ತೆಗೆದುಕೊಳ್ಳಲು ತ್ರ್ಯಾಹಿಕಜ್ವರಂ ತೀರ್ಗುಂ. ೯

ಇಂಗಳದಹಣ್ಣು, ಮುಳ್ಳುಸೇವಂತಿಗೇಬೇರು, ಮುಡುವಾಗಲಗೆಡ್ಡೆ, ಜೀರಿಗೆ, ಗೌಳ, ರುದ್ರಾಕ್ಷಿ, ಬಿಲ್ವಪತ್ರೆಕಾಯಿಯ ತಿರುಳು ಇವುಗಳನ್ನೆಲ್ಲಾ ಕಷಾಯವಿಟ್ಟು ಸೇವಿಸಲು ಎಂಥ ದೋಷಜ್ವರವಾದರುಂ ಕೆಡುಗುಂ. ೧೦

ಕೋಲುಮುರುಕನಚಕ್ಕೆ, ಕಹಿಪಡವಲ, ಯಷ್ಟಿಮಧುಕ, ತಾರೇಕಾಯಿ, ನೆಲ್ಲೀಚೆಟ್ಟು, ಅಳಲೇಕಾಯಿ, ಚೆಂಗಲಕೋಷ್ಟ, ಭದ್ರಮುಸ್ತೆ, ಹಿಪ್ಪಲಿ, ಹೆದ್ದುರು ಚನಬೇರು, ಪರ್ಪಾಟಕ, ಬೇವಿನಒಳನಾರು, ನರುವಲದಬೇರು, ಕಕ್ಕೇಚಕ್ಕೆ, ಶುಂಠಿ, ಮೆಣಸು, ಹಿಪ್ಪೇಹೂವು, ಮುಡಿವಾಳ, ಚಿಲಿಕೀರೆ(ಸಹಮೂಲ) ಇವುಗಳನ್ನು ಸಮಭಾಗ ಕಷಾಯವಿಟ್ಟು ಸೇವಿಸಲು ವಿಷಮಜ್ವರಂ ಗುಣಮಕ್ಕುಂ. ೧೧

*ಉರಿಮವೇಳ್ಳು, ಚಿತ್ರಮೂಲ, ಬಿಲ್ವಪತ್ರೆಕಾಯಿ, ಎಸಗದಬೇರು, ಲೊಕ್ಕೀ ಸೊಪ್ಪು, ಹೊನ್ನೇಹೂವು, ನೆಲಹೊನ್ನೆ, ಶುಂಠಿ, ಇವಂ ಕಷಾಯವಿಟ್ಟು ಕೊಡಲು ದೋಷಜ್ವರಂ ಗುಣಮಕ್ಕುಂ. ೧೨

ನೆಲಬೇವು, ಪರ್ಪಾಟಕ, ಚವ್ಯ, ದಾಸಾಳದಹೂ, ಚಿತ್ರಮೂಲ, ತಗ್ಗೀ ಬೇರು, ತುರುಚನಬೇರು, ಇವಂ ಸಮಾನ ಕಷಾಯವನ್ನು ಮಾಡಿಕೊಡಲು ದೋಷ ಜ್ವರ ಶಮನವಾಗುವುದು. ೧೩

ಕಹಿಪಡವಲ, ಎಸಗದಬೇರು, ನೆಲಗುಳ್ಳ, ಹೆಗ್ಗುಳ್ಳ, ಬೂದಿಗುಂಬಳಬೇರು, ಹಂಸಪಾದೀಬೇರು, ಬಜೆ, ಶುಂಠಿ ಇವಂ ಕಷಾಯಂಗೈದು, ಸೇವಿಸೆ ದೋಷ ಜ್ವರಂ ಗುಣಮಕ್ಕುಂ. ೧೪

---

ಆದಿತ್ಯಭಕ್ತನಬೇರು, ಬದಿರಸೊಪ್ಪು, ಶುಂಠಿ, ಭದ್ರಮುಸ್ತೆ ಇವಂ ಕಷಾಯವಿಕ್ಕಿ ಕೊಡಲು ದೋಷಜ್ವರ ಗುಣಮಕ್ಕುಂ. ೧೫

ರೋಳಿಸರದ ತರಗು, ಕೊತ್ತುಂಬರಿ, ಅಳಿಲೇಕಾಯಿ, ಕಕ್ಕೇತೊಕ್ಕು ಇವುಗಳನ್ನು ಪ್ರತ್ಯೇಕ ಗ ೩ ತೂಕವಂ ಬಳ್ಳ ನೀರಿನಲ್ಲಿ ಅಷ್ಟಾವಶೇಷ ಕಷಾಯಂಮಾಡಿ, ಶೋಧಿಸಿ, ಸಕ್ಕರೆವೆರಸಿ ತೆಗೆದುಕೊಳ್ಳಲು ದೋಷಜ್ವರ ಪರಿಹರವಹುದು. ೧೬

ಚಿಟ್ಟಮುಟ್ಟಿಬೇರು, ಪಿರಾಮುಟ್ಟಿವೇರು, * ಜಿಬಲಕವೇರು, ಕೋಲಹೊನ್ನ, ನೇಲಹೊನ್ನ, ಮೂರೆಡುವೇಳ್ಳು, ಇವಿ ಸಮಾಂಶಂ ಕಷಾಯಂಬೆಟ್ಟಿ ಈಯುನು ದೋಷಜ್ವರಾಲು ಮಾನುನು. ೧೭

ತುಂಗಮುಸ್ತಲು, ಪರ್ಪಾಟಕಂ, ಶುಂಠಿ, ತಿಪ್ಪತೀಗ, ಶೀಟಕಸಿಂಧವೇಳ್ಳು, ಕಟುಕರೋಹಿಣಿ,ಪಿಪ್ಪಳ್ಳು, ಮಿರಿಯಾಲು, ಕರಕತಾಂಧ್ರಿ, ಉಸುರಿಕೇಲು. ಕೋಡೀಶವಿತ್ತುಲು, ರಾಸ್ನ, ಜೇಶಿಪೊಳ್ಳು, ವಟ್ಟಿವೇಳ್ಳು, ಕುರಿವೇಳ್ಳು ಇವಿ ಸಮಾಂಶಂ ಕಷಾಯಂ ಬೆಟ್ಟಿ ಇಸ್ತೆ ದೋಷಜ್ವರಂ ಮಾನುನು. ೧೮

## ವಿಷಮಶೀತಜ್ವರಕ್ಕೆ.

ಚಿತ್ರಮೂಲ, ಕಳ್ಳಂಗಡಲೆ, ಬಿಳುಗಾರ, ಈಶ್ವರೀಬೇರು, ಶುಂಠಿ, ದುಮ್ಮರಾಸ್ನ, ಹಾಲೇಬೇರು, ತುಲಸೀಬೇರು, ಇವು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ವಿಷಮಶೀತಜ್ವರ ಗುಣಮಕ್ಕುಂ. ೧೯

ದುಮ್ಮರಾಸ್ನ, ನೀಲೀಬೇರು, ಲೊಕ್ಕೀಸೊಪ್ಪು, ಕಳ್ಳಂಗಡಲೇಬೇರು, ಬೋಳಗಡಲೆ, ನಾಗಮುತ್ತು, ಪುಲಂಗದಬೇರು ಹೊನ್ನೆಹೂವು, ನೆಲಹೊನ್ನೆ ಹೂವು, ಶುಂಠಿ, ಬಜೆ, ಎಲುವನಸಂದೀಬೇರು, ಇವುಗಳನ್ನು ಸಮನಾಗಿ ಕಷಾಯವಿಟ್ಟು ಕೊಡಲು ವಿಷಮಶೀತಜ್ವರ ಗುಣಮಕ್ಕುಂ. ೨೦

## ರಕ್ತಗತಜ್ವರಕ್ಕೆ.

ತಾವರೆ ಎಲೆ, ರಂಜಿಕೆ, ಹಿರೇಮದ್ದಿನಗೆಡ್ಡೆ, ಚಿತ್ರಮೂಲ, ಶುಂಠಿ, ಬಜೆ, ಇವಂ ಸಮಭಾಗ ಕಷಾಯವಿಕ್ಕಿ ಸೇವಿಸೆ ರಕ್ತಗತಜ್ವರ ಗುಣವಹುದು. ೨೧

## ತ್ವಗ್ಗತಜ್ವರಕ್ಕೆ

ಕಳ್ಳಂಗಡಲೆ, ಬೋಳಗಡಲೆ, ನಾಗಮುತ್ತು, ಪುಲಂಗದಬೇರು, ಮಜ್ಜಿಗೆಡ್ಡೆ, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಶುಂಠಿ, ಎಲುವನಸಂದೀಬೇರು ಇವಂ ಸಮಾಂಶ ಕಷಾಯವಿಕ್ಕಿ ಸೇವಿಸಲು ತ್ವಗ್ಗತಜ್ವರ ಗುಣಮಕ್ಕುಂ. ೨೨

## ರಾತ್ರಿಯಲ್ಲಿ ಬಹ ಜ್ವರಕ್ಕೆ

ವಿಷ್ಣುಕ್ರಾಂತಿ, ಶುಂಠಿ, ಎಲುವನಸಂದಿದೇರು, ಕಳ್ಳಂಗಡಲೆಬೇರು, ದೋಳೆಗಡಲೆ, ನಾಗಮುತ್ತು, ಪುಲಂಗದ ಬೇರು, ಕಟುಕರೋಹಿಣಿ ಇವಂ ಸಮಭಾಗ ಕಷಾಯವಿಟ್ಟು ಕೊಡಲು ರಾತ್ರಿಜ್ವರಂ ಮಾಣ್ಗುಂ. ೨೩

ಪಾಪಚೇಬೇರು, ಸುಗಂಧೀಬೇರು, ಶುಂಠಿ, ಸಹದೇವೀಬೇರು, ಹಾಲೇಬೇರು, ಕಳ್ಳಂಗಡಲೆಬೇರು, ಮೆಣಸು ಇವಂ ಸಮಾನವಾಗಿ ಕಷಾಯಂ ಕಾಯಿಸಿ ಕೊಡಲು ರಾತ್ರಿಜ್ವರ ಗುಣವಹುದು. ೨೪

ನೆಲಬೇವು, ಹಿಪ್ಪಲಿ, ಕಟುಕರೋಹಿಣಿ, ಮಜ್ಜಿಗೆಡ್ಡೆ, ನೆಲ್ಲೀಚಟ್ಟು, ಕಹಿಪಡವಲ, ಪಾಪಚೇಬೇರು, ಶುಂಠಿ ಇವೆಲ್ಲಾ ಸಮವಾಗಿ ಕಷಾಯವಿಟ್ಟು ಸೇವಿಸೆ ಸಂಜೆಹೊತ್ತಿನಲ್ಲಿ ಬಹ ಜ್ವರಂ ಮಾಣ್ಗುಂ. ೨೫

ರೊಕ್ಕೀಸೊಪ್ಪನ್ನು ಕಷಾಯವಿಕ್ಕಿ ಹಿಪ್ಪಲಿಯಿಂ ಪುಡಿಮಾಡಿಹಾಕಿ ತೆಗೆದುಕೊಳ್ಳಲು ರಾತ್ರಿಜ್ವರ ತೀರ್ಗುಂ. ೨೬

ಅಡಕೆ, ಚಿಟ್ಟನದೇರು, ಸೊಗದೇಬೇರು, ಶುಂಠಿ, ಸಹದೇವಿ (ಸಮೂಲ), ಹೆದ್ದುರುಚನದೇರು, ಮೆಣಸು ಇವಂ ಸಮತೂಕ ಕಷಾಯವಿಟ್ಟು ತೆಗೆದುಕೊಳ್ಳಲು ರಾತ್ರಿಜ್ವರಂ ನಾಶಮಕ್ಕುಂ. ೨೭

ವಿಷ್ಣುಕ್ರಾಂತಿ, ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಶುಂಠಿ, ಎಲುವನಸಂದೀಮೂಲ, ಕಳ್ಳಂಗಡಲೆ, ಬೋಳಗಡಲೆ, ಕಾರೇಬೇರು, ಕಟುಕರೋಹಿಣಿ ಇವಂ ಸಮಾನವಾಗಿ ಕಷಾಯವಿಕ್ಕಿ ಸೇವಿಸೆ ರಾತ್ರಿಜ್ವರಪರಿಹರವಹುದು. ೨೮

## ಮೂಲಿಕೆ

ಬೆಲ್ಲಗಣಿಕೇಬೇರಂ ಆದಿವಾರ ತಂದು ಅರ್ಚನೆಯಿಂಮಾಡಿ ಕಿವಿಯಲ್ಲಿ ಕಟ್ಟಲು ರಾತ್ರಿಯಲ್ಲಿ ಕಳ್ಳಹೊತ್ತಿನಲ್ಲಿ ಬಹ ಜ್ವರ ತೀರ್ಗುಂ. ೨೯

## ಅಸ್ಥಿಗತಜ್ವರಕ್ಕೆ

ಕಹಿಪಡವಲ, ಕಟುಕರೋಹಿಣಿ, ಭದ್ರಮುಸ್ತೆ, ಎಲುವನಸಂದೀಬೇರು, ಶುಂಠಿ, ಪಾಪಚೇಬೇರು, ಪರ್ಪಾಟಕ, ಇವೆಲ್ಲ ಸಮಭಾಗ ಕಷಾಯವಿಕ್ಕಿ ಸೇವಿಸೆ ಅಸ್ಥಿಗತಜ್ವರ ಗುಣವಕ್ಕುಂ. ೩೦

ಲವಂಗ, ಶುಂಠಿ, ಹಿಪ್ಪಲಿ, ಚಿತ್ರಮೂಲ, ಚಂಗಲಕೋಷ್ಠ, ಹಿಪ್ಪಲಿಮೂಲ, ಇವುಗಳನ್ನು ಕಷಾಯವಿಟ್ಟು ಹಿಪ್ಪಲಿ ಗ ೧ ತೂಕ, ತಾಮ್ರ ಭಸ್ಮ ಗ ೨ ತೂಕ ಸಹ ಪ್ರತಿಪಾಕವಿಕ್ಕಿ ಸೇವಿಸೆ ಅಸ್ಥಿಗತಜ್ವರ, ಮಂದಾಗ್ನಿ ಸಹ ಕೆಡುಗುಂ. ೩೧

## ತರುಣಜ್ವರಕ್ಕೆ

* ಶುಂಠಿ, ರಾಸ್ಮೆ, ಕಟುಕರೋಹಿಣಿ, ಕರಕ್ಕಾಯಿ, ಮುಲುಕವೇರು, ಕರಿವೇಪವೇರು, ಇವಿ ಪ್ರತ್ಯೇಕಂ ಗ. ೧೨ ಎತ್ತು ಕೂರ್ಚಿ ಅಷ್ಟಾವಶೇಷ ಕಷಾಯಂ ಬೆಟ್ಟಿ ಹಿಪ್ಪಲಿ ಪ್ರತಿಪಾಕಮಿಚೆ ಈಯನು ತರುಣಜ್ವರಂ ಮಾನುನು * ೩೨

## ಜೀರ್ಣಜ್ವರಕ್ಕೆ

ಗಂಟುಧಾರಂಗಿ, ಕೊಡನಾರೀಗೆಡ್ಡೆ, ಪರ್ಪಾಟಕ, ಹೆದ್ದುರುಚನಬೇರು ಅಡುಸೋಗೆಸೊಪ್ಪು, ಶುಂಠಿ, ನೆಲಬೇವು, ಚಂಗಲಕೋಷ್ಟ, ಹಿಪ್ಪಲಿ, ನೆಲಗುಳ್ಳ, ದೇವದಾರು, ಅಮರದವಳ್ಳಿ ಇವುಗಳನ್ನೆಲ್ಲಾ ಸಮಭಾಗವಾಗಿ ಕಷಾಯವಿಕ್ಕಿ ಕುಡಿಯೆ ಜೀರ್ಣಜ್ವರ, ಸಂತತಜ್ವರ, ದ್ವ್ಯಾಹಿಕತ್ರ್ಯಾಹಿಕಚಾತುರ್ಥಿಕಜ್ವರ ಮುಂತಾಗಿ ಪರಿಹಾರಮಕ್ಕುಂ. ೩೩

ಎಲಚೀಸೊಪ್ಪಿನ ಕಷಾಯವಂ ಮಾಡಿ ಸೇವಿಸೆ ಜೀರ್ಣಜ್ವರ ಪರಿಹಾರಮಕ್ಕುಂ. ೩೪

ಅಡುಸೋಗೆ, ಲಾಮಂಚ, ಮುಡಿವಾಳ, ಬೇವಿನ ಕಡ್ಡಿ, ನೈದಿಲೆಗೆಡ್ಡೆ, ಶ್ರೀಗಂಧ, ಸಹದೇವೀಬೇರು, ಭದ್ರಮುಸ್ತೆ, ಕುರಟಿಗೇಬೇರು, ಇಪ್ಪೇಹೂವು, ದ್ರಾಕ್ಷೆ, ಯಷ್ಟಿಮಧುಕ, ಅರಿಸಿನ, ಮರದರಿಸಿನ, ಚಂಗಲಕೋಷ್ಟ,ಕೆಂಪಿನ ಚಂಗಲ ಕೋಷ್ಟ, ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಬೆಲ್ಲವತ್ತದಬೇರು, ಅಗುಳುಶುಂಠಿ, ಕಹಿಪಡವಲ, ಖರ್ಜೂರ, ಹಿಪ್ಪಲೀಮೂಲ, ಸೊಗದೆಬೇರು, ಶುಂಠಿ, ಹಿಪ್ಪಲಿ, ಮೆಣಸು, ಅತಿಬಜೆ, ಅಷಾಡೀಬೇರು, ಪರ್ಪಾಟಕ, ಕಕ್ಕೇಬೇರು, ಬಜೆ, ತುರುಚನಬೇರು, ಅಮರದವಳ್ಳಿ, ತಾವರೇಗೆಣಸು, ದೇವದಾರು, ಕಳ್ಳಂಗಡಲೆ, ಇವುಗಳಿಷ್ಟನ್ನೂ ಹಾಕಿ ಕಷಾಯವಂ ಕಾಯಿಸಿ, ಜೇನುತುಪ್ಪವೆರಸಿ ಸೇವಿಸೆ ಜೀರ್ಣಜ್ವರ, ಸಂತತಜ್ವರ, ವಿಷಮಜ್ವರ, ಸನ್ನಿಪಾತಜ್ವರ ಸಹ ಪರಿಹಾರವಹುದು. ೩೫

## ಸಕಲಜ್ವರಕ್ಕೂ ಕೂಡಿ ಪೇಳಿದ ಕಷಾಯಂಗಳು

### ಮುಸ್ತಾದಿ ಕಷಾಯಂ.

ಕೊಡನಾರೀಗೆಡ್ಡೆ, ಅರಿಸಿನ, ತುಪ್ಪದೇವದಾರು, ಕುರಟಿಗೆ, ದ್ರಾಕ್ಷೀಹಣ್ಣು, ಇಪ್ಪೇಹೂವು, ಅಮರದವಳ್ಳಿ, ಪರ್ಪಾಟಕ, ಚಂಗಲಕೋಷ್ಟ, ನೆಲಬೇವು, ಕಹಿಪಡವಲ, ಶುಂಠಿ ಇವಿಷ್ಟನ್ನೂ ಸಮಭಾಗವಾಗಿ ಕಷಾಯವಿಟ್ಟು ಸೇವಿಸೆ ಸಕಲ ಜ್ವರಹರ. ೩೬

---

* ಇದು (ಕ) ಪ್ರತಿಯಲ್ಲಿಲ್ಲ

## ನಿಂಬಶೂಕಾದಿ ಕಷಾಯಂ

ಬೇವಿನ ಕಡ್ಡಿ, ಕಹಿಪಡವಲ, ಅಮರದವಳ್ಳಿ, ಶುಂಠಿ, ಕೊಡನಾರೀಗೆಡ್ಡೆ ಅಳಿಲೆಕಾಯಿ, ತಾರೇಕಾಯಿ, ನೆಲ್ಲೀಚಟ್ಟು ಇವುಗಳೆಲ್ಲವನ್ನೂ ಕಷಾಯವಂಕಾಯಿಸಿ ಜೇನುತುಪ್ಪ ಬೆರಸಿ ಕೊಡಲು ಸಕಲಜ್ವರಹರ. ೩೭

ನೆಲಬೇವು, ಹೊನ್ನೆಹೂವು, ಚವ್ಯ, ಮುಳ್ಳಕೊಗ್ಗೇಬೇರು, ಅಮರದವಳ್ಳಿ, ವಿಷ್ಣುಕ್ರಾಂತಿ, ಶುಂಠಿ ಇವುಗಳನ್ನು ಸಮಭಾಗ ಕಷಾಯವಿಕ್ಕಿ ಸೇವಿಸೆ ಸರ್ವ ಜ್ವರ ಗುಣಮಹುದು. ೩೮

ಬೇಲದಹಣ್ಣಿನಬೀಜ, ಶುಂಠಿ, ಅಡ್ಡಸರದಕಡ್ಡಿ, ಕಹಿಪಡವಲ, ಕೊತ್ತುಂಬರಿ, ಭದ್ರಮುಸ್ತೆ ಇವುಗಳನ್ನೆಲ್ಲಾ ಕಷಾಯವಿಟ್ಟು ಕೊಡಲು ಸಕಲಜ್ವರಂಕೆಡುಗುಂ. ೩೯

ನೆಲಗುಳ್ಳದಬೇರು, ಪರ್ಪಾಟಕ, ಕಟುಕರೋಹಿಣಿ, ಆಡುಸೋಗೆ, ಶುಂಠಿ, ಕೊತ್ತುಂಬರಿ ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಸರ್ವಜ್ವರಂ ಗುಣಮಕ್ಕುಂ. ೪೦

ಹೊಮ್ಮುಗುಳು, ವಿಷ್ಣುಕ್ರಾಂತಿ ಸಹ ಕಷಾಯವಿಕ್ಕಿ ಸೇರು ಕಷಾಯಕ್ಕೆ ಸ್ವಲ್ಪ ಉಪ್ಪು ಮತ್ತು ಮೆಣಸು ಇವುಗಳನ್ನು ಹಾಕಿ ಊಟಕ್ಕೆ ಮೊದಲೇ ಅರ್ಧ ಸೇರಿನಷ್ಟನ್ನು ತೆಗೆದುಕೊಂಡು ಉಳಿದ ಅರ್ಧಸೇರನ್ನು ಅನ್ನದ ಜೊತೆಯಲ್ಲಿ ತೆಗೆದುಕೊಳ್ಳಲು ಜ್ವರಂ ಮಾಣ್ಗುಂ ೪೧

ಶುಂಠಿ, ಜೀರಿಗೆ, ಹಿಪ್ಪಲಿ, ಕೊತ್ತುಂಬರಿ, ಕಟುಕರೋಹಿಣಿ, ಇವುಗಳು ಪ್ರತ್ಯೇಕ ಎರಡುತೂಕ, ದ್ರಾಕ್ಷಿಹಣ್ಣು ಎರಡುತೂಕ ಸಹ ಕಲ್ಕವನ್ನಾಗಲಿ ಶೀತಕಷಾಯವನ್ನಾಗಲಿ ಮಾಡಿ ಶರ್ಕರೆಗೂಡಿ ಕೊಡಲು ಸರ್ವಜ್ವರಂ ಗುಣಮಕ್ಕುಂ. ೪೨

ಆಲದ ಮುಗುಳು, ಅಮರದ ವಳ್ಳಿ, ಬೇವಿನ ಕಡ್ಡಿ, ಕಟುಕರೋಹಿಣಿ, ಅಳಿಲೇ ಕಾಯಿ, ತಾರೇಕಾಯಿ, ನೆಲ್ಲೀಚಟ್ಟು ಇವಂ ಸಮಾನಗೊಂಡು ಕಷಾಯವಂ ಕಾಯಿಸಿ ಕೊಡಲು ಸರ್ವಜ್ವರಂ ಗುಣಮಕ್ಕುಂ. ೪೩

ಕಟುಕರೋಹಿಣಿಯನ್ನೂ ಮತ್ತು ರಾಸ್ಮೆಯನ್ನೂ ಬಿಸಿನೀರಿನಿಂದ ಅರೆದ ಕಲ್ಕವನ್ನಾಗಲಿ ಅಥವಾ ಶೀತಕಷಾಯವನ್ನಾಗಲಿ ಮಾಡಿಕೊಡಲು ಸರ್ವಜ್ವರ ಗಳೂ ಪರಿಹಾರವಾಗುವುವು. ೪೪

ಅಳಿಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಶುಂಠಿ, ಹಿಪ್ಪಲಿ, ಮೆಣಸು, ಹಿಪ್ಪಲೀಮೂಲ, ಓಮು, ಚಿತ್ರಮೂಲದಬೇರು, ಬಜೆ, ಎಸಗದಬೇರು ಇವುಗಳನ್ನು ಸಮಭಾಗದಲ್ಲಿ ಕಷಾಯವಿಕ್ಕಿ ಸೇವಿಸಲು ಅಜೀರ್ಣಜ್ವರಂ ಮಾಣ್ಗುಂ. ೪೫

ನೆಲಬೇವು, ಹಿಪ್ಪಲಿ, ಕಟುಕರೋಹಿಣಿ, ಹಾಲುಕುರಟಿಗೆ, ನೆಲ್ಲೀಚಟ್ಟು, ಕಹಿಪಡವಲ,ಚವ್ಯ, ಶುಂಠಿ, ಶೀಟಕಸಂದೀಬೇರು, ಬಲ್ಲವತ್ತದಬೇರು ಇವುಗಳನ್ನು

ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಸದ್ಯದಲ್ಲಿ ಬರುವ ಜ್ವರಂ ಗುಣಮಕ್ಕುಂ. ೪೬

ಚಿತ್ರಮೂಲ, ದಳ್ಳುಳ್ಳಿ, ಪಾದರೀಬೇರು, ಕಹಿಪಡವಲ, ಬೇವಿನ ಎಲೆ, ಪರ್ಪಾಟಕ, ಚವ್ಯ, ಶುಂಠಿ ಇವುಗಳನ್ನು ಕಷಾಯ ಹಾಕಿ ಕೊಡಲು ಅಜೀರ್ಣಜ್ವರಂ ಗುಣಮಕ್ಕುಂ. ೪೭

ಅಳಲೇಕಾಯಿ, ನೆಲ್ಲೀಚಟ್ಟು, ಶುಂಠಿ, ಹಿಪ್ಪಲಿ, ಮೆಣಸು, ಹಿಪ್ಪಲೀಮೂಲ, ವಾದಕ್ಕಿ, ಚಿತ್ರಮೂಲ, ಕುಂಡಲಿ ಇವುಗಳನ್ನು ಸಮವಾಗಿ ಕಷಾಯಹಾಕಿ ಕೊಡಲು ಅಜೀರ್ಣಜ್ವರಂ ಮಾಣ್ಗುಂ. ೪೮

## ಸಂತತಜ್ವರಕ್ಕೆ ಕಷಾಯಗಳು.

ಅಮರದವಳ್ಳಿ, ಬೇವು, ಅಳಲೇಕಾಯಿ, ದ್ರಾಕ್ಷಹಣ್ಣು, ಕಹಿಪಡವಲ, ಕೊಡಸಿಗೇಬೀಜ ಸಹ ಸಮಭಾಗವಾಗಿ ಕಷಾಯವನ್ನು ಕಾಯಿಸಿ ಜೇನುತುಪ್ಪ ಮತ್ತು ಸಕ್ಕರೆ ಇವುಗಳನ್ನು ಬೆರಸಿ ಕುಡಿಯೆ ಸಂತತಜ್ವರಂ ಗುಣಮಕ್ಕುಂ. ೪೯

ಕಹಿದಸಲೇಬೇರು, ಕಟುಕರೋಹಿಣಿ, ಅಗುಳುಶುಂಠಿ ಇವುಗಳ ಕಷಾಯವನ್ನು ಕಾಯಿಸಿ ಸಕ್ಕರೆ ಜೇನುತುಪ್ಪ ಇವುಗಳನ್ನು ಕೂಡಿ ಸೇವಿಸಲು ಸಂತತಜ್ವರಹರಣಮಕ್ಕುಂ. ೫೦

ದೊಳಗಡಲೇಬೇರು, ಅಳಲೇಕಾಯಿ, ನೆಲ್ಲೀಚಟ್ಟು, ತಾರೇಕಾಯಿ, ಸುಗಂಧೀಬೇರು, ಶುಂಠಿ, ಇವುಗಳ ಕಷಾಯಮಾಡಿ ಕೊಡಲು ಸಂತತಜ್ವರ ಮತ್ತು ಏಕಾಹಿಕಾದಿ ಸಕಲಜ್ವರಗಳೂ ಗುಣವಾಗುವುವು. ೫೧

ಕೋಟಲಪಾಲವಿತ್ತಲು*, ಲಾಮಂಚ, ಮುಡಿವಾಳ, ಬೇವಿನಚಕ್ಕೆ, ಕರ್ಪೂರ, ಸಹದೇವಿ, ತಾವರೆದಂಟು, ಚಂಗಲಕೋಷ್ಟ, ಯಷ್ಟಿಮಧುಕ, ದ್ರಾಕ್ಷೀಹಣ್ಣು, ಮರದರಿಸಿನ, ಪುಲ್ಲಂಪುರುಚೀಬೇರು, ಅಗುಳುಶುಂಠಿ, ಕಹಿಪಡವಲ, ಖರ್ಜೂರ, ಗಂಧಿಗತಗರ, ಸೊಗದೇಬೇರು, ಶುಂಠಿ, ಹಿಪ್ಪಲಿ, ಮೆಣಸು, ಏಲಕ್ಕಿ, ಅಳಲೇಕಾಯಿ, ನೆಲ್ಲೀಚಟ್ಟು, ಪರ್ಪಾಟಕ, ಬಜೆಕರುಕು, ತೀಟಕಸಂದಿ, ಹೊಂಗೇಚಕ್ಕೆ, * ತಿಪ್ಪತೀಗ, ದೇವದಾರು, ಚಿಟ್ಟಾಮುಟ್ಟಿ ಇವುಗಳನ್ನು ಸಮಾಂಶವಾಗಿ ಕಷಾಯ ಹಾಕಿ ಕೊಡಲು ಸಂತತಜ್ವರಾದಿಯಾಗಿ ಸಕಲ ಜ್ವರಗಳೂ ನಿಲ್ಲುವುವು. ೫೨

## ದಿನಬಿಟ್ಟುದಿನ ಬರುವ ಜ್ವರಕ್ಕೆ ಕಷಾಯ.

ಕಹಿಪಡವಲಬೇರು, ದ್ರಾಕ್ಷೀಹಣ್ಣು, ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಅಡುಸೋಗೆ, ಇವಂ ಕಷಾಯವಿಕ್ಕಿ ಸೇವಿಸೆ ದ್ವ್ಯಾಹಿಕಜ್ವರಂ ಗುಣಮಕ್ಕುಂ. ೫೩

* ತೆಲುಗು.

ಕಹಿಪಡವಲ, ಭದ್ರಮುಸ್ತೆ, ಶುಂಠಿ, ಗಂಟುಭಾರಂಗಿ, ಪಾಪಟೇಬೇರು, ಅಮರದವಳ್ಳಿ, ಪರ್ಪಾಟಕ ಇವಂ ಸಮಭಾಗ ಕಷಾಯವಿಕ್ಕಿ ಸೇವಿಸೆ ದ್ವ್ಯಾಹಿಕ ಜ್ವರವು ಗುಣವಾಗುವುದು. ೩೪

## ತ್ರ್ಯಾಹಿಕಜ್ವರಕ್ಕೆ ಕಷಾಯ.

ಶ್ರೀಗಂಧ, ಲಾಮಂಚ, ಕೊತ್ತುಂಬರಿ, ಭದ್ರಮುಸ್ತೆ, ಅಮರದವಳ್ಳಿ, ಶುಂಠಿ ಇವುಗಳ ಕಷಾಯವಿಟ್ಟು ಸಕ್ಕರೆ ಜೇನುತುಪ್ಪವೆರಸಿ ಕುಡಿಯಲು ತ್ರ್ಯಾಹಿಕ ಜ್ವರಂ ಗುಣಮಕ್ಕುಂ. ೩೫

ಭೂತುಳಸಿ, ದ್ವೀಪದ್ರಾಕ್ಷಿ, ಶುಂಠಿ, ಗಂಟುಭಾರಂಗಿ, ಪಾಪಟೇಬೇರು, ಸಹದೇವಿಬೇರು, ಕಳ್ಳಂಗಡಲೇಬೇರು, ಇವುಗಳನ್ನು ಸಮಾನಗೊಂಡು ಕಷಾಯ ವಿಕ್ಕಿ ಸೇವಿಸೆ ತ್ರ್ಯಾಹಿಕಜ್ವರ ಪರಿಹಾರವಾಗುವುದು. ೩೬

## ತ್ರಿದೋಷಜ್ವರಕ್ಕೆ ಕಷಾಯಗಳು

ನೆಲಗುಳ್ಳ, ಅಮರದವಳ್ಳಿ, ಶುಂಠಿ, ಚಂಗಲಕೋಷ್ಟ ಇವುಗಳ ಕಷಾಯದಿಂದ ತ್ರಿದೋಷಜ್ವರ, ಅರೋಚಕಜ್ವರ, ಶ್ವಾಸ, ಖಾಸ ಸಹ ಗುಣಮಕ್ಕುಂ. ೩೭

ದ್ರಾಕ್ಷೀಹಣ್ಣು, ಅಮರದವಳ್ಳಿ, ಪರ್ಪಾಟಕ, ಭದ್ರಮುಸ್ತ, ಕಟುಕರೋಹಿಣಿ ಇವುಗಳ ಕಷಾಯವನ್ನು ಕಾಯಿಸಿ ಬಸಿದುಕೊಂಡು ಕಕ್ಕೇಹಣ್ಣಿನಲ್ಲ ಅನುಪಾನವಿಕ್ಕಿ ಕೊಡಲು ತ್ರಿದೋಷಜ್ವರ, ದಾಹಜ್ವರ, ಶ್ವಾಸ, ದ್ವಂದ್ವಜ್ವರ, ಮದ, ಮೂರ್ಛೆ ಸಹ ಮಾಣ್ಗುಂ. ೩೮

ಅಳಲೇಕಾಯಿ, ಕಳವಿಗೇಬೇರು, ತಿಗಡೆ, ಅಡುಸೋಗೆ, ಹಿಪ್ಪಲೀಮೂಲ, ಹೆರಳೇಬೇರು, ಇವುಗಳನ್ನು ಸಮವಾಗಿ ಕಷಾಯವಿಕ್ಕಿ ಕೊಡಲು ತ್ರಿದೋಷಜ್ವರಂ ಮಾಣ್ಗುಂ. ೩೯

ಅರಿಸಿನ, ಮರದರಿಸಿನ, ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ಶುಂಠಿ, ಭದ್ರಮುಸ್ತೆ, ದೇವದಾರು, ಕಹಿಪಡವಲ ಇವುಗಳನ್ನು ಸಮಾಂಶವಾಗಿ ಕಷಾಯವಿಟ್ಟು ಸೇವಿಸಲು ತ್ರಿದೋಷಜ್ವರಂ ಮಾಣ್ಗುಂ. ೬೦

## ತ್ರಿದೋಷ ಜ್ವರಕ್ಕೆ ಕಷಾಯಗಳು.

ನೆಲಗುಳ್ಳ, ಅಮರದವಳ್ಳಿ, ಶುಂಠಿ, ಪುಷ್ಕರಮೂಲ ಇವಂ ಸಮತೂಕ ಕಷಾಯವಿಕ್ಕಿ ಸೇವಿಸೆ ತ್ರಿದೋಷಜ್ವರ, ಶ್ವಾಸ, ಖಾಸ, ವಿಷೂಚಿ, ವಾತ, ಶೂಲೆ ಸಹ ಮಾಣ್ಗುಂ. ೬೧

ಅಮರದವಳ್ಳಿ, ಶುಂಠಿ, ಭದ್ರಮುಸ್ತೆ, ನೆಲಬೇವು, ಎಲುವನಸಂಧಿ, ಕಳ್ಳಂಗಡಲೆ, ಹೊನ್ನೆಹೂವು, ಅಳಲೇಕಾಯಿ ಇವಂ ಸಮಭಾಗ ಕಷಾಯವಿಕ್ಕಿ ಕೊಡಲು ತ್ರಿದೋಷಜ್ವರಂ ಗುಣಮಕ್ಕುಂ. ೬೨

ಶುಂಠಿ, ಹಿಪ್ಪಲಿ, ಮೆಣಸು, ಹಿಪ್ಪಲೀಮೂಲ, ವಾದಕ್ಕಿ, ಬಜೆ, ಚಿತ್ರಮೂಲ, ಎಸಗದಬೇರು ಇವಂ ಸಮವಾಗಿ ಕಷಾಯವಿಟ್ಟು ಸೇವಿಸೆ ದೋಷಜ್ವರ, ಅಜೀರ್ಣಜ್ವರ ಸಹ ಮಾಣ್ಗುಂ. ೬೩

ಒಂದುಮಾನ ನೀರಿನಲ್ಲಿ ಒಂದುಮಾನ ಹಸುವಿನ ಹಾಲನ್ನು ಕೂಡಿಸಿ ನೆಲಾವರಿಕೆಯೆಲೆ ಹನ್ನೆರಡನ್ನು ಅರೆದು ಕದಡಿ, ಕಷಾಯದಂತೆ ಕಾಯಿಸಿ, ಹಿಪ್ಪಲಿ ಪ್ರತಿಪಾಕವಿಕ್ಕಿ ತೆಗೆದುಕೊಳ್ಳಲು ಅಮುಚರಿ ಸರ್ವಜ್ವರಂ ಗುಣಮಕ್ಕುಂ. ೬೪

ಶವಕ್ಷೀರ, ಸಕ್ಕರೆ, ದ್ರಾಕ್ಷೆ, ಯಷ್ಟಿಮಧುಕ ಸಹ ಸಮಾಂಶವಾಗಿ ಅರೆದು ಜೇನುತುಪ್ಪಬೆರಸಿ ತಣ್ಣೀರಂ ಕುಡಿಯೆ ಅಷ್ಟಜ್ವರ, ರಕ್ತಮೂತ್ರ, ಪೈತ್ಯ ಸಹ ಮಾಣ್ಗುಂ. ೬೫

## ಷಡಂಗಾದಿ ಕಷಾಯ.

ಭದ್ರಮುಸ್ತೆ, ಪರ್ಪಾಟಕ, ಲಾಮಂಚ, ಶ್ರೀಗಂಧ, ಮುಡಿವಾಳ, ಶುಂಠಿ ಇವುಗಳನ್ನು ಒಂದು ಉಕ್ಕು ಬರುವಹಾಗೆ ಕಾಯಿಸಿ ಆರಿಸಿ ಕುಡಿಯೆ ತ್ರಿದೋಷಜ್ವರ, ಸರ್ವಜ್ವರ, ವಾಂತಿ ಜ್ವರ ಸಹ ಮಾಣ್ಗುಂ. ೬೬.

## ಅಮೃತಾದಿ ಕಷಾಯ.

ಹಸುವಿನತುಪ್ಪ, ಅಮರದವಳ್ಳಿ, ಆಡುಸೋಗೆ, ನೆಲಗುಳ್ಳ, ಇವಂ ಕಷಾಯವಿಟ್ಟು ಕುಡಿಯೆ ಸಮಸ್ತಜ್ವರ, ಕೆಮ್ಮು, ಶೂಲೆ, ಶ್ವಾಸ, ಮಂದಾಗ್ನಿ ಸಹ ಗುಣಮಕ್ಕುಂ. ೬೭

## ಮರುಕಳಿಸಿದ ಜ್ವರಕ್ಕೆ ಕಷಾಯ.

ಬೇವಿನ ಸೊಪ್ಪಿನ ಕಡ್ಡಿ, ಭದ್ರಮುಸ್ತೆ, ಅಮರದವಳ್ಳಿ, ಮುಡಿವಾಳ, ಪರ್ಪಾಟಕ ಇವುಗಳನ್ನು ಕಷಾಯಕಾಯಿಸಿ ಕುಡಿಯಲು ಮರುಕಳಿಸಿದ ಜ್ವರಂ ಮಾಣ್ಗುಂ ೬೮

ಶುಂಠಿ, ಕೊತ್ತುಂಬರಿ, ಕಳ್ಳಂಗಡಲೆಬೇರು, ಅಗುಳುಶುಂಠಿ, ಲಾಮಂಚ, ಭದ್ರಮುಸ್ತೆ ಸಹ ಕಷಾಯಕಾಯಿಸಿ ಕುಡಿಯಲು ಮರುಕಳಿಸಿದ ಜ್ವರಂ ಗುಣಮಕ್ಕುಂ. ೬೯

ನೆಲಬೇವು, ಕಟುಕರೋಹಿಣಿ, ಬೇವಿನ ಸೊಪ್ಪಿನ ಕಡ್ಡಿ, ಭದ್ರಮುಸ್ತೆ, ಪರ್ಪಾಟಕ, ಅಮರದವಳ್ಳಿ, ಸಹ ಕಷಾಯವಿಟ್ಟು ಕುಡಿಯೆ ಮರುಕಳಿಸಿದ ಜ್ವರಂ ಮಾಣ್ಗುಂ. ೭೦

## ಮಾಹೇಶ್ವರ ಜ್ವರಕ್ಕೆ.

ವಿಷ್ಣುಕ್ರಾಂತಿ (ಸಮೂಲ), ಕೊತ್ತುಂಬರಿ, ಇವು ಪ್ರತ್ಯೇಕ ಒಂದುತೂಕ ಶುಂಠಿ ಒಂದುತೂಕ ಇವಂ ಎಳನೀರಲ್ಲಿ ಕಷಾಯಹಾಕಿ ಸಕ್ಕರೆ ಪ್ರತಿಪಾಕವಿಕ್ಕಿ ಕೊಡಲು ಮಾಹೇಶ್ವರಜ್ವರವು ಬಿಡುವುದು. ೭೧

ವಿಷ್ಣುಕ್ರಾಂತಿಯನ್ನು (ಸಮೂಲ) ಅರೆದು ಉಂಡೆಮಾಡಿ ಕೆಂಡದಮೇಲಟ್ಟು ರಸವನ್ನು ತೆಗೆದುಕೊಂಡು ಶುಂಠಿ ಮೂರುತೂಕ, ಕೊತ್ತುಂಬರಿ ಮೂರು ವರಹಾ ತೂಕ ಸಹ ಎಳನೀರಲ್ಲಿ ಕಷಾಯಂ ಹಾಕಿ ಸಕ್ಕರೆ ಪ್ರತಿಪಾಕವಿಕ್ಕಿ ಕೊಡಲು ಮಹೇಶ್ವರ ಜ್ವರವು ಬಿಡುವುದು. ೭೨

## ಚೂರ್ಣಗಳು.

ಆದಿವಾರದ ದಿವಸ ನೆಲತೆಂಗನ್ನು ತಂದು ಕತ್ತರಿಸಿ ನೆಳಲಲ್ಲಿ ಒಣಗಿಸಿ ಚೂರ್ಣಂಗೈದು ಜೇನುತುಪ್ಪದಲ್ಲಿ ಲೇಹ್ಯದಹಾಗೆ ಕಲಸಿ ಕಾಲುಮಂಡಲ ತೆಗೆದು ಕೊಳ್ಳಲು ಸಕಲ ಜ್ವರಹರವು. ೭೩

ಇದನ್ನೇ ಗೋಮೂತ್ರದಿಂದೇಳುದಿನ ತೆಗೆದುಕೊಳ್ಳಲು ನಿತ್ಯಜ್ವರಂ ಮಾಣ್ಗುಂ. ೭೪

ಇದನ್ನೇ ಮೂರುದಿವಸ ಸೇವಿಸೆ ಹೊಟ್ಟೆನೋವು ಪರಿಹಾರವಾಗುವುದು ; ತಣ್ಣೀರಿನಲ್ಲಿ ಕೊಡಲು ತ್ರ್ಯಾಹಿಕಜ್ವರಂ ಕೆಡುಗುಂ ; ಹಾಲಿನಲ್ಲಿ ಕೊಳ್ಳಲು ಛರ್ದಿ ನಿಲ್ಗುಂ ; ಎಳನೀರಲ್ಲಿ ತೆಗೆದುಕೊಳ್ಳಲು ಶಿರೋಭ್ರಮೆ ತೀರ್ಗುಂ ; ಒಳ್ಳೆಣ್ಣೆಯಲ್ಲಿ ಮೂರುದಿವಸ ಸೇವಿಸಲು ಶ್ಲೇಷ್ಮಪರಿಹಾರವಾಗುವುದು. ಈ ಚೂರ್ಣಕ್ಕೆ ಸೂರಣದ ಗೆಡ್ಡೆಯಚೂರ್ಣವಂ ಕೂಡಿಸಿ ಹನ್ನೆರಡುದಿವಸ ಸೇವಿಸಿದಲ್ಲಿ ಮೂಲವ್ಯಾಧಿಯು ಪರಿ ಹಾರವಾಗುವುದು. ೭೫

ಶುಂಠಿರಸವನ್ನು ಲೊಕ್ಕಿ ಸೊಪ್ಪಿನ ರಸದಲ್ಲಿ ಏಳುದಿನ ತೆಗೆದುಕೊಳ್ಳಲು ಮುಖ ರೋಗಂ ಮಾಣ್ಗುಂ. ೭೬

## ಘೃತಗಳು—ಸಿದ್ಧಘೃತ.

ಕೊಡಸಿಗೆಬೀಜ, ಲಾಮಂಚ, ಮೂರೆಲೆಹೊನ್ನೆ, ಕಟುಕರೋಹಿಣಿ, ಶ್ರೀಗಂಧ, ಅತಿಬಜೆ, ಭದ್ರಮುಸ್ತೆ, ಕಹಿ ದಸಲೆಬೇರು, ಬೆಲ್ಲವತ್ತದಬೇರು, ದ್ರಾಕ್ಷೀಹಣ್ಣು, ಕಿರು

ನೆಲ್ಲಿ, ಹಿಪ್ಪಲಿ, ನೆಲಗುಳ್ಳ ಸಹ ಚೂರ್ಣಂಗೆಯ್ದು ತುಪ್ಪದಲ್ಲಿಹಾಕಿ ಅಟ್ಟು, ಆ ಘೃತವನ್ನು ಸೇವಿಸಲು ಸಕಲಜ್ವರ, ಕ್ಷಯವ್ಯಾಧಿ, ಖಾಸರೋಗ, ಸಂತಾಪ, ಹಲೀಮಕ, ತಲೆಬೇನೆ ಸಹ ಮಾಣ್ಗುಂ. ೧

## ಹಿಪ್ಪಲ್ಯಾದಿ ಘೃತ.

ಹಿಪ್ಪಲಿ, ಕೊಡಸಿಗೆ ಬೀಜ, ಕಟುಕರೋಹಿಣಿ, ಸೊಗದೆಬೇರು, ನೆಲ್ಲೀಚಟ್ಟು, ಕಿರುನೆಲ್ಲಿ, ಬೆಲ್ಲವತ್ತದಬೇರು, ನೆಲಗುಳ್ಳ, ಬೇವಿನ ಒಳನಾರು, ಶ್ರೀಗಂಧ, ಜಾಜೀಬೇರು, ದ್ರಾಕ್ಷೀಹಣ್ಣು, ಒಂದೆಲೆ ಹೊನ್ನೆ, ಅತಿಬಜೆ, ಮೂರೆಲೆ ಹೊನ್ನೆ, ಇವುಗಳನ್ನು ಪ್ರತ್ಯೇಕ ಎರಡುತೂಕ ಚೂರ್ಣಮಾಡಿ ಒಂದು ಕೊಳಗನೀರಿನಲ್ಲಿ ಹಾಕಿ ಹಸುವಿನ ತುಪ್ಪ ಒಂದು ಬಳ್ಳ, ಹಸುವಿನ ಹಾಲು ಒಂದು ಬಳ್ಳ, ಇವುಗಳನ್ನು ಹನಿಸಿ, ಚೆನ್ನಾಗಿಕದಡಿ ತುಪ್ಪ ಉಳಿಯುವಂತೆ ಕಾಯಿಸಿ, ಇಳುಹಿಕೊಂಡು ಪ್ರಾತಃಕಾಲದಲ್ಲಿ ದೇಹಾನುಗುಣವಾಗಿ ಸೇವಿಸಲು ಉಗ್ರವಾದ ಜ್ವರ, ಕೈಕಾಲು ಪುಡುಹು, ತಾಪ, ಪಾರ್ಶ್ವಶೂರೆ, ವಮನ, ಕ್ಷಯರೋಗ ಇವುಗಳ ಪರಿಹಾರವಾಗುದು. ೨

## ವಿಳಂಗಾದಿ ಘೃತ.

ವಾಯುವಿಳಂಗ, ಸಂವತ್ಸರಲವಣ, ಚವ್ಯ, ಅಗುಳುಶುಂಠಿ, ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲ, ಸೈಂಧವಲವಣ, ಯವಕ್ಷಾರ, ಇವು ಪ್ರತ್ಯೇಕ ಎರಡು ತೂಕವನ್ನು ಚೂರ್ಣ ಮಾಡಿ ಒಂದು ಕೊಳಗನೀರಿನಲ್ಲಿ ಕದಡಿ ಒಂದುಬಳ್ಳ ಹಸುವಿನತುಪ್ಪ, ಒಂದುಬಳ್ಳ ಹಾಲು ಸಹ ಹನಿಸಿ ತುಪ್ಪನಿಲ್ಲುವಂತೆ ಅಟ್ಟು ಇಳುಹಿಕೊಂಡು ಸೇವಿಸಲು, ಜೀರ್ಣಜ್ವರ, ಶ್ಲೇಷ್ಮಜ್ವರ, ಸಕಲ ಜ್ವರಂ ಮಾಣ್ಗುಂ. ೩

## ಅಷ್ಟಮಂಗಳಘೃತ

ಕಹಿಪಡವಲ, ಸೊಗದೇಬೇರು, ಭದ್ರಮುಸ್ತೆ, ಯಷ್ಟಿಮಧುಕ, ಕಟುಕರೋಹಿಣಿ, ಲಾಮಂಚ, ಶ್ರೀಗಂಧ ಇವು ಪ್ರತ್ಯೇಕವಾಗಿ ನಾಲ್ಕು ವರಹಾತೂಕವನ್ನು ಚೂರ್ಣಮಾಡಿ ಒಂದುಕೊಳಗ ನೀರಿನಲ್ಲಿ ಕದಡಿ, ಬಳ್ಳತುಪ್ಪ, ಬಳ್ಳಹಾಲು ಸಹ ಹನಿಸಿ ತುಪ್ಪ ಇಳಿಯುವ ಪರಿಯಂತ ಪಾಕಮಾಡಿ ಇಳುಹಿಕೊಂಡು ಉದಯದಲ್ಲಿ ಸೇವಿಸಲು, ಸಕಲಜ್ವರ, ಬ್ರಹ್ಮರಾಕ್ಷಸ ಮೊದಲಾದುವು ಪರಿಹಾರವಾಗುವುವು ; ಮತ್ತು ಶರೀರಪುಷ್ಟಿಯಾಗುವುದು. ೪

## ಷಟ್ಫಲಘೃತ

ಹಿಪ್ಪಲಿ, ಹಿಪ್ಪಲೀಮೂಲ, ಚವ್ಯ, ಚಿತ್ರಮೂಲ, ಶುಂಠಿ, ಯವಕ್ಷಾರ ಇವು

ಪ್ರತ್ಯೇಕ ಒಂದು ಹಲ ಪ್ರಕಾರ ಚೂರ್ಣವನ್ನು ಮಾಡಿ, ಒಂದು ಕೊಳಗ ನೀರಿನಲ್ಲಿ ಹಾಕಿ ಬಳ್ಳತುಪ್ಪ, ಬಳ್ಳಹಾಲು ಸಹ ಹನಿಸಿ, ತುಪ್ಪನಿಲ್ಲುವಂತೆ ಅಟ್ಟು, ಇಳುಹಿಕೊಂಡು ಪ್ರಾತಃಕಾಲದಲ್ಲಿ ಸೇವಿಸಲು ಗುಲ್ಮಜ್ವರ, ಪ್ಲೀಹ, ಮಹೋದರ, ಗ್ರಹಣಿ, ಪಾಂಡು ಶ್ವಾಸ, ಖಾಸ, ಅಗ್ನಿಮಾಂದ್ಯ, ಮೂಲವ್ಯಾಧಿ, ಶೋಭೆ, ಊರ್ಧ್ವಮುಖವಾದ ವಾಯುಸಹ ಪರಿಹೃತವಕ್ಕುಂ. ೫

## ವಾಸಾಘೃತ

ಆಡುಸೋಗೆ, ಅಮರದವಳ್ಳಿ, ತಾರೇಕಾಯಿ, ನೆಲ್ಲೀಚಟ್ಟು, ಗಂಡುತುರುಚೆ, ಇವು ಪ್ರತ್ಯೇಕ ಮೂರು ಪಲಂಗಳನ್ನು ಸೇರಿಸಿ ಚೆನ್ನಾಗಿ ಅರೆದು ಒಂದುಕೊಳಗ ನೀರಿನಲ್ಲಿ ಹಾಕಿ ಚೆನ್ನಾಗಿ ಕಾಯಿಸಿ ಇಳುಹಿಕೊಂಡು ಅದರಲ್ಲಿ ಹಾಕತಕ್ಕ ಕಲ್ಕ ದ್ರವ್ಯಗಳು—ಹಿಪ್ಪಲಿ, ಭದ್ರಮುಸ್ತೆ, ದ್ರಾಕ್ಷಿ, ಶ್ರೀಗಂಧ, ಲೋಳಿಸರ, ಶುಂಠಿ, ಇವುಗಳನ್ನು ಅರೆದು ಅರ್ಧಪಾವು ತುಪ್ಪಸೇರಿಸಿ ಚಿಕ್ಕಣಪಾಕದಲ್ಲಿ ತೆಗೆದು ಶೋಧಿಸಿಕೊಂಡು ಬಂದ ಘೃತವನ್ನು ಸೇವಿಸಲು ಜೀರ್ಣಜ್ವರಂ ಗುಣಮಕ್ಕುಂ. ೬

ಒಂದುಕೊಳಗ ಶುದ್ಧೋದಕದಲ್ಲಿ ಒಂದುಬಳ್ಳ ತುಪ್ಪವಂ ಹನಿಸಿ, ತುಪ್ಪ ಉಳಿಯುವ ತನಕ ಅಟ್ಟು ಹದದಲ್ಲಿಳುಹಿಕೊಂಡು ಸೇವಿಸಲು ಅಸ್ಥಿಗತಜ್ವರಂ ಮಾಣ್ಗುಂ. ೭

## ರಸಾಯನಗಳು

### ಪಂಚಸಾರಪ್ರಯೋಗ

ಹಿಪ್ಪಲಿಯನ್ನೂ ತುಪ್ಪವನ್ನೂ ಸಮಾನವಾಗಿಕೂಡಿ ತುಪ್ಪಕ್ಕೆ ಇಮ್ಮಡಿಯಾಗಿ ಸಕ್ಕರೆ, ಸಕ್ಕರೆಗಿಮ್ಮಡಿಯಾಗಿ ಜೇನುತುಪ್ಪ, ಇದಕ್ಕಿಮ್ಮಡಿಯಾಗಿ ಹಸುವಿನಹಾಲು ಇವಿಷ್ಟನ್ನೂ ಹನಿಸಿ ಸೌಟಿನಲ್ಲಿ ತೊಳಸಿ ಪಾನವಮಾಡಿಸಲು ಅಮೃತಕ್ಕೆ ಸಮ ನಾಗಿ ಸರ್ವಜ್ವರ, ಕೆಮ್ಮು, ಎದೇನೋವು, ವಿಷಮಜ್ವರ ಮುಂತಾಗಿ ಪರಿಹಾರ ವಾಗುವುವು. ೧

## ತೈಲಗಳು

### ಅಶ್ವಗಂಧಿ ತೈಲ

ಹಿರೇಮದ್ದಿನಬೇರು, ಕಳ್ಳಂಗಡಲೇಬೇರು, ಅರಗು ಇವು ಪ್ರತ್ಯೇಕ ಎರಡು ಬಳ್ಳವನ್ನು ನಾಲ್ಕುಕೊಳಗ ನೀರಿನಲ್ಲಿ ಹಾಕಿ ಕಷಾಯವಕಾಯಿಸಿ ಒಂದು ಕೊಳಗ ಕಷಾಯಕ್ಕೆ ನಿಲ್ಲಿಸಿ, ಅದರಲ್ಲಿ ಇಪ್ಪತ್ತುನಾಲ್ಕುಹಲ ಎಣ್ಣೆಯನ್ನು ಹನಿಸಿ, ಇದರ ಚತುರ್ಮಡಿ ಮೊಸರನೀರನ್ನುಬಿಟ್ಟುಪಾಕಮಾಡುವಾಗ ಹಾಕುವ ಕಲ್ಕದ್ರವ್ಯ—ಹಿರೇ

ಮದ್ದು, ಕಳ್ಳಂಗಡಲೆ, ಅರಗು, ರೇಣುಕೆ, ಚಂಗಲಕೋಷ್ಟ, ಕೊನ್ನಾರೀಗೆಡ್ಡೆ, ಚಂದನ, ಅರಿಸಿನ, ಕಟುಕರೋಹಿಣಿ, ಸಬ್ಬಸಿಗೆ, ರಾಸ್ನೆ, ಕುರಟಿಗೆ (ಸಮೂಲ), ದೇವದಾರು, ಮಂಜಿಷ್ಟ, ಯಷ್ಟಿಮಧುಕ, ರಾಮಂಚ, ಸೊಗದೇಬೇರು ಇವುಗಳನ್ನು ಪ್ರತ್ಯೇಕ ಎರಡು ವರಹಾತೂಕವನ್ನು ಚೂರ್ಣಿಸಿ, ಆ ತೈಲದಲ್ಲಿಹಾಕಿ ಕದಡಿ, ಐದುರಾತ್ರಿ ಪಾಕಮಾಡಿ ಚಿಕ್ಕಣಪಾಕದಲ್ಲಿಳುಹಿಕೊಂಡು ಉದಯದಲ್ಲಿ ಸೇವಿಸಲು ಸಕಲಜ್ವರ, ಕ್ಷಯವ್ಯಾಧಿ, ಖಾಸ, ಶ್ವಾಸ, ಶೋಭೆ ಸಹ ಮಾಣ್ಗುಂ. ೧

## ತಕ್ರತೈಲ

ಒಂದುಕೊಳಗ ಮಜ್ಜಿಗೆಯಲ್ಲಿ ಒಂದುಬಳ್ಳ ಎಣ್ಣೆಯಂ ಹನಿಸಿ ಪಾಕ ಮಾಡುವಾಗ ಹಾಕುವ ಕಲ್ಕದ್ರವ್ಯಗಳು—ಕಳ್ಳಂಗಡಲೇಬೇರು, ಚಂಗಲಕೋಷ್ಟ, ರಾಸ್ನೆ, ಅರಗು, ಅರಿಸಿನ, ಮಂಜಿಷ್ಟೆ, ಯಷ್ಟಿಮಧುಕ, ಸೈಂಧವ, ದೇವದಾರು, ಮಾಗಳೀಬೇರು, ಕಾಡಮಾಗಳೀಬೇರು, ಕುರಟಿಗೆ(ಸಹಮೂಲ), ಅಮರದವಳ್ಳಿ, ಶ್ರೀಗಂಧ, ರಾಮಂಚ, ಮುತ್ತುಗದಬೇರು, ಗಂದಿಗತಗರ, ಅಗಿಲು, ಕೊಡನಾರೀಗೆಡ್ಡೆ, ತಕ್ಕೋಲ, ಜಾಯಿಕಾಯಿ, ಲವಂಗ, ಕಚೋರ, ಏಲಕ್ಕಿ, ಲವಂಗದ ತೊಕ್ಕು, ಲವಂಗಪತ್ರೆ, ಹಿಪ್ಪಲೀಮೂಲ, ಕೆಂವ್ಮೇಬೇರು, ಮುಡಿವಾಳ ಇವುಗಳನ್ನು ಪ್ರತ್ಯೇಕ ಎರಡು ವರಹಾತೂಕವನ್ನು ಚೂರ್ಣಿಸಿ ಮಜ್ಜಿಗೆಯಲ್ಲರೆದು ಕದಡಿ, ಮೂರುರಾತ್ರಿ ಪಾಕಮಾಡಿ ಇಳುಹಿಕೊಂಡು ಪಾನಾಭ್ಯಂಗನನಸ್ಯಂಗಳಂ ಮಾಡಲು ಸಕಲಜ್ವರ, ಸಂತತಜ್ವರ, ಸನ್ನಿಪಾತ, ವಿಷಮಜ್ವರ, ವಾತರೋಗ ಸಹ ಗುಣಮಕ್ಕುಂ. ೨

## ಗಜಕರ್ಣಿಕಾತೈಲ

ಬಲರಾಕ್ಷಸಗೆಡ್ಡೆ (ಸಮೂಲ), ಅಶ್ವಗಂಧಿ, ಚಿಟ್ಟಾಮುಟ್ಟಿ, ಶತಾವರಿ, ಕೊನ್ನಾರೀಗೆಡ್ಡೆ, ಇವಿಷ್ಟರ ಒಂದೊಂದನ್ನೂ ಸೇರು ಲೆಕ್ಕದಲ್ಲಿ ಸೇರಿಸಿ ದೊಡ್ಡ ಕೊಪ್ಪರಿಗೆಯಲ್ಲಿ ಹಾಕಿ ಅಳತೇಮಾಡಿ ನೀರು ಸೇರಿಸಿ ಚಾತುರ್ಭಾಗವಾಗಿ ಕಾಯಿಸಿಕೊಂಡು ಹೀದೆ ತೆಗೆದು, ಈ ಕಷಾಯವನ್ನು ಶೋಧಿಸಿ, ಬೇರೆ ಕೊಪ್ಪರಿಗೆಯಲ್ಲಿ ಹಾಕಿ, ಎರಡುಸೇರು ಮೊಸರುನೀರು, ಹಾಲು ಎರಡುಸೇರು, ಎಣ್ಣೆ ಸಹ ಸೇರಿಸಿ ಇವುಗಳನ್ನು ಕಾಯಿಸಿ ಹಾಕತಕ್ಕ ಕಲ್ಕದ್ರವ್ಯಗಳು—ಯಷ್ಟಿಮಧುಕ, ಕಟುಕರೋಹಿಣಿ, ರಾಸ್ನೆ, ಚಂದನ, ದೇವದಾರು, ಮಂಜಿಷ್ಟೆ, ತಕ್ಕೋಲ, ಲವಂಗಚಕ್ಕೆ, ಲವಂಗಪತ್ರೆ, ನಾಗಕೇಸರ, ಏಲಕ್ಕಿ, ರಾಮಂಚ, ರೇಣುಚಕ್ಕೆ, ತುಪ್ಪ ದೇವದಾರು, ರೇಣುಕೆ, ಛಾಗ ಇವುಗಳನ್ನು ಸಮಾಂಶವಾಗಿ ಸೇರಿಸಿ ಚೂರ್ಣಮಾಡಿ ವಸ್ತ್ರಗಾಳಿತಂ ಮಾಡಿ ಆ ತೈಲದಲ್ಲಿ ಕಲಸಿ ಪಕ್ವಮಾಡಿ ಶೋಧಿಸಿ ಇಳುಹಿಕೊಂಡು ಪ್ರಯೋ

ಗಿಸಲು ವಿಷಮಜ್ವರ, ಹಳೇಜ್ವರ, ಶೀತಜ್ವರ, ದೋಷಜ್ವರಸಹ ಮಾಣ್ಗುಂ. ಮತ್ತು ದಿನದಿನಕ್ಕೆ ಶರೀರಪುಷ್ಟಿಯಾಗುವುದು. ೩

## ದೇವಧೂಪತೈಲ

ಓಡಲಸೊಪ್ಪಿನರಸ, ಉಮ್ಮತ್ತಿಸೊಪ್ಪಿನರಸ, ಎಕ್ಕದೆಲೆರಸ, ಹುಣಿಸೆಸೊಪ್ಪಿನ ರಸ, ಕುರಟಿಗೆರಸ, ತುಳಸೀರಸ, ಲೊಕ್ಕೀಸೊಪ್ಪಿನರಸ, ಇವು ಬಗೆ ಒಂದಕ್ಕೆ ಅಂಬಿಲ ಒಂದು ಕೊಳಗ ಸಹ ಕೂಡಿಸಿ, ಗಂಧಕ, ಶುಂಠಿ, ಹಿಪ್ಪಲಿ, ಮೆಣಸು, ಬಜೆ, ಅರಿಸಿನ, ಕಟುಕರೋಹಿಣಿ, ಅಶ್ವಗಂಧಿ, ಚಿತ್ರಮೂಲ, ಸಾಸಿವೆ, ಭದ್ರಮುಸ್ತೆ, ಸಬ್ಬ ಸಿಗೆ, ಬೇವಿನಬೀಜ–ಇವು ಪ್ರತ್ಯೇಕ ಒಂದುತೂಕ ಇಷ್ಟರ ಸಮಾನ ಸಜ್ಜರಸ, ಸಹ ಚೂರ್ಣಮಾಡಿ ಆ ರಸಗಳಲ್ಲಿ ಹಾಕಿ ಆಡಿನಹಾಲು ಒಂದುಬಳ್ಳ ಹನಿಸಿ ಎಣ್ಣೆಯು ನಟ್ಟು ಚಿಕ್ಕಣಪಾಕದಲ್ಲಿಳುಹಿ ಆ ಎಣ್ಣೆಯನ್ನು ಸರ್ವಾಂಗಕ್ಕೆ ಲೇಪಿಸಲು ಸಕಲ ಜ್ವರಂ ತೀರ್ಗುಂ. ೪

## ಜ್ವರಕ್ಕೆ ಅನುಪಾನಗಳು

ಜೀರಿಗೆ, ಶುಂಠಿ, ಹಿಪ್ಪಲಿ, ಮೆಣಸು, ಅರಳಿಕೊನೆ, ಚಿತ್ರಮೂಲ, ಗರುಗದ ಸೊಪ್ಪು, ಆಡುಸೋಗೆ, ಅಮರದವಳ್ಳಿ, ನುಗ್ಗೇಚಕ್ಕೆ, ವೀಳೆದೆಲೆ, ಅಡಕೆ, ಸಕ್ಕರೆ, ತೊಳಸಿ, ಲವಂಗ, ಬೆಳ್ಳುಳ್ಳಿ, ಕೊನ್ನಾರಿಗೆಡ್ಡೆ ಇವಿಷ್ಟೂ ಜ್ವರಕ್ಕೆ ಅನುಪಾನ ಗಳು. ೧

## ಸಪ್ತೆತುಪ್ಪ

ಅಶ್ವಗಂಧಿ, ಹಳೇಬೇವಿನತೊಕ್ಕು ಇವುಗಳನ್ನು ಒರಳಲ್ಲಿ ಇಡಿದು ಈ ಚೂರ್ಣ ಐದುಸೇರನ್ನು ಮೂವತ್ತುಸೇರು ಹಸುವಿನ ಹಾಲಿನಲ್ಲಿ ಕದಡಿ ಚನ್ನಾಗಿ ಕಾಯಿಸಿ, ಹಿಪ್ಪೇತೆಗೆದು ಹಾಲನ್ನು ಬಸಿದುಕೊಂಡು ಹೆಪ್ಪನಿಕ್ಕಿ ಮೊಸರುಮಾಡಿ, ಅದನ್ನು ಕಡೆದು ಬೆಣ್ಣೆತೆಗೆದು ಉಪ್ಪುಹಾಕದೆ ಅದನ್ನು ತುಪ್ಪಕಾಯಿಸಿ ಒಂದು ಗಡಿಗೆಯಲ್ಲಿ ಬಾಯಿಕಟ್ಟಿರಿಸಿಕೊಂಡು ಅರ್ಚನೆಯನ್ನುಮಾಡಿ, ಆದಿವಾರ, ಗುರುವಾರ ಮೊದ ಲ್ಗೊಂಡು ಹೊತ್ತಿಗೆ ಅರೆದುಡ್ಡುತೂಕವನ್ನು ತೆಗದುಕೊಂಡು ಹುಳಿ, ಶಲದಿ ವರ್ಜ ವಾಗಿ ಪಥ್ಯವನ್ನು ಉಣ್ಣಲು ಜ್ವರ ಮೊದಲಾದ ಸಕಲ ರೋಗಗಳೂ ಪರಿಹಾರ ವಹುದು. ಹಾಲನ್ನು ಮಕ್ಕಳಿಗೆರೆಯಲು ಮಕ್ಕಳ ನಾನಾರೋಗಗಳೂ ಮಾಣ್ಗುಂ. ಹಾಲಿನಲ್ಲಿ ಬಂದ ಚೂರ್ಣವನ್ನು ಒಣಗಿಸಿ ಸಣ್ಣನಾಗಿ ಚೂರ್ಣಿಸಿ, ಸಮಸಕ್ಕರೆ ಬೆರಸಿ, ದೇಹಾನುಗುಣವಾಗಿ ಸಪ್ತೆತುಪ್ಪ ತೆಗೆದುಕೊಳ್ಳೆ ಶರೀರವು ಪುಷ್ಟಿಯಹುದು. ಇದನ್ನೇ ಜೇನುತುಪ್ಪದಿಂದ ಸೇವಿಸಲು ಶ್ಲೇಷ್ಮವಾತಂ ಗುಣಮಕ್ಕುಂ. ೧

ವಸ್ತಿ ಮೊದಲಾದ ಕ್ರಿಯೆಗಳಂ ಮಾಡಿಸಲು ಪಿತ್ತಾವರಣ, ಶ್ಲೇಷ್ಮಾವರಣ, ಸಕಲ ಪಿತ್ತವಿಕಾರ, ದ್ವಂದ್ವವ್ಯಾಧಿ, ದೋಷತ್ರಯ ರೋಗಗಳು, ಶಿರೋರೋಗ, ವಾತ ರೋಗ, ಅಂಗಪಾದ ಕೇಶವಿದಾಹಗಳೆಲ್ಲವು ಪರಿಹರಮಕ್ಕುಂ. ೩

ಅಂತು ಪೈತ್ಯರೋಗದ ಬಗೆ ೧ಕ್ಕೆ ಸಂಹಿತೆ ಕಲ್ಕ ೩೪, ಕಷಾಯ ೭, ಚೂರ್ಣ ೨೫, ಘೃತ ೫, ಲೇಹ್ಯ ೬, ರಸಾಯನ ೧, ತೈಲ ೧, ಅಂಜನ ೧, ಲೇಪ ೪,ಸಹ ಪ್ರಯೋಗ ೮೭ ಕ್ಕೆ ಪೈತ್ಯ ಬಗೆ ೧ಕ್ಕೆ ಆವರಣರೋಗ ೧ ಸಹ. ಕುಳ ೨ ಸಮಾಪ್ತ.

---

## ಶ್ಲೇಷ್ಮಪ್ರಕೋಪ ಲಕ್ಷಣ

ಮೈಯೆಲ್ಲ ತಣ್ಣಸಂಡೋರಿ ಮತಿಗೆಟ್ಟು ಕಾರುವುದುಂ, ದೇಹವೆಲ್ಲ ತುರಿಯುಂಟಾಗಿ ಮುಖ ಗಡತುಕೊಂಡು ನೆಗಡಿಪುಟ್ಟಿ, ಗಂಟಲೆಡೆಯುಂ ನಾಲಗೆಯುಂ ಪಲ್ಲುಗಳುಂ ತಾಳಿಗೆಯುಂ ಕಣ್ಣುಮೂಗುಗಳುಂ ಕಿವಿಗಳುಂ, ಇನಿತರಲ್ಲಿಯು ಚುಳುಚುಳಿಕೆಂಬುದು ಮುಂತಾಗಿವೆಲ್ಲಂ ಶ್ಲೇಷ್ಮಪ್ರಕೋಪಲಕ್ಷಣವೆಂದರಿದು ಚಿಕಿತ್ಸೆಯಂ ಮಾಡುವುದು.

## ನೆಗಡಿರೋಗಕ್ಕೆ ಮಾಳ್ಪ ಪ್ರಯೋಗಗಳು

ನಸ್ಯ.—ಹತ್ತಿಕಾಯ ರಸದಲ್ಲಿ ಇಂಗಳದ ಹಣ್ಣನು ಕಿವಿಚಿ ತುಪ್ಪವ ಕೂಡಿಸಿ ನಸ್ಯಂ ಮಾಡೆ ನೆಗಡಿ, ಕೆಮ್ಮು ಸಹ ಮಾಣುವುದು. ೧

ಶುಂಠಿಯನು, ಬೆಲ್ಲವನು ಬಿಸಿನೀರಿಂ ತೇದು ನಸ್ಯವಮಾಡೆ ನೆಗಡಿ ಮಾಣ್ಗುಂ. ೨

ಲೇಪ.—ಚಂಗಲಕೋಷ್ಟ, ನೈದಿಲ ಎಸಳು, ಹಿಪ್ಪಲಿ, ರಕ್ತಚಂದನ, ಇವಂ ನೀರೊಳರೆದು ಮುಖಕ್ಕೂ ಹಣೆಗೂ ಲೇಪವ ಮಾಡಲು ತದ್ದು, ತುರಿ ಶಮನವಹುದು. ೧

ಕೊತ್ತುಂಬರಿ, ಬಜೆ, ಶಾಬರಲೋಧ್ರ, ಇವಂ ಎಮ್ಮೆಹಾಲಿನಿಂದರೆದು ಲೇಪಿಸಿ ಒಣಗಿದ ಬಳಿಕ ಮುಖದ ಮೊಡವಿಯಂ ನೀರಿಂದ ತೊಳೆಯಲು ಮುಖದ ಮೇಲೆ ಹುಟ್ಟಿದ ಮೊಡವಿ ಬೊಕ್ಕೆಗಳು ಮಾಣುವುದು. ೨

## ಸಂಹಿತೆಗಳು

ದ್ರಾಕ್ಷಿ, ಖರ್ಜೂರ, ಕಿರುನೆಲ್ಲಿ, ಶುಂಠಿ, ಹಿಪ್ಪಲಿ, ಮೆಣಸು, ಇವಂ ತುಪ್ಪದಿಂದರೆದು ಬೆಲ್ಲದಿಂ ಕಲಸಿ ಸೇವಿಸಲು ನೆಗಡಿ ಪರಿಹರ. ೧

ಬೆಲ್ಲ, ತಿಗಡೆ ಸಹ ಮೊಸರಿನಲ್ಲಿ ಕಲಸಿ ಮೆಲ್ಲಲು ನೆಗಡಿ ಗುಣವಹುದು. ೨

ಯಷ್ಟಿಮಧುಕಂ, ಪಿಪ್ಪಳ್ಳು, ನೇರೆಡುಚಕ್ಕ ಗ ೪ ತೂನು, ಮಾಮಿಡಿಚಕ್ಕ ರಸಾನ ನೂರಿ ಉಂಟಲು ಸೇಸಿ ತಿನನು ನೀಳ್ಳುದೋಷಂ ಮಾನುನು. ೩

ಆಕಲಕರಗಾನಿ, ಉಸುರಿಕಪಪ್ಪುಗಾನ್ನಿ, [1] ಇಂದುಲೋನು[1] ಏದಿದಿಂನಾನು ತ್ಲೋವನಡಚನ ನೀಳ್ಳು ದೋಷಂ ಪೋವುನು. ೪

ಚಂದನಂ, ಕೊತ್ತುಂಮರಿವಿತ್ತಲು, ಯಷ್ಟಿಮಧುಕಂ, ಇವಿ ಸಮಂಗಾ ಬುಚ್ಚುಕೊನಿ ಅಷ್ಟಾವಶೇಷಂ ಜೇಸಿ ತ್ರಾಗನು ಸಮಸ್ತ ಜಲದೋಷಂ, ದಾಹಂ ಸಹಾ ಮಾನುನು. ೫

ಮುನುಗವೇರು, ಅಲ್ಲಪುರಸಂ, ಸಮಾಂಶಂಗೂರ್ಚಿ ಆವುಪಚ್ಚಪಾಲುನು ಈಯಗಾನು ಪಡಿಶಂ ಗುಣಮೌನು. ೬

ಬೆಲ್ಲಂ, ತಿಗಡ, ಮಿರಿಯಾಲು, ಈ ಮೂಡುನು ಪೆರಗುತೊ ನೂರಿ ತೀಸು ಕೊಂಟೆ ಪಡಿಶಂ ಪೋವುನು. ೭

ಅಲ್ಲಪುರಸಂ, ಶುಂಠಿ, ಹಿಪ್ಪಲಿ, ಮಿರಿಯಾಲು, ಸೈಂಧವಲವಣಂ, ಇವಿ ಸರಿಗಾಕೂರ್ಚಿ ನೋಟುಲೊ ನಿಂಡ ಬೋಸುಕೊನಿ ಪುಕ್ಕಲಿಂಚಿ, ಉಮಿಸ್ತೆ ಶ್ಲೇಷ್ಮ ಚೇತಪುಟ್ಟುನ ಸಕಲ ರೋಗಾಲು, ಮುಖರೋಗಂ ಹೃದ್ರೋಗಂ ಸಹ ಮಾನುನು. ೮

ಸಿದ್ಧಿವಾರದ ದಿವಸ ನೆಲತೆಂಗ ತಂದು ಕತ್ತರಿಸಿ ನೆಳಲಒಣಗಿಸಿ ಇಡಿದು, ವಸ್ತ್ರಗಾಳಿತವಂ ಮಾಡಿ, ಒಳ್ಳೆಣ್ಣೆಯಲ್ಲಿ ಮೂರು ದಿವಸ ಸೇವಿಸೆ ಶ್ಲೇಷ್ಮ ಪ್ರಕೋಪಂ ಮಾಣ್ಗುಂ. ೯

## ಅಂಜನ

ಬೆಳ್ಳುಳ್ಳಿ, ಮೆಣಸು, ಹಿಪ್ಪಲಿ, ಸೈಂಧವ, ಬಜೆ, ಮುತ್ತುಗದಬೀಜ, ಯವೆ ಗೋಧಿ, ಇವಂ ಸಮಭಾಗವಾಗಿ ನಿಂಬೆಹಣ್ಣಿನ ರಸದಲ್ಲಿ ತೇದು ಕಣ್ಣಿಗೆ ಹಚ್ಚಲು ಶ್ಲೇಷ್ಮ ವಾತ ವಿಕಾರಗಳು ಮಾಣ್ಗುಂ. ೧

ಅಂತು ನಸ್ಯ ೨, ಲೇಪ ೨, ಅಂಜನ ೧, ಸಂಹಿತೆ ೯ ಕ್ಕಂ ಸಹ
ಪ್ರಯೋಗ ೧೪, ಸಮಾಪ್ತಂ

---

## ತ್ರಯೋದಶ ಸನ್ನಿಪಾತಲಕ್ಷಣ

ಋಷ್ಯಶೃಂಗಸಂಹಿತಾಯಾಂ—ಈ ಸನ್ನಿಪಾತಂಗಳು ಪದಿಮೂರುವಿಧಮಾಗಿರ್ಕುಂ ಇದರಲ್ಲಿ ವಾತಪಿತ್ತಂಗಳಿಗೆ ಆಧಿಕ್ಯ ಶ್ಲೇಷ್ಮಕ್ಕೆ ಮಂದತ್ವವೆಂಬುವದೊಂದು

[1] ಪೆರುಗು ಶುಂಟಿಗಾನಿ, (ಗ)

ಸನ್ನಿಪಾತ; ಶ್ಲೇಷ್ಮಕ್ಕೆ ಆಧಿಕ್ಯ, ವಾತ ಪಿತ್ತಂಗಳಿಗೆ ಮಂದತ್ವವೆಂಬುದೊಂದು ಸನ್ನಿಪಾತ; ವಾತ ಶ್ಲೇಷ್ಮಗಳಿಗಾಧಿಕ್ಯ ಪಿತ್ತಕ್ಕೆ ಮಂದತ್ವವಾದುದೊಂದು ಸನ್ನಿಪಾತ; ಶ್ಲೇಷ್ಮ ವಾತಂಗಳಿಗೆ ಪೆರ್ಚುಗೆ ಪಿತ್ತಕ್ಕೆ ಮಂದತ್ವವೆನಿಪುದೊಂದು ಸನ್ನಿಪಾತಂ; ವಾತಕ್ಕೆ ಆಧಿಕ್ಯ ಶ್ಲೇಷ್ಮ ಪಿತ್ತಂಗಳಿಗೆ ಮಂದತ್ವವೆನಿಸಿಕೊಳ್ವುದೊಂದು ಸನ್ನಿಪಾತ; ಶ್ಲೇಷ್ಮಕ್ಕೆ ಆಧಿಕ್ಯ ವಾತ ಪಿತ್ತಂಗಳಿಗೆ ಮಂದತ್ವವೆಂಬುದೊಂದು ಸನ್ನಿಪಾತಂ; ಪಿತ್ತಕ್ಕೆ ಆಧಿಕ್ಯ ವಾತಕ್ಕೆ ಆಧಿಕ್ಯ ವಾತ ಶ್ಲೇಷ್ಮಂಗಳಿಗೆ ಮಂದಮಪ್ಪ ಸನ್ನಿಪಾತವೊಂದು ; ವಾತಕ್ಕೆ ಆಧಿಕ್ಯ ಪಿತ್ತಕ್ಕೆ ಮಾಂದ್ಯ ಶ್ಲೇಷ್ಮಕ್ಕೆ ಮಂದವೆನಿಸಿಕೊಂಬ ಸನ್ನಿಪಾತವೊಂದು ; ಶ್ಲೇಷ್ಮಕ್ಕೆ ಮಧ್ಯಮ ಪಿತ್ತಕ್ಕೆ ಮಂದ ವಾತಾಧಿಕ್ಯಮಾದ ಸನ್ನಿಪಾತವೊಂದು ; ಇಂತು ಪಿತ್ತ ಶ್ಲೇಷ್ಮಗಳ ಮಧ್ಯಮ ಮಾಂದ್ಯಂಗಳ ಉತ್ಕ್ರಮದಿಂದೆರಡು ಸನ್ನಿ ದೋಷ. ಪಿತ್ತಕ್ಕೆ ಆಧಿಕ್ಯವಾದ ಶ್ಲೇಷ್ಮಂಗಳಿಗೆ ಮಧ್ಯಮ ಮಾಂದ್ಯಂಗಳ ಉತ್ಕ್ರಮದಿಂದೆರಡು ಸನ್ನಿದೋಷ; ಹಾಗೆತಾನೆ ಶ್ಲೇಷ್ಮಕ್ಕೆ ಆಧಿಕ್ಯ ವಾತ ಪಿತ್ತಂಗಳಿಗೆ ಮಧ್ಯಮ ಮಾಂದ್ಯಗಳ ವ್ಯತ್ಯಾಸದಿಂದೆರಡು ಸನ್ನಿ ದೋಷ; ಈ ಮರ್ಯಾದೆ ಒಂದೊಂದು ಧಾತುವಿನ ಹೆಚ್ಚಿಗೆಯಿಂದಲೂ ಎರಡು ಧಾತುಗಳ ಮಧ್ಯಮ ಮಾಂದ್ಯಗಳ ವ್ಯತ್ಯಾಸಗಳಿಂದಲೂ ಪುಟ್ಟುವ ಸನ್ನಿದೋಷವಾರು. ಹಿಂದೆ ಹೇಳಿದ ಸನ್ನಿ ದೋಷವಾರು ಸಹ ಸನ್ನಿಪಾತ ಹನ್ನೆರಡು. ವಾತ ಪಿತ್ತ ಶ್ಲೇಷ್ಮಗಳೆಂಬ ಈ ಮೂರರ ಹೆಚ್ಚಿಗೆಯಿಂದಲೂ ಸನ್ನಿಪಾತ ವೊಂದು ಸಹ ಸನ್ನಿಪಾತ ಜ್ವರವು ಹದಿಮೂರು ವಿಧವೆಂದರಿವುದು. ಮತಾಂತರೆ—ಸನ್ನಿಪಾತ ಜ್ವರದಲ್ಲಿ ಮೊದಲು ಶ್ಲೇಷ್ಮಹರವಾದ ಚಿಕಿತ್ಸೆಯುಂ ಮಾಡಿದಲ್ಲಿ ಆ ಬಳಿಕ ವಾತ ಪಿತ್ತಂಗಳು ತಾವೆ ಶಮನವಹುದಾಗಿ ಸನ್ನಿಪಾತ ಜ್ವರದಲ್ಲಿ ತೀಕ್ಷ್ಣವಾದ ಗಂಡೂಷ, ತೀಕ್ಷ್ಣವಾದ ಕಬಳಂಗಳಂ ಮಾಡಿಸುವುದು. ಮತ್ತಮಾ ತ್ರಯೋದಶ ಸನ್ನಿಪಾತ ಮಾವುದೆಂದೊಡೆ :—ಸಂಧಿಗ, ಅಂತಕ, ರು[1]ಗ್ದಾ[1]ಹ, ಚಿತ್ತವಿಭ್ರಮ, ಸಿತಾಂಗ, ತಾಂದ್ರಿಕ, ಕಂಠಕುಬ್ಜ, ಕರ್ಣಿಕ, ಭಗ್ನನೇತ್ರ, ರಕ್ತಷ್ಠವಿ, ಜಿ[2]ಹ್ವ[2]ಕ, ಅಭಿನ್ಯಾಸ, ಪ್ರಳಾಪಗಳೆಂದು ಪದಿಮೂರು ತೆರನಾದ ಈ ಸನ್ನಿಪಾತಂಗಳ್ಗೆ ಲಕ್ಷಣಚಿಕಿತ್ಸಾಪ್ರಯೋಗಂಗಳಂ ಕೂಡಿಸಿ ಆಯಾ ಕ್ರಮದಿಂ ಪೇಳಲ್ಪಡುತ್ತಾ ಇದ್ದೀತಾಗಿ ಮುನ್ನ ಸಂಧಿಗಸಂಹಿತಾಲಕ್ಷಣವೆಂತೆನೆ—ಆದಿಯಲ್ಲಿ ವ್ಯೈಯಾದ್ಯಂತವೂ ಚುಚ್ಚಬಡಿದಹಾಗೆ ನೋಯುತಾ ಕೈಕಾಲು ಮುಖ ಎದೆಗಳಲ್ಲಿ ಶೋಭೆಯುಂಟಾಗಿ ವಾತದಿಂ ದೇಹದಲ್ಲಿ ಬಹಳ ವೇದನೆದೋರಿ ಶರೀರ ಬೆಮರುತ್ತಾ ತಾಪವುಂಟಾಗಿ ಹೊತ್ತು ಹೊತ್ತಿಗೆ ಬಲ ಕ್ಷೀಣವಾಗುತ್ತ ನಿದ್ರೆಯಿಲ್ಲದಿರುವುದು ಸಂಧಿಗಸನ್ನಿಪಾತವೆಂದರಿವುದು ; ಈ ಸನ್ನಿಪಾತಕ್ಕೆ ಸಂದುಸಂದಿಗೆ ವಾತಹರವಾದ ತೈಲಂಗಳನಿಕ್ಕಿಸಿ ಅಲ್ಲಲ್ಲಿಗೆ ನರಭೇದಗಳನರಿದು ರಕ್ಷೆಯುಂ ಹಾಕಿಸಿ ಲಂಘನವನಿರಿಸಿ ಸ್ವೇದನವಿಧಿಯುಂ ಮಾಡಿಸಿ ದೇಹಕ್ಕೆ ದೋಷಹರವಾವ ಔಷಧಿಗಳ

[1] ಗ್ರ್ಹ, (ಗ). [2] ಹ್ವಾ, (ಗ).

ಬಿಸಿದು ಮಾಡಿ ಕಟ್ಟಿಸಿ ಸಕಲವಾದ ರೂಕ್ಷ ದ್ರವ್ಯಗಳನ ಕೊಡಿಸಿ ಔಷಧಿಗಳಂ ಪ್ರಯೋಗಿಸಿ ಹುರಿಯಕ್ಕಿ ಗಂಜಿಯಂ ಪಥ್ಯವನಿಕ್ಕುಸುವುದು.

## ಸಂಧಿಗ ಸನ್ನಿಪಾತ ಚಿಕಿತ್ಸೆ—ಕಷಾಯಂಗಳು.

ಗುಳ್ಳ, ನೆಲಗುಳ್ಳ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ನೆಗ್ಗಿಲ ಬೇರು ಸಹ ಕಷಾಯಂ ಕಾಸಿ ಹಿಪ್ಪಲಿ ಪ್ರತಿಪಾಕವಿಕ್ಕಿ ಸೇವಿಸೆ ಸಂಧಿಗಸನ್ನಿಪಾತ ಹರ. ೧

ರಾಸ್ಮೆ, ಅಮರದವಳ್ಳಿ, ಕರ್ಪೂರ, ಶುಂಠಿ, ಹೊಮ್ಮರದ ಚಕ್ಕೆ, ದೇವದಾರೆ, ಅಳಿಲೆಕಾಯಿ, ತಾರೆಕಾಯಿ, ಶುಂಠಿ, ನೆಲ್ಲಿಚಟ್ಟು, ಆಷಾಡಿಬೇರು ಸಹ ಕಷಾಯ ಕಾಸಿ ಗುಗ್ಗುಳದ ಚೂರ್ಣಂ ಬೆರಸಿ ಕುಡಿಯೆ ಸಂಧಿಗಸನ್ನಿಪಾತಹರ. ೨

ಅಮರದವಳ್ಳಿ, ಔಡಲದ ಬೇರು, ಶುಂಠಿ, ದೇವದಾರೆ, ಅಳಿಲೆಕಾಯಿ, ತಾರೆ ಕಾಯಿ, ನೆಲ್ಲಿಚಟ್ಟು, ಆಷಾಡಿಗೆಣಸು, ಬೆಲ್ಲವತ್ತದ ಬೇರು, [1]ಗೂಳಿ[1]ದ ಬೇರು, ಪಾದರಿಬೇರು, ಹೆಮ್ಮರದ ತೊಕ್ಕು, ಗುಳ್ಳ, ನೆಲಗುಳ್ಳ, ಎರಡೆಲೆಹೊನ್ನೆ, ಮೂರೆಲೆ ಹೊನ್ನೆ, ನೆಗ್ಗಿಲು ಸಹ ಕಷಾಯ ಹಾಕಿ ಕುಡಿಯೆ ಸಂಧಿಗಸನ್ನಿಪಾತಮಾನ್ಯ ಸ್ತಂಭ; ಅಂತ್ರವೃದ್ಧಿ, ಜ್ವರ, ಉದರವ್ಯಾಧಿ, ಕಟೀವಾತ, ಸಂದುವಾತ ಸಹ ಮಾಣ್ಗುಂ. ೩

ರಾಸ್ಮೆ, ಅಮರದವಳ್ಳಿ, ಖರ್ಜೂರ, ಸರಳದೇವದಾರೆ, ಶುಂಠಿ, ಅಳಿಲೆ ಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಆಷಾಡಿಗೆಡ್ಡೆ, ಇವಂ ಸಮಭಾಗ ಕಷಾಯ ವಿಕ್ಕಿ ಔಡಲದೆಣ್ಣೆಯು ಪ್ರತಿಪಾಕವಿಕ್ಕಿ ಕೊಡಲು ಸಂಧಿಗ [2]ಸಹ ವಾತ[2] ಗುಣ ಮಕ್ಕುಂ. ೪

ರಾಸ್ಮೆ, ಅಮರದವಳ್ಳಿ, ಕರ್ಪೂರ, ಶುಂಠಿ, ಹೊಮ್ಮರದ ಚಕ್ಕೆ, ದೇವ ದಾರು, ಶುಂಠಿ, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಆಷಾಡಿಬೇರು, ಇಷ್ಟನ್ನು ಬಳ್ಳ ನೀರಿನಲ್ಲಿ ಹಾಕಿ ನಾಲ್ಕರಲೊಂದು ಭಾಗ ನಿಲಗಾಸಿ ಗುಗ್ಗುಳ ಗದ್ಯಾಣ ೧ ತೂಕವಂ ಕೂಡಿಕೊಡಲು ಸಂಧಿಗಸನ್ನಿ ಗುಣಮಕ್ಕುಂ. ೫

ಹಿಪ್ಪಲಿಮೂಲ, ಅಳಿಲೆಕಾಯಿ, ತಾರೆಕಾಯಿ, ನಾಗಕೇಸರ, ಈಶ್ವರಿ, ಆಡು ಸೋಗೆ, ಇವನೆಲ್ಲ, ಅಷ್ಟಾವಶೇಷವಾಗಿ ಕಾಸಿ ಅದರಲ್ಲಿ ಅರೆಸೊಲಿಗೆ ಔಡಲ ದೆಣ್ಣೆಯು ಕಲಸಿ ಕೊಡಲು ಸಂಧಿಗಸನ್ನಿಪಾತಂ ಮಾಣ್ಗುಂ. ೬

ಗುಳ್ಳ, ನೆಲಗುಳ್ಳ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ನೆಗ್ಗಿಲ ಬೇರು, ಸಹ ಕಷಾಯಂ ಕಾಸಿ ಕುಡಿಯೆ ಸಂಧಿಗಸನ್ನಿಪಾತ ಶಮನಂ. ೭

ಹುರುಳಿ ಕಟ್ಟಿನಲ್ಲಿ ಸೈಂಧವ ಶುಂಠಿ ಚೂರ್ಣಂಬೆರಸಿ ಸೇವಿಸಲು ಸಂಧಿಗ ಸನ್ನಿ ಹರ. ೮

---

[1] ಗುಳ್ಳ (ಗ) [2] (ಗ) ಪ್ರತಿಯುಲ್ಲಿಲ್ಲ.

ಅಮರದವಳ್ಳಿ, ಔಡಲದ ಬೇರು, ಶುಂಠಿ, ದೇವದಾರು, ರಾಸ್ನೆ, ಅಳಿಲೆಕಾಯಿ, ಇವಂ ಕಷಾಯಂ ಕಾಸಿ ಕುಡಿಯೆ ಸಂಧಿಗಸನ್ನಿಪಾತ ಹರ. ೯

ಹಿಪ್ಪಲಿಮೂಲ, ತಾವರೆಬೇರು, ಅಳಿಲೆಕಾಯಿ, ಕಕ್ಕೆಬೇರು, ನೆಲ್ಲಿಚಟ್ಟು, ಆಡುಸೋಗೆ, ಇವು ಪ್ರತ್ಯೇಕ ಗ ೩ ವರಹಾ ತೂಕಮಂ ಚಾತುರ್ಥಾಗಾರ್ಧ ಕಷಾಯಂ ಕಾಸಿ ಪಾನವ ಮಾಡಲು ಸಂಧಿಗಸನ್ನಿ ಹರ. ೧೦

## ನಸ್ಯಗಳು.

ಅಗಸೆಸೊಪ್ಪಿನ ರಸದಲ್ಲಿ ಶುಂಠಿ, ಹಿಪ್ಪಲಿ, ಮೆಣಸು ಸಹ ತೇದು ನಸ್ಯಂ ಮಾಡೆ ಸನ್ನಿಪಾತಹರ. ೧

ಬೆಲ್ಲವತ್ತದ ಬೇರು, ನರುವಲದ ಬೇರು, ಗುಳ್ಳದ ಬೇರು, ಪಾದರಿಬೇರು, ಹೊಮ್ಮರದ ಬೇರು, ಹೆಗ್ಗುಳ್ಳ, ನೆಲಗುಳ್ಳ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ನೆಗ್ಗಿಲ ಬೇರು, ಕರ್ಪೂರ, ಶುಂಠಿ, ಕರ್ಕಾಟಕಶೃಂಗಿ, ಪುಷ್ಕರಮೂಲ, ಗಂಡು ದುರುಚನ ಬೇರು, ಗಂಟುಭಾರಂಗಿ, ಕೊಡಸಿಗೆಬೀಜ, ಕಹಿಪಡವಲ, ಕಟುಕ ರೋಹಿಣಿ, ಇವೆಲ್ಲ ಅಗಸೆ ಸೊಪ್ಪಿನ ರಸದಲ್ಲಿ ಸಣ್ಣನಾಗಿತೇದ ು ನಸ್ಯವಂ ಮಾಡೆ ಸಂಧಿಗ ಸನ್ನಿಪಾತಂ ಶಮನವಹುದು. ೨

## ಅಂಜನ.

ಬಾಗೆಬೀಜ, ಹಿಪ್ಪಲಿ, ಬಜೆ, ಸೈಂಧವ, ಇವಂ ಆಡಿನ ಮೂತ್ರದಲ್ಲಿ ಸಣ್ಣನಾಗಿ ತೇದು ಕಣ್ಣಿಗೆಚ್ಚಲು ಸಂಧಿಗಸನ್ನಿ ಹರ. ೧

ಎಳ್ಳೆಣ್ಣೆಯಲ್ಲಿ ಮೆಣಸಂ ತೇದು ಕಣ್ಣಿಗೆಚ್ಚಲು ಸಂಧಿಗಸನ್ನಿಪಾತ ಹರ. ೨

## ತೈಲ.

ಹಾವುಮೆಕ್ಕೆಬೇರು, ಚಾತರಾಸಿ, ಗೊರಟೆ, ನೆಲಗುಳ್ಳ, ಈ ಬಗೆಗಳ ರಸವ ೩ ಕೊಳಗದಲ್ಲಿ ಒಂದು ಬಳ್ಳ ಬೇವಿನೆಣ್ಣೆಯ ಹಾಕಿ ಕಾಸುವಾಗ ಹಾಕುವ ಕಲ್ಕ ದ್ರವ್ಯ—ದೇವದಾರೆಚಕ್ಕೆ, ಬಜೆ, ಚಂಗಲಕೋಷ್ಟ, ಸಬ್ಬಸಿಗೆ, ಕಟುಕರೋಹಿಣಿ, ಯಷ್ಟಿಮಧುಕ, ಶ್ರೀಗಂಧ, ಮರದರಿಸಿನ, ಲವಂಗತೊಕ್ಕು, ಏಲಕ್ಕಿ, ಜೀರಿಗೆ, ಕರ್ಕಾಟಕಶೃಂಗಿ, ಗಂಟುಭಾರಂಗಿ, ಅರಿಸಿನ, ಶುಂಠಿ, ಮೆಣಸು, ಹಿಪ್ಪಲಿ, ಎಸಗದ ಬೇರು, ನೆಲಗುಳ್ಳದ ಬೇರು, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಅತಿಬಜೆ, ರಾಸ್ನೆ, ಮಂಜಿಷ್ಟೆ, ಬಜೆ, ಹಾವಿನ ತಲೆ, ನೆಲಬೇವು, ಬೇವಿನಬೀಜ, ಕಟವರಿಗೆ, ಕೊಳವಳಿಕೆಬೀಜ, ಕೆಂಜಿಗನ ಮೊಟ್ಟೆ, ಕೋಳಿಮೊಟ್ಟೆ, ಗುಗ್ಗುಳ, ಧೂಪ, ಕೆಂಬೂತನ ಮೊಟ್ಟೆ, ಸಜ್ಜರಸ, ಇಂಗು, ಬೆಳ್ಳುಳ್ಳಿ, ಬಿಳಿ ಸೂಜಿಮಲ್ಲಿಗಬೇರು, ಗೋರೋಜನ,

ಸುಜ್ಜಲುಬೀಜ, ಹಸುರುಹಾವು—ಇವು ಪ್ರತ್ಯೇಕ ಗ ೧ ತೂಕವಂ ಕಲ್ಕವಂ ಮಾಡಿ ಹಾಕಿ ಕರಪಾಕದಿಂದಿಳುಹಿ ಸರ್ವಾಂಗಲೇಪಂಗೈಯಲು ಸಂಧಿಗಸನ್ನಿ ಮುಂತಾದ ಸಕಲ ಸನ್ನಿಪಾತವೂ ಗುಣವಕ್ಕುಂ. ೧

ಅಂತು ಕಷಾಯ ೧೦, ನಸ್ಯ ೨, ಅಂಜನ ೨, ತೈಲ ೧, ಸಹ ಪ್ರಯೋಗ ೧೫ಕ್ಕಂ ಸಮಾಪ್ತಂ.

---

## ಅಂತಕ ಸನ್ನಿಪಾತಲಕ್ಷಣ.

ಮೊದಲು ದಾಹವುಂಟಾಗಿ ಶರೀರದ ಜ್ಞಾನ ತಪ್ಪಿ ಒಂದೊಂದುವೇಳೆ ಏಳುತ್ತಾ ದೇಹವು ಕಂಪಿಸುತ್ತಾ ತಲೆನಡುಗುತ್ತಾ ಬಿಕ್ಕಳು ಕೆಮ್ಮು ಉಂಟಾಗಿ ಇರುವುದೇ ಅಂತಕಸನ್ನಿಪಾತವು. ಈ ಸನ್ನಿಪಾತ ಅತ್ಯಸಾಧ್ಯ. ಇದಕ್ಕೆ ಚಿಕಿತ್ಸೆ ಇಲ್ಲವೆಂದು ಪೂರ್ವಾಚಾರ್ಯರು ನಿರೂಪಿಸಿಹರು. ಮತ್ತಂ ತಾಪ, ಮಂಡೆಯ ನೋವು, ಅಜ್ಞಾನವು, ಬಿಕ್ಕಳು, ಸರ್ವಾಂಗನಡುಕ, ಸ್ವಲ್ಪವಾಗಿ ಮೈಯುರಿತವು, ಮಲ ಬಿಡುವುದು, ಶ್ವಾಸ, ಖಾಸವು, ಅಗ್ನಿಮಾಂದ್ಯವುಂಟಾಗಿ ವಾತ ಉಲ್ಬಣವಾಗಿ ಶ್ಲೇಷ್ಮ ಮಧ್ಯಮವಾಗಿ ಪೈತ್ಯ ಮಾಂದ್ಯಗಳುಳ್ಳುದ ಅಂತಕಸನ್ನಿಯ ಲಕ್ಷಣವೆಂದು ಮತಾಂತರದಲ್ಲಿ ಹೇಳಲ್ಪಡುವುದು.

## ಚಿಕಿತ್ಸೆ—ಕಷಾಯ.

ಚಿತ್ರಮೂಲ, ನೆಲಬೇವು, ಲೊಕ್ಕಿಸೊಪ್ಪು, ಚವ್ಯ, ಕಹಿಪಡವಲ, ಹಿಪ್ಪಲಿ, ಶುಂಠಿ, ಹಿಪ್ಪಲಿಮೂಲ, ಮೆಣಸು, ಸಾಸಿವೆ, ಇವಂ ಸಮನಾಗಿ ಕಷಾಯವಿಕ್ಕಿ ಕೊಡತಕ್ಕದ್ದೆಂದು ಅಂತಕಸನ್ನಿಗೆ ಚಿಕಿತ್ಸೆಯೊಂದವೆ ಪೇಳಿಯಿಹುದು.

## ರುಗ್ದಾಹಸನ್ನಿಪಾತ.

ಲಕ್ಷಣ:—ಪ್ರಳಾಪವು, ಮೈಯುರಿತವು ಉಂಟಾಗಿ ವೆಗ್ಗಳವಾದ ಅಜ್ಞಾನವು, ಜಡತ್ವವು, ಬಹಳ ಪ್ರಳಾಪವು ಬಳಲಿಕೆಯು, ಭ್ರಮೆಯು, ಮೈನೋವುದು, ಕೊರಳುದಾಡೆಗಳಲ್ಲಿ ನೋವು, ಎಡೆಬಿಡದೆ ಬಾಯಾರುವುದು, ಮೈನೋವಿಂದ ಬಹಳ ಕಷ್ಟಪಡುವುದು, ಇವೆಲ್ಲವು ರುಗ್ದಾಹಸನ್ನಿಯೆಂದರಿವುದು. ಮತ್ತಂ ವೆಗ್ಗಳವಾಗಿ ಶರೀರದಲ್ಲಿ ಕಾವು, ಮೈನೋವುಂಟಾಗಿರುವುದು, ದೇಹದಲ್ಲಿ ಉರಿತವು, * * * * * * * * * * ಮೈಭಾರವು, ಮಲ ವೆಗ್ಗಳವಾಗಿ ಬಿಡುವುದು

---

* ಇಲ್ಲಿ (ಕ) ಪ್ರತಿಯಲ್ಲಿ ಗ್ರಂಥಪಾತವು; (ಗ) ಪ್ರತಿಯಲ್ಲಿಲ್ಲ.

ಅಥವಾ ಮಲ ಬಿಡದೆ ಇರುವುದು, ವಾತ ಶ್ಲೇಷ್ಮಗಳು ಮಂದವಾಗಿ ಪಿತ್ತಾಧಿಕ್ಯ ಉಳ್ಳುವೆ ರುಗ್ಗಾದ್ಧಹಸನ್ನಿಯ ಲಕ್ಷಣವೆಂದು ಮತಾಂತರದಲ್ಲಿ ಪೇಳಲ್ಪಟ್ಟಿತು. ೧

## ಚಿಕಿತ್ಸೆ.

ಕಷಾಯಗಳು :—ಅಳಲೆಕಾಯಿ, ಪರ್ಪಾಷ್ಪಕ, ಕೊಡನಾರಿಗೆಡ್ಡೆ, ಕಕ್ಕೆಬೇರು, ದ್ರಾಕ್ಷೆಹಣ್ಣು ಸಹ ಕಷಾಯುವ ಕಾಸಿ ಕುಡಿಯೆ ರುಗ್ಗಾದ್ಧಹಸನ್ನಿ ಮಾಣ್ಗುಂ. ೨

ಜಲಧರಾದಿ ಕಷಾಯ :—ಕೊಡನಾರಿಗೆಡ್ಡೆ, ಶ್ರೀಗಂಧ, ಶುಂಠಿ, ಪರ್ಪಾಷ್ಪಕ, ಲಾವಮಂಚ, ಮುಡಿವಾಳ, ಇವು ಪ್ರತ್ಯೇಕ ಗ ೩ ತೂಕವಂ ಎರಡು ಪಡಿ ನೀರಿನಲ್ಲಿ ಕಷಾಯವಿಟ್ಟು [1]ಚಾತುರ್ಭಾಗಾ[1]ವಶೇಷವಾಗಿ ಕಾಸಿ ಸೇವಿಸೆ ರುಗ್ಗಾದ್ಧಹಸನ್ನಿ ಮಾಣ್ಗುಂ. ೩

ಕರಿ ಎಸಗದ ಬೇರು, ಚಿತ್ರಮೂಲ, ಪರ್ಪಾಷ್ಪಕ, ಸರ್ವಾಕ್ಷಿ, ಶುಂಠಿ, ಇವಂ ಸರಿಗೊಂಡು ಕಷಾಯ ಕಾಸಿ ಕುಡಿಯೆ ರುಗ್ಗಾದ್ಧಹಸನ್ನಿ ಗುಣಮಕ್ಕುಂ. ೪

ಭದ್ರಮುಸ್ತೆ, ಮುಡಿವಾಳ, ಶ್ರೀಗಂಧ, ಶುಂಠಿ, ಪರ್ಪಾಷ್ಪಕ, ಲಾವಮಂಚ, ಇವಂ ಕಷಾಯಂ ಕಾಸಿ ಸಕ್ಕರೆ [2]ಪ್ರತಿಪಾಕವಿಕ್ಕಿ[2] ಕೊಡಲು ರುಗ್ಗಾದ್ಧಹಸನ್ನಿಪಾತ ಶಮನವಹುದು. ೫

ಕೊಡನಾರಿಗೆಡ್ಡೆ, ಶ್ರೀಗಂಧ, ಶುಂಠಿ, ಪರ್ಪಾಷ್ಪಕ, ಲಾವಮಂಚ, ಮುಡಿವಾಳ, ಇವಂ ಸಮಾನವಾಗಿ ಬಳ್ಳ ನೀರಿನಲ್ಲಿ ಅಷ್ಟಾವಶೇಷವಾಗಿ ಕಾಸಿ ಕೊಡಲು ರುಗ್ಗಾದ್ಧಹಸನ್ನಿಹರ. ೬

ಅಳಲೆಕಾಯಿ, ಪರ್ಪಾಷ್ಪಕ, ಕೊನ್ನಾರಿ, ಕಟುಕರೋಹಿಣಿ, ಕಕ್ಕೆಬೇರು, ದ್ರಾಕ್ಷೆಹಣ್ಣು, ಇವಂ ಸಮಾನವಾಗಿ ಬಳ್ಳ ನೀರಿನಲ್ಲಿ ಹಾಕಿ ಅಷ್ಟಾವಶೇಷವಾಗಿ ಕಾಸಿ ಪಾನವ ಮಾಡಿಸಲು ರುಗ್ಗಾದ್ಧಹಸನ್ನಿ ಶಮನವಹುದು. ೭

## ಲೇಪ.

ಎಲಚಿಸೊಪ್ಪು, ಶ್ರೀಗಂಧ, ಬೇವಿನ ಹಗಿನು ಸಹ ಚೆನ್ನಾಗಿ ಮರ್ದಿಸಿ ಅಂಗಾಲಿಗೆ ಲೇಪಂಗೆಯ್ಯೆ ರುಗ್ಗಾದ್ಧಹಸನ್ನಿ ಹರ. ೧

## ಧೂಪ.

ಶ್ರೀಗಂಧ, ಮಂಡೆಕೂದಲು, ಹಸುವಿನ ಬೆಣ್ಣೆ ಇವೆಲ್ಲವಂ ಕೂಡಿ ಧೂಪವಿಕ್ಕಲು ರುಗ್ಗಾದ್ಧಹಸನ್ನಿ ಹರವಹುದು. ೨

---

[1] ಅಷ್ಟಾ, (ಗ). [2] ಪೆರಸಿ, (ಗ).

## ಚಿತ್ತವಿಭ್ರಮ ಸನ್ನಿಪಾತ.

ಲಕ್ಷಣ :— ಆದಿಯಲ್ಲಿ ಮೈನೋವು ಉಂಟಾಗಿ ಭ್ರಮೆಯು ಕಾಣಿಸಿಕೊಂಡು ಜ್ಞಾನತಪ್ಪಿ ಬಹಳ ಬಲಹಾನಿಯಾಗಿ ದೃಷ್ಟಿ ವಿಕಟವಾಗಿ ಹುಚ್ಚುನಗೆಯಿಂ ನಗುತ ಕುಣಿದಾಡುತ ಪ್ರಳಾಪಂಗೊಳುತಿಹುದೆ ಚಿತ್ತವಿಭ್ರಮ ಸನ್ನಿಪಾತವೆಂದರಿವುದು. ಮತಾಂತರಕೆ, ಭ್ರಮೆಯು, ಮೈಮರೆಯುವುದು, ತಾಪವು, ಹಾಸ್ಯವನಾಡುತ ತನ್ನ ತಾನೆ ಪಾಡುವುದು, ಸುಮ್ಮನೆ ಕುಣಿದಾಡುವುದು, ದೇಹದಲ್ಲಿ ಬಾಧೆಯು ಕಳವಳ ಮಪ್ಪುದು, ಕಾಂತಿಹೀನಮಾಗಿಹುದು, ವಕ್ರವಾದವುಂಟಾಗಿಯೂ ಇಹುದೆ ಪಿತ್ತಾಧಿಕ್ಯ ಶ್ಲೇಷ್ಮವಾತ ಮಧ್ಯಮವಾತ ಚಿತ್ತವಿಭ್ರಮ ಸನ್ನಿಪಾತವೆಂದು ಪೇಳಲ್ಪಟ್ಟಿತು.

## ಚಿಕಿತ್ಸೆ—ಕಷಾಯಂಗಳು.

ಪಥ್ಯಾದಿ ಕಷಾಯ—ಅಳಲೆಕಾಯಿ, ಪರ್ಪಾಟಕ, ಕಟುಕರೋಹಿಣಿ, ದ್ರಾಕ್ಷಿ ಹಣ್ಣು, ತುಪ್ಪ ದೇವದಾರೆ, ಕೊಡನಾರಿಗೆಡ್ಡೆ, ನೆಲಬೇವು, ಕಕ್ಕೆಚಕ್ಕೆ, ಇವು ಪ್ರತ್ಯೇಕ ಗ ೨ ತೂಕವಂ ಎರಡು ಮಾನ ನೀರಿನಲ್ಲಿ ಹಾಕಿ ಚಾತುರ್ಭಾಗಾವಶೇಷವಾಗಿ ಕಾಸಿ ಸೇವಿಸೆ ಚಿತ್ತವಿಭ್ರಮ ಸನ್ನಿ ಗುಣಮಕ್ಕುಂ. ೧

ಲೊಕ್ಕಿಸೊಪ್ಪು, ಹೆಗ್ಗುಳ್ಳದ ಹಣ್ಣಿನ ಬೀಜ, ಬೆಳ್ಳುಳ್ಳಿ, ಗರುಗ, ಶುಂಠಿ, ಇವಂ ಸಮಾನ ಕಷಾಯವ ಕಾಸಿ ಕೊಡಿಸಲು ಚಿತ್ತವಿಭ್ರಮಸನ್ನಿಹರ. ೨

ಅಳಲೆಕಾಯಿ, ಪರ್ಪಾಟಕ, ಕಟುಕರೋಹಿಣಿ, ದ್ರಾಕ್ಷೆಹಣ್ಣು, ತುಪ್ಪದೇವದಾರು, ಕೊಡನಾರಿಗೆಡ್ಡೆ, ನೆಲಬೇವು, ಕಕ್ಕೆಚಕ್ಕೆ, ತಾರೆಕಾಯಿ, ಇವು ಪ್ರತ್ಯೇಕ ಗ ೨ ತೂಕವಂ ಚಾತುರ್ಭಾಗಾವಶೇಷವಾಗಿ ಕಾಸಿ ಕುಡಿಯಲು ಚಿತ್ತವಿಭ್ರಮ ಸನ್ನಿ ಶಮನವಹುದು. ೩

## ಧೂಪ

ಕಕ್ಕೋರೆಲೆ, ಎಲವದ ಹಗಿನು, ಹಿಪ್ಪಲಿ, ಲಾಮಂಚ, ಮುಡಿವಾಳ, ಅಗಿಲು, ಮುರಾ ಎಂಬ ಗಂಧದ್ರವ್ಯ, ಶ್ರೀಗಂಧ ಸಹ ಸಮಾಂಶ ಚೂರ್ಣಂ ಮಾಡಿ ಧೂಪವ ಹಾಕಲು ಚಿತ್ತವಿಭ್ರಮಸನ್ನಿ ಶಮನವಹುದು. ೧

ಗೋರಟೆಯ ಬೇರು, ಎಲವದ ಹಗಿನು, ಹಿಪ್ಪಲಿ, ಮುಡಿವಾಳ, ಲಾಮಂಚ, ಅಗಿಲು, ಶ್ರೀಗಂಧ, ಇವನೆಲ್ಲಂ ಪುಡಿಮಾಡಿ ಧೂಪವಿಕ್ಕಲು ಚಿತ್ತವಿಭ್ರಮಸನ್ನಿ ಗುಣಮಕ್ಕುಂ. ೨

## ನಸ್ಯ.

ಯಷ್ಟಿಮಧುಕ, ದ್ರಾಕ್ಷೆಹಣ್ಣು, ಇಪ್ಪೆಹೂವು, ಹಿಪ್ಪಲಿ, ಖರ್ಜೂರದ ಹಣ್ಣು, ಸೊಗದೆಬೇರು, ಮುಡಿವಾಳ ಇಷ್ಟನು ಮೊಲೆವಾಲಿಂದಾಗಲಿ ಕಬ್ಬಿನ ಹಾಲೊಳಾ

ಗಲಿ ಜೇನುತುಪ್ಪದೊಳಾಗಲಿ ಕಲಸಿ ನಸ್ಯಂ ಮಾಡೆ ಚಿತ್ತವಿಭ್ರಮಸನ್ನಿ ಶಮನವಹುದು. ೧

ಅಂತು ಕಷಾಯ ೪, ಧೂಪ ೨, ನಸ್ಯ ೧ ಸಹ ಪ್ರಯೋಗ ಒಕ್ಕಂ ೭.

---

## ಶೀತಾಂಗಸನ್ನಿಪಾತ.

ಲಕ್ಷಣ :— ಶರೀರವಾದ್ಯಂತವೂ ಬಾಳೆದಿಂಡಿನ ಹಾಗೆ ತಣ್ಣನಾಗಿ ದೇಹದಲ್ಲಿ ನಡುಕಂ ಪುಟ್ಟಿ ಅಧಿಕವಾದ ಶ್ವಾಸ ಉಂಟಾಗಿ ಮೈಯಲ್ಲಿ ಬಳಲಿಕೆ ಹುಟ್ಟಿ ಬಿಕ್ಕಳಿಸುತ್ತ ಕಂಠಸ್ವರವು ಕ್ಷೀಣವಾಗಿ ವೆಗ್ಗಳವಾದ ತಾಪವುಂಟಾಗಿ ಛರ್ದಿಯಾಗುತ ಅತಿಸಾರ ಕಾಣಿಸಿಹುದಿವೆಲ್ಲ ಸೀತಾಂಗ ಸನ್ನಿಪಾತಲಕ್ಷಣವೆಂದರಿವುದು. ಈ ಸನ್ನಿಪಾತವು ಅಸಾಧ್ಯವಾದ ಕಾರಣ ಚಿಕಿತ್ಸೆಯಂ ಪೇಳ್ವು[1]ದಿಲ್ಲೆ[1]ಂದು ಪೇಳಲ್ಪಟ್ಟಿತು. ಮತ್ತಂ ಶರೀರವೆಲ್ಲವು ಶೀತವಾಗಿ ಸ್ವರಹೀನವಾಗಿ ದೇಹದಲ್ಲಿ ಬಾಧೆಯುಂಟಾಗಿ ಛರ್ದಿ ಅತಿಸಾರಗಳು ಪುಟ್ಟಿ ಬಿಕ್ಕಳು ಶ್ವಾಸವುಂಟಾಗಿ ಬಲಹೀನವಾಗಿಹುದೆ ಶ್ಲೇಷ್ಮ ಉಲ್ಬಣವಾಗಿ ವಾತ ಮಧ್ಯಮವಾಗಿ ಪೈತ್ಯ ಮಾಂದ್ಯವಾದ ಶೀತಾಂಗ ಸನ್ನಿಪಾತವೆಂದು ಮತಾಂತರದಲ್ಲಿ ಲಕ್ಷಣಂ ಪೇಳಲ್ಪಟ್ಟಿತು.

### ಕಷಾಯ.

ಶುಂಠಿ, ಹಿಪ್ಪಲಿ, ಮೆಣಸು, ಹಿಪ್ಪಲಿಮೂಲ, ಚವ್ಯ, ಚಿತ್ರಮೂಲ, ಗಂಟುಭಾರಂಗಿ, ಗುಗ್ಗುಳ ಸಹ ಸಮಾನವಾಗಿ ಕಷಾಯವಿಟ್ಟು ಅದರಲ್ಲಿ ವರಹ ತೂಕ ಇಲ್ಲಣವಂ ಪ್ರತಿಪಾಕವ ಮಾಡಿ ಕೊಡಲು ಶೀತಾಂಗಸನ್ನಿಪಾತ ಶಮನವಹುದು. ೧

## ತಾಂದ್ರಿಕ ಸನ್ನಿಪಾತ.

ಲಕ್ಷಣ :—[2]ಬಹಳವಾದ ತೂಕಡಿಕೆಯುಂಟಾಗಿ ಅಧಿಕವಾದ ಬಳಲಿಕೆಯಾಗಿ ವಿಶೇಷ ಜ್ವರವೂ ಉಂಟಾಗಿ ಕೆಮ್ಮು, ಬಾಯಾರಿಕೆಯು, ಮೈನೋವು, ನಾಲಗೆಯು ಕಪ್ಪಾಗಿ ಬಿರುಸು ದೋರಿ ಮುಳ್ಳುಮುಳ್ಳಾಗಿಹುದು, ಅತಿಸಾರ, ಶ್ವಾಸ, [3]* * * * * * *[3] ಉಂಟಾಗಿ ಕಿವಿ ಕೇಳಿಸದೆ ಕೊರಳಲ್ಲಿ ನೋವು ಮೈಯಲ್ಲಿ ತೀಟೆ ಮುಂತಾದ ಲಕ್ಷಣಗಳುಳ್ಳುದೆ ತಾಂದ್ರಿಕ ಸನ್ನಿಪಾತವೆಂದರಿವುದು[2]. ಮತ್ತಂ ಅತ್ಯಂತ ತೂಕಡಿಕೆಯು, ಶ್ವಾಸ ಅತಿಸಾರಗಳು, ಬಳಲಿಕೆ,

---

[1] ದಿವೆಲ್ಲಂ, (ಗ). [2] (ಗ) ಪ್ರತಿಯಲ್ಲಿಲ್ಲ. [3] (ಕ) ಪ್ರತಿಯಲ್ಲಿ ಪಾತ.

ತಾಪವು, ಕೊರಳಲ್ಲಿ ತೀಟೆಯು, ಕಿವಿ ಕೇಳದೆ ಇಹುದು,[1] ನಾಲಗೆ ಕಪ್ಪುದೋರಿ ಮುಳ್ಳಿನಂತಿಹುದು, ಬಹಳ ಬಿಸಿಯಾಗಿರುವುದು. [2] * * * * * * [2] ದೇಹದಲ್ಲಿ ಮದವೇದನಗಳುಂಟಾಗಿಹುದಿವೆಲ್ಲಂ ಪಿತ್ತ ಶ್ಲೇಷ್ಮಾಧಿಕ್ಯವಾದ ಮಂದವಾತವನುಳ್ಳ ತಾಂದ್ರಿಕಸನ್ನಿಪಾತ ಲಕ್ಷಣವೆಂದು ಮತಾಂತರದಲ್ಲಿ ಪೇಳಲ್ಪಟ್ಟಿತು.

## ಚಿಕಿತ್ಸೆ—ಕಷಾಯ

ಭಾ[3]ರಂಗ್ಯಾ[3]ದಿ ಕಷಾಯ :—ಗಂಟುಭಾರಂಗಿ, ಪುಷ್ಕರಮೂಲ, ಅಳಿಲೆಕಾಯಿ, ನೆಲಗುಳ್ಳ, ಶುಂಠಿ, ಅಮರದವಳ್ಳಿ, ಇವು ಪ್ರತ್ಯೇಕ ಗ ೪ ತೂಕ ವಂ ಬಳ್ಳ ನೀರಿನಲ್ಲಿ ಕಷಾಯವಿಕ್ಕಿ ಅಷ್ಟಾವಶೇಷವಾಗಿ ಕಾಸಿ ಕುಡಿಯೆ ತಾಂದ್ರಿಕಸನ್ನಿ ಗುಣಮಕ್ಕುಂ. ೧

ಬೆಲ್ಲವತ್ತದ ಬೇರು, ನರುವಲದ ಬೇರು, ಗೂಳದ ಬೇರು, ಪಾದರಿ ಬೇರು, ಹೆಮ್ಮರದ ಬೇರು, ಹೆಗ್ಗುಳ್ಳ, ನೆಲಗುಳ್ಳ, ಎರಡೆಲೆಹೊನ್ನೆ, ಮೂರೆಲೆಹೊನ್ನೆ, ನೆಗ್ಗಿಲು ಇವನೆಲ್ಲವಂ ಕಷಾಯವಿಟ್ಟು ಅಷ್ಟಾವಶೇಷವಾದ ಕಷಾಯವಂ ಕುಡಿಯೆ ತಾಂದ್ರಿಕಸನ್ನಿಪಾತ ಜ್ವರ ಹರಂ. ೨

[4] ರಾಸ್ನೆ, ಶುಂಠಿ, ಅಮರದವಳ್ಳಿ, ಆದಿತ್ಯಭಕ್ತನ ಬೇರು, * * * * * * * * ಸಬ್ಬಸಿಗೆ, ಅತಿಬಜೆ, ಖರ್ಜೂರದ ಹಣ್ಣು, ಅಡುಸೋಗೆ, ಬೆಳ್ಳುಳ್ಳಿ, ಬೆಲ್ಲವತ್ತದ ಬೇರು, ನರುವಲದ ಬೇರು, ಹೆಮ್ಮರದ ಬೇರು, ಶಿವನ್ನಿಯ ಬೇರು, ಪಾದರಿ ಬೇರು, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಔಡಲದ ಬೇರು, ಗುಳ್ಳ, ಹೆಗ್ಗುಳ್ಳ, ಇವಂ ಸಮಭಾಗ ಕಷಾಯವಿಟ್ಟು ಅಷ್ಟಾವಶೇಷವಾಗಿ ಕಾಸಿ ಉದಯದಲ್ಲಿ ಕುಡಿಯೆ ತಾಂದ್ರಿಕ ಸನ್ನಿಪಾತ ಪರಿಹರವಹುದು.[4] ೩

ಗಂಟುಭಾರಂಗಿ, ಪುಷ್ಕರಮೂಲ, ಅಳಿಲೆಕಾಯಿ, ನೆಲಗುಳ್ಳ, ಇವಂ ಸಮವಾಗಿ ಕಷಾಯವಿಕ್ಕಿ ಸೇವಿಸೆ ತಾಂದ್ರಿಕಸನ್ನಿಪಾತ ಗುಣಮಕ್ಕುಂ. ೪

ಅಮರದವಳ್ಳಿ, ಶುಂಠಿ, ಮೆಣಸು, ಹಿಪ್ಪಲಿ, ಕಹಿಪಡವಲ ಇವಂ ಕಷಾಯವಿಟ್ಟು ಕೊಡಲು ತಾಂದ್ರಿಕಸನ್ನಿಪಾತಂ ಕೆಡುಗುಂ. ೫

ಗಂಟುಭಾರಂಗಿ, ಅಳಿಲೆಕಾಯಿ, ನೆಲಗುಳ್ಳ, ಪುಷ್ಕರಮೂಲ, ಶುಂಠಿ ಇವಂ ಪ್ರತ್ಯೇಕ ಗ ೪ ವರಹ ತೂಕವಂ ಬಳ್ಳ ನೀರಿನಲ್ಲಿ ಹಾಕಿ ಅಷ್ಟಾವಶೇಷವಾಗಿ ಕಷಾಯವಿಕ್ಕಿ ಕೊಡಿಸೆ ತಾಂದ್ರಿಕಸನ್ನಿಪಾತಂ ಪರಿಹರಮಕ್ಕುಂ. ೬

## ನಸ್ಯ.

ಚೆಂಗಲಕೋಷ್ಟ, ಹಾವುಮೆಕ್ಕೆಬೇರು, ಶುಂಠಿ, ಅರಿಸಿನ, ಮರದರಿಸಿನ,

---

[1] + ಪರಮಭೀತಿಯಾಗಿರುವುದು, ಅರೋಚಕ ಬಾಯಾರಿಕೆಗಳು, (ಗ).
[2] (ಕ) ದಲ್ಲಿ ಪಾಠ. [3] ಙ್ಯಾ, (ಗ). [4] (ಗ) ಪ್ರತಿಯಲ್ಲಿಲ್ಲ.

ಮೆಣಸು, ಬಜೆ ಸಹ ಆಡಿನ ಮೂತ್ರದಲ್ಲಿ ಸಣ್ಣನಾಗರೆದು ನಸ್ಯಂ ಮಾಡೆ ತಾಂದ್ರಿಕ ಸನ್ನಿಪಾತಜ್ವರಂ ಗುಣಮಕ್ಕುಂ. ೧

ಶುಂಠಿ, ಅರಿಸಿನ, ಮರದರಿಸಿನ, ಚಂಗಲಕೋಷ್ಟ, ಹಾವುಮೆಕ್ಕೆ ಬೇರು, ಮೆಣಸು, ಹಿಪ್ಪಲಿ, ಇವಂ ಆಡಿನ ಮೂತ್ರದಲ್ಲರೆದು ನಸ್ಯಂ ಮಾಡಲು ತಾಂದ್ರಿಕ ಸನ್ನಿಪಾತಂ ಶಮನವಹುದು. ೨

## ಅಂಜನ.

ಹಿಪ್ಪಲಿ, ಮೆಣಸು, ಇವೆರಡನ್ನು ಮೊಲೆಹಾಲಿಂದರೆದು ಕಣ್ಣಿಗೆಚ್ಚಲು ತಾಂದ್ರಿಕಸನ್ನಿ ಪರಿಹರಮಕ್ಕುಂ. ೧

ಅಂತು ಕಷಾಯ ೬, ನಸ್ಯ೨, ಅಂಜನ ೧, ಸಹ ಪ್ರಯೋಗ ೯ಕ್ಕಂ ಸಮಾಪ್ತಂ.

---

## ಕಂಠಕುಬ್ಜ ಸನ್ನಿಪಾತ.

ಲಕ್ಷಣ :—ಮಂಡೆಯನೋವು ಕಾಣಿಸಿ, ಮೆಟರುಗಟ್ಟು (?), ಮೈಯುರಿತ ವುಂಟಾಗಿ ಅಜ್ಞಾನವು, ಶರೀರದಲ್ಲಿ ಕಂಪನವು ಪುಟ್ಟಿ, ಜ್ವರವು, ಶೋಣಿತವಾತ ದಿಂದುಂಟಾದ ನೋವು, ದಾಡೆಗಳು ಕಟ್ಟಿಕೊಂಬುದು, ತಾಪವು, ಕಳವಳವು, ಉಂಟಾಗಿರ್ಪುದೆ ಕಂಠಕುಬ್ಜಸನ್ನಿಪಾತವೆಂದರಿವುದು. ಮತ್ತಂ ಋಷ್ಯಶೃಂಗ ಮತೆ, ಗಂಟಲ ಸೆರೆ ಬಿಗಿದು ಪ್ರಳಾಪ, ದಾಹ, ಮೈಯುರಿತ, ಮೈಯಲ್ಲಿ ವೆಗ್ಗಳ ವಾದ ಬಿಸಿ, ದೇಹದಲ್ಲಿ ಗುರುತ್ವ, ಎದ್ದೆದ್ದು ಬೀಳುವುದು, ಕಂಪ, ಮೂರ್ಛೆ, ಶ್ವಾಸ, ಮಂಡೆಯನೋವು, ಕಿವಿಗಳಲ್ಲಿ ಶಬ್ದ, ವೇದನೆ, ಕೊರಳ ಸುತ್ತಲು ಮುಳ್ಳಿ ನಂತೆ ಏಳುವುದು, ಈ ಲಕ್ಷಣಂಗಳುಳ್ಳುದೆ ವಾತಪಿತ್ತಂಗಳ ಆಧಿಕ್ಯ ಶ್ಲೇಷ್ಮ ಮಾಂದ್ಯ ಮಾದ ಕಂಠಕುಬ್ಜಸನ್ನಿಪಾತವೆಂದು ಪೇಳಲ್ಪಟ್ಟಿತು.

## ಚಿಕಿತ್ಸೆ--ಕಷಾಯಗಳು.

ಎಕ್ಕದ ಬೇರಿನ ತೊಕ್ಕನು ಕಷಾಯ ವಿಟ್ಟು ಅದರಲ್ಲಿ ಮೆಣಸಿನ ಚೂರ್ಣವ ಹಾಕಿ ಕುಡಿಯೆ ಕಂಠಕುಬ್ಜ ಸನ್ನಿಪಾತ ಹರಂ. ೧

ಬೆಲ್ಲವತ್ತದ ಬೇರು, ನರುವಲದ ಬೇರು, ಗೂಳದ ಬೇರು, * ಹೆಮ್ಮರದ ತೊಕ್ಕು, ಪಾದರಿ ಬೇರು, ಗುಳ್ಳ, ನೆಲಗುಳ್ಳ, ಎರಡೆಲೆ ಹೊನ್ನೆ, ಮೂರೆಲೆ ಹೊನ್ನೆ, ನೆಗ್ಗಿಲು ಸಹ ದಶಮೂಲ, ಇವುಗಳ ಕಷಾಯಂ ಕಾಸಿ ಸೇವಿಸೆ ಕುಬ್ಜಸನ್ನಿ ಪಾತ ಗುಣವಹುದು. ೨

---

* (ಕ) ಪ್ರತಿಯಲ್ಲಿಲ್ಲ.

ಶುಂಠಿ, ಹಿಪ್ಪಲಿ, ಮೆಣಸು, ಕಾಡು ಕೌಟೆಯ ಸೊಪ್ಪು, ಕಟುಕರೋಹಿಣಿ, ಕೊಡನಾರಿ ಗೆಡ್ಡೆ, ಅಳಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು ಸಹ ಕಷಾಯಂ ಕಾಸಿ ಕುಡಿಯೆ ಕಂಠಕುಬ್ಜ ಸನ್ನಿ ಪರಿಹರವಹುದು. ೩

ಆಡು ಸೋಗೆಯ ಸೊಪ್ಪು, ಅರಿಸಿನ, ಮರದರಿಸಿನ, ಇವುಗಳ ಕಷಾಯ ವಿಟ್ಟು ಪಾನವಂ ಮಾಡಲು ಕಂಠಕುಬ್ಜ ಸನ್ನಿಹರ. ೪

ಕರ್ಕಾಟಕ ಶೃಂಗಿ, ಕೊಡಸಿಗೆ ಬೀಜ, ಕೊನ್ನಾರೆ, ಕರ್ಪೂರ, ಶುಂಠಿ, ನೆಲಬೇವು, ಗಂಟುಭಾರಂಗಿ, ಕಟುಕರೋಹಿಣಿ, ಅರಿಸಿನ, ಗೇರಬೇರು, ಚಿತ್ರ ಮೂಲ, ಬಜೆ, ಹಿಪ್ಪಲಿ, ಗೂಳದ ಬೇರು, ನೆಲ್ಲಿಯ ಚಟ್ಟು, ದೇವದಾರು, ತಾರೆ ಕಾಯಿ, ಮೆಣಸು, ನೆಲಗುಳ್ಳದ ಬೇರು, ಇವು ಪ್ರತ್ಯೇಕ ಗ ೨ ತೂಕವನ್ನು ಬಳ್ಳ ನೀರಿನಲ್ಲಿ ಹಾಕಿ ಅಷ್ಟಾವಶೇಷವಾಗಿ ಕಾಸಿ ಕುಡಿಯೆ ಕಂಠ ಕುಬ್ಜ ಸನ್ನಿಹರ. ೫

ಬೆಲ್ಲವತ್ತದ ಬೇರು, ಗೂಳದ ಬೇರು, ತಗ್ಗಿ ಬೇರು, ಕಹಿಪಡವಲ, ಚವ್ಯ, ಪರ್ಪಾಷ್ಟಕ, ನೆಲಗುಳ್ಳ, ಶುಂಠಿ, ಇವಂ ಕಷಾಯ ವಿಟ್ಟು ಕೊಡಲು ಕಂಠಕುಬ್ಜ ಸನ್ನಿ ಮಾಣ್ಗುಂ. ೬

ಶುಂಠಿ, ಹಿಪ್ಪಲಿ, ಮೆಣಸು, ಕಹಿಸೋರೆ ಬೀಜ, ಚಿತ್ರಮೂಲ ಸಹ ಕಷಾಯ ವಿಟ್ಟು ಸೇವಿಸೆ ಕಂಠಕುಬ್ಜ ಸನ್ನಿಹರ. ೭

## ನಸ್ಯ.

ಹಿಪ್ಪಲಿ, ಉತ್ತರಣಿಬೀಜ, ಇವಂ ಗೋಮೂತ್ರದಿಂ ತೇದು ನಶ್ಯಂ ಮಾಡಲು ಕಂಠಕುಬ್ಜ ಸನ್ನಿಹರ. ೧

ಶುಂಠಿ, ಹಿಪ್ಪಲಿ, ಮೆಣಸು, ಕಹಿಸೋರೆ ಬೀಜ, ಚಿತ್ರಮೂಲ ಸಹ ಕಷಾಯ ವಿಟ್ಟು ನಸ್ಯಂಮಾಡೆ ಕಂಠಕುಬ್ಜ ಸನ್ನಿಹರ ೨

ಹಿಪ್ಪಲಿ, ಉತ್ತರಣಿ ಬೀಜ ಸಹ ಚೂರ್ಣಮಾಡಿ ನಾಸಿಕ ದ್ವಾರದಲ್ಲಿ ಊರು ಹೋಹಲು (?) ಕಂಠಕುಬ್ಜ ಸನ್ನಿಹರ. ೩

ಅಂತು ಕಂಠಕುಬ್ಜ ಸನ್ನಿ ಬಗೆ ೧ಕ್ಕೆ ಕಷಾಯ ೭, ನಸ್ಯ ೩
ಸಹ ಪ್ರಯೋಗಂ ೧೦.

---

## ಕರ್ಣಿಕ ಸನ್ನಿಪಾತ.

ಲಕ್ಷಣ.—ಶ್ವಾಸವು, ಕೆಮ್ಮು, ಬಾಯಿನೀರು, ಪ್ರಳಾಪ, ಜ್ವರ, ಭ್ರಮೆ ಸಹ ಉಂಟಾಗಿ ಕಿವಿಯೊಳಗೆ ಆಯುಸ್ಥಾನವಾದ ಮೂಲದಲ್ಲಿ ಗಂಟುಕಟ್ಟಿ ಬಾವು

ತೋರುವುದಿನಿತುಂ ಕರ್ಣಿಕ ಸನ್ನಿಪಾತವೆಂದರಿವುದು. ಈ ಸನ್ನಿಪಾತದಿಂ, ಕರ್ಣಮೂಲ ವೆಂಬ ಬಾವಿಗೆ ಜಿಗುಳೆಗಳಂ ಬಿಟ್ಟು ರಕ್ತವ ತೆಗೆಯಿಸುವುದರಿಂ ಕರ್ಣಿಕಾ ಗ್ರಂಥಿ ಶಮನವಹುದು. ಮತ್ತಂ ಕಿವಿಗಳ ಮೂಲದಲ್ಲಿ ಗ್ರಂಥಿಯಿಂದ ಬಾವಾಗಿ ತಾಪವು, ದೇಹದಲ್ಲಿ ಸ್ವಲ್ಪವಾದ ಬಿಸಿಯೂ ನಡುಕವೂ, ಪ್ರಳಾಪವೂ, ಎದೆನೋವೂ, ಶ್ವಾಸ ಖಾಸಗಳೂ, ಅಲ್ಪ ಮೈನೋವು ಇವೆಲ್ಲಂ ಶ್ಲೇಷ್ಮಾಧಿಕ್ಯ ವಾಗಿ ಪಿತ್ತಮಧ್ಯಮವಾಗಿ ಮಂದವಾದ ವಾತವನುಳ್ಳ ಕರ್ಣಿಕ ಸನ್ನಿಪಾತ ವೆಂದು ಋಷ್ಯಶೃಂ [1] ಗ ಮತ [1] ದಲ್ಲಿ ಪೇಳಲ್ಪಟ್ಟಿತು.

## ಚಿಕಿತ್ಸೆ—ಕಷಾಯಗಳು.

ಮೆಣಸು, ಬೆಲ್ಲವತ್ತದ ಬೇರು, ನರುವಲದ ಬೇರು, ಗೂಳದ ಬೇರು, ಪಾದರಿ ಬೇರು, ಹೆಮ್ಮರದ ಬೇರು, ಗುಳ್ಳ, ನೆಲಗುಳ್ಳ, ಎರಡೆಲೆಹೊನ್ನೆ, ಮೂ ರೆಲೆಹೊನ್ನೆ, ನೆಗ್ಗಿಲು, ಕಟುಕರೋಹಿಣಿ, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿ ಚಟ್ಟು, ಶುಂಠಿ, ಹಿಪ್ಪಲಿ, ಚಿತ್ರಮೂಲ, ನೆಲಬೇವು ಸಹ ಕಷಾಯಂ ಕಾಸಿ ಕುಡಿಯೆ ಕರ್ಣಿಕ ಸನ್ನಿಪಾತ ಜ್ವರಂ ಗುಣಮಹುದು.

ರಾಸ್ನೆ, ಗುಳ್ಳದ ಬೇರು, ಅಳಿಲೆಕಾಯಿ, ಕೊನ್ನಾರಿಗೆಡ್ಡೆ, ಕಟುಕ ರೋಹಿಣಿ, ಶುಂಠಿ, ಹಿಪ್ಪಲಿ, ಮೆಣಸು, ಪುಷ್ಕರಮೂಲ, ಅತಿಬಜೆ, ಕರ್ಕಾಟಕ ಶೃಂಗಿ, ಗಂಟುಭಾರಂಗಿ, ಕೊತ್ತುಂಬರಿ ಇವಂ ಕಷಾಯವಿಕ್ಕಿ ಸೇವಿಸೆ ಕರ್ಣಿಕ ಸನ್ನಿಪಾತ ಜ್ವರಂಮಾಣ್ಗುಂ. ೨

ಕಳ್ಳಂಗಡಲೆ, ಬೋಳಗಡಲೆ, ನಾಗಮುತ್ತು, ಪುಲಂಗ, ಇದುಕಾರೆ, ಶುಂಠಿ, ಹಿಪ್ಪಲಿ, ಮೆಣಸು, ಮರದರಿಸಿನ, ಹಾಲೆದೇರು, ಎಕ್ಕದ ಬೇರು, ಎಕ್ಕದ ಚಕ್ಕೆ, ನೆಲಗುಳ್ಳ, ಚಿತ್ರಮೂಲ, ಹಿಪ್ಪಲಮೂಲ, ಇವಂ ಸಮನಾಗಿ ಕಷಾಯ ವಿಟ್ಟು ಪಾನವಂ ಮಾಡಲು ಕರ್ಣಿಕಾಸನ್ನಿಪಾತ ಗುಣ ಮಹುದು. ೩

ಮೆಣಸು, ಕಟುಕರೋಹಿಣಿ, ಅಳಿಲೆಕಾಯಿ, ನೆಲ್ಲಿಕಾಯಿ, ತಾರೆಕಾಯಿ, ಶುಂಠಿ, ಹಿಪ್ಪಲಿ, ಮೆಣಸು, ನೆಲಬೇವು, ಗುಳ್ಳ, ಹೆಗ್ಗುಳ್ಳ, ಪಾದರಿ, ನೆಗ್ಗಿಲು, ಬೆಲ್ಲವತ್ತದ ಬೇರು, ನರುವಲದ ಬೇರು, ಎರಡೆಲೆ ಹೊನ್ನೆ, ಮೂರೆಲೆ ಹೊನ್ನೆ, ಇವಂ ಸಮಭಾಗ ಕಷಾಯವಿಟ್ಟು ಕೊಡಲು ಕರ್ಣಿಕ ಸನ್ನಿಪಾತಂ ಗುಣ ಮಕ್ಕುಂ. ೪

ಮರದರಿಸಿನ, ಕೊಡನಾರಿಗೆಡ್ಡೆ, ಕಟುಕರೋಹಿಣಿ, ಅಳಿಲೆಕಾಯಿ, ತಾರೆ ಕಾಯಿ, ನೆಲ್ಲಿಚಟ್ಟು, ನೆಲಗುಳ್ಳದ ಬೇರು, ಕಹಿಪಡವಲ, ಅರಿಸಿನ, ಬೇವಿನ ಒಳ ನಾರು, ಇವು ಪ್ರತ್ಯೇಕ ಗ ೨ ತೂಕವಂ ಕಷಾಯವಂ ಮಾಡಿ ಪ್ರಾತಃಕಾಲದಲ್ಲಿ ಕುಡಿಯ ಕೊಡಲು ಸನ್ನಿಪಾತಂ ಮಾಣ್ಗುಂ.

[1] ಗಾಗಮದ (ಗ).

ಲಾಮಂಚ, ಮುಡಿವಾಳ, ಭದ್ರಮುಸ್ತೆ, ಇವಂ ಕಷಾಯವಿಕ್ಕಿ ಕುಡಿಸಲು ಕರ್ಣಿಕಸನ್ನಿ ಗುಣಮಕ್ಕುಂ. ೬

## ಲೇಪ.

ಇಂಗು, ಅರಿಸಿನ, ಹಾವುಮೆಕ್ಕೆ ಬೇರು, ಸೈಂಧವ, ದೇವದಾರು, ಹಿಪ್ಪಲಿ ಸಹ ಎಕ್ಕದ ಹಾಲಿನಲ್ಲಿ ಮರ್ದಿಸಿ ತಪ್ಪವೆರಸಿ ಲೇಪವಮಾಡೆ ಕರ್ಣಿಕಸನ್ನಿಪಾತದಿಂದುಂಟಾದ ಬಾವು ಗುಣಮಕ್ಕುಂ. ೧

## ಗಂಡೂಷ.

ಹಿಪ್ಪಲಿ, ಲವಣ ಸಹ ಚೂರ್ಣಿಸಿ ಲೇಪವಮಾಡೆ ಕರ್ಣಿಕಸನ್ನಿಹರ. ೧

ಅಂತು ಕಷಾಯ ೬, ಲೇಪ ೧, ಗಂಡೂಷ ೧ ಸಹಪ್ರಯೋಗ ಲಕ್ಕೆ ಸಮಾಪ್ತಂ.

---

## ಭಗ್ನನೇತ್ರ ಸನ್ನಿಪಾತ.

ಲಕ್ಷಣ:—ಜ್ವರ ಕಾಯುತ್ತ ವಾತಪ್ರಕೋಪವಾಗಿ ಕಿವಿ ಕೇಳಿಸದೆ ಶ್ವಾಸ ಉಂಟಾಗಿ ಕಣ್ಣುಗಳಲ್ಲಿ ನೀರು ಸುರಿಯುತ್ತ ಅಜ್ಞಾನ, ಪ್ರಳಾಪ, ಭ್ರಮೆ, ನಡುಕ, ಶೋಕ ಸಹ ಕೂಡಿರ್ಪುದೆ ಭಗ್ನನೇತ್ರ ಸನ್ನಿಪಾತವೆನಿಸಿಕೊಂಬುದು. ಮತ್ತಂ ಕಣ್ಣುಗಳೆರಡೂ ಕದಡಿಕೊಂಡು ಕೆಂಪಾಗಿ ಒಡೆದು ನೀರು ಸುರಿಯುತ್ತ ಕಣ್ಣಿವೆಗಳು ಕೆಂಪಾಗಿ ಚರಿಸುತ್ತ ಮೊಳಕಾಲ ಚಿಪ್ಪುಗಳು, ಪಾರ್ಶ್ವಗಳು, ಮಂಡೆಯು ಕೂಡ ನೋಯುತ ಸಂಧಿಗಳಲ್ಲಿಯೂ ಅಸ್ಥಿಗಳಲ್ಲಿಯೂ ನೋವು ಉಂಟಾಗಿ ಭ್ರಮೆಯು, ಶ್ವಾಸವು, ಪ್ರಳಾಪವು, ಕಂಪವು, ಅತಿನಿದ್ರೆಯೂ ಉಂಟಾಗಿಹುದಿವೆಲ್ಲಂ ವಾತಾಧಿಕ್ಯವಾದ ಪಿತ್ತಶ್ಲೇಷ್ಮಂಗಳ ಮಾಂದ್ಯವುಳ್ಳ ಭಗ್ನನೇತ್ರ ಸನ್ನಿಯ ಲಕ್ಷಣವೆಂದು ಮತಾಂತರದಲ್ಲಿ ಪೇಳಲ್ಪಟ್ಟಿತು.

## ಚಿಕಿತ್ಸೆ—ಕಲ್ಕಗಳು.

ನೆಲಬೇವು, ಬಜೆ, ಹಿಪ್ಪಲಿ, ಮೆಣಸು, ಅಳಲೆಕಾಯಿ, ಜೀರಿಗೆ ಸಹ ಸಮನಾಗಿ ಅರೆದು ಅದಂ ಜೇನು ತುಪ್ಪದಲ್ಲಿ ಕಲಸಿ ಸೇವಿಸೆ ಭಗ್ನನೇತ್ರ ಸನ್ನಿಪಾತಂ ಮಾಣ್ಗುಂ. ೧

ಅಳಲೆಕಾಯಿ, ಕಹಿಪಡವಲ, ಕಟುಕರೋಹಿಣಿ, ಕೊಡನಾರಿಗೆಡ್ಡೆ, ಬೇವಿನ ಬೀಜ, ದೇವದಾರೆ ಇವಂ ಅರೆದು ಕೊಡಲು ಭಗ್ನನೇತ್ರ ಸನ್ನಿಪಾತಂ ಗುಣಮಕ್ಕುಂ. ೨

## ಕಷಾಯಗಳು.

ಮರದರಿಸಿನ, ಕೊಡನಾರಿಗೆಡ್ಡೆ, ಕಟುಕರೋಹಿಣಿ, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ತುರುಚನ ಬೇರು, ಕಹಿಪಡವಲ, ಅರಿಸಿನ, ನೆಲಬೇವು, ಇವಂ ಸಮಭಾಗ ಕಷಾಯವಿಕ್ಕಿ ಕೊಡಲು ಭಗ್ನನೇತ್ರ ಸನ್ನಿಯಿಂದುಂಟಾದ ವ್ಯೆಮರವು ಗುಣವಾಗಿ ಜ್ಞಾನಮಕ್ಕುಂ. ೩

ಪರ್ಪಾಷ್ಟಕ, ಕಟುಕರೋಹಿಣಿ, ಗಂಡುದುರುಚನಬೇರು, ಆಡುಸೋಗೆ, ನೆಲಬೇವು, ಮುಡಿವಾಳ, ನೇರಿಲು, ಇವಂ ಕಷಾಯವಿಕ್ಕಿ ಸಕ್ಕರೆವೆರಸಿಕೊಡಲು ಭಗ್ನನೇತ್ರ ಸನ್ನಿಪಾತಂ ಮಾಣ್ಗುಂ. ೪.

ಕೊತ್ತುಂಬರಿ, ಮುಡಿವಾಳ, ಕಟುಕರೋಹಿಣಿ, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ನೆಲಗುಳ್ಳ, ಕಹಿಪಡವಲ, ಅರಿಸಿನ, ನೆಲಬೇವು ಇವಂ ಕಷಾಯವಿಟ್ಟು ಸೇವಿಸೆ ಭಗ್ನನೇತ್ರ ಸನ್ನಿಹರ. ೫.

## ಚೂರ್ಣ.

ನೆಲಬೇವು ಹಿಪ್ಪಲಿ ಸಹ ಚೂರ್ಣಿಸಿ ಜೇನುತುಪ್ಪದಿಂ ಕಲಸಿ ಸೇವಿಸೆ ಭಗ್ನನೇತ್ರ ಸನ್ನಿ ಶಮನವಹುದು. ೧

ಹಿಪ್ಪಲಿ, ಮೆಣಸು, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಜೀರಿಗೆ ಇವಂ ಸಮಭಾಗ ಚೂರ್ಣಂ ಗೈದು ಜೇನುತುಪ್ಪದಿಂ ಕಲಸಿ ಮೆಲ್ಲಲು ಭಗ್ನನೇತ್ರ ಸನ್ನಿಪಾತಂ ಗುಣಮಹುದು. ೨.

## ಧೂಪ *

ಲೊಕ್ಕಿಸೊಪ್ಪು, ಬೇವಿನಸೊಪ್ಪು, ಚಂಗಲಕೋಷ್ಟ, ಅಳಿಲೆಕಾಯಿ, ಹತ್ತಿಯ ಹರಳು, ಬಿಳಿಯ ಸಾಸವೆ, ಬಜೆ, ಗಂಧಿಗತಗರ, ಎಕ್ಕದ ಬೇರು, ಕಣಿಗಿಲೆಬೇರು, ಬಿಳಿಗರಿಕೆ, ಶಿವನಿರ್ಮಾಲ್ಯ, ಕೊಡಸಿಗೆಬೀಜ, ಇವಂ ಸಮನಾಗಿ ಜಜ್ಜುಗುಟ್ಟಿ ಧೂಪವ ಹಾಕಲು ಭಗ್ನನೇತ್ರಸನ್ನಿ ಸಕಲಗ್ರಹ ದೋಷಂಗಳು ಸಹ ಮಾಣ್ಗುಂ. ೧

## ನಸ್ಯ.

ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು ಹಿಪ್ಪಲಿ, ಮೆಣಸು, ಇಂಗು, ಯಷ್ಟಿಮಧುಕ ಇವರಿಂ ನಸ್ಯವ ಮಾಡಲು ಭಗ್ನನೇತ್ರ ಸನ್ನಿಗುಣಮಹುದು. ೧

ಯಷ್ಟಿಮಧುಕ, ಇಂಗು, ಇಪ್ಪೆಮರದ ಕೆಚ್ಚು, ಇವಂ ನೀರಿಂ ತೇದು ನಸ್ಯಂಗೆಯ್ಯೆ ಭಗ್ನನೇತ್ರ ಸನ್ನಿಗುಣಮಕ್ಕುಂ ೨

---

*(ಕ) ಪ್ರತಿಯಲ್ಲಿಲ್ಲ.

ಮೆಣಸು, ಹಿರಿಮದ್ದಿನ ಬೇರು, ಸೈಂಧವ, ಬೆಳ್ಳುಳ್ಳಿ, ಯಷ್ಟಿಮಧುಕ, ಗಜ ಹಿಪ್ಪಲಿ, ಬಜೆ, ಶುಂಠಿ, ಇವಂ ಆಡಿನ ಹಾಲಿಂತ್ಲೇದು ಈ ಪಾಲಂ ಮೂಗಿಗೆ ನಸ್ಯಂ ಮಾಡೆ ಭಗ್ನನೇತ್ರ ಸನ್ನಿ ಮಾಣ್ಗುಂ. ೩

ಯಷ್ಟಿಮಧುಕ, ಇಂಗು, ಇವಂ ಇಪ್ಪೆಎಣ್ಣೆಯಲ್ಲಿ ಕಲಸಿ ನಸ್ಯಂ ಮಾಡೆ ಭಗ್ನನೇತ್ರ ಸನ್ನಿಗುಣಮಕ್ಕುಂ. ೪

ಸೈಂಧವಲವಣ, ಬಿಡುಲವಣ, ಸಂವತ್ಸರಲವಣ, ಹಿಪ್ಪಲಿ ಇವಂ ಸಮನಾಗಿ ನಿಂಬೆಹಣ್ಣಿನ ರಸದಿಂದ ನಸ್ಯಂಗೆಯ್ಯೆ ಭಗ್ನನೇತ್ರ ಸನ್ನಿಹರ. ೫

## ಗಂಡೂಷ.

ನೆಲಬೇವು, ಮಾಕ್ಷಿಕ, ಹಿಪ್ಪಲಿ, ಇವಂ ಲೇಹ್ಯಂಮಾಡೆ ಭಗ್ನನೇತ್ರ ಸನ್ನಿಶಮ ನಮಕ್ಕುಂ. ೧

ಅಂತು ಕಲ್ಕ ೨, ಕಷಾಯ ೫, ಚೂರ್ಣ ೨, ಧೂಪ ೧, ನಸ್ಯ ೫, ಗಂಡೂಷ ೧ ಸಹಿತಂ ಯೋಗ ೧೬ ಕ್ಕಂ ಸಮಾಪ್ತಃ.



## ರಕ್ತಷ್ಠೀವಿ ಸನ್ನಿಪಾತ.

ಲಕ್ಷಣ.—ಕೇಕರಿಸಿಯುಗುಳ್ದರೆ ಕೊರಟೆ ಕೊರಟೆಯಾಗಿ ಬಾಯಲ್ಲಿ ರಕ್ತ ಬೀಳುತ, ಜ್ವರವು, ಬಾಯಾರಿಕೆಯು ವಾಕರಿಕೆಯುಂಟಾಗಿ ಜ್ಞಾನತಪ್ಪಿ ಅತಿಸಾರ ಶೂಲೆಯುಂಟಾಗಿ ಬಿಕ್ಕಳು, ಹೊಟ್ಟೆಯುಬ್ಬರ, ಬಳಲಿಕೆಯು, ವಾಂತಿಯು, ಶ್ವಾಸವು, ಮೂರ್ಛೆಯು, ಸಹ ಉಂಟಾಗಿ ಮೈಯಲ್ಲಿ ಬಡವಾಗಿ ಗಂದೆಗಳೇಳು ವುದೀ ಲಕ್ಷಣ ಮುಳ್ಳೊಡೆ ರಕ್ತಷ್ಠೀವಿ ಸನ್ನಿಪಾತ ಮೆನಿಸಿಕೊಂಬುದು. ಮತಾಂತರೆ, ಕೇಕರಿಸಿಯುಗುಳ್ದರೆ ಬಾಯಲ್ಲಿ ರಕ್ತಬೀಳುತ ಬಾಯಾರಿಕೆಯು, ಭ್ರಮೆಯು, ವಮನವು, ಅತಿಸಾರವು ಹೆಗ್ಗಳವಾಗಿ, ಜ್ವರವು, ದೇಹದಲ್ಲಿ ಸ್ವಲ್ಪ ವೇದನೆಯು, ಶ್ವಾಸವು, ಬಿಕ್ಕಳು, ಮೂರ್ಛೆಯು, ಮೈಯಲ್ಲಿ ನಾನಾವರ್ಣದ ಬೊಕ್ಕೆಯುಂಟಾಗಿ ರಕ್ತವರ್ಣವುಳ್ಳ ಗಂದೆಯು ಪುಟ್ಟಿ ಇಹುದೆಲ್ಲಂ ಅಲ್ಪವಾತವಾಗಿ ಶ್ಲೇಷ್ಮ ಮಧ್ಯಮವಾಗಿ ಪಿತ್ತಾಧಿಕ್ಯವಾಗಿರುವ ರಕ್ತಷ್ಠೀವಿಸನ್ನಿಪಾತವೆಂದರಿವುದೆಂದು ಋಷ್ಯಶೃಂಗಮತದಲ್ಲಿ ಪೇಳಲ್ಪಟ್ಟಿತು.

## ಚಿಕಿತ್ಸೆ—ಕಷಾಯಗಳು.

ಹಿಪ್ಪಲಿ, ಹಿಪ್ಪಲಿಮೂಲ, ಚವ್ಯ, ಚಿತ್ರಮೂಲ, ಶುಂಠಿ ಸಹ ಕಷಾಯವ ಕಾಸಿ ಕುಡಿಯೆ ರಕ್ತಷ್ಠೀವಿಸನ್ನಿ ಪರಿಹರವಹುದು. ೧

ಪರ್ಪಾಷ್ಟಕ, ಕಟುಕರೋಹಿಣಿ, ಗಂಡುದುರುಚನ ಬೇರು, ಆಡುಸೋಗೆ ಸೊಪ್ಪು, ನೆಲಬೇವು, ಮುಡಿವಾಳ, ಇವಂ ಕಷಾಯಂಕಾಸಿ ಕುಡಿಯೆ ರಕ್ತಷ್ಠವಿ ಸನ್ನಿಹರ. ೨

ಕೊ[1]ಡ[1]ನಾರಿಗೆಡ್ಡೆ, ಚಂಗಲಕೋಷ್ಟ, ಪದ್ಮಕ, ಪರ್ಪಾಷ್ಟಕ, ಶ್ರೀಗಂಧ, ಜಾಜಿಯ ಬೇರು, ಆಷಾಡಿಗೆಣಸು, ಯಷ್ಟಿಮಧುಕ, ಬೇವಿನ ಒಳನಾರು, ತಾವರೆ ಗೆಣಸು, ರಕ್ತಚಂದನ ಸಹ ಕಷಾಯ ಕಾಸಿ ಕೊಡಲು ರಕ್ತಷ್ಠವಿ ಸನ್ನಿಪಾತದಿಂ ಬಾಯಿ ಮೂಗಿನಲ್ಲಿ ಬೀಳುವ ರಕ್ತವಾಕ್ಷಣವೆ ನಿಲ್ಗುಂ. ೩

ಅಳಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಪರ್ಪಾಷ್ಟಕ, ಕಹಿಪಡವಲ, ಚಿತ್ರಮೂಲ, ಪಾದರಿ ಬೇರು, ಶುಂಠಿ, ಎಕ್ಕೆಯ ಬೇರಿನ ತೊಕ್ಕು, ಇವಂ ಸರಿಗೈದು ಕಷಾಯಂ ಮಾಡಿ ಸೇವಿಸೆ ರಕ್ತಷ್ಠವಿಸನ್ನಿ ಗುಣಮಕ್ಕುಂ. ೪

ಮುಡಿವಾಳ, ಪದ್ಮಕ, ಪರ್ಪಾಷ್ಟಕ, ಶ್ರೀಗಂಧ, ಆಷಾಡಿ, ಯಷ್ಟಿಮಧುಕ, ನೆಲಬೇವು, ಇವಂ ಕಷಾಯಂ ಕಾಸಿ ಕುಡಿಯೆ ಮೂಗಿನ ರಕ್ತ ನಿಲ್ಗುಂ, ೫

ಪರ್ಪಾಷ್ಟಕ, ತುರುಚನ ಬೇರು, ಕಟುಕರೋಹಿಣಿ, ಆಡುಸೋಗೆ, ಲಾಮಂಚ, ಕೋಳಿಕುಟುಕನ ಗೆಡ್ಡೆ, ಇವನ್ನು ಸಮಾಂಶವಾಗಿ ಕಷಾಯವಿಕ್ಕಿ ಶರ್ಕರೆವೆರಸಿ ಕೊಡಲು ಬಾಯಲ್ಲಿ ಸುರಿವ ರಕ್ತಧಾರೆ ನಿಲ್ಗುಂ. ೬

## ನಸ್ಯ.

ದಾಳಿಂಬದ ಹೂವಿನ ರಸವನ್ನು ಮೊಲೆವಾಲನು ಕೂಡಿ ನಸ್ಯಂಗೆಯ್ಯೆ ಮೂಗಿನ ರಕ್ತ ಪರಿಹರ, ೧

ಗರಿಕೆಬೇರಿನ ರಸದಿಂ ನಸ್ಯಂ ಮಾಳ್ಪುದು. ೨

ಹೆಮ್ಮರದ ತೊಕ್ಕಿನ ರಸದಿಂ ನಸ್ಯಂ ಮಾಳ್ಪುದು. ೩

ಮಾವಿನ ಬೀಜದ ತಿರುಳಿನಲ್ಲಿ ರಸವ ತೆಗೆದು ನಸ್ಯಂ ಮಾಳ್ಪುದು. ೪

[2] ಈ ಪ್ರಕಾರದಲ್ಲಿ ನಸ್ಯಂ ಪ್ರಯೋಗಿಸಲು ರಕ್ತಷ್ಠವಿ ಸನ್ನಿಪಾತದಿಂ ಬಾಯಲಿ ಸುರಿವ ರಕ್ತಂ ಸದ್ಯಃ ಗುಣಮಕ್ಕುಂ. [2]

## ಪ್ರಳಾಪ ಸನ್ನಿಪಾತ.

ಲಕ್ಷಣ :— ಮೈಯಲ್ಲಿ ನಡುಕ, ಪ್ರಳಾಪ, ದಾಹ, ಮೈನೋವು, ಕಿಚ್ಚುಗಟ್ಟಿದಂತೆ ಕಾಲುಗಳೆರಡರಲ್ಲಿಯೂ ಉಷ್ಣ, ಮೈಯುರಿತ, ಅಜ್ಞಾನ, ವೆಗ್ಗಳವಾದ ವಿಕಳತನ ಇವೆಲ್ಲವು ಉಂಟಾದುದೆ ಪ್ರಳಾಪ ಸನ್ನಿಪಾತವೆಂದರಿವುದು. ಈ ಸನ್ನಿಪಾತಂ ಮುಟ್ಟಿದ ಪುರುಷನು ಜವವೊಳಗ್ಗೈದುವನೆಂದು ಪೇಳಿಹುದಾಗಿ ಅತ್ಯಸಾಧ್ಯಮಪ್ಪುದಾದರೂ, ಪುರುಷ ಶಕ್ತಿಯಿಂ ಚಿಕಿತ್ಸೆಯಂ ಮಾಡಿ ನೋಳ್ಪುದೆ ಕರ್ತವ್ಯ

---

[1] ರ, (ಗ). [2] (ಕ) ಪ್ರತಿಯಲ್ಲಿಲ್ಲ.

ವೆಂದ ವ[1]ಚಿ[1]ಸುತ್ತಿಹುದು. ಮತ್ತಂ ಅತ್ಯಂತ ಪ್ರಳಾಪವುಂಟಾಗಿ ವೈಯುರಿತವು ಚಿಂತೆಯು, ನಾನಾ ಪ್ರಕಾರದಿಂ ಹಲುಬುವುದು, ಕಾಲುಗಳಲ್ಲಿ ಶೋಭೆಯು, ವೈನೋವು, ನಡುಕವು, ದೇಹದಲ್ಲಿ ಕಾಂತಿಗುಂದಿಹುದು, ಚಿತ್ತಭ್ರಂಶವು, ಉಂಟಾಗಿಹುದೆ ವಾತೋಲ್ಬಣವಾಗಿ ಶ್ಲೇಷ್ಮ ಮಂದವಾಗಿ ಪಿತ್ತ ಮಧ್ಯಮವಾಗುಳ್ಳ ಪ್ರಳಾಪ ಸನ್ನಿಯ ಲಕ್ಷಣವೆಂದು ಋಷ್ಯಶೃಂಗ ಮತದಲ್ಲಿ ಪೇಳಿಹುದು.

ಚಿಕಿತ್ಸೆ—ಕಷಾಯಗಳು.

ಗಂದಿಗತವರ, ಹಿರಿಮದ್ದು, ಪರ್ಪಾಷ್ಟಕ, ಕಟ್ಟವತ್ತಿಗೆ, ದೇವದಾರೆ, ಕಟುಕರೋಹಿಣಿ, ಒಂದೆಲಗ, ಜಟಾಮಾಂಸಿ, ಕೊಡನಾರಿಗೆಡ್ಡೆ, ಕಕ್ಕೆಬೇರು, ತಾಳೆಬೇರು, ದ್ರಾಕ್ಷಿ ಇವೆಲ್ಲವಂ ಕಷಾಯವ ಕಾಸಿ ಕೊಡುವುದು. ೧

ಕೊಡನಾರಿಗೆಡ್ಡೆ, ಬೆಲ್ಲವತ್ತದ ಬೇರು, ನರುವಲದ ಬೇರು, ಗೂಳದ ಬೇರು, ಪಾದರಿ ಬೇರು, ಹೆಮ್ಮರದ ಬೇರು, ಹೆಗ್ಗುಳ್ಳ, ನೆಲಗುಳ್ಳ, ಎರಡೆಲೆಹೊನ್ನೆ, ಮೂರೆಲೆ ಹೊನ್ನೆ, ನೆಗ್ಗಿಲು, ಮುಡಿವಾಳ, ಶುಂಠಿ, ಶ್ರೀಗಂಧ, ಕಿರುಕಸಾಲೆಬೇರು, ಪರ್ಪಾಷ್ಟಕ, ಆಡುಸೋಗೆಯ ಸೊಪ್ಪು, ಸಹ ಕಷಾಯಂ ಕಾಸಿ ಸೇವಿಸುವುದು. ೨

ಅಂಕೋಲೆ ಬೇರಿನ ಮೇಲಣ ತೊಕ್ಕ ತೆಗೆದು ಆ ಒಳಗಣ ಕಡ್ಡಿ, ಕಹಿಪಡವಲ, ಚಿತ್ರಮೂಲ, ಮರದರಿಸಿನ, ಶುಂಠಿ, ಅಮರದವಳ್ಳಿ, ಹಿಪ್ಪಲಿ, ಹಿಪ್ಪಲಿಮೂಲ, ಹುಳಿಮಾವಿನ ಚಕ್ಕೆ, ಇವಂ ಸಮನಾಗಿ ಕಷಾಯವಿಟ್ಟು ಪಾನವಂ ಮಾಡುವುದು. ೩

ಗಂದಿಗತಗರ, ಪರ್ಪಾಷ್ಟಕ, ತಿಗಡೆ, ದೇವದಾರೆ, [2] ಕಟುಕರೋಹಿಣಿ [2], ಜಟಾಮಾಂಸಿ, ಕೊಡನಾರಿಗೆಡ್ಡೆ, ತಮಾಲಪತ್ರೆ, ಕೆಂಪಿನಗೊರಟೆ, ಇವಂ ಸಮಭಾಗವಾಗಿ ಕಷಾಯವಿಟ್ಟು ಸೇವಿಸುವುದು. ೪

ತೀಟಕಸಿಂಧವೇಳ್ಳು, ಪರ್ಪಾಷ್ಟಕಂ, ಕುರಿವೇಲು, ಶುಂಠಿ, ತಿಪ್ಪತೀಗ, ಕೊತ್ತುಮ್ಮಲು, ನೇಲಮುಲುಕ, ಇವಿ ಸಮಾಂಶಂಗಾ ಕಷಾಯಂ ಕಾಚಿ ಇಚ್ಚೇದಿ. ೫

ಪಲ್ಲೇರು, ಪನ್ನೇರುಗಡ್ಡ, ತೀಟಕೋವಿಲವೇಳ್ಳು, ಚಲ್ಲಗಡ್ಡಲು, ಶುಂಠಿ, ದೇವದಾರು, ಜಿಲಕರ ಇವಿ ಸಮಂಗಾ ಕೂರ್ಚಿ ಕಷಾಯಮಿಚ್ಚೇದಿ ; ಈ ಪ್ರಯೋಗಾಲು ನುಂಚಿ ಮೂರ್ಛಲು, ಪ್ರಲಾಪಲು, ಸಹ ಮಾನುನು. ಇವು ಮುಂತಾದ ಚಿಕಿತ್ಸೆಗಳಂ ಪ್ರಯೋಗಿಸಲು ಪ್ರಳಾಪಸನ್ನಿ ಪರಿಹರವಹುದು. ೬

ಜಿಹ್ವಕ ಸನ್ನಿಪಾತ.

ಲಕ್ಷಣ:—ಶ್ವಾಸ, ಕೆಮ್ಮು, ವೈಯುರಿತ, ಕಂಗೆಡಿಕೆ, ನಾಲಿಗೆಯಲ್ಲಿ

---

[1] ಚಿ, (ಗ). [2] (ಗ), ಪ್ರತಿಯುಲ್ಲಿಲ್ಲ.

ಖ[1] [ರು]ಸು ಸಹ ಉಂಟಾಗಿ ಕಿವಿ ಕೇಳಿಸದೆ ಮಾತನಾಡದೆ ಮೂಕನಾಗಿರ್ಪುದು ಈ ಲಕ್ಷಣಮುಳ್ಳುದೇ ಜಿಹ್ವಕ ಸನ್ನಿಪಾತವೆಂದರಿವುದು. ಈ ಸನ್ನಿಗೆ ಮೊದಲ ದಿವಸದಲ್ಲೇ ನಾಲಿಗೆಯು ಮುಳ್ಳಾಗಿರ್ಪುದು. ಈ ಸನ್ನಿಪಾತಂ ಕಷ್ಟಸಾಧ್ಯವೆಂದರಿವುದು. ಮತಾಂತರೆ, ನಾಲಿಗೆಯು ಮುಳ್ಳುಮುಳ್ಳಾಗಿ ಕಠಿಣವಾಗಿ ಶ್ವಾಸಖಾಸಗಳುಂಟಾಗಿ ಬಲಕ್ಷಯವು, ಮಲಮೂತ್ರಗಳು ಪೆಚ್ಚಾಗಿ ಬಿಡುವುದು, ಕೊರಳು ಬಾಯಿ ದ್ರವವಿಲ್ಲದಿರುವುದು, ಮೂಗನಂತೆ ಮಾತನಾಡದೆ ಇರುವುದು. ಇವೆಲ್ಲಂ ಶ್ಲೇಷ್ಮ ಹೆಚ್ಚಾಗಿ ವಾತ ಪಿತ್ತಂಗಳ ಮಾಂದ್ಯವುಳ್ಳ ಜಿಹ್ವಕ ಸನ್ನಿಪಾತ ಲಕ್ಷಣಮೆಂದರಿದುಕೊಳ್ಳೆಂದು ಋಷ್ಯಶೃಂಗ ಮತದಲ್ಲಿ ಪೇಳಲ್ಪಟ್ಟಿತು.

## ಚಿಕಿತ್ಸೆ—ಕಲ್ಕಗಳು.

ಚಿತ್ರಮೂಲದ ಬೇರು, ಶುಂಠಿ, ಸೈಂಧವಲವಣ ಸಹ ಬಿಸಿನೀರಿಂದರೆದು ಕೊಡುವುದು, ೧

ಕಹಿಪಡವಲ, ಕಟುಕರೋಹಿಣಿ, ಕೊಡನಾರಿಗೆಡ್ಡೆ, ಇಪ್ಪೆಹೂವು, ಯಷ್ಟಿಮಧುಕ, ಹಿಪ್ಪಲಿ, ದ್ರಾಕ್ಷೆಹಣ್ಣು, ಲಾಮಂಚ, ಖರ್ಜೂರ, ಇವಿಷ್ಟನ್ನೂ ಬಿಸಿನೀರಿಂದರೆದು ಶರ್ಕರೆವೆರಸಿ ಕುಡಿಯಕೊಡಲು ಜಿಹ್ವಕಸನ್ನಿ ಗುಣವಹುದು. ೨

[2] ಈ ಕಲ್ಕಗಳು ಒಡಂಬಡಲು ಎರಡು ಹೊತ್ತು ಕೊಡುವುದು.[2]

[3] ನೆಲಗುಳ್ಳ, ಶುಂಠಿ, ಪುಷ್ಕರಮೂಲ, ಕಟುಕರೋಹಿಣಿ, ರಾಸ್ಮೆ, ಅಮರದವಳ್ಳಿ, ಗಂಟುಭಾರಂಗಿ, ಪರ್ಪಾಟಕ, ಕರ್ಪೂರ, ತುರುಚನ ಬೇರು, ಆಡುಸೋಗೆ, ಕೊಡನಾರಿಗೆಡ್ಡೆ ಇವಂ ಸಮಾನಂಗೊಂಡು ಕಷಾಯವಿಕ್ಕಿ ಸೇವಿಸೆ ಜಿಹ್ವಕಸನ್ನಿ ಶಮನವಹುದು.[3] ೩

ಕರ್ಪೂರ, ಶುಂಠಿ, ದೇವದಾರು, ಬೇವಿನ ಒಳನಾರು, ಅಳಲೆಕಾಯಿ, ಕಹಿಪಡವಲ, ಅರಿಸಿನ, ಮರದರಿಸಿನ, ನೆಲಗುಳ್ಳ, ಪುಷ್ಕರಮೂಲ, ಕೊನ್ನಾರೆ, ಅಮರದವಳ್ಳಿ, ಇವಂ ಸಮಾನ ಕಷಾಯವಿಕ್ಕಿ ಕೊಡಿಸಲು ಜಿಹ್ವಕಸನ್ನಿ ಗುಣಮಹುದು. ೪

ನೆಲಗುಳ್ಳ, ಶುಂಠಿ, ಪುಷ್ಕರಮೂಲ, ಕಟುಕರೋಹಿಣಿ, ರಾಸ್ಮೆ, ಅಮರದವಳ್ಳಿ, ಗಂಟುಭಾರಂಗಿ, ಕರ್ಕಾಟಕಶೃಂಗಿ, ಕರ್ಪೂರ, ಶುಂಠಿ, ಗಂಡುದುರುಚನ ಬೇರು, ಆಡುಸೋಗೆ, ಕೊನ್ನಾರೆ, ಒಂದೆಲಗ, ಬಜೆ, ಇವಂ ಸಮನಾಗಿ ಕಷಾಯವ ಕಾಸಿ ಕುಡಿಯೆ ಜಿಹ್ವಕಸನ್ನಿ ಶಮನಮಕ್ಕುಂ. ೫

ದೇವದಾರು, ಕರ್ಪೂರ, ಶುಂಠಿ, ಬೇವಿನ ಒಳನಾರು, ಔಡಲದ ಬೇರು, ಅಳಲೆಕಾಯಿ, ಕಹಿಪಡವಲ, ಅರಿಸಿನ, ಮರದರಿಸಿನ, ನೆಲಗುಳ್ಳದ ಬೇರು, ಪುಷ್ಕರ

---

[1] ರಿ, (ಕ), (ಗ). [2] (ಗ) ಪ್ರತಿಯಲ್ಲಿಲ್ಲ. [3] (ಕ) ಪ್ರತಿಯಲ್ಲಿಲ್ಲ.

ಮೂಲ, ಕೊಡನಾರಿ, ಅಮರದವಳ್ಳಿ, ಇವಂ ಸಮನಾಗಿ ಕಷಾಯಂ ಕಾಸಿ ಕುಡಿಯೆ ಜಿಹ್ವಕ ಸನ್ನಿ ಶಮನಮಕ್ಕುಂ. ೬

## ಗುಳಿಗೆ.

ಶುಂಠಿ, ಹಿಪ್ಪಲಿ, ಮೆಣಸು, ಸೈಂಧವಲವಣ, ಸಂವತ್ಸರಲವಣ, ಬಿಡುಲವಣ, ಕಾಚುಲವಣ, ಸಮುದ್ರಲವಣ, ಸಬ್ಬಸಿಗೆ, ಜೀರಿಗೆ, ಅಭ್ರಕಭಸ್ಮ, ಗಂಧಕ, ಇವಂ ಸಮಭಾಗವಾಗಿ ಖಲ್ವದಲ್ಲಿ ಹಾಕಿ ಹಸಿಶುಂಠಿ ರಸದಿಂ ಒಂದು ದಿನ ಸಣ್ಣನಾಗಿ ಮರ್ದಿಸಿ ಗುಂಜೆಯ ಪ್ರಮಾಣ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ ಉದ್ದಿನ ಗಾತ್ರವಂ ಚಿತ್ರಮೂಲ, ಸೈಂಧವ, ಶುಂಠಿಗಳ ಕಲ್ಕದಿಂದನುಪಾನವಿಕ್ಕಿ ಕೊಡಲ ಜಿಹ್ವಕಸನ್ನಿ ಗುಣಮಹುದು. ಪಥ್ಯ ಹಾಲನ್ನ. ೧

## ಗಂಡೂಷ.

ಹಿಪ್ಪಲಿ, ಲವಣಂಗಳಂ, ಮಾದಳದ ಹಣ್ಣಿನ ರಸದಲ್ಲರೆದು ಜಿಹ್ವೆಗೆ ತೊಡೆಯಲು ಜಿಹ್ವಕ ಸನ್ನಿ ಪರಿಹರ. ೧

ಅಂತು ಕಷಾಯ ೬, ಗುಳಿಗೆ ೧, ಗಂಡೂಷ ೧ ಸಹ ಪ್ರಯೋಗ ೮ ಶ್ರೀ.

---

## ಅಭಿನ್ಯಾಸ ಸನ್ನಿಪಾತ.

ಲಕ್ಷಣ.--ವಾತ ಪಿತ್ತ ಶ್ಲೇಷ್ಮಗಳೆಂಬ ದೋಷತ್ರಯಂಗಳು ಕೂಡಿ ಮುಖದಲ್ಲಿ ಎಣ್ಣೆಯ ತೊಡೆದಂತೆ ಮಿಂಚುತ್ತಾ ತೂಕಡಿಕೆಯುಂಟಾಗಿ ಮೈ ಕಾಂತಿಗುಂದಿ ಚೈತನ್ಯಗೆಟ್ಟು ನುಡಿಯಿಲ್ಲದೆ ಮೂಕತ್ವವಾಗಿ ದೇಹವೆಲ್ಲ ವಿವರ್ಣದೋರಿ ಬಲಹಾನಿಯಾಗಿ ಒಂದಿಷ್ಟು ಸುಖದೋರದೆ ಕಷ್ಟವುಂಟಾಗಿರ್ಪುದೆ ಅಭಿನ್ಯಾಸ ಸನ್ನಿಪಾತ ಲಕ್ಷಣವೆಂದು ಅರಿದುಕೊಳ್ವುದು. ಮತಾಂತರೆ, ವಾತಪಿತ್ತಶ್ಲೇಷ್ಮಗಳು ಕೂಡಿ ಈ ಮೂರು ಅಧಿಕವಾಗಿ ಈ ಮೂರರ ಗುಣಂಗಳು ಏಕಕಾಲದಲ್ಲಿ ಕಾಣಿಸುವುದೆ ಅಭಿನ್ಯಾಸ ಸನ್ನಿಯೆಂದು ಋಷ್ಯಶೃಂಗ ಮತದಲ್ಲಿ ಹೇಳಿದೆ.

## ಚಿಕಿತ್ಸೆ—ಕಷಾಯಗಳು.

ತುರುಚನ ಬೇರು, ಗಂಟುಭಾರಂಗಿ, ಖರ್ಜೂರ, ಕರ್ಕಾಟಕಶೃಂಗಿ, ಪುಷ್ಕರಮೂಲ ಇವಂ ಕಷಾಯವಂ ಕಾಸಿ ಸೇವಿಸೆ ಅಭಿನ್ಯಾಸ ಸನ್ನಿಪಾತ ಗುಣಮಕ್ಕುಂ. ೧

ಎಸಗದ ಬೇರು, ಕತ್ತರಿಬೇರು, ನೆಲಗುಳ್ಳದ ಬೇರು, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಬಜೆ, ಪಂಚಕೋಲ ಇವಂ ಸಮಾನ ಕಷಾಯಂ ಕಾಸಿ ಕುಡಿಯಲು ಅಭಿನ್ಯಾಸ ಸನ್ನಿ ಪರಿಹರಮಕ್ಕುಂ. ೨

ಹಿಪ್ಪಲಿ, ತಗ್ಗಿಬೇರು, ನೆಲಬೇವು, ಬೇವು, ಶುಂಠಿ, ಪರ್ಪಾಷ್ಟಕ, ಕಹಿಪಡವಲ, ಇವಂ ಸಮವಾಗಿ ಕಷಾಯವಿಕ್ಕಿ ಕೊಡಲು ಅಭಿನ್ಯಾಸಸನ್ನಿ ಗುಣಮಕ್ಕುಂ. ೩

ವೇಪಚಕ್ಕ, ಚೇತಿಪೊಳ್ಳ, ನೇಲವೇಮು, ಶ್ರೀಫಲ, ಕರಕತಾಂಡ್ರಿ, ಉಸುರಿಕೇಲು, ಗುಮ್ಮಡುವೇಳ್ಳು, ತಿಪ್ಪತೀಗ, ಕೊತ್ತುಮ್ಮಲು, ಅಡ್ಡಸರಂ, ಗಲಜರವೇಳ್ಳು, ಇವಿ ಸಮಾಂಶಂ ಕಷಾಯಂ ಬಟ್ಟಿ ಈಯನು ಅಭಿನ್ಯಾಸ ಸನ್ನಿ ಮಾನುನು. ೪

ಗಂಡುದುರುಚನ ಬೇರು, ಶುಂಠಿ, ಪುಷ್ಕರಮೂಲ, ಬೆಲ್ಲವತ್ತದ ಬೇರು, ನರುವಲದ ಬೇರು, ಶಿವನ್ನಿ ಬೇರು, ಪಾದರಿ ಬೇರು, ಗುಳ್ಳ, ಹೆಗ್ಗುಳ್ಳ, ಎರಡೆಲೆ ಹೊನ್ನೆ, ಮೂರೆಲೆ ಹೊನ್ನೆ ಇವಂ ಕಷಾಯವಿಕ್ಕಿ ಹಿಪ್ಪಲಿ, ಶುಂಠಿ, ಇವುಗಳನ್ನು ಚೂರ್ಣಿಸಿ ಹಾಕಿ ಕುಡಿಯಲು ಅಭಿನ್ಯಾಸ ಸನ್ನಿ ಗುಣಮಕ್ಕುಂ. ೫

## ನಶ್ಯ.

ಬೆಳ್ಳುಳ್ಳಿ, ಸೈಂಧವಲವಣ, ಹಿಪ್ಪಲಿ, ಜಟಾಮಾಂಸಿ, ಮೆಣಸು ಸಹ ಬಿಸಿನೀರಿಂದರೆದು ನಾಲ್ಕೆಂಟು ಬಿಂದು ಮಾತ್ರವಂ ನಶ್ಯಂ ಮಾಡೆ ಅಭಿನ್ಯಾಸ ಸನ್ನಿಯುಂ ಮೈಮರೆಹುಂ ಗುಣವಾಗಿ ಎಚ್ಚರಗೊಡುವುದು. ೧

ಇಪ್ಪೆಕೆಚ್ಚು, ಸೈಂಧವ, ಬಜೆ, ಹಿಪ್ಪಲಿ ಸಹ ಸಮಾನವಾಗಿ ಸಣ್ಣನಾಗರೆದು ನೀರಿನಲ್ಲಿ ನಶ್ಯಂಗೆಯ್ಯೆ ಅಭಿನ್ಯಾಸ ಸನ್ನಿಯಿಂದಾದ ಮೂರ್ಛೆ ಆ ಕ್ಷಣವೆ ತಿಳಿಯುವುದು. ೨

ಬೂದಿ ಗುಂಬಳದ ಹೂವಿನ ರಸವಂ, ಹಸಿಶುಂಠಿ ರಸವನ್ನು ಸಹ ಮೂಗಿಗೆ ನಶ್ಯಮಾಡಲು ಅಭಿನ್ಯಾಸ ಸಹ ತ್ರಯೋದಶ ಸನ್ನಿಪಾತ ಗುಣಮಕ್ಕುಂ. ೩

ಅಗಸೆ ಸೊಪ್ಪಿನ ರಸದಿಂದ ಶುಂಠಿ, ಮೆಣಸು, ಹಿಪ್ಪಲಿಗಳಂ ತೇದು ನಶ್ಯಂ ಮಾಡೆ ಅಭಿನ್ಯಾಸ ಸನ್ನಿಪಾತದ ಮೂರ್ಛೆ ತಿಳಿಯುವುದು. ೪

## ಅಂಜನ.

ಬೆಳ್ಳುಳ್ಳಿ, ಮೆಣಸು, ಹಿಪ್ಪಲಿ, ಸೈಂಧವ, ಬಜೆ, ಗೋಧಿಯವೆ ಸಹ ಸಮಾಂಶವಾಗಿ ನಿಂಬೆಹಣ್ಣಿನ ರಸದಿಂದ ತೇದು ಕಣ್ಣಿಗೆಚ್ಚಲು ಅಭಿವ್ಯಾಸ ಸನ್ನಿಪಾತ ಮಾಣ್ಗುಂ. ೧

## ಗಂಡೂಷ.

ಇಂಗು, ಶುಂಠಿ ಸಹ ಪುಡಿಮಾಡಿ ಗರುಗದ ರಸದಲ್ಲಿ ಕಲಸಿ ಗಂಡೂಷವಂ ಮಾಡಲು ಅಭಿನ್ಯಾಸ ಸನ್ನಿಪಾತ ಮಾಣ್ಗುಂ. ೧

## ವಮನಕ್ಕೆ.

ಇಂಗು, ಶುಂಠಿಗಳ ಚೂರ್ಣಿಸಿ ಗರುಗದ ರಸದಲ್ಲಿ ಕದಡಿ ಒಂದು ಕ್ಷಣ ಬಾಯಲ್ಲಿರಿಸಿಕೊಂಡಿರ್ದು ನುಂಗಲು ವಮನವಹುದು. ಅಥವಾ ಕಹಿ, ಕಾರವಾದ ದ್ರವ್ಯವಂ ಗರುಗದ ರಸದಲ್ಲಿ ಕೂಡಿ ಕೊಟ್ಟರೂ ವಮನವಕ್ಕು. ಈ ವಮನಂಗಳಿಂ ಅಭಿನ್ಯಾಸ ಸನ್ನಿ, ಶ್ಲೇಷ್ಮದೋಷ ಸಹ ಗುಣವಹುದು. ೧

ಅಂತು ಕಷಾಯ ೫, ನಶ್ಯ ೪, ಅಂಜನ ೧, ಗಂಡೂಷ ೧, ವಮನ ಪ್ರಯೋಗ ೧ ಕೂಡ ಪ್ರಯೋಗ ೧೨ಕ್ಕೆ ಶ್ರೀ.

ಈ ಪ್ರಕಾರದಿಂದ ಈ ಪದಿಮೂರು ತೆರನಾಡ ಸನ್ನಿಪಾತಂಗಳಿಗೆ ಇಂತು ಲಕ್ಷಣ ಚಿಕಿತ್ಸಾ ಪ್ರಯೋಗಂಗಳಂ ಪೇಳ್ದುದು. ತದನಂತರದೊಳೀ ಸನ್ನಿಪಾತಂಗಳಿಗೆ ಆಯುಃ ಪ್ರಮಾಣ ನಿರ್ಣಯಂ ಪೇಳಲ್ಪಡುವುದು. ಅದೆಂತೆಂದೊಡೆ,

ಸಂಧಿಗ ಸನ್ನಿಪಾತವು ಸಪ್ತರಾತ್ರಿ ಉಲ್ಬಣವಾಗಿರುವುದು, ಅಂತಕ ಸನ್ನಿಪಾತವು ಹತ್ತುದಿವಸ, ರುಗ್ದಾಹ ವಿಪ್ಪತ್ತು* ದಿವಸ, ಚಿತ್ತವಿಭ್ರಮುವಿಪ್ಪತ್ತೊಂದು ದಿವಸ, ಶೀತಾಂಗ ಸನ್ನಿಯೊಂದುಪಕ್ಷ, ತಾಂದ್ರಿಕವಿಪ್ಪತ್ತೈದು ದಿವಸ, ಕಂಠಕುಬ್ಜ ಪದಿಮೂರು ದಿವಸ, ಕರ್ಣಿಕಸನ್ನಿಪಾತ ಮೂರುಮಾಸ, ಭಗ್ನನೇತ್ರ ಸನ್ನಿ ಎಂಟುದಿನ, ರಕ್ತಷ್ಟೀವಿಸನ್ನಿಪಾತ ದಶರಾತ್ರಿ, ಪ್ರಳಾಪಸನ್ನಿ ಚತುರ್ದಶರಾತ್ರಿ, ಜಿಹ್ವಕಸನ್ನಿ ಷೋಡಶ ದಿವಸ, ಅಭಿನ್ಯಾಸ ಸನ್ನಿ ಒಂದು ಪಕ್ಷ, ಈ ರೀತಿಯಾಗಿ ಹದಿಮೂರು ವಿಧವಾದ ಸನ್ನಿಪಾತಗಳಿಗೂ ಆಯುಃ ಪ್ರಮಾಣಂಗಳ ಅವಧಿಯು. ಈ ಆಯುರ್ವೇದ ಶಾಸ್ತ್ರಾನುಸಾರವಾಗಿ ಪೂರ್ವಾಚಾರ್ಯರಿಂದ ಪೇಳಲ್ಪಟ್ಟಿರುವುದು. ಆಯಾ ಸನ್ನಿಪಾತಂಗಳಿಗೆ ಕುರಿತು ಪೇಳ್ದ ಅವಧಿ ಪ್ರಮಾಣಂಗಳು ಕಳೆಯೆ ಆ ಸನ್ನಿರೋಗಂಗಳ ಭಯವಿಲ್ಲವೆಂದು ತಿಳಿದು ಕೊಂಬುದು. ೧

ಅಂತು ಸನ್ನಿಪಾತ ಬಗೆ ೧೩ಕ್ಕೆ, ಕುಳ ೧೩ಕ್ಕೆ, ಕಲ್ಕ ೪, ಕಷಾಯ ೬೩, ನಸ್ಯ ೨೫, ಅಂಜನ ೪, ತೈಲ ೧, ಲೇಪ ೨, ಧೂಪ ೪, ಗಂಡೂಷ ೪, ಚೂರ್ಣ ೨, ಗುಳಿಗೆ ೧, ವಮನಪ್ರಯೋಗ ೧, ಅವಧಿ ಪ್ರಮಾಣ ನಿರ್ಣಯ ೧, ಸಹ ಪ್ರಯೋಗಂಗಳು ೧೧೧ಕ್ಕೆ ಸಮಾಪ್ತ.

---

* ಮಹಾ ಬಲವಂತವಾದ ಪ್ರಾಣಾಪಹಾರವಾದ

## ಸಪ್ತವಿಧ ದೋಷಂಗಳು.

ಲಕ್ಷಣ.—ತರುಣ ಜ್ವರಂಗಳಲ್ಲಿ ಅಪಥ್ಯವ ಮಾಡುವುದರಿಂದ ಪುಟ್ಟುವ ದೋಷಂಗಳೇಳು ತೆರಮಾಗಿರ್ಪುವು. ತರುಣಜ್ವರದಲ್ಲಿ ಕಹಿ, ಹುಳಿ, ಕಾರ ಕಷಾಯವಾದ ದ್ರವ್ಯ, ಸಿಹಿವಸ್ತುಗಳಾಹಾರ, ಜಲಪಾನ, ಶೈತ್ಯವಸ್ತುವಿನ ಸೇವೆ, ಶ್ರೀಗಂಧ, ಆಗ್ರಹ, ವ್ಯಾಯಾಮ, ಚಿಂತೆ, ಶೋಕ, ಇವು ಮುಂತಾದ ಅಪಥ್ಯಗಳಿಂದ ದೋಷಗಳು ಪುಟ್ಟುವುದರಿಂದ ಆ ತರುಣ ಜ್ವರದವನು ಪರಿಮಳ, ಪುಷ್ಪ, ಶ್ರೀಗಂಧ ಮೊದಲಾದ ಗಂಧದ್ರವ್ಯ, ತಾಂಬೂಲ ಚರ್ವಣ, ಕೆಂಪುವಸ್ತ್ರವ ಹೊದೆವುದು, ತುಪ್ಪ, ಬೆಲ್ಲ, ಎಣ್ಣೆ, ಗಂಧವಿಡಿ ಮುಂತಾದ ಪರಿಮಳದ್ರವ್ಯ ಸೇವನೆ, ಸುಪ್ಪತ್ತಿಗೆಯಲ್ಲಿ ಶಯನ, ಪೊಸವಸ್ತ್ರಗಳ ಧರಿಸುವುದು, ತೀವ್ರವಾದ ಗಾಳಿಯುಳ್ಳ ಮನೆಗಳಲ್ಲಿರುವುದು, ಹೆಣ್ಣುಗಳ ಮೈ ಸೋಂಕುವುದು, ಅವರಲ್ಲಿ ದೃಷ್ಟಿಯನಿಡುವುದು, ಮುಂತಾದ ಈ ನಾನಾ ಬಗೆಯ ಅಪಥ್ಯಗಳನಾಚರಿಸುವುದರಿಂದ ಆ ತ್ರಯೋದಶ ಸನ್ನಿಪಾತಂಗಳಿಗೆ ಸಮಾನವಾದ ದೋಷಂಗಳು ಪುಟ್ಟುವುವು. ಪುಟ್ಟುವ ಆ ದೋಷಂಗಳಿಗೆ ಲಕ್ಷಣ ಮಂತೆನೆ.—ಅಪಥ್ಯದಿಂದಾದ ದೋಷಂಗಳಲ್ಲಿ ಏಕ ಪ್ರಕಾರವಾದ ಕಾಹು ಉಂಟಾಗಿ ಜ್ವರವೂ, ತೂಕಡಿಕೆಯೂ, ಮೂರ್ಛೆಯೂ, ಭ್ರಮೆಯೂ, ಪ್ರಳಾಪವೂ, ದಾಹವೂ, ಎದೆನೋವೂ ಇವು ಮುಂತಾದ ನಿದಾನಗಳೊಡನೆ ಕೂಡಿಕೊಂಡಿರ್ಪುದೇ ಅಪಥ್ಯ ದೋಷವೆಂದರಿವುದು.

## ಸ್ತ್ರೀಸಂಗಸನ್ನಿಯ ದೋಷ

ಲಕ್ಷಣಗಳು.—ಸಂದು ಸಂದಿನ ಮುಡುಹುಗಳಲ್ಲಿ ಕತ್ತಿಯಲ್ಲಿ ಕಡಿದಂತೆ ಉಂಟಾದ ಬಹಳ ವೇದನೆಯು, ನಡುಕವು, ಎದೆನೋವು, ಮೈಯುರಿತವು, ಪ್ರಳಾಪವು, ಎದ್ದೆದ್ದು ಕುಳಿತುಕೊಂಬುದು, ಭ್ರಮೆಯು, ಹಸ್ತಪಾದಗಳ ಶೈತ್ಯವು, ಇವು ಮುಂತಾದ ಲಕ್ಷಣಗಳೊಡನೆ ಕೂಡಿರ್ಪುದೆ ತರುಣ ಜ್ವರದಲ್ಲಿಯುಂಟಾದ ಸ್ತ್ರೀ ಸಂಗದಿಂದಾದ ಸನ್ನಿದೋಷಂ. ಇದನ್ನೆ ಸುಖಸನ್ನಿ ಎಂದು ಹೇಳುವರು.

## ವಿಷಮಸನ್ನಿದೋಷ.

ಲಕ್ಷಣ.—ಕಡುಜ್ವರವು, ಸಂತಾಪವು, ಉರಿಯು, ಕುಟಿಲವಾಗಿ ವೇಗವಾಗಿ ನಾಡಿಯು ನಡೆಯುವುದು, ಅಂತರ್ದಾಹವು, ಮದವು, ಮೂರ್ಛೆಯು ಇವು ಮುಂತಾದ ಲಕ್ಷಣಗಳೊಡನೆ ಯುಕ್ತವಾಗಿರ್ಪುದೆ ವಿಷಮ ಸನ್ನಿಯ ದೋಷವೆಂದರಿವುದು. ದಿನಕ್ಕೆ ಒಂದು ವೇಳೆಯಾದರೂ ಎರಡು ವೇಳೆ, ಮೂರುವೇಳೆ, ನಾಲ್ಕು ವೇಳೆಯಾದರೂ ಚಳಿಚಳಿಯಾಗಿ ಕೂಡಲೆ ಅಷ್ಟು ವೇಳೆಯೂ ಜ್ವರಕಾಣಿ

ಸುವುದು. ದಾಹವು, ಮೂರ್ಛೆಯು, ಮಂಡೆನೋವು, ನಾಲಗೆ ಮುಳ್ಳು ಮುಳ್ಳಾಗಿ ಕಠಿಣವಾಗಿರ್ಪುದು, ಇವಿನಿತು ಲಕ್ಷಣಗಳೊಡನೆ ಕೂಡಿಕೊಂಡಿರ್ಪುದೆ ವಿಷಮಶೀತ ಸನ್ನಿದೋಷ ಲಕ್ಷಣವೆಂದು ವೈದ್ಯಶಾಸ್ತ್ರ ಲಕ್ಷಣಜ್ಞರು ಹೇಳುವರು.

## ರಕ್ತಜಿಹ್ವಕ ಸನ್ನಿದೋಷ.

ಲಕ್ಷಣ.—ನಾಲಗೆ ರಕ್ತವರ್ಣವಾಗಿ ಒಣಗಿ ಮುಳ್ಳುಮುಳ್ಳಾಗಿರ್ಪುದು ಜ್ವರವು, ಬಹಳ ಬಾಯಾರಿಕೆಯು, ವೈಯ್ಯುರಿಯು, ಇವು ಮೊದಲಾದ ಲಕ್ಷಣ ಗಳಂ ಹೊಂದಿರ್ಪುದೆ ರಕ್ತಜಿಹ್ವಕ ಸನ್ನಿದೋಷವೆಂದರಿವುದು.

## ಪಿತ್ತಜಿಹ್ವಕ ಸನ್ನಿದೋಷ.

ಲಕ್ಷಣ.—ನಾಲಗೆಯೊಣಗಿಕೊಂಡು ಮುಳ್ಳುಮುಳ್ಳಾಗಿ ಅರಿಸಿನ ವರ್ಣ ವಾಗಿ ಬೊಕ್ಕೆಗಳುಂಟಾಗಿ ಜ್ವರವೂ, ಭ್ರಮೆಯೂ, ಮೂರ್ಛೆಯೂ ಕೂಡಿರ್ಪುದೆ ಪಿತ್ತಜಿಹ್ವಕ ಸನ್ನಿದೋಷಮೆಂದರಿವುದು.

## ಕೃಷ್ಣಜಿಹ್ವಕ ಸನ್ನಿದೋಷ.

ಲಕ್ಷಣ.—ನಾಲಗೆ ಕಪ್ಪಾಗಿ ಬಿರುಸಾಗಿ ಮುಳ್ಳುಗಳುಂಟಾಗಿ ಜ್ವರವು ಭ್ರಮೆಯು, ಶ್ವಾಸವು, ಮೈ ತಿಮಿರವು, ಮದವು, ಬಹಳ ಬಾಯಾರಿಕೆಯು, ಇವು ಮುಖ್ಯವಾದ ನಿದಾನಗಳೊಡನೆ ಕೂಡಿಕೊಂಡಿರ್ಪುದೆ ಕೃಷ್ಣಜಿಹ್ವಕ ಸನ್ನಿ ದೋಷಮೆಂದರಿವುದು.

[1] ಈ ಏಳು ವಿಧವಾದ ಸನ್ನಿದೋಷಗಳ ಆಯುಃ ಪ್ರಮಾಣವೇಳುದಿವಸ ಅಥವಾ ಒಂದು ಪಕ್ಷಾಂತರ ಮೆಂದು ಈ ಚಿಕಿತ್ಸಜ್ಞರುಸಿರ್ವರು.

ಇವಲ್ಲದೆ ಇನ್ನುಂ ವಾತಸನ್ನಿ, ಪಿತ್ತಸನ್ನಿ, ಶ್ಲೇಷ್ಮಸನ್ನಿ ಎಂದು ಸನ್ನಿ ದೋಷಂ ಮೂರು ತೆರನಾಗಿರ್ಪುವು. [1]

## ವಾತಸನ್ನಿಯ ಲಕ್ಷಣ.

ಶಿರವು, ಎದೆಯು, ಪಾರ್ಶ್ವವು, ಬೆನ್ನು, ಕೊರಳು, ನಾಲಗೆ, ಬಹು ತೀವ್ರ ವಾದ ವೇದನೆಯೊಡನೆ ಕೂಡಿಕೊಂಡು ಅತಿಕಡಿದಾದ ಜ್ವರ ಉಂಟಾಗಿ ಮಹಾ ವೇಗವಾದ ನಾಡಿಗಳನುಳ್ಳುದಾಗಿರ್ಪುದೆ ವಾತ ಸನ್ನಿಯಲಕ್ಷಣವೆಂದರಿವುದು.

## ಪಿತ್ತಸನ್ನಿಯಲಕ್ಷಣ.

ಅಂತರ್ದಾಹವು, ಭ್ರಮೆಯು, ಮದವು, ಪ್ರಳಾಪವು, ಚಿತ್ತವೈಕಲ್ಪವು,

---

[1] (ಗ) ಪ್ರತಿಯಿಲ್ಲ.

ಅಜ್ಞಾನವು, ಮೂರ್ಛೆಯು, ಬಳಲಿಕೆಯು—ಇವು ಮುಂತಾದ ಚಿಹ್ನೆಗಳೊಡನೆ ಕೂಡಿಕೊಂಡಿರುವುದೆ ಪಿತ್ತಸನ್ನಿಯ ಲಕ್ಷಣವೆಂದರಿವುದು.

## ಶ್ಲೇಷ್ಮಸನ್ನಿಯ ಲಕ್ಷಣ.

ಅರೋಚಕವು, ಛರ್ದಿಯು, ಎದೆನೋವು, ಶರೀರ ನಡುಗುವುದು, ಭ್ರಮೆಯು, ಬಳಲಿಕೆಯು, ಶ್ವಾಸವು, ಖಾಸವು, ಬಾಯೊಳು ನೀರು ಸುರಿವುದು. ಇವಾದಿಯಾದ ಲಕ್ಷಣಗಳೊಡನೆ ಇರ್ಪುದೆ ಶ್ಲೇಷ್ಮಸನ್ನಿಯ ದೋಷವೆಂದರಿವುದು.

## ಚಿಕಿತ್ಸೆ.

ಅಪಥ್ಯ ಸನ್ನಿದೋಷಕ್ಕೆ ಕಷಾಯ.—ಕಿರುಗಡಸಿಗೆ, ಕೊಡನಾರಿಗೆಡ್ಡೆ, ನೆಲ ಬೇವು, ಕಟುಕರೋಹಿಣಿ, ಶುಂಠಿ, ಹಿಪ್ಪಲಿ, ಇವಂ ಕಷಾಯವಿಕ್ಕಿಕೊಡಲು ಅಪಥ್ಯ ಸನ್ನಿದೋಷಂ ಮಾಣ್ಗುಂ. ೧

ಸ್ತ್ರೀಸಂಗ ಸನ್ನಿದೋಷಕ್ಕೆ ಕಲ್ಕ.—ಪುತ್ರಜೀವಿಬೀಜದ ತಿರುಳು, ನೀರುಳ್ಳಿ, ಜೀರಿಗೆ, ಇವಂ ಹಸುವಿನ ಹಾಲೊಳರೆದು ಕುಡಿಯೆ ಸ್ತ್ರೀಸಂಗದಿಂದಾದ ಸನ್ನಿ ದೋಷಂ ಶಮನವಕ್ಕುಂ. ೧

## ಗಂಡೂಷ.

ಪುತ್ರಜೀವಿತಿರುಳು, ಬೇವಿನ ಬೀಜದ ತಿರುಳು, ನಿಂಬೆಯ ಬೀಜದ ತಿರುಳು, ಇವಂ ನಿಂಬೆಹುಳಿಯಲ್ಲರೆದು ನಾಲಗೆಗೆ ಲೇಪವಮಾಡೆ ಸುಖಸನ್ನಿದೋಷಂ ಮಾಣ್ಗುಂ; ಬಾಣಂತಿಸನ್ನಿ, ತಲೆಯ ಪಿತ್ತ ಸಹ ಕೆಡುಗುಂ. ೧

## ಅಂಜನ.

ಯಾವ ಸ್ತ್ರೀಸಂಗದಿಂ ದೋಷ ಹುಟ್ಟುವುದೊ ಆ ಸ್ತ್ರೀಯ ತೊಡೆಯ ರಕ್ತದಲ್ಲಿ ಹಿಪ್ಪಲಿಯು ತೇದು ಕಣ್ಣಿಗೆಚ್ಚಲು ಆಕ್ಷಣವೇ ಸುಖಸನ್ನಿ ಗುಣಮಕ್ಕುಂ. ೧

ಮ್ಯೆಲುತುತ್ತಂ, ವಾಲುತುತ್ತಂ, ಪಿಪ್ಪಳ್ಳು, ಶುಂಠಿ, ಮಿರಿಯಾಲು, ಕರಕ ಕಾಯಿಲು, ತಾಂಡ್ರಿಕಾಯಲು, ಉಸುರಿಕಪಪ್ಪು, ಲವಂಗಾಲು, ನೇಪಾಳಂ, ಮಂಚಿಪಸುಪು, ಮಾನಿಪಸುಪು, ಮೂರೆಡುವೇರು, ಗಲಜರವೇರು, ನಲ್ಲವಾರಿಪೂವುಲು, ಚಂದ್ರಕಾಂತಪು ಪೂವುಲು, ಸ್ಯೆಂಧವಲವಣಂ, ಇಂತಾ ಸಮಭಾಗಂ ನಿಮ್ಮ ಪುಲುಸುನ ಮೂನೀಳ್ಳುಮರ್ದಿಂಚಿ ಗುಂಜಾಪ್ರಮಾಣಂ ಮಾತ್ರಂಜೇಸಿ ನೀಡನೆ ಎಂಡಿಂಚಿ, ಉಂಡಕೊನಿ ತೇನೆತೊ ರಾಚಿ ಕನ್ನುಲ ಬಟ್ಟನು ಸ್ತ್ರೀಸಂಗ ದೋಷಾಲು, ನೇತ್ರರೋಗಾಲು, ಸರ್ವವಿಷಮುಲು, ಸನ್ನಿಪಾತ ಜ್ವರಾಲು ಸಹ ಪರಿಹರ ಮೌನು, ಇದಿಕಿ ಬಿಲ್ವಾಂಜನ ಮುರಾರಿಯುನ ಪೇರುಗಲದಿ. ೨

## ವಿಷಮಸನ್ನಿ.

ಕಲ್ಕ.—ಎಕ್ಕೆಹೂವಿನ ಮೊಗರು, ತುಂಬೆಹೂವು, [1]ನುಗ್ಗೆಹೂವು,[1] ಜೀರಿಗೆ, ಕೊತ್ತುಂಬರಿ, ಶುಂಠಿ, ಹಿಪ್ಪಲಿ, ಮೆಣಸು, ಬೆಳ್ಳುಳ್ಳಿ, ಕೊಡನಾರಿಗೆಡ್ಡೆ ಚಂಗಲಕೋಷ್ಟ, ನೆಲಬೇವು, ರಾಸ್ಮೆ, ಇವಂ ಬಿಸಿನೀರಿಂದರೆದು ಕೊಡಲು ವಿಷಮಸನ್ನಿದೋಷಂಮಾಣ್ಗುಂ. ೨

## ವಿಷಮಶೀತಸನ್ನಿ.

ಕಲ್ಕ.—ಕಿರುಗಡಸಿಗೆ, ಕಟುಕರೋಹಿಣಿ, ಶುಂಠಿ, ಹಿಪ್ಪಲಿ, ಮೆಣಸು, ಸಬ್ಬಸಿಗೆ, ನೆಲಬೇವು, ರಾಸ್ಮೆ, ಅಳಲೆಕಾಯಿ, ಕೊತ್ತುಂಬರಿ, ಬೆಳ್ಳುಳ್ಳಿ, ಲವಂಗ, ಅರಿಸಿನ, ಚಂಗಲಕೋಷ್ಟ, ಜೀರಿಗೆ, ಕರಿಜೀರಿಗೆ, [2] ಏಲಕ್ಕಿ[2], ವಾದಕ್ಕಿ, ನುಗ್ಗೆಬೇರು, ತುಳಸಿಚಿಗುರು, ಲೊಕ್ಕಿಚಿಗುರು, ಅಗುಳಶುಂಠಿ, ಇವಿಷ್ಟನು ಸಮಭಾಗವಾಗಿ ತುಳಸಿಸೊಪ್ಪಿನ ರಸದಿಂದರೆದುಕೊಡಲು ವಿಷಮಶೀತ ಸನ್ನಿದೋಷಪರಿಹರ. ೩

## ರಕ್ತಜಿಹ್ವಕಸನ್ನಿ.

ಕಲ್ಕ.—ಕಹಿಪಡವಲ, ಕಟುಕರೋಹಿಣಿ, ಕೊಡನಾರಿಗೆಡ್ಡೆ, ಇಪ್ಪೆಹೂವು, ಯಷ್ಟಿಮಧುಕ, ಹಿಪ್ಪಲಿ, ದ್ರಾಕ್ಷಿಹಣ್ಣು, ಲಾಮಂಚ, ಖರ್ಜೂರ, ಇವಂ ಬಿಸಿನೀರಿಂದರೆದು ಶರ್ಕರೆವೆರಸಿ ಕುಡಿಯೆ ರಕ್ತಜಿಹ್ವಕಸನ್ನಿ ಪಿತ್ತ ಜಿಹ್ವಕಸನ್ನಿಸಹ ಮಾಣ್ಗುಂ. ೪

## ಪಿತ್ತಜಿಹ್ವಕಸನ್ನಿ.

ಕಲ್ಕ.—ಈಗ ಪೇಳ್ದ ಕಹಿಪಡವಲಾದಿ ದ್ರವ್ಯಗಳನೇ ಕಲ್ಕವ ಮಾಡಿಕೊಡಲು ಪಿತ್ತಜಿಹ್ವಕ ಸನ್ನಿದೋಷಂ ಶಮನವಹುದು. ೫

## ಕೃಷ್ಣಜಿಹ್ವಕ ಸನ್ನಿ.

ಕಲ್ಕ.—ನೆಲಗುಳ್ಳದ ಬೇರು, ಶುಂಠಿ, ಅಮರದವಳ್ಳಿ, ಈ ಮೂರನು ಕಷಾಯಂಕಾಸಿ ಹಿಪ್ಪಲಿಯುಂ ಪ್ರತಿಪಾಕವಿಕ್ಕಿಕೊಡಲು ಕೃಷ್ಣಜಿಹ್ವಕ ಸನ್ನಿಪಾತ, ಶ್ಲೇಷ್ಮಜ್ವರ ಸಹ ಕೆಡುಗುಂ. ೬

## ವಾತಸನ್ನಿ.

ಕಲ್ಕ.—ತುಪ್ಪದೇವದಾರು, ಗಂಧಿಗತವರ, ಚಂಗಲಕೋಷ್ಟ, ಯಷ್ಟಿಮಧುಕ, ಶ್ರೀಗಂಧ, ರಕ್ತಚಂದನ, ಇವಂ ಮೊಲೆವಾಲಿಂದರೆದು ಕುಡಿಸಲು ವಾತಸನ್ನಿಶಮನಮಕ್ಕುಂ. ೭

---

[1] (ಗ) ಪ್ರತಿಯಲ್ಲಿಲ್ಲ. [2] (ಗ) ಆಲಕ್ಕಿ.

## ಪಿತ್ತಸನ್ನಿಗೆ.

ಕಲ್ಕ.—ಸಾರಗದ ಕೊಂಬು, ರುದ್ರಾಕ್ಷಿ, ಶ್ರೀಗಂಧ, ಈ ಮೂರನು ಮೊಲೆ ವಾಲಿನೊಳರೆದು ಕುಡಿಸಲು ಪಿತ್ತಸನ್ನಿದೋಷಂ ಗುಣವಹುದು. ೮

ದ್ರಾಕ್ಷಿಕಣ್ಣು. ಸಾರಗದ ಕೊಂಬು, ರುದ್ರಾಕ್ಷಿ, ಶ್ರೀಗಂಧ ಇವಂ ಮೊಲೆ ವಾಲಿನೊಳರೆದು ಕುಡಿಯಿಸೆ ಪಿತ್ತ ಸನ್ನಿದೋಷ ಗುಣಮಕ್ಕು. ೯

ಕಷಾಯ.—ಗುಳ್ಳದ ಬೇರು, ನೆಲಗುಳ್ಳದ ಬೇರು, ನುಗ್ಗೆಚಕ್ಕೆ, ಮಾವಿನ ಚಕ್ಕೆ, ಇವಂ ಸಮಭಾಗ ಕಷಾಯವಿಕ್ಕಿಕೊಡಲು ಪಿತ್ತಸನ್ನಿದೋಷ ಪರಿಹರ. ೨

## ಶ್ಲೇಷ್ಮಸನ್ನಿ.

ಕಲ್ಕ.—ಶುಂಠಿ, ಹಿಪ್ಪಲಿ, ಮೆಣಸು, ನಾಗಕೇಸರಿ, ಸೈಂಧವಲವಣ ಇವಂ ಸಮಾಂಶವಾಗಿ ಮೊಲೆವಾಲಿಂದರೆದು ಕುಡಿಯೆ ಶ್ಲೇಷ್ಮಸನ್ನಿದೋಷಂ ತೀರ್ಗುಂ. ೧೦

## ಅಂತರ್ಗತಸನ್ನಿ.

ಕಷಾಯ.—ಪಾದರಿಬೇರು, ಚಿತ್ರಮೂಲ, ಲೊಕ್ಕಿಬೇರು, ತುರುಚನ ಬೇರು, ಕಹಿಪಡವಲ, ಶುಂಠಿ, ಇವಂ ಸಮಭಾಗ ಕಷಾಯವಿಟ್ಟುಕೊಡಲು ಅಂತರ್ಗತಸನ್ನಿ ಕೆಡುಗುಂ. ೩

## ತ್ರಿದೋಷಸನ್ನಿ.

ಕಲ್ಕ.—ಬಿಲ್ವಪತ್ರೆ, ನರುವಲ, ಪೆಮ್ಮರ, ಶಿವನ್ನಿ, ಗುಳ್ಳ, ಗೂಳ, ಹೆಗ್ಗುಳ್ಳ, ಎರಡೆಲೆಹೊನ್ನೆ, ಮೂರೆಲೆಹೊನ್ನೆ, ನೆಗ್ಗಿಲು, ಗಂಡುದುರುಚೆ, ಅಮರದವಳ್ಳಿ, ಆಡುಸೋಗೆ ಈಟಗೆ ಬೇರುಗಳು, ಶುಂಠಿ, ಕೊಡನಾರಿಗೆಡ್ಡೆ, ಕಹಿಪಡವಲದ ಸೊಪ್ಪು, ಪರ್ಪಾಟಕ, ಚಂಗಲಕೋಷ್ಟ, ಇವಂ ಕಷಾಯವಿಟ್ಟು ಸೇವಿಸೆ ತ್ರಿದೋಷ ಸನ್ನಿ ವಾತಜ್ವರ, ಶ್ಲೇಷ್ಮ ವಾತೋತ್ತರ ಸಹ ಮಾಣ್ಗುಂ ೧೧

## ಗಂಡೂಷ.

ಅಕಲಕರೆಯಂ ಮೊಲೆಹಾಲಿಂ ತೇದು ನಾಲಿಗೆಗೆ ಲೇಪವಂ ಮಾಡೆ ತ್ರಿದೋಷ ಸನ್ನಿಗುಣವಹುದು. ೨

ಬಿಳಿಯ ಗಣಜಿಲ ಬೇರಂ ನಿಂಬೆಯ ಹುಳಿಯಲ್ಲಿ ತೇದು ನಾಲಿಗೆಗೆ ತೊಡೆಯೆ ತ್ರಿದೋಷ ಸನ್ನಿಮಾಣ್ಗುಂ. ೩

## ದೋಷಮೂರ್ಛೆಗೆ.

ಕಷಾಯ.—ದುಂಪರಾಷ್ಮೆ, ಪಿಲ್ಲ ಪೀಲುಪಿಂಜರಗೆಡ್ಡೆ, ಚಂಗಲಕೋಷ್ಟ,

ಹಿಪ್ಪಲಿಮೂಲ, ಚವ್ಯ, ಚಿತ್ರಮೂಲ, ಶುಂಠಿ, ನೆಗ್ಗಿಲಬೇರು, ಹಿರಿಯ ಮದ್ದಿನ ಬೇರು, ಇವಂ ಸಮಭಾಗವಾಗಿ ಕಷಾಯಂಮಾಡಿಕೊಡಲು ದೋಷ, ಮೂರ್ಛೆ ಪರಿಹರ. ೪

ನೆಗ್ಗಿಲ ಬೇರು, ತುರುಚನ ಬೀಜ, ಪಿಲ್ಲಪಿಂಜರವೇಳ್ಳು, ಶುಂಠಿ, ಜೀರಿಗೆ ಇವಂ ಸಮಭಾಗ ಕಷಾಯವಿಕ್ಕಿ ಪಾನವಂ ಮಾಡಲು ದೋಷದಿಂದಾದ ಮೂರ್ಛೆ ಗುಣವಹುದು ೫

## ಸಕಲ ಸನ್ನಿದೋಷ.

ಕಷಾಯ.—ತಗ್ಗಿ ಬೇರು, ಗುಳ್ಳದ ಬೇರು, ಬಿಲ್ವಪತ್ರೆ ಬೇರು, ಪಾದರಿ ಬೇರು, ದಿಂಡಲ ಬೇರು, ಹೆಗ್ಗುಳ್ಳದ ಬೇರು, ಶುಂಠಿ, ಇವಂ ಕಷಾಯವಿಕ್ಕಿ ಕೊಡಲು ಸಕಲ ಸನ್ನಿದೋಷವು ಪರಿಹರ. ೬

ಕಳ್ಳಂಗಡಲೆ, [1] ಎರಡೆಲೆ [1] ಹೊನ್ನೆ, ಮೂರೆಲೆ ಹೊನ್ನೆ, ಬಿಲ್ವಪತ್ರೆ ಬೇರು, ನೆಲಗುಳ್ಳ, ಹೆಗ್ಗುಳ್ಳ, ಶುಂಠಿ, ಸೊಗದೆ ಬೇರು, ಈ ಅಷ್ಟಮೂಲ ಕಷಾಯವಂ ಕಾಸಿ ಸೇವಿಸೆ ಸಕಲ ಸನ್ನಿದೋಷವು ಗುಣವಕ್ಕುಂ. ೭

## ಚಂದನಾದಿ ತೈಲ.

ಶ್ರೀಗಂಧಂ, ಯಷ್ಟಿಮಧುಕಂ, ಚಾಗಂ, ತಿಪ್ಪತೀಗ. ಇವಿನಿ ಕಷಾಯಂ ಗಾಚಿ, ವಡುಚುಕೊನಿ ನೂನೆ ಬ[2]ಲ್ಲೆ[2] ಡು ಇಂದುಲೋನಿ ವೇಸೆ ಕಲ್ಕ ದ್ರವ್ಯಾಲು :—ಸುಗಂಧಪಾಲು, ಚಂಗಲಕೋಷ್ಟು, ತುಂಗ ಮುಸ್ತ, ಚಿತ್ರಮೂಲಂ, ಇವಿ ವಗ ಒಕ್ಕಂಟಿಕಿ ಗ ೪ ವರಹಾಲು ಎತ್ತು ಚೂರ್ಣಂ ಜೇಸಿ ಆ ಕಷಾಯಂ ನೂನೆಲೊ ಬೋಸಿ ತೈಲಪಕ್ವಾನ ವಂಡಿ ದಿಂಚಿಕೊನಿ ಉಪಯೋಗಿಸ್ತೆ ಸಕಲ ಮೈನ ಸನ್ನಿದೋಷಾಲು ಗುಣಮೌನು. ೧

ಗಂಡೂಷ.—ಆಕಲ ಕರೆ ಗ ೪ ತೂಕ, ಬಜೆ ಗ ೪ ತೂಕ, ಮೆಣಸು ಗ ೪ ತೂಕ, ಬೆಳ್ಳುಳ್ಳಿ ಗ ೪ ತೂಕ, ಹಿಪ್ಪಲಿ ಗ ೪ ತೂಕ, ಇವು ೫ ದನ್ನು ಸಣ್ಣನಾಗ ರೆದು ಸೊಂಡೆಕಾಯಿ ಪ್ರಮಾಣ ಗುಳಿಗೆಯಂ ಮಾಡಿ ಬಿಸಿನೀರಿಂ ಕೊಳ್ಳಲು ಸಕಲ ಸನ್ನಿದೋಷಂ ಮಾಣ್ಗುಂ. ೪

## ಅಪಥ್ಯದೋಷಹರ ಚೂರ್ಣ.

ದುಸ್ಸರಿ ವೇರು ಚೂರ್ಣಂ ಜೇಸಿ ಉಂಚುಕೊನಿ, ಉಂಡಿರೇಮಟಿ ಔಷಧಿ ತೀಸುಕೋನೆ ವೆನಕನು ಅನ್ನಂ ಬೋನಮು ಚೇಯುಕನೆ ಈ ಚೂರ್ಣಂ ತಿಡಂಗಡ್ಡೆ ಗೆತ್ತು ತೀಸುಕೊನಿ ಆಮಿಾದ ಪಾಲು ಪೆರುಗು ಏಯಕ ಪ್ರಸಾಪಡಿನ ಜ್ವರರೋಗು ಲುಕು ವಿಗಡಿಂಚುನು. ೧

---

[1] (ಕ) ಪ್ರತಿಯಲ್ಲಿಲ್ಲ. [2] ಟ್ಟಿ, (ಗ)

ಮರಿನ್ನಿ ಜ್ವರಮುಮಿಾದ ಎಳನೀರು ತೀಸುಕೊನೆದಿಕಿ.— ಎಳನೀರಂ ರಂಧ್ರಂಜೇಸಿ ಆ ನೀಳ್ಳುಲೊ ತಾಳೀಸಪತ್ರ ಗ ೧ ತೂ, ನಿಮ್ಮಕಾಯಿ ನಾಲ ಗಿಂಟಲೊ ಒಗಪಾಲು ರಸಂ, ಇಂತಾ ಆ ನಿಳ್ಳುತೊ ಕಲಪಿ ತ್ರಾಗನು ತಾಪ ಜ್ವರಾಲು ಮಾನುನು. ೫

ಮರಿನ್ನಿ ತಾಪಜ್ವರಂ ವಾರು ಪತ್ತಿಗಿಂಜಲ ಚೂರ್ಣಂ ಜೇಸಿ ಎಳನೀಳ್ಳಲೊ ವೇಸಿ ತ್ರಾಗಿತೆ ವಿಗಡಿಂಚದು. ೬

ಅಂತು ಸಂಹಿತೆ ಕಲ್ಕ ೧೧, ಕಷಾಯ ೭, ಚೂರ್ಣ ೧, ತೈಲ ೧,
ಗಂಡೂಷ ೬, ಅಂಜನಂ ೨, ಸಹ ಪ್ರಯೋಗ ೨೮ ಕ್ಕೆ ಶ್ರೀ.

---

## ಸಮುದಾಯ ಸನ್ನಿಪಾತ ಜ್ವರ.

ಕಲ್ಕಗಳು.—ಸೈಂಧವ, ಹಿಪ್ಪಲಿ, ಮೆಣಸು, ಬಜೆ, ಮಣಶಿಲೆ, ಬಾಗೆ ಬೀಜ, ಉಳ್ಳಿ, ಇವಂ ಆಡಿನ ಮೂತ್ರದಿಂದರೆದು ಕೊಡಲು ಸನ್ನಿಪಾತ ಜ್ವರಂ ಗುಣ ಮಕ್ಕುಂ. ೧

ಗೋರೋಜನವಂ ಚೂರ್ಣಿಸಿ ಮೊಲೆ ಹಾಲಿನಲ್ಲಿ ಹಾಕಿ ಕುಡಿಯಲು ಸನ್ನಿ ಪಾತ ಜ್ವರಂ ಮಾಣ್ಗುಂ. ೨

ಸೈಂಧವಲವಣ, ಹಿಪ್ಪಲಿ, ಮೆಣಸು, ಮಣಶಿಲೆ, ಬಾಗೆಬೀಜ, ಬೆಳ್ಳುಳ್ಳಿ, ಇವು ಪ್ರತ್ಯೇಕ ಗ ೧ ತೂಕವಂ ಬಿಸಿನೀರಿಂದರೆದು ಸೇವಿಸೆ ಸಕಲ ಸನ್ನಿಪಾತ ಗುಣವಹುದು. ೩

ಕಷಾಯಗಳು.—ಬೇವು, ಕಹಿಪಡವಲ, ಇವಂ ಕಷಾಯವಿಕ್ಕಿ ಜೇನುತುಪ್ಪ ವೆರೆಸಿ ಕುಡಿಯೆ, ಸನ್ನಿಪಾತ ಜ್ವರಹರ. ೪

ಶುಂಠಿ, ಹಿಪ್ಪಲಿ, ಭದ್ರಮುಸ್ತೆ, ಕಟುಕರೋಹಿಣಿ, ಬೇವು, ಕೊಡಸಿಗೆ, ಕಹಿಪಡವಲ, ಅಗುಳ ಶುಂಠಿ, ಇವನೆಲ್ಲ ಕಷಾಯವಂ ಮಾಡಿ ಕುಡಿಯೆ ಸನ್ನಿಪಾತ ಪರಿಹರ. ೫

ಕಳ್ಳಂಗಡಲೆ ಬೇರು, ಅಂಕೋಲೆ ಬೇರು, ಚವ್ಯ, ಚಿತ್ರಮೂಲ, ಹಿಪ್ಪಲಿ ಮೂಲ, ಗುಳ್ಳದ ಬೇರು, ಇಷ್ಟನೂ ಸಮಭಾಗ ಕಷಾಯವಿಟ್ಟು ಸೇವಿಸೆ ಸನ್ನಿ ಪಾತ ಜ್ವರಮಾಣ್ಗುಂ. ೬

ಅಮರದವಳ್ಳಿ, ಔಡಲದ ಬೇರು, ಶುಂಠಿ, ದೇವದಾರೆ, ರಾಸ್ಮೆ, ಅಳಿಲೆ ಕಾಯಿ, ಇವಂ ಸಮಾನವಾಗಿ ಕಷಾಯಂಗೈದು ಪಾನವಂ ಮಾಡೆ ಸಕಲಸನ್ನಿ ಪಾತವು ಶಮನವಹುದು. ೭

ಬೆಲ್ಲವತ್ತದ ಬೇರು, ಗುಳ್ಳದ ಬೇರು, ಪಾದರಿ ಬೇರು, ಹೆಮ್ಮರದ ಬೇರು, ನೆಲಗುಳ್ಳ, ಹೆಗ್ಗುಳ್ಳ, ಎರಡೆಲೆ ಹೊನ್ನೆ, ಮೂರೆಲೆ ಹೊನ್ನೆ, ನೆಗ್ಗಿಲು ಸಹ ದಶ ಮೂಲಂಗಳು,[1] ಗಂಡುದುರಜೆ ಬೇರು, ಅಮರದವಳ್ಳಿ, ಆಡುಸೋಗೆ ಸೊಪ್ಪು, ಶುಂಠಿ, ಕೊಡನಾರಿಗೆಡ್ಡೆ, ಕಹಿಪಡವಲ ಸೊಪ್ಪು, ಪರ್ಪಾಷ್ಟಕ, ಚಂಗಲಕೋಷ್ಟ ಇವಂ ಕಷಾಯುವಿಕ್ಕಿ ಕುಡಿಯ, ಸಕಲ ಸನ್ನಿಪಾತ ಜ್ವರಹರ ಶ್ಲೇಷ್ಮವಾತೋತ್ತರ ಸಹ ಮಾಣ್ಗುಂ. ೮

ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ದೇವದಾರೆ, ಪದ್ಮಕ, ಲಾಮಂಚ, ಶ್ರೀಗಂಧ, ಕಟುಕರೋಹಿಣಿ, ಖರ್ಜೂರದ ಹಣ್ಣು, ಶುಂಠಿ, ಹಿಪ್ಪಲಿ, ಮೆಣಸು, ಸಹ ಕಷಾಯಂ ಕಾಸಿ ಸೇವಿಸೆ ಸಕಲಸನ್ನಿ ಪಾತಂ ತೀರ್ಗುಂ. ೯

ಗಂಟು ಭಾರಂಗಿ, ಪರ್ಪಾಷ್ಟಕ, ತುಂಗಮುಸ್ತೆ, ಚಂಗಲಕೋಷ್ಟ, ಶುಂಠಿ, ಕರಕ್ಕಾಯಲು, ಪಿಪ್ಪಳ್ಳು, ತಕ್ಕಲಿ ವೇರು, ಪಾದರಿಚಕ್ಕ, ನೇಲಗುಳ್ಳ, ನೇಲ ಹೊನ್ನ, ಕೋಲಹೊನ್ನ, ಎಲುವಸಂದಿ, ತುರುಚನ ವೇರು ಗುಮ್ಮಡು, ಅಡ್ಡ ಸರಂ, ಇವಿ ಕಷಾಯಂ ಬೆಟ್ಟಿ ಈಯನು ಸನ್ನಿಪಾತ ಜ್ವರಾಲು ನಿಲುಚುನು. ೧೦

ವಜ, ತಿಪ್ಪತೀಗ, ದೇವದಾರು ಚಕ್ಕ, ಶುಂಠಿ, ನೆಲವೇಮು, ತುಂಗ ಮುಸ್ತುಲು, ಅಡ್ಡಸರಂ, ಇವಿ ಕಷಾಯಂ ಚೇಸಿ ಇಸ್ತೆ ಸನ್ನಿಪಾತ ಜ್ವರಾಲು ಗುಣಮೌನು. ೧೧

ಬಿಲ್ವಪತ್ರ ವೇಳ್ಳು, ಗುಮ್ಮಡಿ ವೇಳ್ಳು, ತಕ್ಕಲ ವೇಳ್ಳು, ಪಾದರಿ ವೇಳ್ಳು, ವಿರೀಶನ ವೇಳ್ಳು, ಕೋಲು ಹೊನ್ನ, ನೇಲಹೊನ್ನ, ನೇಲಮುಲಕ, ಪೆದ್ದ ಮುಲಕ, ಪಲ್ಲೇರು, ಮೂಲಗೋವಿಲ ವೇಳ್ಳು, ತಿಪ್ಪತೀಗ, ನೇಲವೇಮು, ಚಂಗಲಕೋಷ್ಟ, ಇವಿನ್ನಿ ಸಮಾಂಶಂ ಕಷಾಯಂ ಬೆಟ್ಟಿ ಈಯನು ಸಕಲ ಸನ್ನಿಪಾತ, ಶ್ಲೇಷ್ಮ ಪ್ರಕೋಪಮ್ಯೆನ ಸಹ ನಿಲುಚುನು. ೧೨

ಪಿಂಮುಟ ವೇಳ್ಳು, ಪಂಚಕೋಲಾಲು, ಪಿಪ್ಪಲ ಮೂಲಂ, ಚವ್ಯಂ, ಚಿತ್ರ ಮೂಲಂ, ಉಪ್ಪಿವೇಳ್ಳು, ಗುಮ್ಮಡಿ ವೇಳ್ಳು, ಇವಿ ಕಷಾಯಂ ಬೆಟ್ಟಿ ಇಸ್ತೆ, ಸನ್ನಿ ಪಾತಜ್ವರಂ ಮಾನುನು. ೧೩

ಕಿರುದೆಂಗು, ನೆಲಬೇವು, ಬೇವು, ಭದ್ರಮುಸ್ತೆ ಕಟುಕರೋಹಿಣಿ, ಬಜೆ, ಶುಂಠಿ, ಹಿಪ್ಪಲಿ, ಮೆಣಸು, ಅಡ್ಡಸರ, ಹಾವುಮೆಕ್ಕೆ ಬೇರು, ರಾಸ್ಮೆ, ಕಹಿಪಡವಲ, ದೇವದಾರೆ, ಅರಿಸಿನ, ಪಾದರಿಬೇರು, ತಗ್ಗಿಬೇರು, ಬ್ರಹ್ಮಿ, ಮರದರಿಸಿನ, ಅಮ ರದವಳ್ಳಿ, ಶ್ರೀಗಂಧ, ಅತಿವಿಷ, ಔಡಲದ ಬೇರು, ತಿಗಡೆ, ನೆಲಗುಳ್ಳದ ಬೇರು, ಕರ್ಕಾಟಕ ಶೃಂಗಿ, ಕೊಡಸಿಗೆ ಬೇರು, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿ ಚಟ್ಟು, ಖರ್ಜೂರ, ಇವಂ ಸಮಾನಂಗೊಂಡು ಕಷಾಯಂ ಮಾಡಿಕೊಡಲು ಸಮಸ್ತ ಸನ್ನಿಪಾತಂ ಮಾಣ್ಗುಂ. ೧೪

[1] ಎರಡು ಪ್ರತಿಗಳಲ್ಲಿಯೂ ಈ ಪಾಠವೇ ಇದೆ. ೯ ಮೂಲಕಗಳೇ ಇವೆ.

ಚಿಟ್ಟಿಮುಟ್ಟಿ ವೇಳ್ಳು, ತಕ್ಕಲಿ ವೇಳ್ಳು, ಪೆದ್ದಮುಲುಕ, ಗುಮ್ಮಡಿ ವೇರು, ಮಾರಡಿವೇರು, ಕಲುವಗೊಟ್ಟಿವೇರು, ಕೋಲುಹೊನ್ನೆ, ಶುಂಠಿ, ಇವಿ ಸಮಭಾಗಂಗಾ ಕೂರ್ಚಿ ಕಷಾಯಂ ಕಾಚಿ ಸೇವಿಂಪಗಾನು ಸಕಲಮೈನ ಸನ್ನಿಪಾತ ಜ್ವರಾಲು ಮಾನನು ೧೫

ಮರದರಿಶನ, ಕೊಡನಾರಿಗೆಡ್ಡೆ, ಕಟುಕರೋಹಿಣಿ, ಅಳಿಲೆಕಾಯಿ, ತಾರೆ ಕಾಯಿ, ನೆಲ್ಲಿಕಾಯಿ, ನೆಲಗುಳ್ಳ, ಕಹಿಪಡವಲ, ಅರಿಸಿನ, ಬೇವಿನ ಒಳನಾರು, ಇವು ಪ್ರತ್ಯೇಕ, ಎರಡು ವರಹಾ ತೂಕವಂ ಎರಡುಪಡಿ ನೀರಿನಲ್ಲಿ ಅಷ್ಟಾವಶೇಷವಾಗಿ ಕಷಾಯಂ ಕಾಸಿ ಪ್ರಾತಃಕಾಲದಲ್ಲಿ ಕುಡಿಯ ಕೊಡಲು ಸನ್ನಿಪಾತ ಜ್ವರಗಳು ಮಾಣ್ಗುಂ. ೧೬

ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಕಾಯಿ, ಕಟುಕರೋಹಿಣಿ, ಕೊಡನಾರಿಗೆಡ್ಡೆ, ಬೇವಿನ ಒಳನಾರು, ದೇವದಾರು, ಇವು ಪ್ರತ್ಯೇಕ ಗ ೨ ತೂಕವಂ ಎರಡುಪಡಿ ನೀರಿನಲ್ಲಿ ಹಾಕಿ, ಚಾತುರ್ಭಾಗಾವಶೇಷವಾಗಿ ಕಷಾಯಂ ಮಾಡಿ ಉದಯದಲ್ಲಿ ಸೇವಿಸಲು ಸನ್ನಿಪಾತಂಗಳಿಂದುಂಟಾದ ಉಗ್ರಜ್ವರ ನಾಶನವಹುದು. ೧೭

ಕಳ್ಳಂಗಡಲೆ, ಅಂಕೋಲೆ, ಹಿಪ್ಪಲಿ ಮೂಲ, ಚವ್ಯ, ಚಿತ್ರಮೂಲ, ರಾಸ್ಮೆ, ಬೂದಿಗುಂಬಳದ ಬೇರು, ಇವಂ ಸಮಭಾಗ ಕಷಾಯಂ ಕಾಸಿಕೊಡಲು ಸನ್ನಿಪಾತ ಜ್ವರ ಗುಣಮಕ್ಕುಂ. ೧೮

ಕಳ್ಳಂಗಡಲೆ, ನೆಲಗುಳ್ಳ, ಗುಳ್ಳದ ಬೇರು, ಬಿಲ್ವಪತ್ರೆ ಬೇರು, ಪಾದರಿ ಬೇರು, ಮೂರೆಲೆ ಹೊನ್ನೆ, ಎರಡೆಲೆ ಹೊನ್ನೆ, ಶುಂಠಿ, ಇವಂ ಕಷಾಯ ವಿಕ್ಕಿ ಕೊಡಲು ಸಕಲ ಸನ್ನಿಪಾತಂ ಕೆಡುಗುಂ. ೧೯

ಅಳಿಲೆಕಾಯಿ, ತಾರೆಕಾಯಿ, ಕಹಿಪಡವಲ, ಕಟುಕರೋಹಿಣಿ, ಕೊಡನಾರಿ ಗಡ್ಡೆ, ಬೇವಿನ ಒಳನಾರು, ದೇವದಾರೆ, ಇವು ಪ್ರತ್ಯೇಕ ಎರಡು ವರಹಾ ತೂಕವಂ ಕಷಾಯವ ಮಾಡಿ ಸೇವಿಸೆ ಸನ್ನಿಪಾತ ಜ್ವರಗಳು ಮಾಣ್ಗುಂ. ೨೦

ಕೊಡನಾರಿ ಗೆಡ್ಡೆ, ಅರಿಸಿನ, ತುಪ್ಪದೇವದಾರೆ, ಕುರುಟಿಗೆ, ದ್ರಾಕ್ಷಿಹಣ್ಣು, ಇಪ್ಪೆಹೂವು, ಅಮರದವಳ್ಳಿ, ಪರ್ಪಾಷ್ಟಕ, ಚೆಂಗಲ ಕೋಷ್ಟ, ನೆಲಬೇವು, ಕಹಿಪಡವಲ, [1] ಇವಂ ಸಮಾಂಶ ಕಷಾಯಂ ಕಾಸಿ ಕುಡಿಯೆ ಸಕಲ ಸನ್ನಿಪಾತ ಜ್ವರಂ ಮಾಣ್ಗುಂ. ೨೧

ಚಿಟ್ಟಿಮುಟ್ಟಿ ವೇಳ್ಳು, ಮರುಗ ವೇಳ್ಳು, ಹಿಪ್ಪಲಿ ಮೂಲಂ, ಚವ್ಯಂ, ಚಿತ್ರಮೂಲಂ, ಶುಂಠಿ, ದುಂಪರಾಸ್ಮ, ಪೆದ್ದಗುಮ್ಮಡಿ ವೇರು, ಇವಿ ಸಮಭಾಗಂ ಕಷಾಯಂ ಜೇಸಿ ಈಯನು ಸನ್ನಿಪಾತ ಜ್ವರಾಲು ಮಾನುನು. ೨೨

---

[1] + ಶುಂಠಿ, (ಗ).

ಪಿಪ್ಪಳ್ಳು, ತಕ್ಕಲಿ ವೇರು, ನೇಲವೇಮು, ವಜ, ಓಮಮು, ಶುಂಠಿ, ಚೇತಿ ಪೊಳ್ಳು ಇವಿ ಸಮಭಾಗಂ ಕಷಾಯಂ ಕಾಚಿ ಈಯನು ಸನ್ನಿಪಾತಜ್ವರಂ ಗುಣ ಮೌನು. ೨೩

ಕಹಿಪಡವಲ, ಪರ್ಪಾಷ್ಟಕ, ಬಳ್ಳಿದುರುಚೆ, ನೆಲಬೇವು, ಶುಂಠಿ, ಚಂಗಲ ಕೋಷ್ಟ, ನೆಲಗುಳ್ಳ, ಭದ್ರಮುಸ್ತೆ ಇವು ಪ್ರತ್ಯೇಕ ಗ ೧ ತೂಕ ವೇರೆಯಲ್ಲಿ ಕಷಾಯಂ ಕಾಸಿ ಹಿಪ್ಪಲಿ ಪ್ರತಿಪಾಕವಂ ಮಾಡಿ ಸೇವಿಸೆ ಸನ್ನಿಪಾತ ಜ್ವರ, ತ್ರಿದೋಷ ಜ್ವರ ಸಹ ಮಾಣ್ಗುಂ. ೨೪

ಅಮರದವಳ್ಳಿ, ಆಡುಸೋಗೆ, ನೆಲಬೇವು, ಪರ್ಪಾಷ್ಟಕ ಇವು ಪ್ರತ್ಯೇಕ ಗ ೧ ತೂಕ, ಶುಂಠಿ ಗ ೨ ತೂಕ, ಬಳ್ಳಿಹರುವೆ, ಭದ್ರಮುಸ್ತೆ ಇವು ಬಗೆ ೧ ಕ್ಕೆ ಗ ೩ ತೂಕವಂ ಕಷಾಯವಿಟ್ಟು ಹಿಪ್ಪಲಿ ಪ್ರತಿಪಾಕವಂ ಕೊಡಲು ಸಮಸ್ತ ಸನ್ನಿಪಾತದೋಷ ಜ್ವರವೂ, ಮೂರ್ಛೆ ಜ್ವರ ಸಹ ಮಾಣ್ಗುಂ ೨೫

## ಚೂರ್ಣ

ವಿಷಬೊಟ್ಟಿವೇಳ್ಳು, ಈಶ್ವರೀವೇಳ್ಳು, ಪೆನುಜುಟ್ಟುವ, ಪಾಮುದೊಂಡಗಡ್ಡ, ವಿಡಮಾಲೆವೇಳ್ಳು, ಕೋಲುಮುಕ್ಕಚಕ್ಕ, ನರುವಂಜಿ ವೇಳ್ಳು, ಬೋವವೇಳ್ಳು, ಗಜ್ಜ ಕಾಯವೇಳ್ಳು, ಬೋಡತರಂವೇಳ್ಳು, ಮುಷ್ಟಿಚಕ್ಕ, ನಲ್ಲಬಲುಸು ಚಕ್ಕ, ಮೊಗಲಿಂಗ ಚಕ್ಕ, ರೇಗುಚಕ್ಕ, ನೇಲವೇಮು, ಚೇತಿಪೊಳ್ಳು, ಪೆದ್ದಮುಲುಕ, ಚಿನ್ನಮುಲುಕ, ನೀಲಿವೇಳ್ಳು, ಮುಲ್ಲಾಮಂದು, ಅಡವಿಮಿರುಪುವೇಳ್ಳು, ಬಹ್ಮದಂಡವೇಳ್ಳು, ಜಿಲ್ಲಡವೇಳ್ಳು, ಪೊಡಪತ್ರ, ಚವ್ಯಂ, ಚಿತ್ರಮೂಲಂ, ಪಿಪ್ಪಳ್ಳು, ಪಿಪ್ಪಲಿಮೂಲಂ, ಗಂಟುಭಾರಂಗಿ, ಪಸುಪು, ಮಾನಿಪಸುಪು, ಕರಕತಾಂದ್ರಿ, ಉಸುರಿಕೇಲು, ಅಮಿದಪುವೇಳ್ಳು, ಲವಂಗಚಕ್ಕ, ಲವಂಗ ಪತ್ರ, ಲವಂಗಂ, ಓಮಮು, ಕಾಲ್ಚಿನ ವಜ, ಜಿಲಕರ, ದೇಶಾವಾರ ಜಿಲಕರ, ನಾಗಕೇಸರ, ವಾಯುವಿಳಂಗ, ಗಜ ಪಿಪ್ಪಳ್ಳು, ತೆಲ್ಲಗಣಜರು, ಈಡುಗವೇಳ್ಳು, ಕಾರುಮುನುಗು ಚಕ್ಕ ಇಂತಾ ಸಮ ಭಾಗಂಗಾ ಕೂರ್ಚಿ ಚೂರ್ಣಂ ಜೇಸಿ, ವೇನೀಳತೊ ಇಸ್ತೆ, ಸನ್ನಿಪಾತಾಲು, ವಿಷಮಜ್ವರಾಲು, ಅಪಥ್ಯದೋಷಾಲು, ಸಮಸ್ತ ವಾಯುಲು, ಸೂತಿಕಾವಾಯುಲು, ತೀವ್ರಮ್ಯೆನ ಜ್ವರಾಲು ಇವಿನ್ನಿ ಗುಣಮೌನು. ಸ್ವಭಾವಮ್ಯೆನ ಜ್ವರಾಲು ಶರ್ಕರತೋ ಇಸ್ತೆ ಜ್ವರಪರಿಹರಮೌನು. ೧

## ತೈಲ

ಮಣಸಿಲೆ, ಗಂಧಕ, ತಾಳುಕ, ಗೇರತೈಲ, ಇವು ಪ್ರತ್ಯೇಕ ಒಂದು ಪಾಲು, ಎಳ್ಳುತೈಲವೈವತ್ತು ಪಾಲು ಇವಂ ಕೂಡಿ ಒಂದು ದಿನ ದೀಪಾಗ್ನಿಯಿಂದಟ್ಟು,

ಇಳುಹಿಕೊಂಡು ಈ ತೈಲವಂ ೧ ಗದ್ಯಾಣ ತೂಕವಂ ಜೇನುತುಪ್ಪದಿಂದಾರು ತಿಂಗಳು ಕೊಳಲು ಸಕಲ ಸನ್ನಿಪಾತ, ಸಮಸ್ತ ಕುಷ್ಠರೋಗ ಸಹ ಮಾಣ್ಗುಂ. ೧

ಕಗ್ಗಲಿ ಬೇರು, ಉಳ್ಳಿ, ಬಜೆ ಇವು ಪ್ರತ್ಯೇಕ ಅರೆಹಲದಲ್ಲಿ ಜಜ್ಜಿ ಕುಟ್ಟಿ, ಎಳ್ಳೆಣ್ಣೆ, ಇಪ್ಪೆಯೆಣ್ಣೆ, ಬೇವಿನೆಣ್ಣೆ, ಹರಳೆಣ್ಣೆ ಇವು ಬಗೆ ಒಂದಕ್ಕೆ ಒಂದು ಸೊಲಿಗೆಯಲ್ಲಿ ಕೂಡಿಸಿ, ಆ ಔಷಧಿಯುನಿದರಲ್ಲಿ ಕದಡಿ ಸೂರ್ಯಪುಟದಲ್ಲಿಟ್ಟು ಮೈಗೆ ಲೇಪನವ ಮಾಡಲು ಸನ್ನಿಪಾತ ಗುಣಮುಕ್ಕುಂ. ೨

ಔಡಲದೆಣ್ಣೆ, ಒಳ್ಳೆಣ್ಣೆ, ಬೇವಿನೆಣ್ಣೆ, ಇಪ್ಪೆಯೆಣ್ಣೆ, ಹೊಂಗೆಯೆಣ್ಣೆ ಇವು ಐದನ್ನು ಸಮಾನಂಗೊಂಡು, ತಲೆಗೆದರಿ (ಸಹಮೂಲ), ನುಗ್ಗೆ ಬೇರು, ಚಿತ್ರ ಮೂಲದ ಬೇರು, ಲೊಕ್ಕಿ ಬೇರು, ಆಡುಸೋಗೆ ಬೇರು, ತಗ್ಗಿಬೇರು ಇವಂ ಇಡಿದು ಅಂಬಿಲದಲ್ಲಿ ಕಲಸಿ ಹಿಂಡಿಕೊಂಡು, ಬೆಳ್ಳುಳ್ಳಿ, ಮೆಣಸು. ಶುಂಠಿ, ವಾಯು ವಿಳಂಗ, ಜಾಕಾಯಿ, ಹಿಪ್ಪಲಿ, ಅರಗು, ಅರಿಶಿನ, ಸಜ್ಜರಸ, ಎಕ್ಕೆಹಾಲು, ಸಾಸುವೆ, ಜಟಾಮಾಂಸಿ, ಕಟುಕರೋಹಿಣಿ ಇವಂ ಸಮಾನಂಗೊಂಡು ಸಣ್ಣನಾಗಿ ಚೂರ್ಣವ ಮಾಡಿ ಅಂಬಿಲವನ್ನು, ಎಣ್ಣೆಗಳನ್ನು ಸಮನಾಗಿ ಒಲೆಯಮೇಲಿಟ್ಟು ಈ ಚೂರ್ಣವನದರೊಳು ಹಾಕಿ ಅಂಬಿಲ ಇಂಗುವ ಹಾಗೆ ಕಾಸಿ ಮೇಲಣೆಣ್ಣೆಯ ಬಸಿದುಕೊಂಡು ಸನ್ನಿಹುಟ್ಟಿದವರಿಗಾಯೆಣ್ಣೆಯಿಂ ಮೈಗೆ ಲೇಪಂಗೈದು ಆ ಇಪ್ಪೆಯ ಮೈಗೆ ಶಾಖಂಗೊಡಲು ಸಕಲ ಸನ್ನಿಪಾತ ಮಾಣ್ಗುಂ. ೩

ನಿರ್ವಿಷ, ಚಂಗಲಕೋಷ್ಟ, ಶುಂಠಿ, ಹೀಯಾವಳಿ, ಚಿತ್ರಮೂಲ, ಇಲ್ಲಣ ಈ ಬಗೆ ೧ ಕ್ಕೆ ನಿಂಬೆಹುಳಿ ಅರೆಪಾವು, ಸೂರಣದ ರಸ, ಎಕ್ಕದೆಲೆಯ ರಸ, ಮದ್ದು ಕುಣಿ ರಸ, ಆಡಿನ ಹಾಲು, ಲೊಕ್ಕಿಸೊಪ್ಪಿನ ರಸ ಇವು ಪ್ರತ್ಯೇಕ ಅರೆಪಾವು, ಹಸುವಿನ ಮೂತ್ರ ಇಪ್ಪತ್ತುಪಾವು, ಆಡಿನಮೂತ್ರ ಇಪ್ಪತ್ತುಪಾವು, ಇಷ್ಟರ ಇಮ್ಮಡಿ ಎಳ್ಳೆಣ್ಣೆ ಇವನ್ನೆಲ್ಲಾ ಕೂಡಿ ತಾಮ್ರದ ಚರುವಿಗೆಯಲ್ಲಿ ಆಗಲಿ, ಲೋಹ ಪಾತ್ರೆಯಲ್ಲಾಗಲಿ, ಮಂದಾಗ್ನಿಯಿಂದ ಎಣ್ಣೆ ನಿಲುವತನಕ ಅಟ್ಟು ಒಂದು ಗದ್ಯಾಣ ತೂಕವಂ ತೆಗೆದುಕೊಂಡು ದೇಹಕ್ಕೆ ಲೇಪವಂ ಮಾಡಿಸಲು ತ್ರಯೋದಶ ಸನ್ನಿಪಾತ, ಸಕಲ ಸನ್ನಿದೋಷ, ಧಾತುಗತಜ್ವರ, ಅಷ್ಟಾದಶಕುಷ್ಠ ಸಹ ಮಾಣ್ಗುಂ. ೪

## ನಾರಾಯಣ ತೈಲ

ಎಳ್ಳೆಣ್ಣೆ ಸೇರು ೧೦, ಎಕ್ಕದ ಹಾಲು ಸೇರು ೧, ಕಳ್ಳಿಹಾಲು ಸೇರು ೧, ಆಡಿನ ಮೂತ್ರ ಸೇರು ೫, ಗೋಮೂತ್ರ, ಎಕ್ಕದೆಲೆ ರಸ, ಕಳ್ಳಿಯೆಲೆ ರಸ, ಮಂಗರ ವಳ್ಳಿ ರಸ, ರಕ್ಕಸಿರಸ, ಲೊಕ್ಕಿಯೆಲೆ ರಸ, ತಗ್ಗಿರಸ, ಸೀಗುಡಿತೆ ರಸ, ಹರಳೆಲೆ ರಸ, ಕಾಡುನುಗ್ಗೆ ರಸ, ಪರ್ಪಾಷ್ಟಕದ ರಸ, ಗರುಗದ ರಸ, ಗೇರಹರಳ ರಸ, ಚಿತ್ರ ಮೂಲದ ರಸ, ರಂಜಿಕೆ ರಸ, ತುರಚನ ರಸ ಇವೆಲ್ಲ ಬಗ ೧ ಕ್ಕೆ ಸೇರು ೫ ಪ್ರಕಾರ

ದಲ್ಲಿ ಕೂಡಿ, ಕಳ್ಳಿಬೇರು, ಎಕ್ಕೆ ಬೇರು, ಕಹಿಗುಮ್ಮಳದ ಬೇರು, ಕಕ್ಕೆ ಬೇರು, ಕಟುಕ ರೋಹಿಣಿ, ಹಾವುಮೆಕ್ಕೆ ಬೇರು, ಕಾಡುನುಗ್ಗೆ ಬೇರು, ಚಿತ್ರಮೂಲದ ಬೇರು, ತಬಸಿ ಬೇರು ಇವಂ ಸಮಾನಂಗೊಂಡು ಹಾಕಿ ಅಷ್ಟಾವಶೇಷವಾಗಿ ಕಷಾಯ ಕಾಸಿ ಇದರಲ್ಲಿ ಜಾಪಾಳವಂ ಧೂಪವ ಹಾಕಿ ಕೈದೀವಿಗೆ ಪ್ರಮಾಣದುರಿಯಲ್ಲಿ ಉರುಹುತ್ತ ಎಣ್ಣೆಯುಳಿವ ತನಕ ಅಟ್ಟು ಇಳುಹಿ ಶೋಧಿಸಿಕೊಂಡು ಈ ತೈಲವಂ ಸರ್ವಾಂಗಲೇಪಂಗೈಯೆ ಸಕಲ ಸನ್ನಿಪಾತಂಗಳು, ಶೂಲೆ, ಗಂಟುಹುಣ್ಣುಗಳು ಮುಂತಾದುವು ಮಾಣುವುವು. ಈ ತೈಲವಂ ಕಣ್ಣಿಗೆಚ್ಚೆ ಸಕಲ ನೇತ್ರರೋಗಗಳು ಗುಣವಹುದು. ಕಿವಿಗೆ ಬಿಡಲು ಕಿವುಡು ಮಾಣ್ಗುಂ. ಪಾಂಡುರೋಗ, ಶ್ವಾಸ, ಖಾಸ, ಜ್ವರ, ಧನುರ್ವಾತ ಮುಂತಾದ ರೋಗಂ ಬಿಡುಗಡೆಯಹುದು. ೫

## ಅಂಜನ

ಬಾಗೆಬೀಜ, ಹಿಪ್ಪಲಿ, ಬಜೆ, ಸೈಂಧವ ಸಹ ಆಡಿನ ಮೂತ್ರದಲ್ಲಿ ಅರೆದು ಕಣ್ಣಿಗೆಚ್ಚೆ ಸಕಲ ಸನ್ನಿಪಾತಹರ. ೧

ಮೆಣಸನ್ನು ಎಳ್ಳೆಣ್ಣೆಯಲ್ಲಿ ತೇದು ಕಣ್ಣಿಗೆಚ್ಚಲು ಸನ್ನಿಪಾತಂ ಮಾಣ್ಗುಂ. ೨

ಶುದ್ಧಿಮಾಡಿದ [1]ನೇಪಾಳ[1] ೧೦ ವರಹ ತೂಕ, ಮೆಣಸು ಗದ್ಯಾಣ ೧ ತೂಕ, ಹಿಪ್ಪಲಿ ಗ ೧ ತೂಕ, ಶುದ್ಧರಸ ಗ ೧ ತೂಕ ಸಹ ನಿಂಬೆಹಣ್ಣಿನ ರಸದಿಂ ಮರ್ದಿಸಿ ಕಡುಹಂ ಮಾಡಿ ನೆಳಲಲ್ಲಿ ಒಣಗಿಸಿ ತಿಲಪ್ರಮಾಣವಂ ಕಣ್ಣಿಗೆಚ್ಚಲು ಸನ್ನಿಪಾತಂ ಗುಣಮಕ್ಕುಂ. ೩

ಶುಂಠಿ, ಹಿಪ್ಪಲಿ, ಮಿರಿಯಾಲು, ಇಂಗು, ಮಗ್ಗಾರಪಂಡು, ಕೂಕಟಪಂಡು, ಖರ್ಜೂರಗಿಂಜ, ಕರಕಕಾಯಿ, ತೆಲ್ಲಗಲಜರ ವೇರು, ತೆಲ್ಲಗುರುಗಂಜಿಪಲುಕು, ಪೆದ್ದಾಮಿದಗಿಂಜಲು, ಇಂದ್ರಗೋಪಪುರುಗುಲು ಇವಿ ಸಮಂ ಕೂರ್ಚಿ ಮೇಕ ಕೊಲ್ಲುವಿನ್ನಪೋಸಿ ನಿಂಬ ಪುಲುಸುನು ಜಾಮು ಮರ್ದಿಂಚಿ ಕೊಡವುಲುಸೇಸಿ ನೀಡನೆಂಡಿಂಚಿ ತೇನೆತೊ ರಾಚಿ ಕನ್ನುಲ ಬೆಟ್ಟಗಾನು ಸನ್ನಿಪಾತ ಜ್ವರಾಲು, ನೇತ್ರರೋಗಾಲು, ಭೂತ, ಪ್ರೇತ, ಪಿಶಾಚ, ವೃಶ್ಚಿಕ, ಸರ್ಪವಿಷ, ಉನ್ಮಾದ ಸಹ ಮಾನುನು. ೪

## ಭೈರವಾಂಜನ

ಇಂಗು, ಸೈಂಧವ, ಪಿಪ್ಪಳ್ಳು, ಆವು[2]ಮೂ[2]ತ್ರಗೂರಿ ಅಂಜನಂ ಬೆಟ್ಟಗಾನು ಸನ್ನಿಪಾತ ಜ್ವರಾಲು ಮಾನುನು. ೧

---

[1] ಜೇಪಾಳ, (ಗ.)  [2] ನೇ (ಗ.)

## ನಶ್ಯಗಳು.

ಜೆಲ್ಲವತ್ತದ ಬೇರು, ನರುವಲದ ಬೇರು, ಗೂಳದ ಬೇರು, ಪಾದರಿ ಬೇರು, ಶಿವನ್ನಿ ಬೇರು—ಇಂತೆಂಬ ಮಹಾಪಂಚಮೂಲ, ನೆಲಗುಳ್ಳ, ಹೆಗ್ಗುಳ್ಳ, ಎರಡೆಲೆ ಹೊನ್ನೆ, ಮೂರೆಲೆ ಹೊನ್ನೆ, ನೆಗ್ಗಿಲುಗಳೆಂಬ ಈ ಲಘು ಪಂಚಮೂಲ ಕೂಡ ದಶಮೂಲವೆಂಬ ಈ ಬೇರುಗಳನ್ನು ಕರ್ಪೂರ, ಶುಂಠಿ, ಕರ್ಕಾಟಕಶೃಂಗಿ, ಪುಷ್ಕರಮೂಲ, ಗಂಡುದುರುಚನ ಬೇರು, ಗಂಟು ಭಾರಂಗಿ, ಕೊಡಸಿಗೆ ಬೀಜ, ಕಹಿಪಡವಲ, ಕಟುಕರೋಹಿಣಿ, ಇವೆಲ್ಲವಂ ಅಗಸೆ ಸೊಪ್ಪಿನರಸದಲ್ಲಿ ಸಣ್ಣನಾಗರೆದು ನಶ್ಯಂಮಾಡೆ ಸನ್ನಿಪಾತಂ ಮಾಣ್ಗುಂ. ೧

ಬೂದಿಗುಂಬಳದ ಹೂವಿನ ರಸವಂ ಹಸಿಶುಂಠಿ ರಸವನು ಕೂಡಿ ಮೂಗಿಗೆ ನಸ್ಯಂಗೈಯೆ ಸನ್ನಿಪಾತ ಹರ. ೨

ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲದ ಬೇರು, ಕೋಳಿಕುಟಕನ ಗೆಡ್ಡೆ, ಹಾವುಮೆಕ್ಕೆ ಬೇರು, ಇಪ್ಪೆಬೀಜ, ಬಜೆ, ದಾಗುಡಿ ಬೇರು, ಸಮುದ್ರ ಪಾಳದ ಕಾಯಿ, ತಾಳಕ, ವತ್ಸನಾಭಿ, ತಕ್ಕೋಲ, ಸದ್ಯಕ್ಷಾರ, ಸಹ ಸಮಾನ ಚೂರ್ಣಂ ಮಾಡಿ ಎಕ್ಕೆಬೇರಿನ ರಸದಲ್ಲರೆದು ನಸ್ಯ ಮಾಡೆ ಸಮಸ್ತ ಸನ್ನಿಪಾತ ಧನುರ್ವಾತ ಮುಂತಾಗಿ ಮಾಣುವುದು. ೩

ಲೊಕ್ಕಿಸೊಪ್ಪು ಒಂದು ಹಿಡಿ, ಬಿಳಿಕೊಮ್ಮೆ ಒಂದು ಹಿಡಿ ಸಹ ಔಡಲದೆಣ್ಣೆ ಯಲ್ಲಿ ಕಲಸಿ ಅರುವೆಯಲ್ಲಿ ಸುತ್ತಿ ಅದರ ಮೇಲೆ ಸಗಣಿಯು ಮೆತ್ತಿ ಆರಿಸಿ ಸೊಪ್ಪು ಬೇವಹಾಗೆ ಪುಟವನಿಕ್ಕಿ ಸೊಪ್ಪನು ಹಿಂಡಿಕೊಂಡು ಆ ರಸದಲ್ಲಿ ಶುಂಠಿ, ಹಿಪ್ಪಲಿ, ಮೆಣಸು ಸಹ ತೇದು ನಶ್ಯಂ ಮಾಡಲು ಸಕಲ ಸನ್ನಿಪಾತ ಗುಣಮಹುದು. ೪

ಹುಚ್ಚು ಹೀರೆಕಾಯ ಗುಂಜನು ಮೊಲೆಹಾಲಿನಲ್ಲಿ ನೆನೆಯಿಕ್ಕಿ ನಸ್ಯಂಗೆಯ್ಯೆ ಸಕಲ ಸನ್ನಿದೋಷಗಳು ಗುಣಮಕ್ಕುಂ. ೫

ಅಗಸೆ ಸೊಪ್ಪಿನರಸದಿಂ ಶುಂಠಿ, ಹಿಪ್ಪಲಿ, ಮೆಣಸುಗಳ ತೇದು ನಸ್ಯಂ ಮಾಡೆ ಸನ್ನಿಪಾತಂ ಕೆಡುಗುಂ. ೬

ಉಳ್ಳಿ, ಸೈಂಧವ, ಹಿಪ್ಪಲಿ, ಜಟಾಮಾಂಸಿ, ಮೆಣಸು ಇವಂ ಬಿಸಿನೀರಿಂ ದರೆದು ನಸ್ಯಂಗೆಯ್ಯೆ ನಾಲ್ಕಾರು ಹನಿ ಸೋಕಿದ ಮಾತ್ರದಲ್ಲಿಯೆ ಮೈ ಮರಹು ಎಚ್ಚರಹುದು. ೭

## ಲೇಪಗಳು.

ಅಂಕೋಲೆ ರಸದಲ್ಲಿ ಚಂಗಲಕೋಷ್ಟ, ನಾಭಿ ಸಹ ತೇದು ಮೈಗೆ ಲೇಪಿಸೆ ಸಕಲ ಸನ್ನಿಪಾತ ಹರ. ೧

ರುದ್ರಾಕ್ಷಿ, ಚಂಗಲಕೋಷ್ಟ, ಬಜೆ ಇವಂ ಔಡಲದೆಲೆ, ಚಿತ್ರಮೂಲದೆಲೆ ರಸ ದಲ್ಲಿ ಸಹ ತೇದು ಮೈಗೆ ಲೇಪಿಸೆ ಸರ್ವ ಸನ್ನಿಪಾತಂ ಕೆಡುಗುಂ. ೨

ಬಜೆಯನು [1] ನುಗ್ಗೆ [1] ರಸದಿಂದರೆದು ಲೇಪಂಗೆಯ್ಕೆ ಸನ್ನಿಪಾತಂ, ಮಾಣ್ಗುಂ. ೩

ಚಂಗಲಕೋಷ್ಟವನು [2] ಕಾರೆ [2] ಸೊಪ್ಪಿನ ರಸದಲ್ಲಿ ತೇದು ಲೇಪಿಸಿ ಅಭ್ಯಂ, ಗನವಂ ಮಾಡಿಸಲು ಸಕಲ ಸನ್ನಿಪಾತ, ಶೋಭೆ.ಸಹ ಗುಣಮಕ್ಕುಂ ೪

ಕಳ್ಳಿಯಲೆ ರಸದಲ್ಲಿ ಚಂಗಲಕೋಷ್ಟವ ತೇದು ಲೇಪಿಸೆ ಕಾಸಲು ಸನ್ನಿ ಪಾತಂ ತೀರ್ಗುಂ. ೫.

## ಧೂಪ.

ರೊಕ್ಕಿಸೊಪ್ಪು, ಬೇವಿನ ಸೊಪ್ಪು, ಚಂಗಲಕೋಷ್ಟ, ಅಳಲೆಕಾಯಿ, ಹತ್ತಿ ಹರಳು, ಬಿಳಿಸಾಸುವೆ, ಬಜೆ, ಗಂಧಿಗತಗರ, ಎಕ್ಕದ ಬೇರು, ಬಿಳಿಗರುಕೆ, ನಿರ್ಮಾಲ್ಯ, ಕೊಡಸಿಗೆ ಬೀಜ, ಇವಂ ಸಮಾನಂ ಚೂರ್ಣಂಗೈದು ಧೂಪವ. ಹಾಕಲು ಸಮಸ್ತ ಸನ್ನಿಪಾತಂಗಳು ಶಮನ ಮಕ್ಕುಂ. ೧

[3] ಲೊಕ್ಕಿ ಸೊಪ್ಪು, ಕೊಮ್ಮೆ ಸೊಪ್ಪು, ಬೇವಿನ ಸೊಪ್ಪು, ಸಜ್ಜರಸ, ಇವಂ ಸಮಭಾಗವಾಗಿ ಚೂರ್ಣಿಸಿ ಧೂಪವಿಕ್ಕಲು ಸನ್ನಿಪಾತ ಗುಣವಹುದು.[3] ೨

## ಗಂಡೂಷ.

[4] ಸೈಂಧವ, ಶುಂಠಿ, ಹಿಪ್ಪಲಿ, ಮೆಣಸು, ಇಂಗು, ಬಿಳುಗಾರ, ಸಂವತ್ಸರ: ಲವಣ ಇವಂ ಸಮಭಾಗವಾಗಿ ಮಾದಳ ಹಣ್ಣಿನ ರಸದಲ್ಲಾಗಲಿ ಶುಂಠಿ ರಸದಿಂ ದಾಗಲಿ ಮರ್ದಿಸಿ ಗಂಡೂಷವಂ ಮಾಡಲು ಸಕಲಸನ್ನಿಪಾತಂ ಗುಣಮಕ್ಕು.[4] ೧

ಸನ್ನಿಪಾತ ಜ್ವರದಿಂದುಬ್ಬಿ ಒಡೆದ ನಾಲಿಗೆಗೆ ದ್ರಾಕ್ಷಿಹಣ್ಣನು, ಜೇನುತುಪ್ಪ ದಿಂದಾಗಲಿ ಹಸುವಿನ ತುಪ್ಪದಿಂದಾಗಲಿ ಅರೆದು ಜಿಹ್ವೆಗೆ ಲೇಪವಂ ಮಾಡಲು. ಸನ್ನಿಪಾತ ಜ್ವರಹರ. ೨

ಚಿನ್ನ, ಬೆಳ್ಳಿ, ಮುತ್ತು, ಹವಳ, ಕಸ್ತೂರಿ, ಕುಂಕುಮದ ಹೂವು, ಗೋರೋ ಜನ, ಲವಂಗ, ರುದ್ರಾಕ್ಷಿ, ಯಷ್ಟಿಮಧುಕ, ಬೆಲ್ಲವತ್ತದ ಓಟೆ, ಚಂಗಲಕೋಷ್ಟ, ಖರ್ಜೂರದ ಬೀಜ, ಬೇವಿನ ಬೀಜ, ಹಿಪ್ಪಲಿ, ಶುಂಠಿ, ಪುತ್ರಜೀವಿತಿರುಳು, ಸಾರಗದ ಕೊಂಬು, ಚಿಲ್ಲದ ಬೀಜ, ಹರಳ ಬೇರು, ನೆಲಗುಳ್ಳದ ಬೇರು, ನವಿಲು ಗರಿ, ಬಿಳಿಕೊಮ್ಮೆ ಬೇರು ಸಹ ಮೊಲೆಹಾಲಿಂ ತೇದು ನಾಲಗೆಗೂ, ದವಡೆಗೂ, ಹಲ್ಲುಸಂದಿಗಳಿಗೂ ಚೆನ್ನಾಗಿ ಲೇಪವಂಮಾಡಿ ಬಾಯಿಮುಕ್ಕಳಿಸಿ ಉಗುಳ್ದಡೆ. ತ್ರಯೋದಶ ಸನ್ನಿಪಾತ, ಸಮಸ್ತಸನ್ನಿದೋಷ, ಸಕಲಜ್ವರ ಮಹತ್ತಾದ ದಾಹ. ಸಹ ಮಾಣ್ಗುಂ. ೩

---

[1] ತಗ್ಗಿ ಬೇರ, (ಗ). [2] ಕೀರೆ (ಕ) [3] (ಗ) ಪ್ರತಿಯಲ್ಲಿಲ್ಲ.
[4] (ಗ) ಪ್ರತಿಯಲ್ಲಿಲ್ಲ

ಸೈಂಧವಲವಣ, ತ್ರಿಕಟುಕ, ಇಂಗು, ವೆಲಿಗಾರಂ, ಪೆಟ್ಲುಪ್ಪು, ಮಾದಿ ಫಲಂ ಆಪಂಡ್ಲರಸಂ ಚೇತನು ಅನುಕೂಲಮುಗಾ ಗಲಪಿ ಗಂಡೂಷಮಿಾಯನು ಸನ್ನಿಪಾತಲು ಮಾನುನು. ೪

ಅನುಪಾನ.—ಸೈಂಧವಲವಣ, ವಾವಿರಾಕು, ಮುನುಗ ವೇರು ಚಕ್ಕ, ಪುಲಿಮಿರಿ ವೇರು ಚಕ್ಕ, ಜಿಲ್ಲೆಡು ವೇರು ಚಕ್ಕ, ಯವಕ್ಷಾರಂ, ಮಿರಿಯಪು ಗೊನ, ಚಿತ್ರಮೂಲಂ, ಪಿಪ್ಪಲಿ ಮೂಲಂ, ಅಲ್ಲಂ, ಮಂಚಿ ಆವಲು, ವೆಲ್ಲುಲ್ಲಿ, ಲವಂಗಾಲು, ಪಂಚಕೋಲಲು, ದಶಮೂಲಲು, ಅಷ್ಟಾದಶ ಮೂಲಲು, ಇವಿ ಮೊದಲೈನವಿ ಸನ್ನಿಪಾತಲಕು ಅನುಪಾನಂ ಬೆಟ್ಟುಕೊವಚ್ಚುನು.

ಅಂತು ಸಮುದಾಯ ಸನ್ನಿ ಬಗೆ ೧ಕ್ಕೆ ಕಲ್ಕ ೩, ಕಷಾಯ ೨೨, ಚೂರ್ಣ ೧, ತೈಲ ೫, ನಸ್ಯ ೭, ಅಂಜನ, ೭, ಗಂಡುಷಾದಿ ಲೇಪ ೫, ಧೂಪ ೨, ಅನುಪಾನದ ಬಗೆ ೧ ಸಹ ಪ್ರಯೋಗ ೫೩ ಕ್ಕಂ ಶ್ರೀ.

---

## ರಕ್ತಪಿತ್ತನಿದಾನಂ.

ಹೇರಳವಾಗಿ ದಾರಿಯ ನಡೆವುದರಿಂದಲೂ ಹೆಚ್ಚಾಗಿ ಬಿಸಿಲ ಕಾಸುವುದರಿಂದಲೂ ವಿಶೇಷ ದುಃಖಪಡುವುದರಿಂದಲೂ ಅಧಿಕವಾಗಿ ಹುಳಿ, ಕಹಿ, ಕಾರಗಳ ಸೇವಿಪುದರಿಂದಲೂ ಮೂಗು ಬಾಯಿ ಕಿವಿ ಕಣ್ಣುಗಳಲ್ಲಿ ರಕ್ತ ಸುರಿವುದು. ಇವು ಪ್ರತ್ಯೇಕ ಒಂದೊಂದರಿಂದಾಗಲಿ ಮೂಗು ಬಾಯಿ, ಕಿವಿ, ಕಣ್ಣುಗಳಲ್ಲಾಗಲಿ ರಕ್ತ ಸುರಿಯುತ್ತಾ ಇರಲು ಅದೇ ರಕ್ತಪಿತ್ತವೆನಿಸಿಕೊಂಬುದು. ಅದು ಎದೆಗೆ ಮೇಲೆಯಾದರೆ ಕೆಲವು ಸಾಧ್ಯ; ಎದೆಯಿಂದ ಕೆಳಗಾದರೆ ಕೆಲವು ಅಸಾಧ್ಯ. ಕೆಳಗೂ ಮೇಲೂ ಎರಡರಲ್ಲೂ ರಕ್ತ ಸುರಿದರೆ ಅಸಾಧ್ಯವೆನಿಸಿಕೊಳ್ಳುವುದು. ಮತ್ತಂ ವಾತದೋಷದಿಂ ಉಷ್ಣವಾಗಿಹುದು ; ಪಿತ್ತದೋಷದಿಂ ಗೋಮೂತ್ರ ವರ್ಣವಾಗಿರುವುದು ; ಶ್ಲೇಷ್ಮ ದೋಷದಿಂದ ಬಿಳುಪಾಗಿ ಸ್ನಿಗ್ಧವಾಗಿರುವುದು ; ವಾತಪಿತ್ತ ದ್ವಂದ್ವದಿಂದ ಉಂಟಾದುದು ಸನ್ನಿಮಿಶ್ರ ಲಕ್ಷಣವಾಗಿಹುದು. ತ್ರಿದೋಷದಿಂ ಪುಟ್ಟಿದ ರಕ್ತಪೈತ್ಯವು ಎಲ್ಲಾ ಸ್ವರೂಪವಾಗಿಹುದೆಂದು ಮುನ್ನ ಬಲ್ಲ ವಿದ್ವಾಂಸರುಗಳಿಂದ ಪೇಳಲ್ಪಟ್ಟಿತು. ಎದೆಗೆ ಮೇಲೆ ಹುಟ್ಟಿದ ರಕ್ತ ಪಿತ್ತಕ್ಕೆ ಮೊದಲು ಸಂತರ್ಪಣವಮಾಡುವುದು, ಸಂತರ್ಪಣಕ್ಕೆ ಮೊದಲೆ ವಿರೇಕವಮಾಡಿಸುವುದು. ಎದೆಗೆ ಕೆಳಗೆ ಹುಟ್ಟಿದ ರಕ್ತಪಿತ್ತಕ್ಕೆ ಕಷಾಯ ಪಾನಂಗಳಂ ದೇಹಾನುಸಾರವಾಗಿ ಮಾಡಿಸುವುದು. ರಕ್ತಪಿತ್ತರೋಗದಲ್ಲಿ ವಮನಕ್ಕೆ ಅಯೋಗ್ಯರಾ

ಕೆಂದಡೆ :—ಮೈ ಬಡವಾಗಿರುವವರು, ಬಲಹೀನವಾದವರು, ಬಾಲಕರು ವೃದ್ಧರು, ಕ್ಷಯರೋಗದವರು, ಇವರು ವಮನಕ್ಕೂ ವಿರೇಕಕ್ಕೂ ಯೋಗ್ಯರಲ್ಲ. ಮತ್ತೇನೆಂದರೆ ತತ್ಕಾರೋಪಶಮನವಾದ ಔಷಧಿ ಕ್ರಿಯೆಗಳಂ ಮಾಡಿಸುವುದು.

## ಚಿಕಿತ್ಸೆ

ವಿರೇಕ ಪ್ರಯೋಗ.—ಕಕ್ಕೆಯ ಚಿಗುರಂ ಹರಳೆಣ್ಣೆಯಿಂದ ಹುರಿದು ಸಕ್ಕರೆ ಜೇನುತುಪ್ಪಗಳ ಕೂಡಿಸಿ ಸೇವಿಸುವುದು. ೧

ನೆಲ್ಲಿ ಚಟ್ಟಿನಲ್ಲಿ ಸಕ್ಕರ ಜೇನುತುಪ್ಪಗಳ ಕೂಡಿ ತೆಗದುಕೊಳ್ಳುವುದು. ೨

ಅಳಿಲೆಕಾಯಿ ಚೂರ್ಣವಂ ಸಕ್ಕರಜೇನುತುಪ್ಪಗೂಡಿ ಮೆಲುವುದು. ೩

ತಿಗಡೆ ಚೂರ್ಣವಂ ಸೇವಿಪುದು. ಇವೆಲ್ಲಂ ರಕ್ತ ಪೈತ್ಯದ ವರ್ಗವಿರೇಕವಂ ಮಾಳ್ಪುದರಿಂ ರಕ್ತಪೈತ್ಯ ಶಮನಮಕ್ಕುಂ ೪

ವಮನಕ್ಕೆ.—ಭದ್ರಮುಸ್ತೆ, ಕೊಡಸಿಗೆಬೀಜ, ಯಷ್ಟಿಮಧುಕ, ಮಗ್ಗಾರೆ ಕಾಯಿ, ಇವಂ ಹಸುವಿನ ಹಾಲಿನಲ್ಲಿ ಸಣ್ಣನಾಗರೆದು ಜೇನುತುಪ್ಪ ವೆರಸಿ ಸೇವಿಸೆ ವಾಂತಿಯಹುದು ; ಆದರಿಂದ ರಕ್ತ ಪೈತ್ಯಂ ಮಾಣ್ಗುಂ. ೧

## ನಸ್ಯ.

ದಾಳಿಂಬದ ಹಣ್ಣಿನ ರಸವನ್ನಾದರೂ, ಮೊರೆಹಾಲನ್ನಾದರೂ, ಮಾವಿನ ಬಿತ್ತದ ರಸವನ್ನಾದರೂ ಮೂಗಿಗೆ ನಸ್ಯಂ ಮಾಡುವುದು. ೧

ಶ್ರೀಗಂಧಂ, ಅಲ್ಲಂ, ಪೊನ್ನಗಂಟಿರಸಂ ದೀನಿ ನಸ್ಯಂ ಜೇಸೇದಿ. ೨

ದಾಸಾಳಪೂವುಲು, ಪೈಡಿನಲ್ಲ ಪತ್ತಿಪೂವುಲು, ಕುಂಕುಮಪೂವುಲು, ಪೊನ್ನಗಂಟಿ ಆಕುರಸಂ ದೀನಿ ನಸ್ಯಂ ಜೇಸೇದಿ. ಈ ಪೇಳ್ದ ನಸ್ಯಂಗಳಿಂ ರಕ್ತ ಪಿತ್ತ ಗುಣವಕ್ಕುದು.

ಕವಳ.—ಮಂಚಿ ಉತ್ತರೇನಿ ಆಕುನು ನೂರಿ ಕಟ್ಟಿತೆ ಲಿಂಗಮಂದು, ಆಸನ ಮಂದು, ನೇತ್ರರುಕಾರೇದಿ ನಿಲುಚುನು. ೧

## ಅಂಜನ.

ಮೆಣಸು, ಬೆಳ್ಳುಳ್ಳಿ, ಹಿಪ್ಪಲಿ, ಅಳಿಲೆಕಾಯಿಬೀಜ, ಇವಂ ಸಮನಾಗಿ ಗೋಮೂತ್ರದಿಂದರೆದು ಕುಡುಹಮಾಡಿ ನೆಳಲಲ್ಲಿ ಒಣಗಿಸಿ ಕಣ್ಣಿಗೆ ತೇದು ಹಚ್ಚಲು ರಕ್ತಪಿತ್ತ, ವಾತದೋಷ, ಶ್ಲೇಷ್ಮದೋಷ, ರಕ್ತದೋಷ ಸಹ ಮಾಣ್ಗುಂ. ೧

## ಸಂಹಿತೆಗಳು.

ನೆಲ್ಲಿಚಟ್ಟು, ಶರ್ಕರೆ, ಜೇನುತುಪ್ಪ ಸಹ ಕೂಡಿ ಸೇವಿಸಲು ರಕ್ತಪೈತ್ಯಹರ. ೧

ಇಪ್ಪೆಹೂವು, ಯಷ್ಟಿಮಧುಕ, ಆಡುಸೋಗೆ, ನೆಗ್ಗಿಲು, ಆಷಾಡಿ ಸಹ ಸಮಂಗೊಂಡು ಚೂರ್ಣಂಮಾಡಿ ಹಸುವಿನ ಸಪ್ಪೆತುಪ್ಪದಲ್ಲಿ, ಕಲಸಿ ಮೆಲ್ಲಲು ರಕ್ತಪೈತ್ಯಕ್ಷಯ, ಪಾಂಡು ಸಹ ಮಾಣ್ಗುಂ. ೨

ಅಳಲೆಕಾಯಿ ಚೂರ್ಣವಂ ಸಕ್ಕರೆ ಜೇನುತುಪ್ಪದಲ್ಲಿ ಕಲಸಿ ಮೆಲ್ಲಲು ರಕ್ತ, ಪೈತ್ಯಹರ. ೩

ಹಿತವಾದ ಅನುಪಾನ ಬಾಹುಳ್ಯದಿಂ ಜೇನುತುಪ್ಪವ ಸೇವಿಸಲು ರಕ್ತ ಪೈತ್ಯಹರ. ೪

ವಟ್ಟಿವಟ್ಟಿ ಕಾಲ್ಚಿನ ಮಸಿನಿ ತೇನೆತೊ ಇಸ್ತೆ ರಕ್ತಪೈತ್ಯ ರೋಗಂ, ದಮ್ಮು, ನೊಪ್ಪಿ ಸಹ ನಿಲುಚುನು. ೫

ಜಾಕಾಯಿ ಗ ೧ ತೂಕಂ, ಲವಂಗಂ ಗ ೧ ತೂಕಂ, ಕಾಜು ಗ ೧ ತೂಕಂ, ಆಕುಮಂದು ಗ ೧ ತೂಕಂ, ಜಾಪತ್ರ ಗ ೧ ತೂಕಂ ಸಹ ಪೆರುಗುಮಿಾದಿ ನೀಳ್ಳುಲೊ ನೂರಿ ತ್ರಾಗಿತೆ ರಕ್ತ ಪೈತ್ಯಂ ನಿಲುಚುನು. ೬

ಜೊನ್ನಲು, ಈ ಕರುಗಡುಮ ಈ ರೆಂಡಿನಿಕಾಲ್ಚಿ ನೇಯಿತೊ ಕಲಪಿ ಇಸ್ತೆ ರಕ್ತ ಪೈತ್ಯಂ ನಿಲುಚುನು. ೭

ಪನ್ನೀರುಗಡ್ಡ, ವಂಗಷೇರು, ಜುಟ್ಟುವೇಳ್ಳು, ಏಲಕ್ಕುಲು, ಮಿನುಮುಲು ಸಹ ಸಮಚೂರ್ಣಂಜೇಸಿ ಆವುಪಾಲುತೊ ಕಲಪಿ ತ್ರಾಗನು ರಕ್ತ ಪಿತ್ತಂ ನಿಲುಚುನು. ೮

[1]ಗಂಗು[1]ವೇರು ಚಕ್ಕ, ಜಿಲಕರ, ಏಲಕ್ಕುಲು, ಚಂದನಂ, ಕರ್ಪೂರಂ, ಶಿಲಾಜಿತು, ದ್ರಾಕ್ಷ, ಖರ್ಜೂರಂ, ಕುರುವೇಳ್ಳು, ವಟ್ಟಿವೇಳ್ಳು, ಗರಿಕವೇಳ್ಳು, ದವನಂ, ಲವಂಗಂ, ಪಿಪ್ಪಳ್ಳು ಇವಿನ್ನಿ ನೂರಿ ಆವುಪೆರುಗುತೊ ಇಸ್ತೆ ರಕ್ತಪೈತ್ಯಂ ವರಾನುನು, ೯

ಮರಿಪಂಡ್ಲು ೧೨, ಬೆಲ್ಲಂ ೪ ಎತ್ತು ಈ ರೆಂಡುನು ನೂರಿ ಮೇಕಪಾಲತೊ ಇಸ್ತೆ ರಕ್ತಪೈತ್ಯ ಹರಂ. ೧೦

ತೆಲ್ಲ ಗರಿಕವೇರು, ಜಿಲಕರ, ಏಲಕ್ಕುಲು, ಲವಂಗಂ, ಯಷ್ಟಿಮಧುಕಂ ಇವಿ ಸಮಭಾಗಮುನ ಚೂರ್ಣಂ ಜೇಸಿ ಆವುಪಾಲತೊ ಗಲಪಿ ತ್ರಾಗನು ರಕ್ತಪೈತ್ಯಂ ನಿಲುಚುನು. ೧೧

ಆವುನೆಯ್ಯಿ, ಶ್ರೀಗಂಧಂ, ಶರ್ಕರ ಕಲಪಿ ಇಸ್ತ ರಕ್ತಪೈತ್ಯಂ ಹರಂ. ೧೨

ಪತ್ತಿ ಆಕುರಸಾನುತೊ ಶರ್ಕರವೇಸಿ ತ್ರಾಗನು ರಕ್ತಪೈತ್ಯಂಮಾನನು ೧೩

ಪತ್ತಿಕಾಯಲ ರಸಂ ಸೇ ೧, ಲವಂಗಂ ಗ ೧ ತೂನು, ಏಲಕ್ಕಲು ಗ ೧ ತೂ, ಪಿಪ್ಪಳ್ಳು ಗ ೨ ತೂ, ದ್ರಾಕ್ಷಿಪಂಡ್ಲು, ವೆಲಿಗಾರಂ, ಶರ್ಕರ, ಇವಿ ಚೂರ್ಣಂ ಜೇಸಿ ಕಲಪಿಕೊನಿ ಮೇಕಪಾಲುತೊ ಇಸ್ತೆ ರಕ್ತಪೈತ್ಯಹರಂ. ೧೪

---

[1] ಗೋಂಗು, (ಕ)

ಅಡ್ಡಸರಂ, ಪಸುಪು, ನೆಯ್ಯಿ, ಕೂಡ ತ್ರಾಗನು ರಕ್ತಪೈತ್ಯಂ ನಿಲುಚುನು ಪಥ್ಯಂ ನೇಯಿವಂಟಕಂ, ಪೆಸಲು, ಮಜ್ಜಿಗ ಅವುನು. ೧೫

ನಿಮ್ಮಪಂಡಿಪಪ್ಪುಲುನು, ಯವಕ್ಷಾರಮುನು, ಲೆಸ್ಸಗ ಉಡಕಪೆಟ್ಟಿತಿನಿನ ರಕ್ತಪೈತ್ಯಹರಂ. ೧೬

ದುಸ್ಸರಿಆಕು ಕಷಾಯಮುಲೊ ಜೀಲಕರ, ಏಲಕ್ಕುಲು, ಲವಂಗಂ, ಚಕ್ಕರ ಇವಿ ಚೂರ್ಣಂ ಜೇಸಿ ಕಲಪಿಕೊನಿ ತ್ರಾಗನು ರಕ್ತ ವಾಂತಿಹರಂ. ೧೭

ಮಂಚಿ ಉತ್ತರೇನಿ ಆಕುರಸಮುನು ವೇನಿಳ್ಳತೊ ತ್ರಾಗನು ನೋಟಿನೆತ್ತರು ಗಾರೇದಿ ನಿಲುಚುನು. ೧೮

ನೇರೆಡುಪಂಡ್ಲು ವಿತ್ತತೀಸಿ ಆಕುಂಡಲೂ ಯವಕ್ಷಾರಪು ಪೊಡಿವೇಸಿ ತೀಸುಕೊನನು ರಕ್ತಪೈತ್ಯಹರಂ. ೧೯

ಹಂಸಪಾದಿ ಆಕುರಸನು ಶರ್ಕರಲೊ ಕಲಪಿಕೊನಿ ತ್ರಾಗನು ರಕ್ತ ಪೈತ್ಯಹರಂ. ೨೦

ಆವುವೆನ್ನ, ಶ್ರೀಗಂಧಂ, ಶರ್ಕರ, ಇವಿನಿ ಕಲಪಿಕೊನಿ ತಿನನು ರಕ್ತ ಪೈತ್ಯಂ ನಿಲುಚುನು. ೨೧

ಪತ್ತಿಕಾಯಲ ರಸಂ, ಲವಂಗಾಲು ಗ ೧ ತೂ, ಏಲಕ್ಕುಲು ಗ ೧ ತೂ, ಪಿಪ್ಪಳ್ಳು ಗ ೧ ತೂ, ದ್ರಾಕ್ಷ ಗ ೨ ತೂ, ಇವಿನಿ ಚೂರ್ಣಂಜೇಸಿ ದುಡ್ಡುತೂನು ಶರ್ಕರತೊ ಗಲಪಿ ಮೇಕಪಾಲು ತೊ ಇಚ್ಚೇದಿ. ಈಲಾಗುನ ಐದುನಾಳ್ಳು ತೀಸುಕೊನನು ರಕ್ತಂ ಕಕ್ಕೇದಿ, ಉಮಿಸೇದಿ ನಿಲುಚನು. ೨೨

* ಆಕುಚಯಿತ್ತುವೇರುನು, ಬೀಯ್ಯಂಪಿಂಡಿ ತೊ ಪಿಟ್ಟ ಚೆಟ್ಟುಕೊನಿ ನೇತಿತೊ ತಿನನು ರಕ್ತಂ ಕಾರೇದಿಮಾನುನು. ೨೩

ತೆಲ್ಲಗರಿಕ ವೇಳ್ಳು, * * * * * ೧ ಪಾಲು * * * * * ರೋಪಲಕಿ ಪುಚ್ಚುಕೊನನು ರಕ್ತಂ ಕಕ್ಕೇದಿ ನಿಲುಚುನು. * ೨೪

* * * * ತೆಗರಾಟಿ ಕಲಿನಗಾಗಿ ಮಂಚಿನೀಳ್ಳನುಗಾನಿ ಕಲಪಿಯಿಾಯುನು ರಕ್ತಂಗಕ್ಕೇದಿ ಮಾನುನು. ೨೫

ಬೋಡತರಮಾಕುರಸಂ, ಆಂದುಲೊ ಚಾರೆಡು ನೇಯಿಪಸುರ, ನುಸಗನ್ನೆ ಇನ್ನಿ ಪಂಚದಾರ ಗ ೩ ಎತ್ತಲು ಕಲಪಿಕೊನಿತ್ರಾಗಿತೆ ರಕ್ತ ಪೈತ್ಯಂ ನಿಲುಚುನು. ೨೬

ಇಂದ್ರ ಗೋಪಪುರುಗು ೧ ತೂನು ಕಾಲ್ಚಿ ಆಮುಸಿನಿ ನೀಳ್ಳುತೊ ನೂರಿ ಯಿಾಯುನು ರಕ್ತ ಪೈತ್ಯಂ ಮಾನುನು. ೨೭

ಶುಂಠಿ, ಪಿಪ್ಪಳ್ಳು, ದಾಡಿಂಬ ಕಾಯ ಬೊಬ್ಬಿಡ, ಕರಕ್ಕಾಯಲೋನಿ ವಿತ್ತುಲ ನಾರು, ಇವಿ ಪ್ರತ್ಯೇಕಂ ಗ ೧ ತೂನು ಲೆಕ್ಕನುಗೂರ್ಚಿ ಚೂರ್ಣಂ ಜೇಸಿ

* (ಗ) ಪ್ರತಿಯಲ್ಲಿ ಲುಪ್ತವಾಗಿದೆ.

ಅವಿಪೊ [1]ಕಲುತ[1] ಬೆಲ್ಲಂ ಕಲಪಿ ಲೋಪಲಿಕಿ ಪುಚ್ಚುಕೋಗಾನು ನೆತ್ತರುಬಂಕ ಮಾನುನು. ೨೮

ಜಿಲಕರ, ಶುಂಠಿ, ಪಿಪ್ಪಳ್ಳು, ಮಿರಿಯಾಲು, ಚಿತ್ರಮೂಲಂ, ಶ್ರೀಗಂಧಂ, ಕಟುಕರೋಹಿಣಿ, ದ್ರಾಕ್ಷ, ಖರ್ಜೂರಂ, ಇವಿನಿ ಚೂರ್ಣಂ ಜೇಸಿ ತೇನೆತೋಗಾನಿ ಚರುಕರಸಮುನತೋಗಾಸಿ ಇಸ್ತೆ ರಕ್ತವಾಂತಿಗುಣಸಾನು. ೨೯

## ಅಮೃತವಟಕ.

ಅವ ರದವಳ್ಳಿ ಚೂರ್ಣವ ತುಪ್ಪ ಸಕ್ಕರೆಯುಲ್ಲಿ ಕಲಸಿ ಮೆಲ್ಲಲು ರಕ್ತ ಪೈತ್ಯ ಹರ. ೧

## ಕಷಾಯಂಗಳು.

ಶ್ರೀಗಂಧ, ಲಾಮಂಚ, ಪರ್ಪಾಷ್ಟಕ, ಭದ್ರಮುಸ್ತೆ, ಮುಡಿವಾಳ, ಇವಂ ಕಷಾಯವಿಕ್ಕಿ ಸೇವಿಸೆ ರಕ್ತಪೈತ್ಯಹರ. ೧

ಆಷಾಡಿಬೇರು, ಸೊಗದೆಬೇರು, ಶ್ರೀಗಂಧ, ಲಾವಂಚ, ಮುಡಿವಾಳದ ಬೇರು, ಚಿಲಕೀರೆ (ಸಹಮೂಲ), ಮುಟ್ಟಿದರೆ ಮುನಿಯ, ನೈದಿಲಗೆಡ್ಡೆ, ಯಷ್ಟಿ ಮಧುಕ, ದ್ರಾಕ್ಷೆಹಣ್ಣು, ಇವಂ ಸಮಾಂಶವಾಗಿ ಇಡಿದು, ಪ್ರಾತಃಕಾಲದಲ್ಲಿ ನೆನೆ ಯಿಕ್ಕಿರಿಸಿ ಸಾಯಂಕಾಲದಲ್ಲಿ ಶೋಧಿಸಿಕೊಂಡು ಸಕ್ಕರೆ ಜೇನುತುಪ್ಪ ವೆರಸಿ ಕುಡಿ ಯಲು ಉಭಯಪೈತ್ಯ ಹರ. ೨

ಗಂಡುದುರುಚನ ಬೇರಂ ಕಷಾಯವಿಕ್ಕಿ ಪಾನವ ಮಾಡೆ ರಕ್ತಪೈತ್ಯಹರ. ೩

ಅಡುಸೋಗೆ ಸೊಪ್ಪಿನ ಕಷಾಯಮಂ ಜೇನುತುಪ್ಪದಲ್ಲಿ ಬೆರಸಿ ಕುಡಿಯೆ ರಕ್ತ ಪೈತ್ಯ ಮಾಣ್ಗುಂ. ೪

ತಿಗಡೆ, ತಾರೆಕಾಯಿ, ಅಳಿಲೆಕಾಯಿ, ನೆಲ್ಲಿಚಟ್ಟು ಸಹ ಕಷಾಯಂಕಾಸಿ ಜೇನುತುಪ್ಪವ ಕೂಡಿ ಸೇವಿಸೆ ರಕ್ತಪೈತ್ಯಂ ಕೆಡುಗುಂ. ೫

ಬಿದಿರಸೊಪ್ಪು, ಲಾಮಂಚ, ಭದ್ರಮುಸ್ತೆ, ಮುಡಿವಾಳ, ದಾಳಿಂಬದ ಮೊಗ್ಗು, ಹಾವುಮೆಕ್ಕೆಸೊಪ್ಪು, ಶುಂಠಿ, ಇವಂ ಸಮಭಾಗಂ ಕಷಾಯಕಾಸಿ ಕುಡಿಯೆ ರಕ್ತಪೈತ್ಯಂ ನಿಲ್ಗುಂ. ೬

ತುರುಚನ ಬೇರು, ಪರ್ಪಾಷ್ಟಕ, ದಾಸಾಳದ ಹೂ, ಬೇವಿನ ಕಡ್ಡಿ, ಅಡುಸೋ ಗೆಯ ಕಡ್ಡಿ, ಶುಂಠಿ, ಹಿಪ್ಪಲಿ, ಮೆಣಸು, ಕಟುಕರೋಹಿಣಿ, ಇವಂ ಸಮಾಂಶ ಕಷಾಯವಿಕ್ಕಿ ಸೇವಿಸೆ ರಕ್ತಪೈತ್ಯ, ದಾಹಜ್ವರಂ ಮಾಣ್ಗುಂ. ೭

ಮರದರಿಶಿನ, ಪರ್ಪಾಷ್ಟಕ, ಬೇವಿನ ನಾರು, ಕೊಡಸಿಗೆ ಚಕ್ಕೆ, ಹಿಪ್ಪಲಿ, ತುರುಚನ ಬೇರು, ಯಷ್ಟಿಮಧುಕ, ಅಡುಸೋಗೆ, ಅಳಿಲೆಕಾಯಿ, ತಾರೆಕಾಯಿ,

---

[1] ಕಲಿಂತ, (ಗ).

ನೆಲ್ಲಿಚಟ್ಟು, ಕಹಿಪಡವಲ, ಕಟುಕರೋಹಿಣಿ, ನೆಲಬೇವು, ಹೊಂಗೆಚಕ್ಕೆ, ಸಣ್ಣಬತ್ತದ ಅರಳು, ಶುಂಠಿ, ಭದ್ರಮುಸ್ತೆ ಇವಂ ಕಷಾಯವಿಕ್ಕಿ ಇದರ ನಾಲ್ಕುಮಡಿ ಹಸುವಿನ ಬೆಣ್ಣೆಯು ಹಾಕಿ ತುಪ್ಪನಿಲ್ಲುವಂತೆ ಅಟ್ಟು ಈ ತುಪ್ಪವಂಗೈಗುಳಿಯಲ್ಲ ನಿಲುವನಿತಂ ಸೇವಿಸೆ ರಕ್ತಪೈತ್ಯಂ ನಿಲ್ಗುಂ. ೮

ಶ್ರೀಗಂಧದ ಕೆಚ್ಚು, ಲಾಮಂಚ, ಪರ್ಪಾಷ್ಟಕ, ಕೊಡನಾರಿಗೆಡ್ಡೆ, ಮುಡಿವಾಳ ಸಹ ಕಷಾಯವಿಕ್ಕಿ ಸೇವಿಸೆ ರಕ್ತಪೈತ್ಯಹರ. ೯

ಶ್ರೀಗಂಧ, ಲಾಮಂಚ, ಯಷ್ಟಿಮಧುಕ, ಅಲಸಂದೆ, ಹಿಪ್ಪಲಿ ಇವಂ ಕಷಾಯವಿಕ್ಕಿ ತೆಗೆದುಕೊಳ್ಳೆ ರಕ್ತಪಿತ್ತಹರ. ೧೦

ಕಟುಕರೋಹಿಣಿ, ಅಳಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು ಇವಂ ಕಷಾಯವಿಟ್ಟು ಸಕ್ಕರೆ ಜೇನುತುಪ್ಪಗೂಡಿ ಸೇವಿಸೆ ರಕ್ತಪೈತ್ಯಹರ ೧೧

ಶ್ರೀಗಂಧ, ಮುಡಿವಾಳ, ಪರ್ಪಾಷ್ಟಕ, ಭದ್ರಮುಸ್ತೆ, ಲಾಮಂಚ ಇವು ಪ್ರತ್ಯೇಕ ಗ ೫ ತೂಕವಂ ಎರಡುಮಾನ ನೀರಿನಲ್ಲಿ ಹಾಕಿ ಚತುರ್ಥಾಗಾವಶೇಷ ಕಾಸಿದ ಕಷಾಯವಂ ಪ್ರಾತಃಕಾಲದಲ್ಲಿ ಸೇವಿಸೆ ರಕ್ತಪಿತ್ತ ಗುಣವಹುದು. ೧೨

ಅಡ್ಡಸರಪಾಕು, ಶುಂಠಿ, ಪಿಪ್ಪಳ್ಳು, ವಿರಿಯಾಲು, ಪಸುಪು ಇವಿ ಕಷಾಯಂ ಗಾಚಿ ಭೋಜನಮಯಿನಮಾದ ತಾಗಿನು ರಕ್ತ ಪೈತ್ಯಂ ಖಾಸ ಸಹ ಮಾನುನು; ಪಥ್ಯಂ ನೇತ ಅರಟಿಕಾಯಿ, ಪೊಳ್ಳುಕಾಯಿ, ಕಂದುಲು, ಚಕ್ರವರ್ತಿಕೂರ. ೧೩

ಜುವ್ವಿಚಕ್ಕ, ನೇರ್ಲುಚಕ್ಕ, ಮರಿಚಕ್ಕ, [1]ಅತ್ತಿಚಕ್ಕ[1], ಇವಿ ಕಷಾಯಂಬೆಟ್ಟಿ ವಡುಚುಕೊನಿ ಇಂದುಲೊ ತೇನೆಬೋಸಿ ಇಸ್ತೆ ರಕ್ತಪೈತ್ಯ ಹರಂ. ೧೪

ಶ್ರೀಗಂಧಂ, ದಾಡಿಂಬಗಿಂಜಲು, ಗರಿಕವೇಳ್ಳು, ಅಡ್ಡಸರಪಾಕು, ಇವಿ ಪ್ರತ್ಯೇಕಂ ಗ ೨ ತೂ ಕೂರ್ಚಿ ಕಲಯುದಂಚಿ ಪಸುಕಡಗು ರೆಂಡುಪಡಲು ಬೋಸಿ, ಕಷಾಯಂಬಡದು ಚಿಕ್ಕಣಕಾಚಿ, ತೇನೆ ನೇಯಿ ಪ್ರತಿಪಾಕಂ ಗ ೪ ತೂ ಕಲಪಿ ಮೂಡುದಿನಾಲು ಈಯುನು ರಕ್ತಪೈತ್ಯಂ ಗುಣಮೌನು. ೧೫

[2]ಕುರಿವೇಳ್ಳು, ಶ್ರೀಗಂಧಂ, ವಟ್ಟಿವೇಳ್ಳು, ಪರ್ಪಾಷ್ಟಕಂ, ತುಂಗಮುಸ್ತುಲು, ಇವಿ ಕಷಾಯಂಬೆಟ್ಟಿ ಈಯುನು ರಕ್ತಪೈತ್ಯಂ ಮಾನುನು.[2] ೧೬

[3]ವಿದುರಾಕು, ವಟ್ಟಿವೇಳ್ಳು, ಮುಸ್ತುಲು, ದಾಡಿಂಬಗಿಂಜಲು, ನೂಗುದೋಸ ವಿತ್ತುಲು, ಶುಂಠಿ, ಇವಿ ಸಮಂಗಾ ಕಷಾಯಂ ಕೂರ್ಚಿ ಈಯುನು ರಕ್ತಪೈತ್ಯಂ ನಿಲುಚುನು.[3] ೧೭

## ಕಲ್ಕಗಳು.

ರಸಾಂಜನಂ, ಜರಿವೇಳ್ಳು, ಇವಿ ನೂರಿ ಬೀಯ್ಯಂಕಡಿಗಿನ ಕಡುತೊನ್ನೈನ, ಈಯುಗಾನು ನೆತ್ತರು ಗಕ್ಕೇದಿ, ಅಜೀರ್ಣಂ ಚೇತಪುಟ್ಟಿನ ಉಬ್ಬಸಮುನುಮಾನುನು. ೧

[1] (ಗ) ಪ್ರತಿಯಲ್ಲಿಲ್ಲ [2] (ಗ) ಪ್ರತಿಯಲ್ಲಿಲ್ಲ. [3] (ಗ) ಪ್ರತಿಯಲ್ಲಿಲ್ಲ.

ಲಕ್ಕಿರಸಂ, ಲವಂಗಂ, ಏಲಕ್ಕುಲು, ಯಷ್ಟಿಮಧುಕಂ ಇವಿ ಮರ್ದಿಂಚಿ ಶರ್ಕರವೇಸಿ ಇಸ್ತೆ ರಕ್ತಪಿತ್ತ ಹರಂ. ೨

ತುಲಸಿ ಆಕು, ಜಿಲಕರ, ಲವಂಗಂ, ಏಲಕ್ಕುಲು, ಇವಿನ್ನಿ ನೂರಿ ಶರ್ಕರ ವೇಸಿ ಮಜ್ಜಿಗಬೋಸಿ ಕಲಪಿ ಇಸ್ತೆ ರಕ್ತಪೈತ್ಯಂ ಮಾನುನು. ೩

ದುಸ್ಸರಿ ಆಕು ಕಷಾಯಮುಲೋ ಜಿಲಕರ, ಏಲಕ್ಕುಲು, ಲವಂಗಂ ಚಕ್ಕರ ಕಲಪಿ ತ್ರಾಗನು ರಕ್ತ ವಾಂತಿಹರಂ. ೪

ಜಾಜಿಕಾಯಿ, ಲವಂಗಂ, ಅವಿನಿಮಂಡು, ಜಾಪತ್ರ ಇವಿನಿ ಪೆರುಗುಮೀದಿ ನೀಳ್ಳತೊಮರ್ದಿಂಚಿ ಪೆರುಗುತೊ ಇಸ್ತೆ ರಕ್ತಛರ್ದಿ ಮಾನುನು. ೫

ಕಂಗೊಂದಿವೇರುಚಕ್ಕ, [1]ಊ[1]ಟ ಆವುಪಾಲು ಜಿಲಕರ ಶರ್ಕರವೇಸಿ ನೂರಿ ಸೇವಿಸ್ತೆ ರಕ್ತಛರ್ದಿ ನಿಲುಚುನು. ೬

ಆಕು ಚುಮುಡು ವೇರು, ಶರ್ಕರ ವೇಸಿ ನೂರಿ ಸೇವಿಂಚುನು ರಕ್ತಂಗಕ್ಕೇದಿ ಮಾನುನು. ೭

ಮರಿಪಂಡ್ಲು ಗ ೧೨ ತೂ, ಪ್ರಾತಬೆಲ್ಲಂ ಗ ೪ ತೂ ಸಹ ನೂರಿ ಆವು ಪಾಲುತೊ ಇಸ್ತೆ ರಕ್ತವಾಂತಿನಿಲುಚುನು ೮

ದ್ರಾಕ್ಷ, ಶ್ರೀಗಂಧಂ, ಕರ್ಪೂರಂ, ಚಂದನಂ, ಪದ್ಮಪತ್ರತೀಗ, ರೇಣುಕಲು, ವಟ್ಟಿವೇಳ್ಳು, ಕುರಿವೇಳ್ಳು, ಬೂರುಗಬಂಕ, ಮರಿದೊಗಲು, ಗುಂಮುಡು, ಯಷ್ಟಿ ಮಧುಕಂ, ತಾಮೆರತುಂಡ್ಲು, ಸುಗಂಧಿಪಾಲು, ಬೂದಿಗುಮ್ಮಡಿಕಾಯಿನೀಳ್ಳು, ಇವಿ ಸಮಾಂಶಂಗನೂರಿ ಈಯುನು ರಕ್ತಪೈತ್ಯಂ ಮಾನನು. ೯

ಅಡ್ಡಸರಂ, ತುಂಗಗಡ್ಡಲು, ವೇಪಚಕ್ಕ, ಶ್ರೀಗಂಧಂ, ಯಷ್ಟಿಮಧುಕಂ, ವಟ್ಟಿವೇಳ್ಳು, ಇಪ್ಪಪೂವು, ಕಲುವಗಡ್ಡಲು, ತವಸಿಚಕ್ಕ, ಕೋಡೀಶಪಾಲವಿತ್ತುಲು, ಕಿರುನೆಲ್ಲಿ, ತೀಟಕಸಂದಿವೇಳ್ಳು, ಧಾತಕೀಕುಸುಮಂ, ಕುರಿವೇಳ್ಳು, ಜಾಗವೇಳ್ಳು, ವಟ್ಟಿವೇಳ್ಳು ಇವಿನ್ನಿ ಸಮಾಂಶಂ ಚನ್ನೀಳ್ಳೊ ನೂರಿ ತೇನೆ ಚಕ್ಕರಗಲಪಿ ತ್ರಾಗನು ರಕ್ತಪೈತ್ಯಂ ಗುಣಮೌನು. ೧೦

ಅವರಿಕೆಸೊಪ್ಪು, ಕರಿಹತ್ತಿಸೊಪ್ಪು, ಪಾರಿವಾಳದ ಸೊಪ್ಪು, ಗರಿಕೆಬೇರು ಸಹ ಇದರಲ್ಲಿ ರಸವ ಹಿಂಡಿ ಬೆರಣಿ ಬೂದಿಯು ಕಲಸಿ ನೆತ್ತಿಬಾಯಿಗೆ ಒತ್ತಿದಡಾಕ್ಷಣವೆ ರಕ್ತವಾಂತಿ ನಿಲ್ವುದು. ೧೧

## ಘೃತಗಳು.

ಕೂಷ್ಮಾಂಡಘೃತ.—ಕುಂಬಳಕಾಯ ತಿರುಳಂ ಸಣ್ಣನಾಗಿ ತುರಿದು ಒಂದು ಬಳ್ಳ ತುಪ್ಪದಲ್ಲಿ ಹಾಕಿ ಏಲಕ್ಕಿ, ಲವಂಗ, ನಾಗಕೇಸರಿ, ಕೊತ್ತುಂಬರಿ, ಮೆಣಸು, ಇವು ಪ್ರತ್ಯೇಕ ಅರೆಪಾವು, ಹಿಪ್ಪಲಿ, ಶುಂಠಿ, ಜೀರಿಗೆ ಇವು ಬಗೆ ೧ಕ್ಕೆ ಪಾವು ಅರ್ಧ

[1] (ಗ), ಲೋ.

ಮೇರೆಯಲ್ಲಿ ಚೂರ್ಣಿಸಿ ಹಾಕಿ ೨ ಮಾನ [1] ಜೇನುತುಪ್ಪವ [1] ಬೆರೆಸಿ ಅಟ್ಟು ಇಳುಹಿಕೊಂಡು ಈ ಘೃತವಂದೇಹ ತ್ರಾಣವರಿದು ಸೇವಿಸೆ ರಕ್ತಪಿತ್ತ ಶ್ವಾಸಖಾಸ ಛರ್ದಿ ಸಹ ಮಾಣ್ಗುಂ; ಶರೀರ ಪುಷ್ಟಿಯಹುದು; ವೀರ್ಯವರ್ಧನಮಕ್ಕುಂ, ದೇಹಕಾಂತಿ ಯಹುದು. ೧

ಶ್ರೀಗಂಧಂ, ರಕ್ತಚಂದನಂ, ಭದ್ರಮುಸ್ತೆ, ಪದ್ಮಕ, ನೆಯ್ದಿಲ ಗೆಣಸು, ಮಂಜಿಷ್ಟ, ಮುಡಿವಾಳ, ಸಹ ಅರೆದು ಎರಡು ಮಾನ ತುಪ್ಪದಲ್ಲಿ ಹಾಕಿ ಅಕ್ಕಿಗಚ್ಚು ೧ ಬಳ್ಳ, ಹಾಲು ೧ ಬಳ್ಳ ಸಹ ಹೊಯ್ದು ಘೃತಪಾಕದಿಂದಟ್ಟು ಇಳುಹಿಕೊಂಡು ನಿತ್ಯವೂ ಸೇವಿಸಲು ರಕ್ತಪೈತ್ಯ ಹರ. ನೆತ್ತಿಗೊತ್ತಿ ಅಭ್ಯಂಗನವ ಮಾಡುವುದು. ನಸ್ಯಕ್ಕೆ ವಸ್ತಿಗೆ ಇದೇ ಘೃತವಂ ಪ್ರಯೋಗಿಸುವುದು. ಶ್ವಾಸ, ಛರ್ದಿಯುಂ ಕಿಡುಗುಂ. ೨

ವಾಸಾದಿಘೃತ.—ಆಡುಸೋಗೆಸೊಪ್ಪು, ದಾಸಾಳದ ಸೊಪ್ಪು, ಅಮರದವಳ್ಳಿ ಸಹ ಸಣ್ಣನಾಗಿ ಕತ್ತರಿಸಿ ಅದರಲ್ಲಿ ಒಂದು ಬಳ್ಳ ಹಸುವಿನ ತುಪ್ಪವಂ ಹೊಯ್ದು, ಇದರಲ್ಲಿ ಹಾಕುವ ಕಲ್ಕದ್ರವ್ಯ:—ಇಪ್ಪೆಹೂವು, ಯಷ್ಟಿಮಧುಕ ಸಹ ಪ್ರತ್ಯೇಕ ೨ ಪಲವನ್ನು ಹಾಲಿನಲ್ಲಿ ಅರೆದು ಕದಡಿ ಘೃತಪಾಕದಿಂದಟ್ಟು ಇಳುಹಿಕೊಂಡು ಪ್ರತಿದಿನವೂ ಪ್ರಾತಃಕಾಲದಲ್ಲಿ ವರಹಾತೂಕವಂ ಸೇವಿಸಲು ರಕ್ತಪೈತ್ಯ, ತ್ರಿದೋಷದಿಂದಾದ ಪೈತ್ಯ, ಅಸೃಗ್ದರ ಪ್ರದರ ಸಹ ಮಾಣ್ಗ. ೩

ದೂರ್ವಾದಿಘೃತ.—ಗರಿಕೆ ರಸ, ನೆಲಗುಂಬಳದ ರಸ, ಕಬ್ಬಿನ ಹಾಲು, ಆಷಾಡಿಗೆಡ್ಡೆ ರಸ, ಇವು ಪ್ರತ್ಯೇಕ ೧ ಬಳ್ಳ ರಸಗಳಲ್ಲಿ ಹಸುವಿನ ತುಪ್ಪ ೧ ಬಳ್ಳವ ಹೊಯ್ದು ಅದರಲ್ಲಿ ಲಾಮಂಚ, ನ್ಯಾದಿಲೆಗಡ್ಡೆ, ಶರ್ಕರೆ, ದ್ರಾಕ್ಷೆಹಣ್ಣು, ಕೆಂಪಿನ ಸೀಪಿಗೆಡ್ಡೆ ಇವು ಪ್ರತ್ಯೇಕ ೩ ಹಲವಂ ಹಾಲಲ್ಲಿ ಅರೆದು ಅದರಲ್ಲಿ ಕದಡಿ ಕಾಸಿ ಘೃತಪಾಕದೊಳಟ್ಟು ಇಳುಹಿ ಪ್ರಾತಃಕಾಲದಲ್ಲಿ ಸೇವಿಸೆ ರಕ್ತಪೈತ್ಯ ಹರ. ೪

ಜಂಬೂಘೃತ.—ನೇರಿಲ ಒಳನಾರಂ ೧ ಕೊಳಗದಷ್ಟು ನಾಗಳ ನೀರಿನಲ್ಲಿ ಹಾಕಿ ಚಾತುರ್ಭಾಗಾವಶೇಷವಾಗಿ ಕಾಸಿ ಮೊಸರು ತುಪ್ಪ, ಆಷಾಡಿರಸ, ಇವು ಬಗೆ ೧ ಕ್ಕೆ ೧ ಬಳ್ಳ ಮೇರೆಯಲ್ಲಿ ಹನಿಸಿ ಪಾಕಮಂ ಮಾಡುವಾಗ ಹಾಕುವ ಕಲ್ಕದ್ರವ್ಯ:—ತೊಕ್ಕೆಡೆದ ಬೆಲ್ಲವತ್ತದಬೇರು, ಯಷ್ಟಿಮಧುಕ, ಲೋಧ್ರದ ಚಕ್ಕೆ, ಎಲವದ ಹಗಿನು, ತಾವರೆಕೇಸರ, ದ್ರಾಕ್ಷೆ, ಕೊಡಸಿಗೆ(ಸಬೀಜ), ಧಾತಕೀಕುಸುಮ, ಸಕ್ಕರೆ, ಖರ್ಜೂರದ ಹಣ್ಣು, ನಾಗಕೇಸರಿ, ದಾಳಿಂಬದ ಹಣ್ಣು, ಅಗುಳು ಶುಂಠಿ, ಕೊಡನಾರಿಗೆಡ್ಡೆ, ಓಮು, ಮಾವಿನ ಹಣ್ಣು, ನೇರಿಲ ಹಣ್ಣು, ಬೇಲದ ಹಣ್ಣು, ನೆಲದಾಳುಗೆಡ್ಡೆ, ಒಂದೆಲೆಹೊನ್ನೆ—ಇವಂ ಸಮಾಂಶವಾಗಿ ಅರೆದು ಕದಡಿ ತುಪ್ಪ ಉಳಿವಂತೆ ಕಾಸಿ ಇಳುಹಿ ಧನ್ವಂತರಿಗಣಪತಿಗಳ ಪೂಜೆಯಂಮಾಡಿ ಇರಿಸಿಕೊಂಡು ಪ್ರತಿದಿನವೂ ಉದಯದಲ್ಲಿ ಗ ೨ ತೂಕವಂ ತುಪ್ಪದಲ್ಲಿ ಕಲಸಿ

[1] (ಗ). ಪ್ರತಿಯಲ್ಲಿಲ್ಲ.

ಕೊಡಲು ರಕ್ತಪಿತ್ತ, ರಕ್ತಾತಿಸಾರ, ಯೋನಿದೋಷ, ಬಿಳಿಸೀರೆ, ರಕ್ತಾರ್ಶ— ಇವೆಲ್ಲ ಪರಿಹಾರಮಕ್ಕುಂ. ೫

ಮತ್ತಂ, ದೂರ್ವಾದಿಘೃತಂ —ಗರಿಕರಸಂ ಸೇ ೪, ಗುಂಮುಡುಕಾಯ ರಸಂ, ಸುರುಸುರಾಕುರಸಂ, ಇಂತಾಗೂರ್ಚಿ ದೀನಿಕಿ ಪಾಲುಸಮಂಗಾ ಕೂರ್ಚಿ ಡಾಡಿಂಬಪೂವುಲು, ಕಾಯ, ಆಕು, ಚಕ್ಕ, ನಲು ತೂಮು ನೀಳ್ಳು ಬೋಸಿ ಚತು ರ್ಭಾಗಂಗಾ ಕಾಚಿಕೊನಿ ನೇಯಿ ಸೇರು ೪ ಬೋಸಿ [ವೇಸೆ] ಕಲ್ಕದ್ರವ್ಯಾಲು :— ಏಲಕ್ಕುಲು, ಸುಗಂಧಿಪಾಲು, ಯಷ್ಟಿಮಧುಕಂ, ದ್ವೀಪದ್ರಾಕ್ಷ, ತುಂಗಮುಸ್ತುಲು, ಭದ್ರಮುಸ್ತುಲು, ವಟ್ಟಿವೇಳ್ಳು, ದೋಸ ಆಕು, ಕುರಿವೇಳ್ಳು, ಚಂಗಲಕೋಷ್ಟಂ, ಚಿನ್ನಏಲಕ್ಕುಲು, ಲವಂಗಾಲು, ನಾಗಕೇಸರಾಲು, ತಾಳೀಸಪತ್ರ, ಜಟಾ ಮಾಂಸಿ, ಖರ್ಜೂರಂ, ಖಚೋರಂ, ತೆಲ್ಲಜಿಲಕರ, ದೇಶಾವಾರಂಜಿಲಕರ, ಪರ್ಪಾ ಷ್ಟಕಂ, ಕೊತ್ತುಮ್ಮುಲು, ನೆಲ್ಲಿಚಟ್ಟು, ಗಂಧಿಗತಗರಂ, ಪನ್ನೇರುಗಡ್ಡ, ನ್ಯಗ್ರೋಧ ಗಣಂ, ರಾಗಿಚಿಗುಳ್ಳು, ಮರಿಚಿಗುಳ್ಳು ಅತ್ತಿಚಿಗುಳ್ಳು, ನೇರೆಡುಚಿಗುಳ್ಳು, ಇವಿ ಎಂಡಿಪೆಟ್ಟಿ ಇಂತ ಚೂರ್ಣಂ ಜೇಸಿ ಪಕ್ವಂಗಾ ಗಾಜಿ ಶರ್ಕರವೇಸಿ ಕಲಪಿಸೇವಿಂ ಚೇದಿ ರಕ್ತಪಿತ್ತಂ, ರಕ್ತಸ್ರಾವಂ, ಕಾಮಿಲಾರೋಗಂ, ಪ್ರಮೇಹಾಲು, ತಾಪ ಜ್ವರಂ, ಮದಮೂರ್ಛರೋಗಾಲು, ಸಹಮಾನುನು. ೬

## ಗುಳಿಗೆ.

ಜಿಂತಗಿಂಜಲ ಚರಿನಿ, ಪನಸಕಾಯ ಕರುಕು, ಪಚ್ಚಿಪಸುಪು, ವಟ್ಟಿವೇಳ್ಳು— ಇವಿನಿ ಸಮಾಂಶಂಗೂರ್ಚಿ ನೂರಿ ನಿಂಮಪಂಡು ಪ್ರಮಾಣಂ ಗುಳಿಗಕಟ್ಟಿ ನೀಡನು ಯೆಂಡಿಂಚಿ, ನೂರಿ ನೇತಿಲೊಪುಚ್ಚುಕೊಂಟೆ ರಕ್ತಪಿತ್ತಂ ಮಾನುನು. ೧

## ಅಭ್ಯಂಗನ ತುಪ್ಪ.

ಕುಕ್ಕುವೆಲಗ ವೇರುನು, ಇಂಗುವನು ಆವುನೇತಿತೊ ಕಾಚಿ ದಿನಂ ವಿಡಿಚಿ ದಿನಂ ತಲಕಂಟುಕೊಂಟೆ ರಕ್ತಪಿತ್ತಂ ಗುಣಮೌನು. ೧

## ಚೂರ್ಣಂ.

ಉಸುರಿಕಪಪ್ಪು, ತುಂಗಮುಸ್ತುಲು, ವಟ್ಟಿವೇಳ್ಳು, ಕುರಿವೇಳ್ಳು, ದವನಂ, ಮಾರೆಡುಪಂಡು, ಶ್ರೀಗಂಧಂ, ಅಗಿಲುಚಕ್ಕ, ಶ್ರೀತೊಲಸಿ, ಒಂದೆಲಗಾಕು, ಭೂತು ಲಸಿ, ಮಂಜವೆಲಗ, ಬೂರುಗಬಂಕ, ದ್ರಾಕ್ಷ, ಖರ್ಜೂರಂ, ಪಿಪ್ಪಳ್ಳು, ಲವಂಗಪತ್ರ, ಏಲಕ್ಕುಲು, ಕೊತ್ತುಮ್ಮುಲು, ತಪಕ್ಷೀರಂ, ಜಿಲಕರ, ನಿಮ್ಮವಿತ್ತುಲು, ವೆಲಗ ವಿತ್ತುಲು, ರಾಸ್ನ, ವೆಲುಗಾರಂ, ಪೇಲಾಲು, ಉಪ್ಪಿಡಿಬೀಯಂತವುಡು, ಇಂತ

ಸಮಭಾಗಂಗಾ ಚೂರ್ಣಂಜೇಸಿ ಜಾಜಿಯಾಕು, ಕಿರುನೆಲ್ಲಿಯಾಕು, ರಡ್ಡಿವಾರಿ ನಾನಿಬೀಯಂ, ವಕ್ಕಲರಸಂಚೇತನು ಒಕ್ಕಸಾರಿ ಭಾವನಂಜೇಸಿ ಯೆಂಡಿಂಚಿ ಪೂದ್ದಿಕಿ ಗ ೧ ತೂ ತೇನೆತೊ ಇಚ್ಚೇದಿ, ರಕ್ತಪೈತ್ಯಂ, ಆಮ್ಲಪೈತ್ಯಂ, ರಕ್ತ ಖಾಸಂ, ರಕ್ತಪ್ರದರಂ, ಸಹ ಮಾನುನು. ೧

ಚಂದನಾದಿಚೂರ್ಣಂ.—ಶ್ರೀಗಂಧಂ, ವಟ್ಟಿವೇಳ್ಳು, ಚಂಗಲಕೋಷ್ಟಂ, ನೇಲ ಉಸುರಿಕ, ಉಸುರಿಕಪಪ್ಪು, ಕಲುವಗಡ್ಡಲು, ನೇಲಮಾವೆನವೇರು, ಇಪ್ಪಪೂವು, ಯಷ್ಟಿಮಧುಕ, ದ್ರಾಕ್ಷ, ಖರ್ಜೂರಂ, ತವಕ್ಷೀರಂ, ಇವಿ ಸಮಭಾಗಂ ಚೂರ್ಣಂ ಜೇಸಿ ಸಮಶರ್ಕರವೇಸಿ ನೀಳ್ಳುತೂ ತೀಸುಕೋಗಾನು ರಕ್ತಪೈತ್ಯಂ, ಶಿರೋ ದಾಹಂ, ಮೂರ್ಛ, ಅಸೃಗ್ದರಂ, ಅಂಗದಾಹಂ, ಶಿರೋಭ್ರಮಣಂ, ಕಾಮಿಲಾ ರೋಗಂ, ಪ್ರಮೇಹಂ, ಜೀರ್ಣ ಜ್ವರಾಲು ಸಹ ಮಾನುನು. ೨

ಮಹಾತಾಳೀಶಚೂರ್ಣಂ.—ತಾಳೀಸಪತ್ರ, ವಾಡಚಿಂತಕಾಯಿ, ಲವಂಗ ಚಕ್ಕ, ಲವಂಗಪತ್ರ, ಏಲಕ್ಕುಲು, ನಾಗಕೇಸರಾಲು, ಶುಂಠಿ, ಪಿಪ್ಪಳ್ಳು, ಮಿರಿ ಯಾಲು, ತವಕ್ಷೀರಂ, ದ್ರಾಕ್ಷ, ಖರ್ಜೂರಂ, ಚೆವ್ಯಂ, ದಾಡಿಂಬಪಿಂಜಲು, ಜಾಜಿಕಾ ಯಲು, ಖಚೋರಂ, ಕರ್ಕಾಟಕಶೃಂಗಿ, ತೆಲ್ಲಜಿಲಕರ, ದೇಶಾವಾರಂಜಿಲಕರ, ಕರಕ್ಕಾಯಲು, ಕುರಿವೇಳ್ಳು, ಲವಂಗಾಲು ಇವಿಸಮಭಾಗಂ ಚೂರ್ಣಂಜೇಸಿ ಈ ದ್ರವ್ಯಾಲುಕು ಸಮಭಾಗಂ ಪಂಚದಾರವೇಸಿ ಇಚ್ಚಿನ ರಕ್ತಪೈತ್ಯಂ, ಖಾಸ ರೋಗಂ, ಜ್ವರಾಲು, ಹೃದ್ರೋಗಂ, ಪಾಂಡುರೋಗಾಲು, ಭಗಂಧರಂ, ಆಮ್ಲ ಪೈತ್ಯಂ, ಕ್ಷಯರೋಗಾಲು, ಶೋಥಲು ಸಹ ಮಾನುನು. ೩

## ರಕ್ತಪಿತ್ತ ವ್ಯಾಧಿಯಿಂದ ಮೂಗಿನಲ್ಲಿ ರಕ್ತ ಬೀಳುವುದಕ್ಕೆ ಚಿಕಿತ್ಸೆ.

### ನಸ್ಯಗಳು.

ಕಿರುಕುಸೋಲೆ ರಸವಂ ಸಕ್ಕರೆಯಿಂ ಕೂಡಿ ನಸ್ಯಂ ಮಾಡುವುದು. ೧

ದಾಳಿಂಬದ ಹೂವಿನ ರಸವನ್ನು ನಸ್ಯಂ ಗೈವುದು. ೨

ಮಾವಿನ ಬೀಜವಂ ಜಜ್ಜುಗುಟ್ಟಿ ಮೊಲೆಹಾಲಂ ನಸ್ಯಂ ಗೈವುದು. ೩

ಶತಾವರೆಕರ್ಣಿ ಕೆಯಲ್ಲಿರುವ ಅಂಕುರವನ್ನು ಮೊಲೆಹಾಲನಲ್ಲಿ ನಸ್ಯವಂ ಮಾಳ್ಪುದು. ೪

ಶಂಖವನು, ಕಾವಿಕಲ್ಲನು ಅರೆದು ಮೊಲೆಹಾಲಿಂ ನಸ್ಯವಂ ಮಾಳ್ಪುದು. ೫

ಧಾತಕೀಕುಸುಮ, ಯಷ್ಟಿಮಧುಕ, ಇವಂ ಮೊಲೆಹಾಲಿಂದರೆದು ನಸ್ಯಂ ಮಾಡಿಸುವುದು. ೬

ದಾಳಿಂಬದ [1]ಹೂವಿ[1]ನ ರಸದಲ್ಲಿ ಮಾವಿನ ಓಟೆಯ ಬೀಜವನರೆದು ನಸ್ಯಂ ಮಾಡುವುದು. ೭

---

[1] ಹಣ್ಣ (ಗ)

ಗರಿಕೆ ರಸದಲ್ಲಿ ಮಾವಿನ ಓಟೆಯ ಬೀಜವನರೆದು ನಸ್ಯಂ ಮಾಡುವುದು. ೮

ಪುರದರಿಸಿನವುಂ ದಾಳಿಂಬದ ಹೂವಿನ ರಸದಲ್ಲಿಯಾಗಲಿ ಗರಿಕೆರಸದಲ್ಲಿಯಾಗಲಿ ನಸ್ಯವಗೈವುದು. ೯

ಗರಿಕೆ ರಸದಲ್ಲಿ ಮೊಲೆ ಹಾಲಂಕೂಡಿ ನಸ್ಯವಂ ಮಾಳ್ಪುದು. ೧೦

ದಾಳಿಂಬದ ಕುಸುಮಮಂ ಮೊಲೆಹಾಲಿಂ ನಸ್ಯಂಗೈವುದು. ೧೧

ಮಾವಿನ ಬೀಜವಂ ನೆನೆಯಿಕ್ಕಿದ ನೀರಿಂದಾದರೂ, ಗರಿಕೆರಸದಿಂದಾದರೂ ನಸ್ಯಂಮಾಳ್ಪುದು. ೧೨

ಶ್ರೀಗಂಧಂ, ಶುಂಠಿ, ಇವಿನಿ ಪೊನ್ನಗಂಟಿಯಾಕು ರಸಮುನ ನೂರಿ ನಸ್ಯಂ ಚೇಸೇದಿ. ೧೩

ಎರ್ರ ದಾಸಾನ ಪೂವುಲು, ಪತ್ತಿಪೂವುಲು, ಕುಂಕುಮ ಪೂವುಲು, ಇವಿನಿ ಪೊನ್ನ ಗಂಟಿಯಾಕು ರಸಮು ಚೇತ ನೂರಿ ನಸ್ಯಂ ಚೇಸೇದಿ ೧೪

ಕುಸುಮಪೂವುನು ಎನುಮ ಪೇಡ ರಸಮುನ ನೂರಿ ನಸ್ಯಂ ಚೇಸೇದಿ. ೧೫

ಚಿರಿವೇಳ್ಳು, ಯಷ್ಟಿಮಧುಕಂ, ಇವಿನಿ ಚನುಪಾಲುತೊ ನೂರಿ ನಸ್ಯಂ ಚೇಸೇದಿ ೧೬

ಆವು ನೇಯಿನಿ ಶರ್ಕರತೊ ನಸ್ಯಂ ಚೇಯುವಚ್ಚುನು. ೧೭

ಉತ್ತರಣಾಕು, ನೇರೇಡುಚಿಗುಳ್ಳು, ಮಾಮಿಡಿಪಟ್ಟ, ಕಲುವಗಡ್ಡ ಇವಿನಿ ಬೀಯಂಕಡಿಗಿನ ನೀಳ್ಳುತೊ ನಸ್ಯಂ ಚೇಸೇದಿ. ೧೮

ಲತ್ತುಕರಸಂ, ಶರ್ಕರ, ಇವಿನಿ ಚನುಪಾಲು ಸಹ ನಸ್ಯಂ ಚೇಸೇದಿ. ೧೯

ಜಿಂತಚಕ್ಕಲಬೂಡಿದಿನಿ ಬ್ರಹ್ಮರಂಧ್ರಮು ಮೀದ ಉಂಚಿ ನಿಮ್ಮಪುಲುಸು ಪಿಂಡೇದಿ. ೨೦

ಏರಪಿಡುಕಲ ಬೂಡಿದಿನಿ ಗರಿಕವೇರ ರಸಮು ಚೇತ ಕಲಿಪಿ ಬ್ರಹ್ಮರಂಧ್ರಮುಲೊ ಪೆಟ್ಟೇದಿ. ೨೧

ಆವುನೇಯಿ, ಗರಿಕವೇಳ್ಳರಸಂ, ಉಸುರಿಕಪಪ್ಪು, ದಾಡಿಂಬಪೂವುಲು, ವಟ್ಟಿವೇಳ್ಳು, ಸಹ ಆವುನೆಯ್ಯಿ ಪಾಲುತೊ ವಂಡಿ ನಸ್ಯಂ ಚೇಸೇದಿ. ೨೨

ದಾಳಿಂಬಪಿಂದಲು, ಗರಿಕವೇಳ್ಳರಸಂ, ಇವಿನಿ ಚನುಪಾಲುತೊ ನಸ್ಯಂ ಜೇಯುವಚ್ಚುನು. ೨೩

ಗರಿಕವೇಳ್ಳನು ಮೆತ್ತಗಾ ಕುಟ್ಟಿ ಚನುಪಾಲುತೊಗಾನಿ ಮೇಕಪಾಲುತೊಗಾನಿ ವಂಡಿ ನಸ್ಯಂ ಜೇಸೇದಿ. ೨೪

ನೀರುಳ್ಳಿ ಗಡ್ಡಲನು ನರಿಯಗೊಟ್ಟಿ ಪೊಟ್ಟಣಂಗಟ್ಟಿ ಮುಕ್ಕುಲೊಪಿಂಡೇದಿ ೨೫

ಪಚ್ಚಿ ಪೆಸಲಕಟ್ಟು, ವೇಪನೂನೆ, ಇವಿ ಸಮಂಗಾ ಮೃದುಪಾಕಮುನ ವಂಡಿ ನಸ್ಯಂ ಜೇಸೇದಿ. ೨೬

[1]ಕಿರುತುಸೋರೆ ಬೇರನರೆದು ಸಕ್ಕರೆವೆರಸಿ ನಸ್ಯಂ ಮಾಡುವುದು. ೨೭
ಹಿಪ್ಪಲಿ, ಶುಂಠಿ, ಸೈಂಧವ, ಇವಂ ಬಿಸಿನೀರಿಂ ನಸ್ಯಂ ಮಾಡುವುದು. ೨೮
ಸಮುದ್ರಪಾಳಮಂ ಎಕ್ಕೆಹಾಲಿಂ ತೇದು ನಸ್ಯಂ ಮಾಡುವುದು. ೨೯

ಈಗ ಪೇಳಿದ ಪ್ರಯೋಗಂಗಳಿಂ ನಸ್ಯ ಚಿಕಿತ್ಸೆಯಂ ಮಾಡಲು ರಕ್ತಪೈತ್ಯದಿಂ ಮೂಗಿನಿಂದ ಬೀಳುವ ರಕ್ತ ಮಾಣ್ಗುಂ.

## ಸಂಹಿತೆಗಳು.

ಗರಿಕೆ ರಸದಲ್ಲಿ ಸಕ್ಕರೆಗೂಡಿ ತೆಗೆದುಕೊಳ್ಳುವುದು. ೧
ನೀರುಳ್ಳಿಯನರೆದು ಮೂಗಿಗೆ ಹಿಂಡುವುದು. ೨
ಕರಿಹತ್ತಿಯ ಸೊಪ್ಪಿನ ರಸವಂ ನೆತ್ತಿಗೊತ್ತುವುದು. ೩
[2]ಮೊಗಲಿರೇಕು, ಗುಪಚ್ಚಿಪುನುಗು,[2] ಚರಿವಿ ಅಘ್ರಾಣಂ ಜೇಸೇದಿ. ೪
ತೆಲ್ಲ ಗರಿಕವೇಳ್ಳುನು ಕಡಿಗಿ ದಂಚಿ ಪಿಂಡುಕೊನಿ ಬೀಯುಂಗಡುಕು ಚಕ್ಕರವೇಸಿ ಇಚ್ಚೇದಿ. ೫
ಜಂಬುಗಡ್ಡಲುನು, ತಂಗೆಡುಕೊನಲುನು ನೆತ್ತಿಲೊ ಕಟ್ಟೇದಿ. ೬
ತೆಲ್ಲಗರಿಕವೇಳ್ಳು ಗೊಬ್ಬರ ಪಟ್ಟಣಂಗಟ್ಟಿ ಮೂಚೇದಿ. ೭
ಅತ್ತಿಕಾಯ, ಶ್ರೀಗಂಧ, ಸಹ ಮೇಕಪಾಲುತೊ ನೂರಿ ತ್ರಾಗೇದಿ ೮
ಅಡವಿ ಮಾಮಿಡಿ ವೇರುನು, ವರಿಬೀಮುನು. ಜಿಲಕರತೊ ಗೂಡಮಜ್ಜಿಗತೊ ಗಾಚಿ ಇಚ್ಚೇದಿ. ೯
ಈ ಪ್ರಯೋಗಾಲು ಇಚ್ಚಿನ [3][ಮುಕ್ಕು][3]ನೆತ್ತರು ಮಾನುನು.

## ಕಷಾಯಗಳು.

ಯಷ್ಟಿಮಧುಕಮಂ ಜಜ್ಜಿ ಕುಟ್ಟಿ, ನೀರೊಳು ಹಾಕಿ ಕಷಾಯ ಕಾಸಿ ಬೆಲ್ಲದ ಪಾನವಂ ತೆಗದುಕೊಳ್ಳಲು ಮೂಗಿನ ರಕ್ತಂ ಮಾಣ್ಗುಂ. ೧

ಆವುನೇಯಿ ಪಾಲುತೊ ಗರಿಕವೇಳ್ಳುರಸಂ, ಉಸುರಿಕಪಪ್ಪು ಗ ೧ ತೊ, ಮ್ಯೆನಂಗೆ ೧ ತೊ, ದಾಡಿಂಬಪೂವುಲು, ವಟ್ಟಿ ವೇಳ್ಳು, ಸಹವಂಡಿ ಈ ನೇತಿತೊ ತಲನಂಟಿ ಪಿಡುಕ ಬೂಡಿದಿವೇಸಿ ಕಟ್ಟನು ಮುಕ್ಕುಲೊ ಗಾರೆ ರಕ್ತಂ ನಿಲುಚುನು, ಪಥ್ಯಂ, ರಾಜಾನ್ನಪುವಂಟಕಂ, ಪೆಸಲಕಟ್ಟು, ದೀಸಿಪಪ್ಪು ಕಂದಿಪಪ್ಪುಕಟ್ಟು. ೨

## ಚಂದನಾದಿಘೃತಂ.

ಚಂದನಂ, ಸುಗಂಧಿಪಾಲು, ವಟ್ಟಿವೇಳ್ಳು, ನೂಗುದೋಸ, ತೆಲ್ಲಗಡ್ಡಲು,

[1] ರೇಣುಕೆ, (ಗ) [2] ಮೊಗಲ್ಲಿಕೆ, ಕುಗಿಪಚ್ಚ, ಮುನುಗು, (ಗ).
[3] ಮುಂಕು, (ಗ), (ಕ)ದಲ್ಲಿ ಇಲ್ಲ.

ಬಿರಿ, ವೇಪಚಕ್ಕ, ನೆಲ್ಲಿಚಟ್ಟು, ದ್ರಾಕ್ಷ, ಖಚೋರಂ, ತಾವೆುರನಾಳಾಲು, ಕಂಗಲುವ ಗಡ್ಡಲು, ಒಂದೆಲಗಾಕು, ಪರ್ಪಾಷ್ಟಕಂ, ತಿಪ್ಪತೀಗ, ತೀಟಕಸಂದಿ, ಇಪ್ಪಪೂವು, ಚಿಟ್ಟಮುಟ್ಟಿ, ಪಿರಾವುಟ್ಟಿ, ಪಂಚಕೋಲಾಲು, ಚೇತಿಪೂಳ್ಳ (ಸಮೂಲಂ)' ಗರಿಕವೇಳ್ಳು, ಕಪಾಲಂಚೆಟ್ಟು, ಚಕ್ಕ, ದೀನಿ ಚಿಗುಳ್ಳು, ಕುರಿವೇಳ್ಳು, ಓಮು, ತಾಂದ್ರಿ ಕಾಯಲು, ಗೆಣಸುತೀಗಲು. ಇವಿ ವಗವಗಕು ಗ ೫ ತೂನು ಲೆಕ್ಕನುಗೂರ್ಚಿ, ಅಡ್ಡಸರಂ ಈವಗಲುಕು ಸಮಂ ಗೂರ್ಚಿ ಪನ್ನೆಂಡು ತೂಮುಲ ನೀಳ್ಳು ಬೋಸಿ ಎನಿಮಿದಿಂಟ ಒಕ್ಕ ಭಾಗಂ ನಿಲಿಚೇಟಟ್ಟು ಗಾಚಿ ವಡಿಯ ಬೋಸಿಕೊನಿ ದೀನಿಲೊ ವೇಸೆ ಕಲ್ಕ ದ್ರವ್ಯಾಲು:—ನೆಲ್ಲಿಚಟ್ಟು, ನೇರೆಡುಚಕ್ಕ, ಅತ್ತಿಚಕ್ಕ, ದಾಳಿಂಬ ಪೂಲು, ಏನುಗಪಲ್ಲೇರು, ಮಂಚಿಪಲ್ಲೇರು, ಇವಿ ಗ ೪ ಎತ್ತು ಲೆಕ್ಕನುಗೂರ್ಚಿ ಮೇಕಪಾಲು ತೂಮೆಡು, ದ್ವಿಪದ್ರಾಕ್ಷ, ಶ್ರೀಗಂಧಚಕ್ಕ, ದೀನಿ ಚಿಗುಳ್ಳು, ಯಷ್ಟಿಮ ದುಕಂ, ಅಡ್ಡಸರಪುವೇಳ್ಳು, ನೆಲ್ಲಿಚೆಟ್ಟು, ಚಾಂಗ, ಕುರಿವೇಳ್ಳು, ಮಂಜಿಷ್ಟ, ಸುಗಂಧ ಪಾಲು, ನಾಗಕೇಸರಾಲು, ಮುನುಗುವಿತ್ತುಲು, ನೇಲತಾಟಿಗಡ್ಡಲು, ಅಗಿ ಲುಚಕ್ಕ, ದೀನಿಚಿಗುಳ್ಳು, ಇವಿನ್ನಿ ಗ ೪ ಎತ್ತು ಲೆಕ್ಕನುಗೂರ್ಚಿ ಚೂರ್ಣಂಚಿ ವೇಸಿ ನೇಯಿ ಸೇರು ೮ ಬೋಸಿ, ಚಕ್ಕರ ತೇನ ಬೋಸಿ ಪಾಕಂಜೇಸಿ ಸೇವಿಸ್ತೆ ಮುಕ್ಕು ನೆತ್ತರು, ರಕ್ತಪೈತ್ಯಂ, ಕರ್ಣ ರೋಗಂ, ನೇತ್ರರೋಗಂ, ಮೇಢ್ರಂ, ಯೋನಿರೋ ಗಲು, ಮೊದಲೈನವಿ ಮಾನುನು ತತ್ಪ್ರಯೋಗಾಲುನು ತೆಲಿಸಿ ಉಪಯೋಗಿಂ ಚೇದಿ. ೨

## ತೈಲ

ಪಚ್ಚಿಪೆಸಲ ಕಟ್ಟು, ವೇಪನೂನ ಸಹ ಸಮಂಗಾ ಪಕ್ವಂಗಾ ವಂಡಿಮುಕ್ಕುನು ನಸ್ಯಂ ಚೇಸಿತೆ ಮುಕ್ಕುನಂದು ಕಾರೆ ನೆತ್ತರು ನಿಲುಚುನು. ೧

ಅಂತು ರಕ್ತಪೈತ್ಯದ ಬಗೆ ೧ಕ್ಕೆ ಸಂಹಿತೆ ೩೮, ಕಲ್ಕ ೧೧, ಕಷಾಯ ೧೯, ಘೃತ ೬, ತೈಲ ೧, ವಿರೇಕ ೪, ವಮನ ೧, ನಸ್ಯ ೩೨, ಕವಳ ೧, ಅಂಜನ ೧, ವಟಕ ೨, ಚೂರ್ಣ ೩, ಅಭ್ಯಂಗನತುಪ್ಪ ೧ ಸಹ ಪ್ರಯೋಗ ೧೨೦ ಕ ಶ್ರೀ.

ಇತಿ ಶ್ರೀ ವೀರಾರಾಜೋಕ್ತಿ ವಿಲಾಸ ವೈದ್ಯವಿದ್ಯಾರ್ಣವ
ತರಂಗದೊಳ್ ರಕ್ತಪೈತ್ಯ ಚಿಕಿತ್ಸಾ ಸಂಪೂರ್ಣಃ.



## ಅಸೃಗ್ದರ ಪೈತ್ಯ.

ನಿದಾನಂ.—ದುಃಖದಿಂದಲೂ ಉಪವಾಸದಿಂದಲೂ ಬಹಳ ಸಂಯೋಗದಿಂದಲೂ ವಿದಾಹಗಳಾದ ವಸ್ತುಗಳ ಸೇವನೆಯಿಂದಲೂ ಆರಕ್ತ ಪೈತ್ಯವೆಂಬ ದುಷ್ಟರಕ್ತವು ಅಕಾಲದಲ್ಲಿ ಯೋನಿಯಲ್ಲಿ ಸ್ರವಿಸುವುದು, ಅಸೃಗ್ದರವೆಂದೂ ಪ್ರದರವೆಂದೂ ಎರಡು ಪ್ರಕಾರವಾಗಿ ಪೇಳ್ವರು. ಇದರಲ್ಲಿ ವಾತರೋಗದಿಂ ಪುಟ್ಟಿ ಅಸೃಗ್ದರವು ಶೂಲೆಸಹವಾಗಿ ರಕ್ತ ಸ್ರವಿಸುವುದು ; ಪಿತ್ತದಿಂ ಪುಟ್ಟಿದ ಅಸೃಗ್ದರವು ಕಪ್ಪುಗೂಡಿ ರಕ್ತಸುರಿವುತಾ [1] ಜ್ವರ [1] ದೊಡನೆ ಕೂಡಿಕೊಂಡು ಇರುವುದು; ಶ್ಲೇಷ್ಮದಿಂದಾದ ಅಸೃಗ್ದರವು ಯೋನಿಯಿಂ ಬಿಳುಪಾಗಿ ಸುರಿವುದು ; ಈ ತ್ರಿದೋಷಂಗಳಿಂದುಂಟಾದ ಅಸೃಗ್ದರಂ ಈ ಮೂರು ಲಕ್ಷಣಂಗಳಿಂದಲೂ ಮೂರ್ಛೆಜ್ವರ ಸಹಿತವಾಗಿರುವುದು. ಇದು ಅಸಾಧ್ಯವೆನಿಸಿಕೊಂಬುದು ; ಅದನೆ ಪ್ರದರವೆಂದು ಪೇಳ್ವರು ; ಈ ಅಸೃಗ್ದರ, ಪ್ರದರ. ಹೆನ್ನೆತ್ತರು ಈ ಮೂರಕ್ಕೂ ಚಿಕಿತ್ಸೆ.

## ಸಂಹಿತೆಗಳು.

ಕೆಂಪಿನ ಸೀರೆ, ಬಿಳಿಯಸೀರೆ, ಇವು ಕೆಡುವುದಕ್ಕೆ.—ಬಿಳಿ ದಾಸಾಳದ ಹೂ, ಕೆಂಪಿನ ದಾಸಾಳದ ಹೂ, ಕರಿಹತ್ತಿಯಹೂ, ಈ ಎಳಗಾಯಿ, ಇವಂ ನೀರಲ್ಲಿ ಕುದಿಸಿ ಕೈಯ್ಯಲ್ಲಿ ಕಿವಿಚಿ ನೀರ ಬಸಿದುಕೊಂಡು ಬಿಳಿಯ ವಸ್ತ್ರವ ಸುಟ್ಟು ಕರಿಯ ಹಾಕಿ ಗೋಪಿಚಂದನ ಸಹ ಹಾಕಿ ಕಡಡಿ ಬಚ್ಚೋಡಿ ಪ್ಯಾಯ್ಯವಳಿಗೆ ಒಂದು ಬಟ್ಟಲು, . . . . ಪ್ಯಾಯೊಳಗೆ ಅರೆಬಟ್ಟಲು ವೇರೆಯಲ್ಲಿ ಎಂಟುದಿನ ಕುಡಿಯ ಕೊಡಲು ಕೆಂಪಿನ ಸೀರೆ ಬಿಳಿಸೀರೆ ಕಡುವುದು ಸಹ ಮಾಣ್ಗುಂ. ೧

## ಪ್ರದರಕ್ಕೆ.

ಚಿಂಚೆಗದ ಸೊಪ್ಪನು ಎಳ್ಳೆಣ್ಣೆಯಲ್ಲಿ ಎಳವದನಾಗಿ ಹುರಿದು ಒಣಗಿಸಿ ಪುಡಿ ಮಾಡಿ ವಸ್ತ್ರಗಾಳಿತವಂ ಗೈದು ಇರಿಸಿಕೊಂಡು ಕಿರುಕಸೋಲೆ (ಸಹಮೂಲ), ನೆಗ್ಗಿಲು, ಆಲದ ಬೀಳಲ ಕೊನರು, ಹೊನ್ನಗನೆ ಬೇರು, ಇಷ್ಟನು ಹಳೆನೀರಿನಲ್ಲಿ ತೊಳೆದು ಹಿಂಡಿಕೊಂಡು ಆ ರಸದಲ್ಲಿ ಹಸುವಿನ ಹಾಲಕೂಡಿ ನಾಲ್ಕು ಬೆರಳಿನಲ್ಲಿ ಬಂದಷ್ಟು ಸಕ್ಕರೆಯನು, ಏಲಕ್ಕಿಯ ಚೂರ್ಣವನು, ಆ ಚಿಂಚಗದ ಸೊಪ್ಪಿನ ಪುಡಿಯನು ನಾಲ್ಕು ಬೆರಳಿನಲ್ಲಿ ಬಂದಷ್ಟು ಸಹ ಹಾಕಿ ಸೇವಿಸೆ ಮೂರುವರ್ಣವಾಗಿ ಸುರಿವ ಪ್ರದರವು ಗುಣಮಕ್ಕುಂ. ೨

ಎಮ್ಮೆ ಮಜ್ಜಿಗೆಯಲ್ಲಿ ರಾಜಾನ್ನದಕ್ಕಿಯ ಅಂಬಲಿಯನಟ್ಟು ಎಣ್ಣೆಯ ಬಿಟ್ಟು ಉಣ್ಣಲು ಹೆನ್ನೆತ್ತರು ಪರಿಹರ. ೩

---

[1] ರಕ್ತ, (ಗ)

ಚಾಬೇ ಸೊಪ್ಪನು ನವಣೆಯಕ್ಕಿಯನು ಕೂಡ ಕುಟ್ಟಿ ಹಿಟ್ಟುತೊಳಸಿ ನೆಲ ಮುಟ್ಟದೆ ಮಣಿಯ ಮೇಲೆ ಕೂತುಕೊಂಡು ಆ ಹಿಟ್ಟನು ಸಪ್ಪೆತುಪ್ಪದಿಂ ಮೆಲ್ಲಲು ಹೆನ್ನೆತ್ತರು ಮಾಣ್ಗುಂ. ೪

ಕೊತ್ತಂಬರಿ ಬೀಜವಂ ಹಸುವಿನ ಹಾಲಿನಲ್ಲರೆದು ಒಂದು ಮಂಡಲ ಕೊಳ್ಳಲು ಹೆನ್ನೆತ್ತರು ಗುಣಮಹುದು. ೫

ಉತ್ತರಣೆಯ ಬೇರನು ಎಣ್ಣೆಯಲ್ಲಿ ತಾಳಿಸಿ ಮೆಲ್ಲಲು ಹೆನ್ನೆತ್ತರು ಕೆಡುಗುಂ. ೬

ಎಮ್ಮೆಯ ಹಾಲನು ಚೆನ್ನಾಗಿ ಕಾಸಿ ಸಕ್ಕರೆ ಜೇನುತುಪ್ಪವೆರಸಿ ಕುಡಿಯ ಯೋನಿರಕ್ತಂ ಪರಿಹರವಹುದು. ೭

ಹಳದಿ ಗರಿಕೆ, ನೇರಿಲ ಚಿಗುರು, ಇವಂ ಅಕ್ಕಿಗಚ್ಚಿನಲ್ಲಿ ಅರೆದು ಜೇನು ತುಪ್ಪವೆರಸಿ ಕುಡಿಯೆ ಯೋನಿರಕ್ತಂ ಕೆಡುಗುಂ. ೮

ನೈದಿಲ ಗಡ್ಡೆಯನು ಅಕ್ಕಿಗಚ್ಚಿನಲ್ಲರೆದು ಜೇನುತುಪ್ಪವೆರಸಿ ಕುಡಿಯೆ ಯೋನಿರಕ್ತಂ ನಿಲ್ಲುವುದು. ೯

ಆಷಾಡಿ ಗೆಡ್ಡೆ, ನೇರಿಲ ಹೂ, ಶ್ರೀಗಂಧ, ನಾಗಕೇಸರಿ, ಇವಂ ಬೇರೆಬೇರೆ ಸಣ್ಣನಾಗರೆದು ಕೋಲುಜೇನುವೆರಸಿ ಕುಡಿಯಲು ಯೋನಿರಕ್ತಂ ಪರಿಹರ. ೧೦

[1] ಯಷ್ಟಿಮಧುಕ, ರಸಾಂಜನ, ಕಿರುಕುಸೋಲೆ ಬೇರು, ಇವಂ . . [1]. ೧೧

ಉತ್ತರಣೆ ಬೇರು, ಅಡಕೆ ಚಿಟ್ಟನ ಬೇರು, ಇವಂ ಅರೆದು ಯೋನಿಯೊಳಿಡಲು ರಕ್ತಂ ಮಾಣ್ಗುಂ. ೧೨

ಕಾಡ ಹೆಸರನು ಎಣ್ಣೆಯೊಳಟ್ಟು ಅರೆದು ಆದರ ಎಲೆಯೊಳು ಮುದುಡಿ ಯೋನಿಯೊಳಿಕ್ಕೆ ಸುರಿವ ರಕ್ತಂ ನಿಲ್ವಗುಂ. ೧೩

ಉತ್ತರಣೆ ಬೇರು, ಹಿಪ್ಪಲಿ, ಶರ್ಕರೆ, ಇವಂ ಸಮನಾಗಿ ಅಕ್ಕಿಗಚ್ಚಿನಲ್ಲರೆದು ಅದರಲ್ಲಿ ಕದಡಿ ಸೇವಿಸಲು ಯೋನಿರಕ್ತಂ ಮಾಣ್ಗುಂ. ೧೪

ನೆಲ್ಲಿಯ ತಿರುಳಂ ಅಕ್ಕಿಗಚ್ಚಿನಲ್ಲರೆದು ಕುಡಿಯೆ ರಕ್ತಂ ನಿಲ್ವಗುಂ. ೧೫

ಬಾಳೆಯ ಹೂ, ಗರಿಕೆರಸ, ಹಾಲು ಸಹ ಅರೆದು, ಸಕ್ಕರೆ ವೆರಸಿ ಕುಡಿಯೆ ಹೆನ್ನೆತ್ತರು ಪರಿಹರ. ೧೬

ನೇರಿಲ ಕುಡಿಯಂ ಅಕ್ಕಿಗಚ್ಚಿನಿಂದರೆದು ಜೇನುತುಪ್ಪವೆರಸಿ ಕುಡಿಯೆ ಹೆನ್ನೆತ್ತರು ಗುಣಮಕ್ಕುಂ. ೧೭

ಬೆಳ್ಳಡಕಿಲ ಬೇರಂ, ಅಕ್ಕಿಯನು ಕೂಡ ಕುಟ್ಟಿ ಹಿಟ್ಟುತೊಳಸಿ ಸಪ್ಪೆತುಪ್ಪದಿಂ ದುಣಲು ಹೆನ್ನೆತ್ತರು ಪರಿಹರ. ೧೮

ಯೋನಿಯ ನೋವುಕಾಣಿಸಲು ಉತ್ತರಣೆ (ಸಹಮೂಲ) ಯನರೆದು ಬಿಚ್ಚಗೆಮಾಡಿ ಕಟ್ಟಲು ನೋವು ಪರಿಹರ. . . . ೧೯

---

[1] (ಗ) ಪ್ರತಿಯಲ್ಲಿ ಬಿಟ್ಟುಹೋಗಿದೆ.

ಕಿರುಕುಸೋಲೆ ಬೇರಂ ಅಕ್ಕಿಗಚ್ಚಿನಿಂದರೆದು ಕುಡಿಯೆ ಹೆನ್ನೆತ್ತರು ಗುಣಮಹುದು. ೨೦

ಬಿಳಿ ತುರುವೆಯಂ ಕರಿಬತ್ತದ ಅಕ್ಕಿಯಲ್ಲಿ ಕೂಡಕುಟ್ಟಿ ಹಿಟ್ಟು ತೊಳಸಿ ಸಪ್ಪೆದುಪ್ಪದಲ್ಲಿ ಕೂಡಿ ಮೆಲಲು ಹೆನ್ನೆತ್ತರು ಮಾಣುವುದು. ೨೧

ಹಸುವಿನ ಹಾಲಂ ಚೆನ್ನಾಗಿ ಕಾಸಿ ರಾಯಪುಡಿ ಶರ್ಕರೆ ಜೇನುತುಪ್ಪವೆರಸಿ ಸೇವಿಸೆ ಹೆನ್ನೆತ್ತರು ನಿಲುವುದು. ೨೨

ಗುಳ್ಳುಗಾವಿಯನು ನೇರಿಲ ಕೊನರನು ಅಕ್ಕಿಗಚ್ಚಿನಲ್ಲಿ ಅರೆದು ಜೇನುವೆರಸಿ ಕುಡಿಯೆ ಹೆನ್ನತ್ತರು ಕೆಡುವುದು. ೨೩

ನೈದಿಲೆ ಗೆಣಸು, ಗುಳ್ಳುಗಾವಿ, ನೇರಿಲ ಕೊನರು ಇವಂ ಅಕ್ಕಿಗಚ್ಚಿನಲ್ಲರೆದು ಜೇನುತುಪ್ಪ ವೆರಸಿ ಕುಡಿಯಲು ಹೆನ್ನೆತ್ತರು ಮಾಣ್ಗುಂ. . . ೨೪

. . . . . . . . . . . . . . ಹೆನ್ನೆತ್ತರು ನಾಶನ ೨೫

ಗಣಜಿಲ ಬೇರು, ತುರುಚನ ಬೇರು, ಉತ್ತರಣೆ ಬೇರು, ಈ ಮೂರನೂ ಅರೆದು ಯೋನಿಯೊಳಿಂಬಿಡೆ ಯೋನಿದೋಷಂಗೆಟ್ಟು ಹೆನ್ನೆತ್ತರು ಪರಿಹರವಹುದು. ೨೬

ಮರಗಡೆ ಸೊಪ್ಪನು ಅಕ್ಕಿಗಚ್ಚಿನಿಂ ತೊಳೆದು ಆ ರಸವಂ ಹಿಂಡಿ ಶೋಧಿಸಿಕೊಂಡು ದೇಹಾನುಗುಣವರಿತು ತೆಗೆದುಕೊಳ್ಳುವುದು. ಮುನ್ನದಿನ ರಾತ್ರಿ ಬೆಣತಿಗೆ ಅಕ್ಕಿಯು ನೆನೆಯಿಕ್ಕಿರಿಸಿ ಬೆಳಗಾಗಿ ಆ ಅಕ್ಕಿಯೊಂದು ಹಿಡಿಯಂ ಮೆಲ್ಲಲು. ಮೂರುದಿನಕ್ಕೆ ಬಿಳಿಸೀರೆ ಕೆಡುವ ರೋಗಂ ನಿಲ್ಪುದು. ೨೭

ಪಥ್ಯ. ಹೆಸರುಕಟ್ಟು, ಅನ್ನ.

ಹತ್ತಿಸೊಪ್ಪು ಒಂದು ಹಿಡಿ, ಅವರೆ ಸೊಪ್ಪು ಒಂದುಹಿಡಿ [1] ದಾಗುಡಿ [1] ಸೊಪ್ಪು ಒಂದು ಹಿಡಿ ಇವಂ ಹಸುವಿನ ಹಾಲಲ್ಲಿ ಶರ್ಕರೆ ವೆರಸಿ ತೆಗೆದುಕೊಳ್ಳೆ ಹೆನ್ನೆತ್ತರು ಮಾಣ್ಗುಂ. ೨೮

ಕೊಳವಳಿಕ ಬೀಜ, ಅವರೆಯ ಬೀಜ, ತೇರಣದ ಬೀಜ, ಕರಿ ಜೀರಿಗೆ ಇವು ಪ್ರತ್ಯೇಕ ಒಂದು ಸೊಲಗೆಯಂ ಚೂರ್ಣಂಮಾಡಿ ನೇರಿಲ ಮರದ ತಿಗುಡ, ಆಲದ ಮರದ ತಿಗುಡು, ಅರಳಿಮರದ ತಿಗುಡು, ಆಲದ ತಿಗುಡು, ಇವಂ ಸಮಭಾಗವಾಗಿ ಹರವಿಯಲ್ಲಿ ತುಂಬಿ ನೀರಹೊಯ್ದು ಕುದಿಸಿ ಆ ರಸವ ಬಸಿದುಕೊಂಡು ಕಷಾಯಂ ಕಾಸಿ ಬೆಲ್ಲದ ಪಾಕದ ಹಾಗೆ ಬಂದದ ನೋಡಿ ಆ ಚೂರ್ಣವ ಹಾಕಿ ಇಳುಹಿಕೊಂಡು ಗಜ್ಜುಗ ಪ್ರಮಾಣ ಗುಳಿಗೆಯಂ ಮಾಡಿ ನಿತ್ಯ ಒಂದು ಗುಳಿಗೆಯ ಪ್ರಕಾರ ಮೊಸರಿನಲ್ಲಿ ನಾಲ್ವತ್ತೆಂಟುದಿನ ತೆಗೆದುಕ್ಕೊಳ್ಳಲು ಹೆನ್ನೆತ್ತರುಮಾಣ್ಗುಂ. ೨೯

[2] ಸೂಚಿಕಲ್ಲು, ಬೇವಿನ ಹಣ್ಣನು, ಎರಡಂ ಕೂಡಿ ಹಸುವಿನ ಹಾಲು ಶರ್ಕರೆ ಕೂಡಿ ತೆಗೆದುಕೊಳ್ಳಲು ಹೆನ್ನೆತ್ತರು ಪರಿಹರ. ೩೦

---

[1] ವಡಪಾರದ, (ಗ). [2] ಜಾಜಿ, (ಕ).

ಕೆಂದೆಂಗಿನ ಎಳನೀರಿನಲ್ಲಿ ಸೂಟಿಕಲ್ಲು, ಬೇವಿನ ಹಗಿನು, ಇವೆರಡನ್ನೂ ತೆಗೆದುಕೊಳ್ಳಲು ಹೆನ್ನೆತ್ತರು ಬಿಡುವುದು. ೩೧

ಬ್ರಹ್ಮಿಯನು ಆಡಿನ ಮೂತ್ರದಲ್ಲಿ ಅರೆದು ಶೋಧಿಸಿ ಸಕ್ಕರೆವೆರಸಿ ತೆಗೆದುಕೊಳ್ಳಲು ಹೆನ್ನೆತ್ತರು ಮಾಣುವುದು. ೩೨

ಎಲವದ ಹೂವಂ ಹಸುವಿನ ಹಾಲಿನಲ್ಲಿ ಅರೆದು ಕುಡಿಯೆ ಪ್ರದರಂ ಮಾಣ್ಗುಂ. ೩೩

ದಾಸಾಳದ ಬೇರನು, ಮುಳ್ಳುಕೊಗ್ಗೆ ಬೇರನು ಹಾಲಲ್ಲರೆದು ಪಾನವಂ ಮಾಡೆ ಪ್ರದರಂ ತೀರ್ಗುಂ. ೩೪

ಕಳ್ಳಂಗಡಲೆ ಬೇರನು ಅಕ್ಕಿಗಚ್ಚಿನಲ್ಲರೆದು ಕುಡಿಯೆ ಅಸೃಗ್ದರಹರಂ. ೩೫

ಎಳ್ಳೆಣ್ಣೆಯಲ್ಲಿ ಬಾಳೆಹಣ್ಣಂ ಕಿವಿಚಿ ಮೆಲ್ಲಲು ಅಸೃಗ್ದರ ಪ್ರದರ ಪರಿಹರ. ೩೬

ಉತ್ತರಣೆ ರಸವಂ ಕುಡಿಯಿಸೆ ಬಿಳಿಸೀರೆ ಎಂಬ ಪ್ರದರಂ ಕೆಡುಗುಂ. ೩೭

ಅತ್ತಿಕಾಯನು ಹಾಲಲ್ಲಿ ಅರೆದು ಕುಡಿಯೆ ಪ್ರದರಂ ಮಾಣ್ಗುಂ. ೩೮

ಕಳ್ಳಂಗಡಲೆ, ಹೊನ್ನೆಬೇರು, ಸೊಗದೆ ಬೇರು ಆಡುಸೋಗೆ, ಮುಡಿವಾಳ, ಕೊಡನಾರಿ ಗೆಡ್ಡೆ, ಎಲವದ ಚಕ್ಕೆ ಇವಂ ಬಳ್ಳ ನೀರಿನಲ್ಲಿ ಹಾಕಿ ಅಷ್ಟಾವಶೇಷವಾಗಿ ಕಾಸಿ ಸಕ್ಕರೆ, ಜೇನುತುಪ್ಪ ವೆರಸಿ ಸೇವಿಸೆ ಪ್ರದರ ಪರಿಹರ. ೩೯

ಸೂತಕ ಸ್ನಾನವನು ಮಾಡಿದ ಸ್ತ್ರೀಯರು ಹೆನ್ನೆತ್ತರೆತ್ತಿ ಕಷ್ಟ ಬೀಳುತ್ತ ಇದ್ದರೆ ಹಳೆಯ ಪಾವುಡೆಯ ಸುಟ್ಟು ಬೂದಿಯ ಮಾಡಿ ಮಜ್ಜಿಗೆಯಲ್ಲಾದರೂ ಎಣ್ಣೆಯಲ್ಲಾದರೂ ಕಸ್ತೂರಿ ತೇದ ನೀರಿನಲ್ಲಾದರೂ, ಬಿಸಿ ನೀರಿನಲ್ಲಾದರೂ ಕದಡಿ ಕುಡಿಯಕೊಡಲು ಮತ್ತೊಂದು ಸೂತಕಕ್ಕೆ ನೋವು ನಿಂತು ಸುಖವಾಗುವುದು. ೪೦

* ಹಸುವಿನ ಮಜ್ಜಿಗೆಯಲ್ಲಿ ನಾಗಕೇಸರವನರೆದು ೨ ದಿನ ಕೊಡಲು ರಕ್ತರೋಗ, ಪ್ರದರ, ಪಾಂಡುರೋಗ ಸಹ ಮಾಣ್ಗುಂ. ೪೧

ಪಾದರಿ ಬೇರಿನ ತೊಕ್ಕನ್ನು ಹಾಲಲ್ಲೆರೆದು ಕದಡಿ ೭ ದಿನ ಸೇವಿಸಲು ಪ್ರದರ, ಅಸ್ಥಿಸ್ರಾವ, ಪಾಂಡುರೋಗ, ಸೋಮರೋಗ ಸಹ ಬಿಡುಗಡೆಯಹುದು. ೪೨

ತಾಳೆಯ ಬೀಳಲ ಕುಟ್ಟಿ ತೆಗೆದ ರಸ ಅರ್ಧಸೇರನು ಬಳಹದ ಹಿಟ್ಟು ಹಾಕಿ ಮೂರುದಿನ ತೆಗೆದುಕೊಳ್ಳಲು ಹೆನ್ನೆತ್ತರು ಮಾಣ್ಗುಂ. ೪೩

ಕಾಗೆಮಾರಿಹಣ್ಣು ಮೂರನ್ನು ಒಳಗಣ ತಿರುಳ ತೆಗೆದು ಒಳ್ಳೆಯ ಕಳಿ ಅಡಕೆಯ ಹೋಳು ಮೂರನ್ನು ಹಣ್ಣು ಒಂದಕ್ಕೆತುಂಬಿ, ಈ ಪ್ರಕಾರದಲ್ಲಿ ೩ ಹಣ್ಣಿಗೂ ೯ ಹೋಳು ಅಡಕೆಯನ್ನು ತುಂಬಿದ ಬಳಿಕ ಅರುವೆಯ ಸುತ್ತಿ ಮಣ್ಣು ಮೆತ್ತಿ ಕೆಳಗೆ ಮೇಲೆ ಬೆರಣಿಯ ಹಾಕಿ ಪುಟವನಿಕ್ಕಿ ತೆಗೆದು ಆ ಮಣ್ಣನುದುರಿಸಿ ನೀರಿನಲ್ಲ

ರೆದು ಪಾವು ನೀರಿನಲ್ಲಿ ಕದಡಿ ಈ ರೀತಿಯಲ್ಲಿ ೩ ದಿನ ಕೊಡಲು ಹೆನ್ನೆತ್ತರು ಗುಣಮಕ್ಕುಂ. ೪೪

ತಾವರೆ ಗೆಡ್ಡೆ, ಶ್ರೀಗಂಧ, ಚಿಲಕೀರೆ ಬೇರು, ಯಷ್ಟಿಮಧುಕ, ಅಮರದವಳ್ಳಿ, ಶರ್ಕರೆ, ದ್ರಾಕ್ಷಿಹಣ್ಣು ಸಹ ಸಮಭಾಗ ಚೂರ್ಣಮಾಡಿ ಜೇನುತುಪ್ಪದಿಂ ಕಲಸಿ ಸೇವಿಸೆ ಅಸೃಗ್ದರ ಮಾಣ್ಗುಂ. ೪೫

ಕಿರುನೆಲ್ಲಿಯುಂ (ಸಹಮೂಲ) ಹಸುವಿನ ಮಜ್ಜಿಗೆಯಲ್ಲರೆದು ಅರ್ಧಸೇರಿನಷ್ಟನು ತೆಗೆದುಕೊಳ್ಳಲು ಪ್ರದರದಲ್ಲಿ ಉಂಟಾದ ಕಟ್ಟುನೋವು ಮಾಣ್ಗುಂ. ಇದು ಕೈಗಂಡ ಪ್ರಯೋಗ. ೪೬

ಮಾದಿಗಾವರಿಕೆ ಬೇರಿನ ತೊಕ್ಕು, ಏಲಕ್ಕಿ, ಜೀರಿಗೆ ಹೊನ್ನತೂಕವಂ ಹಸುವಿನ ಹಾಲಲ್ಲರೆದು ಅರ್ಧಸೇರಿನಲ್ಲಿ ಕದಡಿ ತೆಗೆದುಕೊಳ್ಳೆ ಹೆನ್ನೆತ್ತರುಮಾಣ್ಗುಂ. ೪೭

ಸಪ್ಪೆದುಪ್ಪ, ಅನ್ನ, ಹಸುವಿನ ಹಾಲು, ಈ ಪ್ರಕಾರ ಪಥ್ಯದಿಂದ ೩ ಸಾರಿ ಸೂತಕವಾಗಿ ಸ್ನಾನವಾದ ಕೂಡಲೆ ತೆಗೆದುಕೊಳ್ಳೆ ಸ್ತ್ರೀಯರಿಗೆ ಸೂತಕದಲ್ಲಿ ರಕ್ತ ನಿಲ್ಲುವುದು. ೪೮

ದಾಸಾಳದ ಹೂ, ಅದರ ಚಿಗುರು, ಮಹಾನೀಲಿ ಇವಂ ಸಮಭಾಗವಾಗಿ ಅಂಬಿಲದಲ್ಲರೆದು ಕೊಡಲು ಹೆನ್ನೆತ್ತರು ನಿಲ್ಗುಂ. ಅರಳಿ ಒಳನಾರಿನ ಕಷಾಯದಲ್ಲಿ ಯೋನಿಯ ತೊಳೆಯಲು ಯೋನಿರೋಗ ಮಾಣುವುದು. ೪೯

ತಾಮೆರ ಗಡ್ಡಲು, ಶ್ರೀಗಂಧ, ಜರಿವೇಳ್ಳು, ಯಷ್ಟಿಮಧುಕಂ, ತಿಪ್ಪತೀಗ, ಧೂತರ್ಕಾರ ಗಡ್ಡ, ಈ ಔಷಧಾಲುನು ಆವುಪಾಲುನ ಇಚ್ಚಿತೆ ಸ್ತ್ರೀಲ ರಕ್ತಸ್ರಾವಾಲು ಮಾನುನು. ೫೦

ಕಲುವಗಡ್ಡ ನೂರಿ, ಗರುಗಪು ತೊಕ್ಕನು ಚಕ್ಕರವೇಸಿ ತೇನೆತೊ ಇಚ್ಚಿತೆ ಗರ್ಭಿಣಿಯೋನಿರಕ್ತಂ ನಿಲುಚುನು. ೫೧

ವಾರಿಜಪಾಕು ರಸಂ, ಈ ಚಕ್ಕರಸಂ, ಇವಿನಿ ಚಕ್ಕರ ವೇಸಿ ತೀಸುಕೊಗಾನು ಯೋನಿರಕ್ತಂ ಆಕ್ಷಣಂ ನಿಲುಚುನು. ೫೨

ಅಕ್ಕ ಸೇಗ ವದುರುಪಿ ಚುಕಮಿಕೆಡು (?), ರಕ್ತಬೋಳಂ ದುಡ್ಡುತೂಕಂ, ಇವಿ ಕಷಾಯಂಚೆಟ್ಟಿ ಪುಚ್ಚುಕೊಗಾನು ರಕ್ತ ಪ್ರದರಂ ಮಾನುನು. ೫೩

ಸಮುದ್ರ ಪಾಳದ ಕಾಯನ್ನು ಚೂರ್ಣವಂ ಮಾಡಿ ಅಂಬಿಲದಲ್ಲಿ ಕಲಸಿ ಪಾವಡೆಗೆ ತೊಡೆದು ಬತ್ತಿಯಮಾಡಿ ನೆನಸಿ ಯೋನಿಯೊಳು ಧರಿಸಲು ಯೋನಿಶೂಲೆ ಮಾಣ್ಗುಂ. ೫೪

ಆವರಿಕೆಯ ಮುಗುಳು, ಆಳಿಲೆಕಾಯ ಪುಡಿ, ಈ ಎರಡನು ಹಾಲಿನಲ್ಲಿ ಒಣಗಿಸಿ ಪುಡಿಯಮಾಡಿ ಶರ್ಕರೆವೆರಸಿ ಎಣ್ಣೆಯಲ್ಲಿ ಅಟ್ಟು ಕಲಸಿ ಕುಡಿಯೆ ಹೆನ್ನೆತ್ತರು ಮಾಣ್ಗುಂ. ೫೫

ಕಾರೆ ಸೊಪ್ಪಿನ ರಸ ಪಡಿ ೧೧, ಹುಲುಗನ ಬೇರು ಗ ೧ ತೂಕ, ಜೀರಿಗೆ ಗ ೪ ತೂಕ, ಇವಂ ಚೂರ್ಣಿಸಿ ಕಾರೆರಸದಲ್ಲಿ ಹಾಕಿ ತೆಗೆದುಕೊಳ್ಳಲು ಹೆನ್ನೆತ್ತರು ಮಾಣ್ಗುಂ. ೫೬

ಕಾಡುಹತ್ತಿ ಸೊಪ್ಪು ೩ ಹಿಡಿಯಂ ಸಣ್ಣನಾಗರೆದು ಅಕ್ಕಿ ಗಚ್ಚಿನಲ್ಲಿ ಕದಡಿ ೩ ದಿನ ಕೊಳ್ಳಲು ಹೆನ್ನೆತ್ತರು ಪರಿಹರ. ೫೭

ಹೆಳೆಹತ್ತಿಯ ಕಡ್ಡಿಯ ಬೇರನು ಹಸುವಿನ ಹಾಲಲ್ಲರೆದು ಕದಡಿ ಕುಡಿಯೆ ಯೋನಿಯ ಹೆನ್ನೆತ್ತರು ಕೆಡುಗುಂ. ೫೮

ತೊಂಡೆಸೊಪ್ಪನು ಹಸುವಿನ ಬೆಣ್ಣೆಯಲ್ಲಿ ಹಾಕಿ ಕಾಸಿ ಆ ತುಪ್ಪವಂ ಉದಯದಲ್ಲಿ ಸೇವಿಸೆ ಹೆನ್ನೆತ್ತರು ಪರಿಹರವಹುದು. ೫೯

ಆರಟಿ ಗಡ್ಡ, ಈತನಿಂಚ, ಶುಂಠಿ, ಇವಿ ಕಷಾಯಂ ಗಾಚಿ ಇಚ್ಚಿತೆ ಯೋನಿ ರಕ್ತಂ ನಿಲುಚುನು. ೬೦

ಉಪ್ಪಿಪಂಷ್ಲ ರಸಮುನಕು ಚಾರೆಡು ಪಂಚದಾರ ವೇಸಿ ತೀಸುಕೊನನು ರಕ್ತಪ್ರದರಂ ನಿಲುಚುನು. ೬೧

* * * * *

ಏಣಶೃಂಗಂ, ಪೊಗವೇಳ್ಳು ಕೂಡ ಕಾಚಿ ಆ ಕ್ಷಾರಂ ಗ ೪ ತೂಕಂ ಆವುನೇಯಿತೊ ಈಯಗಾನು ಪೃಷ್ಠಮಂದುಲ ಶೂಲ ಮಾನುನು. ೬೨

ಮುನಗಾಕು ರಸಂ, ಸೊರೆಡು ನೂನೆಕು ೩ ಬೊಟ್ಟುವಿಡಿಚಿ ಶಾಗನು ಯೋನಿ ರಕ್ತ ನಿಲುಚುನು. ೬೮

ನಲ್ಲ ಮೇಕಪಾಲು, ಗೋಧೂಮ ಪಿಂಡಿ ೩ ದುಡ್ಡು ತೂಕಂ ವೇಸಿ ಪೈದಿ ಪತ್ತಿ ಆಕುರಸಂ ಸೇರು ೧॥ ಆವುಪಾಲುಲೊ ಕಲಿಪಿ ಈಯಗಾನು ಕುಸುಮಂ ಪರಿಹರಮೌನು. ೬೯

ನೇರೆಡು ಚಕ್ಕನಾಗರು, ರೇನುಚಕ್ಕನಾರು, ವೆಲಗಚಕ್ಕನಾರು, ಆರೆಚಕ್ಕನಾರು, ನುನ್ನಗಾನೂರಿ ವೆನ್ನೆಪೆರುಗಂ ಗಲಪಿ ತ್ರಾಗನು ಯೋನಿರಕ್ತಂ, ಯೋನಿಶೂಲ ಮಾನುನು. ೭೦

ಅರಿದಳಂ ಶುದ್ಧಂಜೇಸಿ ಕನ್ಯಾಕುಮಾರಿ ಗಡ್ಡಲೊ ಬೆಟ್ಟಿ ಪುಟಂವೇಸಿ ರೂಕ ಎತ್ತು ಆವು ನೇತಿತೊ ತಿನನು ಕುಸುಮಂ ನಿಲುಚುನು, ೭೧

ಜಾಜಿಕಾಯಿ, ಲವಂಗಂ, ಮುಲುಗೊಪ್ಪಿಲವಿತ್ತುಲು, ಚಾಚು, ಇಲಕುಡೆಗ ಪಟ್ಟ ಸ್ವರಸಮುನ ನೂರಿ ಪೆರುಗುತೊ ಇಚ್ಚೇದಿ ಪ್ರದರರೋಗಂ ಗುಣಮೌನು ೭೨

ಮಂಚಿದಿ ಕಡಿಗಿನ ರಾಗಲುಸೇರು ೧ ನಾನವೇಸಿ ರುಬ್ಬಿ ಆರಸಂ ವೇಸುಕೊನಿ ಅಂದುಲೊ ಶರ್ಕರ ಜಿಲಕರ ನೂರಿ ಕಲಪುಕೊನಿ ತ್ರಾಗನು ಪ್ರದರರೋಗಂ ಮಾನುನು ೭೩

---

* ೬೧ರಿಂದ ೬೭ರ ವರಿವಿಗೆ ಇಲ್ಲ (ಗ)

ವಾದಿ ಆಕುರಸಂ ಆವು ಮಜ್ಜಿಗತೊ ತೊಕ್ಕಿ ಆರಸಂ ಪಿಂಡುಕೊನಿ ಪಾವುಲೆಕ್ಕನು ಮೂಡು ಪೂಟಲು ಪುಚ್ಚುಕೋಗಾನು ಪ್ರದರಂ ನಿಲುಚುನು. ೭೪

ಪಲ್ಲೇರು (ಸಮೂಲಂ) ಚೂರ್ಣಂಜೇಸಿ ತೇನೆತೊ ಪ್ರಸಾಪಡಗಾನು ಸ್ತ್ರೀಯುಲ ಯೋನಿರಕ್ತ ನಿಲುಚುನು. ೭೫

ಮಾಮಿಡಿ ವೇಳ್ಳನು ಪಟ್ಟತೊಕ್ಕಿ ಪಿಸಿಕಿ ತ್ರಾಗನಿಚ್ಚೇದಿ ಕುಸುಮಂ ಮಾನುನು. ೭೬

ಜರಿಪೊಳ್ಳ, ನೆರೆವೇಳ್ಳು, ಪಿಡಿಕೆಡುಸಹ ಸಳ್ಳ ದಂಚಿ ಪಿಂಡುಕೊನಿ ತ್ರಾಗನು ಕುಸುಮಂ ನೆತ್ತುರು ನಿಲುಚುನು. ೭೭

ವೆನ್ನ, ಬಳಪಂ ಗ ೧ ತೂಕಂ, ಜಾಯಕಾಯಿ, ಚಾಚು ಗ ೧ ತೂಕಂ, ಲವಂಗಂ, ಜಾಪತ್ರಿ, ನೀರಬೊಬ್ಬ ವಿತ್ತಲು, ತುಂಗಪು ವೇರು ಚಕ್ಕರಸಮುನ ಇಚ್ಚೇದಿ ಕುಸುಮಂ ನಿಲುಚುನು. ೭೮

ಗಜಪಿಪ್ಪಳ್ಳು, ಪನ್ನೀರುಗಡ್ಡ, ಸೈಂಧವಲವಣಂ, ಏಲಕ್ಕುಲು ಇವಿ ಸಮಂ ಗೂರ್ಚಿ ಆವುಪಾಲುತೊ ತ್ರಾಗನು ಸ್ತ್ರೀರಕ್ತ ಶೂಲಲು ಮಾನುನು. ೭೯

ಚಿಕ್ಕಡಾಕುಪಸುರು, ಚಾರೆಡುರೋನ ಅಭ್ರಕಭಸ್ಮ ೬೨ ತೂಕಂ, ಗೋಧೂಮಪಿಂಡಿ, ಗ ೧ ತೂಕ ನೈಕೊಣಿದಡುಪೊಗಿ (?) ಮುನ್ನಾಳು ಸೇವಿಂಚುನು ಯೋನಿ ರಕ್ತಂ ನಿಲುಚುನು. ೮೦

ನೂನೆ ೧ ಸೇರು, ನಿಮ್ಮಪುಲುಸು ೧ ಸೇರು, ಸಹ ಕಲಪಿ ತ್ರಾಗಿತೆ ಯೋನಿರಕ್ತಂ ನಿಲುಚುನು. ೮೧

ಜಾಕಾಯಿ, ಜಾಪತ್ರ, ಲವಂಗಂ, ಮುಲುಗೊಬ್ಬವಿತ್ತುಲು, ಕಾವಿರಾಯಿ, ಓರುಗಬಂಕ, ಎಲಮಂದು, ಇಂತಾ ಚೂರ್ಣಂ ಜೇಸಿ ತಂಗೆಡುಚಕ್ಕ, ಪಚ್ಚಿದೈನ ಎನುಮುಪೆರುಗುತೊ ನೂರಿ ಪ್ರಮಾಣಂ ದೇಹಸ್ಥಿತಿ ತೆಲಿಸಿ ಆ ಚೂರ್ಣಂ ಈ ಪಿಂಡಿನ ರಸಮುಲೊ ರಂಗಲಿಂಚಿ ಉಪರಿಕಿ ಸೇವಿಂಚೇದಿ. ಪೆರುಗು ಅನ್ನಂ ಪಥ್ಯಂ, ಕಂದುಲ ಕಟ್ಟು, ಈ ಯೋಗಮುನನುಂಡಿ ರಕ್ತಕಂಡ ಕತ್ತರಿಂಚಿ ಖಂಡಲ್ಲೈನಪಿ ಯುಂಡುನ ಗಿಲಗಿ(?) ಪ್ರದರ ರೋಗಾಲು ಗುಣಮಿಚ್ಚುನು. ೮೨

ಲಿಂಗದೊಂಡಾಕು ಕೂರಗಾವಂಡಿ ಚಪ್ಪಿಡಿತೊ ಮೂಡುಬಟ್ಟು ಪ್ರಸಾಪಡುನು ಯೋನಿರಕ್ತಂ ಮಾನುನು. ೮೩

ಚಲ್ಲಗಡ್ಡಲುನು ರುಬ್ಬಿ ದಡಿಯ ರಸಮುಲೊ ಬಿಯ್ಯಂವೇಸಿ ಪಾಯಸಂಗಾವಂಡಿ ಶರ್ಕರವೇಸಿ ಪ್ರಸಾಪಡುನು ಯೋನಿರಕ್ತಂ ಗುಣಮೌನು. ೮೪

ಆಡಿನ ಹಾಲ ಕರೆದು ನೊರೆಯಿಂಗದ ಮೊದಲೆ ನಿಂಬೆಹುಳಿಯಂ ಹಿಂಡಿ ಮೂರು ದಿನ ತೆಗೆದುಕೊಳ್ಳಲು ಹೆನ್ನೆತ್ತುರು ಮಾಣ್ಗುಂ. ೮೫

ಬಿಳಿಯ ಸಜ್ಜರಸ ೮ ತೂಕ, ಮಣಸಿಲೆ ಗ ೧ ತೂಕ, ಇವಂ ಚೂರ್ಣಂ

ಮಾಡಿ ವಸ್ತ್ರಗಾಳಿತಂಗೈದು ಈ ಚೂರ್ಣ ೨ ಭಾಗ ಶರ್ಕರೆ ಸಹ ನಿಂದೆಹುಳಿಯಲ್ಲಿ ೩ ದಿನ, ಹಸುವಿನ ತುಪ್ಪದಲ್ಲಿ ೩ ದಿನ ಈ ಪ್ರಕಾರ ೧೨ ದಿನ ತಗೆದುಕೊಳ್ಳಲು ಹೆನ್ನೆತ್ತರು ನಿಲ್ಗುಂ. ೮೬.

ದೇವದಾರಿ ಬೇರಂ ಹಸುವಿನ ಹಾಲಲ್ಲಿ ತೆಗೆದುಕೊಳ್ಳಲು ಯೋನಿಶೂಲೆ ಮಾಣ್ಗುಂ. ೮೭

ಕೌಪೀನದರುವೆಯ ಸುಟ್ಟು ಕರಕುಮಾಡಿ ಹಾಲು ಶರ್ಕರೆಯಿಂ ಕುಡಿಯೆ ಹೆನ್ನೆತ್ತರು ಶಮನವಹುದು. ೮೮

ಕಾಪಲು ಪಟ್ಟಿದಿ ಪೆಟ್ಟಿ, ಆಕೌಡುನೀಳ್ಳು, ಶೌಚಂ ಚೇಯಿಂಚೇದಿ (?) ೮೯

ಕರುವೇಪಾಕು ರಸಂ, ಮಿರಿಯಪು ಚೂರ್ಣಂ, ಪಸುಪುಚೂರ್ಣಂ, ಇವಿ ಪ್ರತ್ಯೇಕಂ ೩ ತೂಕ ನೂನೆ ೨ ಸೇರು ಕಲಪಿ ಐದುಪೂಟ ತೀಸುಕೊನನು ಪ್ರದರಂ ನಿಲುಚುನು. ಆವುಪಾಲು, ತೀಯಕೂರ, ಕಂದಿವೇಳ್ಳು, ಉಪ್ಪು, ಪುಲುಸು ವರ್ಜ್ಯಂ. ೯೦

ಜಾತಿಜಟ್ಟು ಕಷಾಯಂ ಬೆಟ್ಟಿ ಲವಂಗಾಲು, ಜಾಜಿಕಾಯ ನೂರಿ ಕಲಪಿ ೩ ದಿನಾಲು ತೀಸುಕೊನನು ಪ್ರದರಂ ಮಾನುನು. ೯೧

ಪೈದಿಪತ್ತಿ ಆಕು, ನಲ್ಲರಿಬೀಯಂ, ಕೂಡಪಿಂಡಿಪೆಟ್ಟಿ ಪರಿಪಾಡುಕೂಡ ಮುಲುಗು ಜೇಸಿ ಪಿಟ್ಟುಕಾವುರಿಕಿಂಚಿ ಮೇಕ ನೇಶಿತೊ ೫ ನಾಳು ಪ್ರಸಾಪಡನು ರಕ್ತ ಪ್ರದರಂ ಮಾನುನು. ೯೨

## ಕಷಾಯಗಳು.

ತೆಂಗಿನ ಹೊಂಬಾಳೆಯಿಂ ಕಷಾಯವ ಕಾಸಿ ಕುಡಿಯೆ ಹೆನ್ನೆತ್ತರು ಮಾಣುಂಗ್ಗಿ,

ದಾಸವಾಳದ ಸೊಪ್ಪಿನ ಕಷಾಯುವಿಕ್ಕಿಕೊಡಲು ಹೆನ್ನೆತ್ತರು ಗುಣವಹುದು. ೨

ಕಳ್ಳಂಗಡಲೆಯ ಬೇರನಿಡಿದು ನೀರಿನಲ್ಲಿ ನೆನೆಯಿಕ್ಕಿ ಕಷಾಯವ ಮಾಡಿ ಕೊಡಲು ಹೆನ್ನೆತ್ತರು ಪರಿಹಾರವಹುದು. ೩

ಕಳ್ಳಂಗಡಲೆಯ ಬೇರು, ಅಮರದವಳ್ಳಿ, ನೆಲ್ಲಿಚಟ್ಟು, ನೇರಿಲ ತೊಕ್ಕು. ಕಗ್ಗಲಿ ಒಳನಾರು, ಇವಂ ಕಷಾಯಂ ಕಾಸಿ ಕುಡಿಯೆ ಪ್ರದರ ರೋಗ, ರಕ್ತಪಿತ್ತ, ಅಸ್ಥಿಸ್ರಾವ ಸಹ ಗುಣಮಕ್ಕುಂ * ೪

ಕಾಚು, ಕಳ್ಳಂಗಡಲೆ, ಸೊಗದೆ, ಅಡುಸೋಗೆ, ಮುಡಿವಾಳ, ಕೊನ್ನಾರೆ, ಎಲವದ ಒಳನಾರು, ನೆಲ್ಲಿಚಟ್ಟು ಇವಂ ಕಷಾಯುವಿಕ್ಕಿ ಶರ್ಕರೆ ಗೂಡಿ ಸೇವಿಸೆ ಅಸೃಗ್ದರಹರ ೫

ಬಸರಿ, ನೇರಿಲು, ಆಲ, ಅರಳಿ, ಅತ್ತಿ, ಇವಂ ಕಷಾಯವ ಮಾಡಿ ಜೇನು ತುಪ್ಪವೆರಸಿ ಕುಡಿಯೆ ಅಸೃಗ್ದರ ಪರಿಹರ. ೬

* * * (ಕ) ಪ್ರತಿಯಲ್ಲಿ ಲೋಪವಾಗಿದೆ.

ನೇರಿಲ ತೊಕ್ಕ, ಅತ್ತಿಯ ತೊಕ್ಕು, ಕಾಚು, ನಾಗಕೇಸರಿ, ತಂಗಿನ ಕುಸುಮ, ಕಾಡಬಾಳೆ ಗೆಡ್ಡೆ ಇವಂ ಇಡಿದು ನೀರಿನಲ್ಲಿ ನೆನೆಯಿಕ್ಕಿ ರಾತ್ರಿ ಇರಿಸಿ ಕಷಾಯ ಕಾಸಿ ಉದಯದಲ್ಲಿ ಜೇನುತುಪ್ಪವೆರಸಿ ಸೇವಿಸೆ ಅಕಾಲದಲ್ಲಿ ಸುರಿವ ರಕ್ತ ಪ್ರದರಂ ಮಾಣ್ಗುಂ. ೭

ಆಳಿರ ಕಾಯಿ, ನೆಲ್ಲಿಕಾಯಿ, ಇವಂ ಕಷಾಯವಿಕ್ಕಿ ಈ ಕಷಾಯದಿಂ ಯೋನಿಯ ತೊಳೆಯೆ ಯೋನಿಶೂಲೆ ಬಿಡುವುದು. ೮

ಅರಳಿ ಮರದ ಒಳನಾರಿನ ಕಷಾಯದಿಂ ತೊಳೆಯಲು ಯೋನಿಶೂಲೆ ಬಿಡುವುದು. ೯

ಒಂದ ಮತ್ತು ಧಾತಕೀಕುಸುಮದ ಕಷಾಯದಿಂದಾದರೂ ತೊಳೆಯೆ ಯೋನಿ ಶೂಲೆ ನಿಲ್ಗುಂ. ೧೦

ನೇರೆಡು ಚಕ್ಕ, ಮೋಡಿಚಕ್ಕ, ಚಂದ್ರಚಕ್ಕ, ಟೆಂಕಾಯ ಪೂವುಲು, ಇವಿ ಸಮಾಂಶಂ ಕಷಾಯಂ ಕಾಚಿ ಲಕ್ಕ ಗ ೧ ತೂನು ಕಲಪಿ ಈಯನು ಅನೇಕ ಕಾಲಪುನುಂಡಿನ ರಕ್ತಸ್ರಾವಮು ಮಾನುನು. ೧೧

ಸುಗಂಧಿ ಪಾಲು, ವೇಪನಾರು, ಮದ್ದಿಚಕ್ಕ, ಶ್ರೀಗಂಧಂ, ಅಗುಳಿ ಶುಂಠಿ, ಮಂಡ ಪಸುಪು, ಉಸಿರಿಕ ಪಪ್ಪು, ತಿಪ್ಪತೀಗ, ಲೋಧ್ರಂ, ಆರೆಪೂಲು, ಇವಿ ಸಮಾಂಶಂಗಾ ಕೂರ್ಚಿ ಅಷ್ಟಾವಶೇಷಂಗಾ ಗಾಚಿ ಈಯುನು ಸ್ತ್ರೀಯುಲ ವಿಂಶತಿ ಮೇಹಾಲು ಮಾನುನು. ೧೨

ಏಲಕ್ಕುಲು, ಪಿಳಂಗಾಲು, ದೇವದಾರು, ಯಷ್ಟಿಮಧುಕಂ, ತುಂಮಬಂಕ, ತ್ರಿಫಲಾಲು, ಮಂಡಪಸುಪು, ಮಾನಿಪಸುಪು, ಇವಿ ಪ್ರತ್ಯೇಕಂ ಗ ೨ ತೂನು, ಇನ್ನಿಟಿ ಸಮಂ ತಂಗೆಡಿ ವಿತ್ತುಲ ಚೂರ್ಣಂ ಕಲಪಿ ಗ ೪ ತೂನು ಆವು ಮಜ್ಜಿಗತೊ ಈಯುನು ಸ್ತ್ರೀಲ ಪ್ರಮೇಹಾಲು, ಬಹು ಮೂತ್ರಾಲು ಸಹ ಮಾನುನು. ೧೩

ತ್ರಿಫಲಾಲು, ತುಂಗಮುಸ್ತುಲು, ವಿದುರಾಕು, ಅಗುಳು ಶುಂಠಿ, ಕಟುಕರೋಹಿಣಿ, ಇವಿನಿ ಸಮಂ ಕಷಾಯಂ ಚೆಟ್ಟಿ ತೇನೆತೊ ದೋಸಿ ಈಯುನು ಅಡುವಾರಿ ಪ್ರದರಾಲು ಮಾನುನು. ೧೪

ಆವರಿಕೆ ಕುಸುಮದಕ್ಕಿ ಗ ೨ ತೂಕ, ಜೀರಿಗೆ ಗ ೧ ತೂಕ, ಬೇವಿನ ಹಗಿನು ಗ ೧ ತೂಕ, ಬೇಲದ ಹಗಿನು ಗ ೧ ತೂಕ, ನಾಲ್ಕನು ಗಂಟುಕಟ್ಟಿ ಎರಡು ಪಡಿ ಹಸುವಿನ ಮಜ್ಜಿಗೆಯಲ್ಲಿ ಮಾವಿನ ಚಕ್ಕೆ, ನೇರಿಲ ಚಕ್ಕೆ, ಅತ್ತಿಚಕ್ಕೆ, ಸಹ ಬಗೆ ೧ಕ್ಕೆ ಎರಡು ಹಿಡಿ ಮೇರೆಯಲ್ಲಿ ಸಣ್ಣನಾಗಿ ಜಜ್ಜುಕುಟ್ಟಿ ಹಾಕಿ, ಈ ಗೆಂಟು ಕಟ್ಟಿದ ಔಷಧಿಯನರೆದು ಹಸುವಿನ ಬೆಣ್ಣೆ ಸಕ್ಕರೆಯಲ್ಲಿ ಕಲಸಿ ಅಡಕೆತೋರಮಂ ಕೊಳ್ಳಲು ಪ್ರದರ ರೋಗಂ ಮಾಣ್ಗುಂ. ೧೫

ಗರಿಕ ವೇಳ್ಳು ಪಿಡಿಕೆಡು, ವಾವಿಲಾಕು ಪಿಡಿಕೆಡು, ಮುನುಗ ವೇಳ್ಳು ಪಿಡಿ

ಕೆಡು, ೨ ಪಡಿನೀಳ್ಕುತೆೞ ಕಷಾಯಂ ಬೆಟ್ಟ ಚಾರೆಡುಗಾ ಗಾಚಿ, ಜಾಜಿಕಾಯು, ಲವಂಗಾಲು ವಗ ಒಕ್ಕಂಟಿಕಿ ೧ ರೂ ಕೆತ್ತು ಪ್ರಕಾರಂ ಕಲಪಿ ತ್ರಾಗನು ಪ್ರದರಂ ನಿಲುಚುನು. ೧೬.

## ಘೃತಗಳು.

ಧಾತ್ರ್ಯಾದಿ ಘೃತ.—ನೆಲ್ಲಿಚಟ್ಟು, ನೆಲಗುಂಬಳದ ಗಡ್ಡೆ, ಆಷಾಢಿ, ಕಬ್ಬಿನ ಹಾಲು, ಬೂದಿಗುಂಬಳದ ಕಾಯುರಸ,—ಈ ಬಗೆ ಸ್ವರಸಗಳಲ್ಲಿ ಒಂದು ಬಳ್ಳ ಹಾಲನು, ಒಂದುಬಳ್ಳ ತುಪ್ಪ, ಒಂದುಬಳ್ಳ ಕಬ್ಬಿನ ಹಾಲು ಸಹ ಹೊಯ್ದು ಅದರಲ್ಲಿ ದ್ರಾಕ್ಷಿಹಣ್ಣು, ಯಷ್ಟಿಮಧುಕ. ಶ್ರೀಗಂಧಗಳಂ ಚೂರ್ಣಿಸಿ ಕದಡಿ ಪ್ರಾತಃಕಾಲ ದಲ್ಲಿ ಇಳುಹಿ ಸಕ್ಕರೆವೆರಸಿ ಸೇವಿಸಲು ಶೀಘ್ರದಿಂ ಪ್ರದರಹರ.

ಪಿತ್ತದಿಂದುಂಟಾದ ಪಾಂಡುರೋಗ, ಪಿತ್ತಗುಲ್ಮ, ಬಿಳಿಸೀರೆ ವ್ಯಾಧಿ, ವಾತದಿಂದಾದ ರಕ್ತ, ಪಿತ್ತ ವ್ಯಾಧಿಗಳೆಲ್ಲವಂ ಪರಿಹರಿಸುವುದು. ಈ ಘೃತವಂ ಬಂಜೆ ಪಾನವಂ ಮಾಡೆ ಪುತ್ರವತಿಯಹಳು. ೧

[1] ವಾಸಾದಿ ಘೃತ.—ಆಡುಸೋಗೆ, ದಾಸಾಳ, ಅಮರದವಳ್ಳಿ, ಈ ಮೂ ರನು ಕಷಾಯವಿಕ್ಕಿ ತುಪ್ಪವ ಹೊಯ್ದು ಯಷ್ಟಿಮಧುಕ, ಸೊಗದೆ ಬೇರು ಸಹ ಚೂರ್ಣವಂ ಮಾಡಿ ಹಾಕಿ ತುಪ್ಪ ಉಳಿಯುವಂತೆ ಕಾಸಿ ಇಳುಹಿಕೊಂಡು ಸೇವಿ ಸಲು ರಕ್ತಸ್ರಾವ ಪರಿಹರ. [1] ೨

## ಚೂರ್ಣಗಳು.

ಸರಸಿಜ ಮಕರಂದ ಚೂರ್ಣ.—ತಾವರೆಪು ಪೊಡಿ, ಶ್ರೀಗಂಧಂ, ಚಿರಿ ವೇಳ್ಳು, ಯಷ್ಟಿಮಧುಕಂ, ತಿಪ್ಪಸತ್ತು, ಚಲ್ಲಗಡ್ಡಲು, ಜಾಜಿಕಾಯಲು, ಇವಿ ಸಮಾಂಶಂ ಚೂರ್ಣಿಂಚಿ ತೇನೆತೂ ಸೇವಿಂಪಗಾನು ರಕ್ತ ಪ್ರದರಂ ನಿಲುಚುನು. ೧

ಅಂತು ಅಸೃಗ್ದರ ಬಗೆ ೧ಕ್ಕೆ ಸಂಹಿತೆ ಕಲ್ಕಸಹ ೬೨, ಕಷಾಯ ೧೬, ಘೃತ ೨, ಚೂರ್ಣ ೧, ಅಂತು ಪ್ರಯೋಗ ೧೧೧ಕ್ಕಂ ಸಮಾಪ್ತ.

## ಅಸ್ಥಿಸ್ರಾವ.

ಅಸ್ಥಿಸ್ರಾವ ಲಕ್ಷಣವೆಂತೆನೆ :—ಬಿಳುಪಾಗಿಯಾದರೂ ಕೆಂಪಾಗಿಯಾದರೂ ಕೆಂಪು ಬಿಳಿದು ಬೆರೆದಾದರೂ ನಿರ್ಮಲವಾಗಿ ದುರ್ಗಂಧವಾಗಿ ಕ್ಷಯರೋಗವನೂ ನೋವುಗಳನೂ ಉಂಟುಮಾಡಿ ಯೋನಿಯು ಸ್ರವಿಸುತ್ತ ಅಸ್ಥಿಮಜ್ಜೆಗಳ ಕರಗಿ ಸುತ್ತ ಇಹುದೆ ಅಸ್ಥಿಸ್ರಾವವೆಂಡು ಆತ್ರೇಯರಿಂ ಪೇಳಲ್ಪಟ್ಟಿತು. ಅಸ್ಥಿಸ್ರಾವ ಚಿಕಿತ್ಸೆ ;—

1 (ಗ) ಪ್ರತಿಯಲ್ಲಿ ಬಿಟ್ಟುಹೋಗಿದೆ.

## ಸಂಹಿತೆಗಳು.

ಕರಿಯ ಹತ್ತಿಯ ಸೊಪ್ಪು ಒಂದು ಹಿಡಿಯನ್ನು ಒಂದು ಒಳಶಾರೆ ಜೋಳ ಸಹ ಚನ್ನಾಗಿ ಕುಟ್ಟಿ ಆಡಿನ ಹಾಲನಲ್ಲಿ ಕಲಸಿ ಹಿಟ್ಟು ತೊಳಸಿ ಆಡಿನ ತುಪ್ಪದಿಂದ ಮೆಲ್ಲಲು ಅಸ್ಥಿಸ್ರಾವಂ ಮಾಣ್ಗುಂ. ೧

ಕರಿಯ ಹತ್ತಿಯ ಸೊಪ್ಪನು ಹಸುವಿನ ಹಾಲನಲ್ಲಿ ಅರೆದು ಕುಡಿಯೆ ಬಿಳಿ ಸೀರೆ ಮಾಣ್ಗುಂ. ೨

ನೆಲದುರುವೆ ರಸ, ಸಕ್ಕರೆ, ಜೀರಿಗೆ, ಏಲಕ್ಕಿ ಇವಂ ಸೇರು ನೀರಿನಲ್ಲಿ ಕಲಸಿ ಬಗೆ ೧ಕ್ಕೆ ಗ ೧ ತೂಕದಲ್ಲಿ ತೆಗೆದುಕೊಳ್ಳಲು ಬಿಳಿಸೀರೆ ರೋಗಂ ಮಾಣ್ಗುಂ. ೩

ಚಂಚಗದ ಸೊಪ್ಪನು ಎಳವದನಾಗಿ ಹುರಿದು ಒಣಗಿಸಿ ಇಡಿದು ವಸ್ತ್ರಗಾಳಿತವಂ ಮಾಡಿ ಇರಿಸಿಕೊಂಡು ಕಿರುಕುಸಾಲೆ (ಸಮೂಲ), ನೆಗ್ಗಿಲು (ಸಮೂಲ), ಆಲದ ಬಿಳಲ ಚಿಗುರು, ಹೊನ್ನಗೊನೆ ಬೇರು ಇವಂ ಹಾಕಿ ನೀರಂ ಬಿಟ್ಟು ತುಳಿದು ರಸವ ತೆಗೆದುಕೊಂಡು ಆ ರಸದ ಸಮಾನ ಹಸುವಿನ ಹಾಲಂ ಬೆರಸಿ ಆ ಚಂಚುಗದ ಚೂರ್ಣವಂ ಹಾಕಿ ನಾಲ್ಕು ಬೆರಳಲ್ಲಿ ಬಂದಷ್ಟು ಸಕ್ಕರೆಯನು ಏಳು ಏಲಕ್ಕಿ ಸಹ ಹಾಕಿ ತೆಗೆದುಕೊಳ್ಳಲು ಬಿಳಿದು, ಕೆಂಪು, ಹಳದಿ ವರ್ಣವಾಗಿ ಕೆಡುವ ಸೀರೆ ವ್ಯಾಧಿ ಮಾಣ್ಗುಂ. ೪

ಮರಗಡೆ ಸೊಪ್ಪನು ಅಕ್ಕಿ ಗಚ್ಚಿನಿಂದ ತುಳಿದು ಆ ರಸವ ಹಿಂಡಿ ಶೋಧಿಸಿಕೊಂಡು ದೇಹಾನುಗುಣವನ್ನರಿತು ತೆಗೆದುಕೊಂಡು ಮುನ್ನದಿನ ರಾತ್ರಿಯೋಟಣತಿಗೆ ಯಕ್ಕಿಯ ನೆನೆಸಿ ಹಾಕಿರ್ದು ಉದಯದಲ್ಲಿ ಒಂದು ಹಿಡಿ ಆ ಅಕ್ಕಿಯನ್ನು ಮೆಲುವುದು. ಹೀಗೆ ೩ ದಿನ ತೆಗೆದುಕೊಳ್ಳಲು ಬಿಳಿಸೀರೆ ವ್ಯಾಧಿಮಾಣುವುದು. ಪಥ್ಯ ಸೊಪ್ಪಿನ ಎಸರು, ಹೆಸರ ಕಟ್ಟು. ೫

ಕೆಂದೆಂಗಿನ ಹೊಂಬಾಳೆಯುಂ ತುಳಿದು ರಾತ್ರೆಯೆಲ್ಲಾ ಅಕ್ಕಿ ಗಚ್ಚಿನಲ್ಲಿ ನನೆಯಹಾಕಿರ್ದು ಉದಯದಲ್ಲಿ ತೆಗೆದು ಕಿವಿಚಿ ಸಕ್ಕರೆವೆರಸಿ ೩ ದಿನ ಕೊಳ್ಳಲು ಬಿಳಿದು ನಿಲ್ಲುವುದು. ೬

ಓರೆಲೆತಾವರೆ ಸಮೂಲವಂ ಬಿಳಿ ದಾಸಾಳದ ಸೊಪ್ಪು ಸಹ ತುಳಿದು ಹಸಿ ಹಾಲಲ್ಲಿ ಕಿವಿಚಿ ಹಿಂಡಿಕೊಂಡು ಸಕ್ಕರೆವೆರಸಿ ೩ ದಿನ ಕೊಳ್ಳಲು ಬಿಳಿಸೀರೆ ರೋಗ ಗುಣಮಕ್ಕುಂ. ೭

ಬೂರಗದ ಮರದ ಒಳಚಕ್ಕೆಯನ್ನು ಬೆಳತಿಗೆಯಕ್ಕಿಯನ್ನು ಕೂಡ ಇಡಿದುಕೊಟ್ಟಿಕೊಂಡು ಒಂದು ಚಟ್ಟಿಯುಲ್ಲಿ ನೀರ ಹೊಯ್ದು ಮೇಲೆ ಪಾವಡೆಯುಂ ಕಟ್ಟಿ ಒಲೆಯುಮೇಲೆ ಇರಿಸಿ ಈ ಪುಡಿಯ ಹಾಕಿ ಮೇಲೆ ಮುಚ್ಚಿ ಬೇಯಿಸಿ ಸಕ್ಕರೆವೆರಸಿ ಹಸುವಿನ ಸಪ್ಪೆದುಪ್ಪದಿಂ ಕಲಸಿ ಮೆದ್ದು ಹಸುವಿನ ಹಾಲನಲ್ಲಿ ಜೀರಿಗೆಯು ಪುಡಿಹಾಕಿ ತೆಗೆದುಕೊಳ್ಳುವುದು. ಪಥ್ಯ, ಹೆಸರುಕಟ್ಟು, ಸೊಪ್ಪಿನೆಸರು, ಸಿಹಿ ಮಜ್ಜಿಗೆ, ಅನ್ನ. ೮

ಪಾದರಿ ಬೇರಿನ ತೊಕ್ಕನ್ನು ಹಾಲಿನಲ್ಲಿ ಅರೆದು ಹಾಲಿನಲ್ಲಿ ಕದಡಿ ಮೂರು ದಿನ ಕೊಡಲು ಅಸ್ಥಿಸ್ರಾವ, ಪಾಂಡುರೋಗ, ಸೋಮರೋಗ ಸಹ ಪರಿಹರವಹುದು. ೯

ಗಜ್ಜುಗದ ಕೊನರಂ ಅರೆದು ಹಸುವಿನ ಹಾಲಿನಲ್ಲಿ ಹಾಕಿ ಸಕ್ಕರೆವೆರಸಿ ಕುಡಿಯೆ ಬಿಳಿಸೀರೆ ರೋಗಂ ಮಾಣ್ಗುಂ. ೧೦

## ಕಷಾಯಗಳು.

ಅರಗಿನ ಚೂರ್ಣ, ನೆಲ್ಲಿಚಟ್ಟು, ಎಲವದ ಹಗಿನು, ಅಷಾಡಿಬೇರು, ತೆಂಗಿನ ಕುಸುಮ, ನೀಲಾಂಜನ, ಇಷ್ಟನ್ನೂ ಸಮಾಂಶವಾಗಿ ಕೂಡಿ ಕಷಾಯವ ಮಾಡಿ ಸಕ್ಕರೆವೆರಸಿ ಕುಡಿಯಲು ಅಸ್ಥಿಸ್ರಾವ ಪರಿಹರ. ೧

ಕೋಲುಮುರುಕನ ಚಕ್ಕೆ, ಮುಡಿವಾಳ, ಕಳ್ಳಂಗಡಲೆ, ಭದ್ರಮುಸ್ತೆ, ನೇರಿಲ ಒಳನಾರು, ಮಾವಿನ ಬೀಜದ ತಿರುಳು, ಮುಟ್ಟಿದರೆ ಮುನಿಯು, ದಾಳಿಂಬದ ಕುಸುಮ, ಇವಂ ಇಡಿದು ನೀರಿನಲ್ಲಿ ಹಾಕಿ, ಕಷಾಯವ ಕಾಸಿ ಕುಡಿಯಲು ಅಸ್ಥಿಸ್ರಾವ, ಪ್ರದರ, ಯೋನಿಶೂಲೆ ಸಹ ಮಾಣ್ಗುಂ. ೨

## ಘೃತಗಳು.

ಚೆನ್ನೆಗ್ಗಿಲು, ಸೊಗದೆಬೇರು, ಈಶ್ವರಿ ಈ ಮೂರರ ರಸವಂ ತೆಗೆದು ಹಸುವಿನ ಬೆಣ್ಣೆಯಲ್ಲಿ ಬೆರಸಿ ತುಪ್ಪ ಉಳಿವಂತೆ ಕಾಸಿ ಅದರಲ್ಲಿ ಭೂಸಕ್ಕರೆ, ಕಲ್ಲನಾರು, ಯಷ್ಟಿಮಧುಕ ಸಹ ಚೂರ್ಣವ ಮಾಡಿಹಾಕಿ ಘೃತಪಾಕದಿಂದಟ್ಟು ಇಳುಹಿಕೊಂಡು ಜೇನತುಪ್ಪವ ಹುಯಿಸಿ ಸೇವಿಸಲು ಅಸ್ಥಿಸ್ರಾವ ಪರಿಹರ. ೧

## ಪಾಠಾದಿಘೃತ.

ಅಗುಳುಶುಂಠಿ, ಕಾವಿಕಲ್ಲು, ಎಲವದ ಹಗಿನು, ದಾಳಿಂಬದ ಹೂವು, ಹೆಮ್ಮರದ ತೊಕ್ಕು, ಬೇವಿನ ಒಳನಾರು, ಭದ್ರಮುಸ್ತೆ, ದ್ರಾಕ್ಷಿ, ಅತ್ತಿಕಾಯಿ, ಶ್ರೀಗಂಧ, ನೀಲಾಂಜನ, ಬಜೆ, ಲೋಧ್ರದ ಚಕ್ಕೆ, ಮಾವಿನ ಬೀಜದ ತಿರುಳು, ನೇರಿಲ ಬೀಜ, ನೆಲದಾಳು, ತಾವರೆಗೆಣಸು, ಬಾಳೆಗೆಡ್ಡೆ ಇವನ್ನೆಲ್ಲಾ ಹಾಲಿನಲ್ಲಿ ಅರೆದು ಒಂದು ಮಾನದಲ್ಲಿ ಒಂದು ಬಳ್ಳ ಹಸುವಿನ ತುಪ್ಪವ ಹೊಯ್ದು ದಾಸಾಳಹೂವಿನ ರಸ ೧ ಕೊಳಗದಲ್ಲಿ ಪಾಕವಮಾಡಿ ಇಳುಹಿಕೊಂಡು ಉದಯದಲ್ಲಿ ಸೇವಿಸಲು ಅಸ್ಥಿಸ್ರಾವ, ಅಸೃಗ್ದರ ಪ್ರದರ ರೋಗ ಸಹ ಮಾಣ್ಗುಂ. ೨

ರಕ್ತಪೈತ್ತ್ಯ, ಅಸೃಗ್ದರ, ಪ್ರದರ, ಅಸ್ಥಿಸ್ರಾವಂಗಳಿಗೆ ಪಥ್ಯಾಪಥ್ಯವರ್ಗಮಂ ಪೇಳ್ವುದಕ್ಕುಂ.

ಹೆಸರುಕಟ್ಟು, ಗೋಧಿ, ಮುಸುವನ ಭತ್ತದ ಅಕ್ಕಿ, ಸಣ್ಣಕ್ಕಿ, ಬೂದಿಗುಂಬಳದ ಹಣ್ಣು, ಹೊನ್ನಗೊನೆಸೊಪ್ಪು, ಚಿಲಕೀರೆಸೊಪ್ಪು, ಪಡವಲಕಾಯಿ, ದ್ರಾಕ್ಷಿ, ದಾಳಿಂಬದ ಹಣ್ಣು, ಖರ್ಜೂರದ ಹಣ್ಣು, ನೆಲ್ಲಿಕಾಯಿ, ತುಪ್ಪ, ಜೇನುತುಪ್ಪ, ಇವೆಲ್ಲ ಉಣುವುದು ಪಥ್ಯಂಗಳು.

ಕಾರ, ಹುಳಿ, ಉಪ್ಪು, ಕ್ಷಾರವಸ್ತು, ವಿದಾಹಕರವಾದ ದ್ರವ್ಯಂಗಳು, ಉದ್ದು ಸಂಬಂಧವಾದ ಪದಾರ್ಥ, ಅವರೆ, ಎಳ್ಳು, ಹಿಂಡಿ, ಹುರುಳಿ, ಮೊಸರು ಮುಂತಾದುವೆಲ್ಲಂ ಅಪಥ್ಯಂಗಳೆಂದರಿವುದು. ೧

ಅಂತು ಅಸ್ಥಿಸ್ರಾವದ ಬಗೆ ೧ ಕ್ಕೆ ಸಂಹಿತೆ ೧೦, ಕಷಾಯ ೨, ಘೃತ ೨, ಪಥ್ಯಾಪಥ್ಯಂಗಳ ಬಗೆ ೧ ಸಹ ಪ್ರಯೋಗ ೧೫ ಕ್ಕೆ ಸಮಾಪ್ತ.

## ಖಾಸರೋಗನಿದಾನಂ.

ಹೊಗೆ ತಾಗುವುದರಿಂದಲೂ ಉಪವಾಸದಿಂದಲೂ ವಿಶೇಷ ಸಂಚಾರದಿಂದಲೂ ಧೂಳು ಸೋಕುವುದರಿಂದಲೂ ರೂಕ್ಷವಾದಾಹಾರಗಳಿಂದಲೂ ಮಲಮೂತ್ರಗಳ ನಿರೋಧಿಪುದರಿಂದಲೂ ಅತ್ಯಂತ ಶೈತ್ಯಮಾದ ಜಲಪಾನದಿಂದಲೂ ಕೂಗಿ ಮಾತಾಡುವುದರಿಂದಲೂ ವೇಗನಿರೋಧದಿಂದಲೂ ದಾರಿಯು ನಡೆವುದರಿಂದಲೂ ಕೆಮ್ಮು ಉಂಟಾಗುವುದು. ಈ ಖಾಸವು ಐದು ತೆರನಾಗಿಹುದು. ಎಂತೆಂದೊಡೆ, ವಾತದಿಂ ಪುಟ್ಟುವುದೊಂದು, ಪಿತ್ತದಿಂ ಜನಿಸುವುದೊಂದು, ಶ್ಲೇಷ್ಮದಿಂದುದಯವಾಗುವುದೊಂದು, ಘಾಯವಡೆದುದರಿಂದಾಗುವುದೊಂದು, ಕ್ಷಯದಿಂದೊಗವುದೊಂದು ಇಂತು ಐದು ವಿಧವಾಗಿ ಒಂದಕ್ಕೊಂದು ಬಲಿಷ್ಠವಾಗಿಹುದರಿಂ ಉಪೇಕ್ಷಿಸಲು ಕ್ಷಯರೋಗವನುಂಟುಮಾಡುವುದು. ಇದರಲ್ಲಿ ಅಳ್ಳೆಯಲ್ಲಿ ಶೂಲವು, ಮಂಡೆನೋವು ಸಹ ಉಂಟಾಗಿಹುದೆ ವಾತಖಾಸವೆಂದು ಪೇಳುವುದು. ರಕ್ತವುಳ್ಳುದಾಗಿ ಹಳದಿವರ್ಣವಾದ ವಮನವಾಗುತಿಹುವೆ ಪಿತ್ತಖಾಸ ; ಉಗುಳು ಶ್ವೇತವರ್ಣವಾಗಿ ಬಹಳ ಶ್ಲೇಷ್ಮದಿಂ ಕೂಡಿಕೊಂಡಿಹುದೆ ಶ್ಲೇಷ್ಮಖಾಸ, ರಕ್ತವಮನಮಂ ಮಾಳ್ಪುದೆ ಗಾಯದಿಂ ಪುಟ್ಟಿದ ಖಾಸ, ಶ್ಲೇಷ್ಮವು ಕಪ್ಪು ಹಳದಿವರ್ಣವಾಗಿರಲು ಕ್ಷಯಖಾಸ. ಇಂತೈದು ತೆರನಾಗಿರ್ಪುದೆ ಖಾಸರೋಗವೆಂದರಿವುದು. ವೇಗನಿರೋಧವೇನು ಎಂದರೆ ಸೀನುಗಳನ್ನೂ ಆಕಳಿಕೆಯನ್ನೂ ಕೆಮ್ಮುಗಳನ್ನೂ ಮಲಮೂತ್ರ ಇಂತಿವಂ ತಡೆವುದೆ ವೇಗನಿರೋಧವೆಂದರಿವುದು.

### ಚಿಕಿತ್ಸೆ— ಸಂಹಿತೆಗಳು.

ತೊಟ್ಟಿ ಎಲೆ, ಹಿಪ್ಪಲಿ ಸಹ ಬಿಸಿನೀರಿಂದರೆದು ಕೊಡಲು ಕೆಮ್ಮು ಮಾಣ್ಗುಂ. ೧

ಹಾವುಮೆಕ್ಕೆಕಾಯಿಗಳನ್ನು ನಾಲ್ಕು ಭಾಗವಾಗಿ ಹೆಚ್ಚಿಸಿ ಅದರಲ್ಲಿ ಕಲ್ಲುಪ್ಪು ತುಂಬಿ ಕಾಯಿಗೆ ಬೇರೆಬೇರೆ ದಾರವ ಸುತ್ತಿ ಹೊಸಮಜ್ಜಿಗೆಯಲ್ಲಿ ತುಂಬಿ ಏಳು ದಿನ ಭೂಪುಟದಲ್ಲಿರಿಸಿ ತೆಗೆದು ಸಿದ್ಧಿವಾರ ಮೊದಲಾಗಿ ಒಂದೊಂದು ಹೋಳ ಮೆಲ್ಲಲು ಕೆಮ್ಮು ಉಬ್ಬಸ ಪರಿಹರ. ೩

ಬಜೆ, ಶುಂಠಿ, ಪಾರಿವಾಳದೆಲೆ, ಇವಂ ಪುಡಿಮಾಡಿ ಬಿಸಿನೀರಿಂದರೆದು ಕುಡಿಯೆ ಕೆಮ್ಮು ನಿಲ್ಗುಂ, ೩

ಚಿಚ್ಚಾವಡಲದ ಹರಳು ಒಂದು ಹಿಡಿಯನ್ನು ಮೇಲಣ ತೊಟ್ಟ ತೆಗೆದು ಆ ತಿರುಳ ಹುಳಿಮಜ್ಜಿಗೆಯಲ್ಲಿ ಅರೆದು ಕುಡಿಯೆ ಶ್ವಾಸಖಾಸಗಳು ಹುಟ್ಟುಗೆಡುವುವು. ೪

ತುರುಚನ ಬೇರನ್ನು ಹಾಲಲ್ಲಿ ಹಾಕಿ ಕಾಸಿ ಆ ಬೇರಂ ತೆಗೆದು ಹಾಲಂ ಕುಡಿಯಲು ಕೆಮ್ಮು ನಿಲ್ಲುವುದು. ೫

ಇಂಗಳದ ಬೇರು, ಹೆದ್ದುರುಚನ (ಸಮೂಲ), ಕುರುಟಿಗೆ (ಸಮೂಲ) ಸಹ ಸಮವಾಗಿ ಚೂರ್ಣಿಸಿ ಮೂರುಸೊಲಗೆಯಷ್ಟನ್ನು ಬಳ್ಳ ಆಡಿನ ಮೂತ್ರದಲ್ಲಿ ಹಾಕಿ ಒಂದು ಮಾನವಾಗಿ ಉಕ್ಕದ ಹಾಗೆ ಪಾಕವ ಮಾಡಿ ಆಮಲಕಪ್ರಮಾಣಂ ತೆಗೆದುಕೊಳ್ಳಲು ಹುಟ್ಟುಗೂರಲು ಸಹ ಮಾಣ್ಗುಂ ೬

ಎಕ್ಕದ ಮೊಗ್ಗು ೧ ಬಳ್ಳವಂ ಒಂದು ಮಡಕೆಯಲ್ಲಿ ಹಾಕಿ ನೀರಹಾಕಿ ಪಾವಡೆ ಕಟ್ಟಿ ಬೆಳತಿಗೆ ಅಕ್ಕಿಯನ್ನು ಇಡಿದು ಆ ಹಿಟ್ಟಿನಲ್ಲಿ ಸಕ್ಕರೆಗೂಡಿ ರೊಟ್ಟಿಮಾಡಿ ಆ ಬಾಯಿಕಟ್ಟಿನ ಮೇಲಿಟ್ಟು ಬೇಯಿಸಿ ತೆಗೆದು ಹಸುವಿನ ಸಪ್ಪೆದುಪ್ಪದಲ್ಲಿ ಮೂರುದಿನ ಮೆಲ್ಲಲು ಗೂರಲು ಉಬ್ಬಸ ಸಹ ಪರಿಹರ. ೭

ಅಕಲಕರೆ, ಹಿಪ್ಪಲಿಮೂಲ, ಲವಂಗ, ನೆಲಗುಳ್ಳದ ಹಣ್ಣಿನ ಬೀಜ, ಅಮರದ ವಳ್ಳಿ, ಚೂರ್ಣಸಾಸವೆ, ಸೈಂಧವ, ಇವಿಷ್ಟನ್ನು ನೆಲಗುಳ್ಳದ ರಸದಿಂದರೆದು ಗುಳಿಗೆಯುಂಮಾಡಿ ಜೇನುತುಪ್ಪದಲ್ಲಿ ಮೆಲ್ಲಲು ಕೆಮ್ಮು ಶ್ವಾಸ ಸಹ ಗುಣಮಕ್ಕುಂ. ೮

ವಾಯುವಿಳಂಗ, ಶುಂಠಿ, ರಾಸ್ಮೆ, ಹಿಪ್ಪಲಿ, ಸೈಂಧವ, ಗಂಟುಭಾರಂಗಿ, ಯವಕ್ಷಾರ, ಇವಂ ಚೂರ್ಣಿಸಿ ಬಿಸಿನೀರಿಂದಾಗಲಿ ತುಪ್ಪದಿಂದಾಗಲಿ ಸೇವಿಸೆ ಶ್ಲೇಷ್ಮಗೂಡಿದ ಖಾಸ, ಅಗ್ನಿಮಾಂದ್ಯ, ಬಿಕ್ಕಲು ಸಹ ಪರಿಹರಮಕ್ಕುಂ. ೯

ಗರುಗ, ಶುಂಠಿ, ಅಳಿಲೆಕಾಯಿ, ನೀಲಿ ಬೀಜ ಸಹ ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಕಲಸಿ ನೆಲ್ಲಿಕಾಯ ಪ್ರಮಾಣವಂ ಸೇವಿಸೆ ಖಾಸರೋಗಂ ಮಾಣ್ಗುಂ. ೧೦

ಕರ್ಕಾಟಕಶೃಂಗಿ, ಶುಂಠಿ, ಹಿಪ್ಪಲಿ, ಮೆಣಸು, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ನೆಲಗುಳ್ಳದ ಬೇರು, ಗಂಟುಭಾರಂಗಿ, ಚಂಗಲಕೋಷ್ಟ, ಜಟಾಮಾಂಸಿ, ಪಂಚಲವಣ ಇವಂ ಸಮಭಾಗ ಚೂರ್ಣಿಸಿ ಬಿಸಿನೀರಿಂ ಕಲಸಿ ತೆಗೆದುಕೊಳ್ಳಲು ಖಾಸ, ಶ್ವಾಸ, ಅರೋಚಕ ಮುಂತಾಗಿ ಮಾಣ್ಗುಂ. ೧೧

ಮುಳ್ಳುಸೊಂಡೆ ಸಮೂಲವಂ ಇಡಿದು ತೊಳೆದು ರಸವಂ ಹಿಂಡಿ ದಿನ ೧ ಕ್ಕೆ ೧ ಪಾವು ಮೇರೆಯಲ್ಲಿ ೩ ದಿನ ತೆಗೆದುಕೊಳ್ಳಲು ಎಂಥಾ ಕೆಮ್ಮಾಲಾದರೂ ಪರಿಹಾರವಹುದು. ಸ್ವಲ್ಪವಾಗಿ ಉಪ್ಪು ಮೆಣಸು ಹಾಕಿದ ಬೇಳೆಯ ಸಾರು ಹಸುವಿನ ಹಾಲು ಪಥ್ಯ. ೧೨

ರಾಸ್ಮೆ, ಶುಂಠಿ, ಹಿಪ್ಪಲಿ, ಇವು ಪ್ರತ್ಯೇಕ ಗ ೩ ತೂಕವಂ ಶುಚಿಮಾಡಿದ ಬಿಳುಗಾರ ದುಡ್ಡು ೧ ತೂಕ ಸಹ ಚೂರ್ಣಿಸಿ ನಿತ್ಯವೂ ಎರಡು ಹೊತ್ತಿನಲ್ಲೂ ಗಜ್ಜುಗದ ಪ್ರಮಾಣವಂ ಜೇನುತುಪ್ಪದಿಂ ಸೇವಿಸೆ ಕೆಮ್ಮು ಹರವಹುದು. ೧೩

ಬಜೆಯ ಭಸ್ಮವಂ ಜೇನುತುಪ್ಪದಿಂ ಕೊಳ್ಳಲು ಕೆಮ್ಮು ಬಿಡುಗಡೆಯಹುದು. ಇವು ಮೂರು ಕೈಗಂಡಸಿದ್ಧಿಪ್ರಯೋಗ. ೧೪

ನೆಲಗುಳ್ಳ ಸಮೂಲವಂ ಕುಟ್ಟಿ ರಸವ ತೆಗೆದು ಶುಂಠಿ, ಹಿಪ್ಪಲಿ, ಮೆಣಸು ಸಹ ಪ್ರತ್ಯೇಕ ಗ ೧ ತೂಕವಂ ಹಾಕಿ ನಿತ್ಯವೂ ಒಂದು ಪಾವಿನಷ್ಟನ್ನು ತೆಗೆದು ಕೊಳ್ಳಲು ಎಂಥಾ ಶ್ಲೇಷ್ಮರೋಗವೂ ೩ ದಿನಕ್ಕೆ ಪರಿಹರವಕ್ಕುಂ. ೧೫

ಮಂಜುಪತ್ರೆ ಸೊಪ್ಪನ್ನು ಕುಟ್ಟಿ ಪಾವು ರಸವಂ ತೆಗೆದುಕೊಳ್ಳಲು ಶ್ಲೇಷ್ಮ, ಉದರ ಶೂಲೆ ಸಹ ಮಾಣ್ಗುಂ. ೧೬

ಶುಂಠಿ, ಹಿಪ್ಪಲಿ, ಮೆಣಸು, ಇವು ಪ್ರತ್ಯೇಕ ಸೇರು ೧ ನು ಚೂರ್ಣಿಸಿ ೩ ಸೇರು ಬೆಲ್ಲದಲ್ಲಿ ಪ್ರತಿಪಾಕವಿಕ್ಕಿ ತೆಗೆದುಕೊಳ್ಳಲು ಕೆಮ್ಮು ಗುಣಮಕ್ಕುಂ. ೧೭

ನಾಯಿಬೇಲದ ಸೊಪ್ಪು ಒಂದು ಒಳಹಿಡಿಯನ್ನು ಕುದುಪಲಕ್ಕಿ ಒಂದು ಹಿಡಿ ಸಹ ಅರೆದು ರೊಟ್ಟಿ ಸುಟ್ಟು ಅಂಗೈಯಗಲ ರೊಟ್ಟಿಯನ್ನು ಉದಯದಲ್ಲಿ ೩ ದಿನ ಮೆಲ್ಲಲು ಕೆಮ್ಮು, ಉಬ್ಬಸ, ಶ್ಲೇಷ್ಮ ಸಹ ಗುಣಮಹುದು. ೧೮

ಎಸಗದ ಚಿಗುರನು ಮುಳ್ಳುತೆಗೆದು ಹಸುವಿನ ಬೆಣ್ಣೆಯಲ್ಲಿ ಕೆಂಪಾಗಿ ಹುರಿದು ನಿಂಬೆಯಕಾಯಷ್ಟನು ಎರಡು ಹೊತ್ತು ಮೂರು ದಿನ ಮೆಲ್ಲಲು ಕೆಮ್ಮು ರೆತ್ರಿ ಸುರಿವ ಶ್ಲೇಷ್ಮ ನಿಲ್ಲುವುದು. ೧೯

ರೊಕ್ಕಿಬೇರಿನ ತೊಕ್ಕನು ತೆಗೆದು ಒಣಗಿಸಿ ಚೂರ್ಣವ ಮಾಡಿ ಮೂವೆರಳಿನಷ್ಟನು ಹಸುವಿನ ತುಪ್ಪದಲ್ಲಿ ಒಂದು ಮಂಡಲ ಸೇವಿಸೆ ಕ್ಷಯ ಖಾಸಂ ಗುಣಮಕ್ಕಂ. ೨೦

ವಾಯುವಿಳಂಗ, ಶುಂಠಿ, ರಾಸ್ಮೆ, ಹಿಪ್ಪಲಿ, ಇಂಗು, ಸೈಂಧವ, ಗಂಟುಭಾರಂಗಿ, ಯವಕ್ಷಾರ, ಇವಂ ಸಮವಾಗಿ ಚೂರ್ಣಿಸಿ, ತುಪ್ಪದಿಂ ಕೊಳ್ಳಲು ವಾತ ಶ್ಲೇಷ್ಮಗಳಿಂದಾದ ಖಾಸರೋಗಂ ಮಾಣ್ಗುಂ. ೨೧

ತುರುಚನ ಬೇರು, ಶುಂಠಿ, ಗಂಟುಭಾರಂಗಿ, ಕರ್ಕಾಟಕಶೃಂಗಿ, ಇವಂ, ಚೂರ್ಣಿಸಿ ಎಣ್ಣೆಯಿಂ ಕಲಸಿ ಕೊಡಲು ವಾತದಿಂ ಪುಟ್ಟಿದ ಖಾಸರೋಗ ಹರ.

ಅಂಕೋಲೆ ಬೀಜ, ಅಳಲೆಕಾಯಿ, ತಾರೆಕಾಯಿ, ನೆಲ್ಲಚೆಟ್ಟು, ಶುಂಠಿ,

ಹಿಪ್ಪಲಿ, ಮೆಣಸು, ಕೆಂಗುಂಗೆ ಬೀಜ, ಕರಿಜೀರಿಗೆ, ಇವಂ ಸಮಾಂಶ ಚೂರ್ಣಿಸಿ ಗರುಗದ ಸೊಪ್ಪಿನ ರಸದಿಂ ಭಾವನೆಯಂ ಮಾಡಿ ನೆಳಲಲ್ಲಿ ಒಣಗಿಸಿ ಚೂರ್ಣಂ ಗೈದು ಜೇನುತುಪ್ಪದಿಂದಾದರೂ ಬೆಲ್ಲದಿಂದಾದರೂ, ಕಲಸಿ ಸೇವಿಸೆ ಖಾಸ ಶ್ವಾಸಹರ. ೨೩

ಅಂದ್ರಗು ವೇರುನು, (ಎಂದರೆ ತಡಕಿಲ:) ಗೋಮೂತ್ರಮುನ ನೂರಿ ತ್ರಾಗನು ರಕ್ತಖಾಸಂ ಮಾನುನು. ೨೪

ಸುಗಂಧಿಪಾಲು ಸಮೂಲಂ, ಲವಂಗಂ ಗ ೪ ತೂನು, ಜಾಕಾಯಿ ಗ ೧ ತೂನು, ಪಿಪ್ಪಳ್ಳು ಗ ೨ ತೂನು ಸಹ ಮೇಕಪಾಲತೊ ತ್ರೊಕ್ಕಿ ರಸಂ ತ್ರಾಗನು ರಕ್ತಖಾಸಂ ನಿಲುಚುನು. ೨೫

ವೆಲ್ಲುಲ್ಲಿಪಾಯುಲ ಪೊಳಲು ತೀಸಿ ಮೇಕಪಾಲತೊ ಪಾಯಸಂವಂಡಿ ಪ್ರಸಾಪಡುನು ರಕ್ತಖಾಸಂ ಗುಣಮೌನು. ೨೬

ಗಾರಪಂಡು ಮೈನಂ ಕಲಪಿ ನೂರಿ ತ್ರಾಗನು ರಕ್ತಖಾಸಂ ಗುಣ ಮೌನು. ೨೭

ಬೋಡತರಮಾಕು, ಪಸುರುಪಾಲು, ನೆಯ್ಯಿ, ಅರಪಾವು ಚಕ್ಕರ ಸಹ ಮೇಕಪಾಲುತೊ ತ್ರಾಗನು ರಕ್ತಖಾಸಂ ನಿಲುಚುನು. ೨೮

ಕೊಂಡುಗುಮ್ಮುಡು ವೇರುನು, ಬೊಬ್ಬೆಡನು ನಿಮ್ಮ ಪುಲುಸುನ ನೂರಿ ತ್ರಾಗನು ರಕ್ತಖಾಸಂ ಮಾನುನು. ೨೯

ನಿಮ್ಮಪುಲುಸು, ಅಡ್ಡಸರಂ, ರಸಂ ಗ ೧ ಎತ್ತು, ಮಿರಿಯಾಲು, ವೆಲ್ಲುಲ್ಲಿ, ಪಾಯುಲುಕೂಡ ನೂರಿತ್ರಾಗನು ರಕ್ತಖಾಸಂ ಪರಿಹಾರಮೌನು. ೩೦

ಮುಂಗುರವಳ್ಳಿ ಸೇರು ಅರ್ಧ, ನೆಲಗುಳ್ಳ ಸೇರು ೧, ಸುರುಮ ಸೇರು ೧, ಪಿಪ್ಪಲಿ ಸೇರು ೧, ಹಳೆಬೆಲ್ಲ ಸೇರು ೧, ಸೈಂಧವಲವಣ ಸೇರು ಅರ್ಧ ಸಹ ಚೂರ್ಣಿಸಿ ತೆಗೆದುಕೊಳ್ಳಲು ಕೆಮ್ಮು ಪರಿಹರ. ಹುಳಿಶಲದಿ ವರ್ಜ್ಯವಾಗಿ ಪಥ್ಯ. ೩೧

ಗಟ್ಟಿ ಮಿರಿಯಾಲುನು ತೇಂಕಾರ ಚಿಪ್ಪಲೊ ಬೋಸಿ ಜಿಲ್ಲೆಡು ಪಾಲುಬೋಸಿ ಒಕ್ಕನಾಡು ನಾನ ಬೆಟ್ಟಿ ನೀಡಲೊ ಎಂಡಿಂಚಿ ಉಂಚುಕೊನಿ ದಿನಂ ಒಕಟಿಕಿ ನಾಲುಗು ಮಿರಿಯಾಲು ಪ್ರಕಾರಂ ಉದಯಮಂದು ವೀಳ್ಯಂಜೇಯುನಪ್ಪುಡು ವೇಸುಕೊನೇದಿ; ಈ ರೀತಿ ೧೨ ನಾಳ್ಳು ತೀಸುಕೊನನು ಪುಟ್ಟುಗೂರುಲ್ಪ ಮಾನುನು. ೩೨

ತೆಂಕಾಯ ರೆಂಡುನು ಕೊಬ್ಬೆರ ದೀಸಿ ಈ ನೀಳ್ಳು ಬೋಸಿ ರುಬ್ಬಿ ಬಟ್ಟತೊ ವಡಿಯಗಟ್ಟಿ ಕೊತ್ತ ಚಟ್ಟಿಲೊ ಬೋಸಿ, ಜಿಲ್ಲೆಡುಪಾಲು ಬೋಸಿ, ಈರೆಂಡು ಸಮಂ ಅವು ಪಾಲುಬೋಸಿ ದೀಪಾಗ್ನಿಮಂಟಚೇತ ವಂಡಿಂಚಿ ಚಟ್ಟನಿ ನೇಲಬೆಟ್ಟಿ ಮೂಡುಪೂಟಲು ಪ್ರಸಾಪಡುನು ಖಾಸಂಮಾನನು ಪಥ್ಯಂ, ರವ ಉಪ್ಪುವೇಸಿಕೊನಿ ಪೆಸಲುವಂಟಕಂ ಪ್ರಸಾಪಡೇದಿ. ೩೩

ಕುಕ್ಕವೆಲಗ ವೇರು ನೇಯಿತೊ ಕಾಚಿ ಆನೇಯಿನಿ ದಿನಂ ಮಾರ್ಚಿ ದಿನಂ ತಲಕಂಟುಕೊನನು ರಕ್ತಖಾಸಂ ನಿಲುಚುನು. ೩೪

ಕಿರುಗುರುಟಿಗೆ ಸೊಪ್ಪು ತುಳಿದು ಹಸುವಿನ ಹಸಿಹಾಲಿನಲ್ಲಿ ಕಿವಿಚಿ ಶೋಧಿಸಿ ಕೊಡಲು ವಾಂತಿಯಾಗುವುದು ; ಕೆಮ್ಮು ನಿಂತು ಹಗುರವಾಗುವುದು ; ಉಬ್ಬಸ ನಿಲ್ಲುವುದು. ೩೫

ಸೇವಂತಿಪೂಲು ೫೦, ತಾಂದ್ರಿಕಾಯಲು ಗ ೪॥ ಎತ್ತು, ನೆಲ್ಲಿಚಟ್ಟು ಗ ೪ ತೂನು, ಪೆದ್ದಗುಮ್ಮುಡು ಗ ೪ ತೂನು, ನೇಲಮುಲಕ ಕಾಯಲು, ಶ್ರೀಗಂಧ, ಇಂತಾ ಮೆತ್ತಗಾ ನೂರಿ ಮೂಡು ಎತ್ತು ತೀಸುಕೊನನು ಕ್ಷಯಂ, ದಗ್ಗು, ನಿಲುಚುನು. ೩೬

ತುಲ್ಸಿ ಆಕು, ಮಂಚಿ ನೂವುಲು, ಸರಿಗಾ ನೂರಿ ತೇನತೊ ಗಲಪಿ ನಿಮ್ಮ ಕಾಯಂತ ಸೇವಿಂಚುನು ಖಾಸಂಮಾನುನು. ೩೭

ಮಂಚಿ ಸೋರತೀಗ ಪಿಡಿಕೆಡು ಪಾಲುಲೊ ವೇಸಿ ಕಿವಿಚಿ ಪಿಂಡುಕೊನಿ ವೆನ್ನ ಚಕ್ಕರ ವೇಸಿ ತ್ರಾಗಿತೆ ರಕ್ತಖಾಸಂ ನಿಲುಚುನು. ೩೮

ನಲ್ಲ ಪತ್ತಿಯಾಕುರಸಂ ಸೊಲ್ಲೆಡು, ಆವುಪಾಲು ರೆಂಡು ಸೊಲ್ಲೆಡು, ತೆಲ್ಲ ದಾಸಾನ ಪೂ, ಆಕು ರಸಮುನು ಕಲಯವೇಸಿ [1] ಪೋಕಂತ ವೆನ್ನ ವೇಸಿ ಕಕ್ಕೆ ರಸಮು[1] ಸಹ ತ್ರಾಗನು ರಕ್ತಖಾಸಂ ಗುಣಮೌನು. ೩೯

ಮಿಟ್ಟವೇಳ್ಳು, ಚನ್ನಬೀಯಂ, [2] ತೊಟ್ಟಿ ರೊಟ್ಟೆ ಜೇಸಿ ತಿನನು ದಗ್ಗು ಮಾನುನು. ೪೦

ಜುಟ್ಟುಪಾಕುರಸಮುಲೋ ಶನಿಗಿಲು, ಸಮುದ್ರಲವಣಂ ಸಮಂಗಾ ವೇಸಿ ಗುಗ್ಗಿಳ್ಳುಗಾನು ಉಡುಕಬೆಟ್ಟಿ ನೇಲಬೆಟ್ಟಿ ಕವುಟ್ಟನ ಮೂನಾಳ್ಳು ಉದಯಮುನ ತಿನನು ಗೂರಲು ನಿಲುಚುನು. ೪೧

ಸಂಪಂಗಿ ಪೂವುಲು ೭ ಮಾಟಲು ಪೊಗಬೋಕುಂಡಕ ಮಂಗಲಾನ ವೇಯಿಂಚಿ ನಯಮುಗ ನೂರಿ ತೇನೆತೊ ಇಚ್ಚಿತೆ ದಗ್ಗು ಮಾನುನು. ೪೨

ಆಕುಚುಮುಡುವೇರು ಚೂರ್ಣಮುನು ಕೊತ್ತ ಕುಂಡಲೊ ಬೋಸಿ ಮೇಕ ನೇತಿತೊ ಪ್ರಸಾಪಡನು ದಗ್ಗು ನಿಲುಚುನು. ೪೩

ದುಸ್ಸರಿ ವೇರು (ಸಮೂಲಂ) ನು ಕಾಲ್ಚಿ ಬೂಡಿದಿಜೇಸಿ ಉಲುವ ಕಟ್ಟುಲೊ ವೇಸಿ ತ್ರಾಗನು ಶ್ಲೇಷ್ಮಂ ನಿಲುಚುನು. ೪೪

ಅರಿದಳಂ, ನೀಲಿ ಆಕು, ಜುಟ್ಟುಪಾಕು, ತೆಲ್ಲತುಮ್ಮಿ ಆಕು, ಇವಿ ನುಂನಗಾ ನೂರಿ ಪಸುರುಬಟ್ಟಕು ಪಟ್ಟಿಂಚಿ, ಅರಿದಳಂ ನೂರಿ ಆಪಸುರು ಬಟ್ಟಕು ಚಲ್ಲಿ ತಿರುಲು ಜೇಶಿ ನೀಡನು ಎಂಡಿಂಚಿ ಆ ತಿರುಲುನು ಅಗ್ನಿತೊ ಅಂಟಿಂಚಿ ರೋಗ ಸ್ಥನಿಕಿ ಆಘ್ರಾಣಂ ಜೇಸಿತೆ ದಗ್ಗುಲು ನಿಲುಚುನು. ೪೫

[1] ಚಕ್ಕರ, (ಗ). [2] ಪೊ, (ಗ).

ಮುಲುಕವಿತ್ತುಲು, ಮಿರಿಯಾಲು, ತಮಲಪಾಕು ರಸಮುನ ನೂರಿ ಇಚ್ಚಿತೆ ದಗ್ಗು ನಿಲುಚುನು. ೪೬

ಮೂಡವರಿದ ನಾಯಿಬೇಲದ ಬೇರಂ ಒಣಗಿಸಿ ಚೂರ್ಣಂಗೆಯ್ದು ಶೋಧಿಸಿ, ಹಿಪ್ಪಲಿ ಚೂರ್ಣ ಸಹ ಕೂಡಿ ಜೇನುತುಪ್ಪದಿಂ ಕಲಸಿ ಬೆಳುಗಾರ ದುಡ್ಡು ತೂಕವಂ ಶೋಧಿಸಿ ಪುಡಿಗೆಯ್ದು ಅದರಲ್ಲಿ ಕೂಡಿಸಿ ಹೊತ್ತು ಒಂದಕ್ಕೆ ಮೂರು ಬೆರಳಿನಷ್ಟನ್ನು ತೆಗೆದುಕೊಳ್ಳೆ ಕೆಮ್ಮು ಪರಿಹರವಹುದು. ೪೭

ಇಂಗಳ ಬೇರಿನ ತಿಗುಡು, ಎಕ್ಕೆಯ ಕೊನರು, ಎಳ್ಳು, ಉಳ್ಳಿ, ಇವಂ ಚೂರ್ಣಿಸಿ ಎಣ್ಣೆಯಲ್ಲಿ ಮೆಲ್ಲಲು ಕೆಮ್ಮು ಮಾಣ್ಗುಂ. ೪೮

ಆಡಿನ ಮಜ್ಜಿಗೆಯಲ್ಲಿ ಎಲೆಗಳ್ಳಿಯ ಬೇರನರೆದು ಗುಳಿಗೆ ಮಾಡಿ ನುಂಗಲು ಕೆಮ್ಮು ಬಿಡುವುದು. ೪೯

ಮೊಗವಾಳೆ ಗೆಡ್ಡೆಯನ್ನೂ, ಉದ್ದಿನಬೇಳೆಯನ್ನೂ ತಿರುಹಿ ದೋಸೆಯನಟ್ಟು ತುಪ್ಪದಿಂ ಮೆಲ್ಲಲು ಕೆಮ್ಮು ಪರಿಹರ. ೫೦

ನೆಲಗುಳ್ಳದ ರಸ, ಗರುಗದ ರಸ, ಕುರುಟಿಗೆ ರಸ, ಒಂದೆಲಗನ ರಸ, ಆಡುಸೋಗೆಯ ರಸ, ಇವೈದು ಪ್ರತ್ಯೇಕ ೧ ಸೇರಿನ ರೀತಿಯಲ್ಲಿ ಕೂಡಿಸಿ ಅಷ್ಟಾವಶೇಷವಾಗಿ ಕಷಾಯವ ಕಾಯಿಸಿ ಮೆಣಸಿನ ಪುಡಿ ೧ಸೇರನು ಹಾಕಿ ಚೆನ್ನಾಗಿ ಕಾಯಿಸಿ ಇಳುಹಿಕೊಂಡಾರಿಸಿ ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚೆಟ್ಟು ಸಹ ಬಗೆ ಒಂದಕ್ಕೆ ಪಾವು, ಸೇರು ಹಿಪ್ಪಲಿ ಚೂರ್ಣವೆರಸಿ ಉದಯಕಾಲದಲ್ಲಿ ಆಮಳಕ ಪ್ರಮಾಣ ಚೂರ್ಣವಂ ತೆಗೆದುಕೊಳ್ಳಲು ಸಕಲ ಖಾಸ ಶ್ವಾಸಂ ಮಾಣ್ಗುಂ. ೫೧

ಬಳ್ಳಿ ಸೊಂಡೆಹಣ್ಣು, ಮೆಣಸು ಸಹ ಬೆಣ್ಣೆಯೊಡನೆ ಕಾಸಿ ಹಿಪ್ಪಲಿ ಪ್ರತಿಪಾಕವಿಕ್ಕಿ ತೆಗೆದುಕೊಳ್ಳಲು ಕೆಮ್ಮು ಹರ. ೫೨

ಮುಗುಳಿಯ ಒಳನಾರಂ ಆಡಿನ ಹಾಲಿನಲ್ಲಿ ಅರೆದು ಕುಡಿಯೆ ಎಂಥಾ ಕೆಮ್ಮುರಾದರೂ ಮಾಣ್ಗುಂ. ೫೩

## ಕಲ್ಕಗಳು

ಆಡುಸೋಗೆ ಸೊಪ್ಪು, ಲೊಕ್ಕಿ ಸೊಪ್ಪು, ರಾಸ್ಮೆ, ಶ್ರೀತೊಳಸಿ ಬೇರು. ಬಿಳುಗಾರ, ಸೈಂಧವಲವಣ, ಇವು ಸಮನಾಗಿ ಬಿಸಿನೀರಿನಿಂದರೆದು ನೆಲಗುಳ್ಳದ ಕಷಾಯದಲ್ಲಿ ಕದಡಿ ಕೊಡಲು ಖಾಸರೋಗ, ಶ್ವಾಸ, ಕ್ಷಯ, ಪಾಂಡು, ಸನ್ನಿಪಾತ ದೋಷಜ್ವರ, ತ್ರಿದೋಷಜ್ವರ ಮುಂತಾದ ರೋಗಗಳು ಮಾಣ್ಗುಂ. ೧

ಆಡುಸೋಗೆಯ ಸೊಪ್ಪು, ಬೆಳ್ಳುಳ್ಳಿ, ಮೆಣಸು, ಕಟುಕರೋಹಿಣಿ, ಹಿಪ್ಪಲಿ, ಇವಂ ಬಿಸಿನೀರಿನೊಳರೆದು ಜೇನುತುಪ್ಪವನುಪಾನವಿಕ್ಕಿ ಸೇವಿಸೆ ಖಾಸ, ಶ್ಲೇಷ್ಮ ರೋಗಗಳು ಗುಣಮಕ್ಕುಂ. ೨

## ಕಷಾಯಗಳು

ಹಿಪ್ಪಲಿ, ಆಡುಸೋಗೆಯ ಸೊಪ್ಪು, ತಾರೆಯ ಕಾಯಿ, ಶುಂಠಿ, ತುರುಚನ ಬೇರು, ನೆಲಗುಳ್ಳ, ಇವಂ ಕಷಾಯಂ ಕಾಸಿ ಪಾನವಮಾಡಲು ಪಿತ್ತ, ಖಾಸ, ವಿಷಮಜ್ವರ ಸಹ ಪರಿಹಾರವಕ್ಕುಂ. ೧

ಮಂಗರವಳ್ಳಿಯನು ಸಣ್ಣನಾಗಿ ಕತ್ತರಿಸಿ ಹಂಚಿನಲ್ಲಿ ಹುರಿದು ಶುಂಠಿ ಗ ೨ ತೂಕ, ಜೀರಿಗೆ ಗ ೨ ತೂಕ ಸಹ ತಿರುಹಿ ನಾಲ್ಕು ಸೇರು ನೀರಿನಲ್ಲಿ ಕಷಾಯವಿಕ್ಕಿ ಅರೆಪಾವಾಗುವಹಾಗೆ ಕಾಸಿ ರಾತ್ರಿಯಲ್ಲಿ ತೆಗೆದುಕೊಳ್ಳಲು ಕೆಮ್ಮು, ವಾತಜ್ವರ ಸಹ ಗುಣವಕ್ಕು. ೨

ಶುಂಠಿ, ಹಿಪ್ಪಲಿ, ಮೆಣಸು, ಏಲಕ್ಕಿ, ನೆಲ್ಲಿಚಟ್ಟು, ಗಂಟುಭಾರಂಗಿ, ನೆಲಗುಳ್ಳ, ಇವಂ ಕಷಾಯವಿಕ್ಕಿ ಜೇನುತುಪ್ಪ ಸಹ ಕಷಾಯಂಗೊಳ್ಳಲು ಪಂಚವಿಧ ಖಾಸವು ಮಾಣ್ಗುಂ. ೩

ದುಸ್ಸರಿ (ಸಮೂಲಂ) ಕಷಾಯಂಗಾಚಿ ವಡುಚು ಕೊನಿ ಜಿಲಕರ, ಏಲಕ್ಕಲು, ಲವಂಗಾಲು ಇವಿ ಸಮಭಾಗಂ ಗೂರ್ಚಿ ಸಮಂ ಚಕ್ಕರ ಸಹ ವೇಸಿ ತ್ರಾಗಿತೆ ರಕ್ತಖಾಸಂ ನಿಲುಚುನು ೪

ಇರವೈ ತಾಂಡ್ರಿಕಾಯಲನು ದಂಚಿ ಎನಿಮಿದಿ ಮಾನಿಕಲು ನೀಳ್ಳುಬೋಸಿ ಒಕಮಾನಂ ನಿಲ್ಲೇಟಟ್ಟು ಗಾಚಿ ಇಂದುಲೊ ೧೦೦ ಮಿರಿಯಾಲು ಗಂಟುಕಟ್ಟಿ ವೇಸಿ ಇವನ್ನಿ ಕೂಡ ನೂರಿ ಇಚ್ಚಿತೆ ಪುಟ್ಟುಗೂರಲು ಮಾನುನು. ೫

ಪಿಪ್ಪಳ್ಳು, ಪಿಪ್ಪಲಿಮೂಲಂ, ಚವ್ಯಂ, ಚಿತ್ರಮೂಲಂ ಅತಿವಜ, ಶುಂಠಿ, ಜಿಲಕರ, ಕರಕ್ಕಾಯಲು, ಗಂಟುಭಾರಂಗಿ, ತಿಪ್ಪತೀಗ, ಅಡ್ಡಸರಂ, ಮಿರಿಯಾಲು, ವಾಯುವಿಳಂಗಾಲು, ಮುಲುವುನ್ನೆವೇರು, ನೇಲಮುಲುಕ, ತುಂಗಮುಸ್ತುಲು ಇವಿ ಕಷಾಯಂ ಪೆಟ್ಟಿ ಈಯನು ಖಾಸ, ಶ್ವಾಸ, ಶ್ಲೇಷ್ಮ, ಪೀನಸ, ಛರ್ದಿ ಸಹ ಗುಣಮೌನು.

ಆಡುಸೋಗೆ, ನೆಲಗುಳ್ಳ, ಕಳ್ಳಂಗಡಲೆ, ಮಂಗರವಳ್ಳಿ, ಕಟುಕರೋಹಿಣಿ, ಇವಂ ಸಮನಾಗಿ ಕಷಾಯವಿಟ್ಟು ಜೇನುತುಪ್ಪವೆರಸಿ ಕುಡಿಯಲು ಖಾಸ, ಶ್ವಾಸ ರೋಗಗಳು ಮಾಣ್ಗುಂ. ೭

ನೆಲಗುಳ್ಳದ (ಸಹಮೂಲ) ರಸ, ಹಾವುಮೆಕ್ಕೆ ಬೇರಿನ ರಸ, ಇವು ಬಗೆ ೧ಕ್ಕೆ ೧ಮಾನ, ಹಾಲು ಒಂದು ಬಳ್ಳ, ಅಡ್ಡಸರದ ರಸ, ಪಡಿ ೧ ಸಹ ಕೂಡಿ ಕಷಾಯವಿಟ್ಟು ಇದರಲ್ಲಿ ಶುಂಠಿ, ಹಿಪ್ಪಲಿ, ಮೆಣಸು, ಚಂಗಲಕೋಷ್ಟ, ಓಮು, ಗಂಟುಭಾರಂಗಿ, ಅಳಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಸೈಂಧವಲವಣ ಇವಂ ಸಮಾನಗೊಂಡು ಚೂರ್ಣಿಸಿ ಹಾಕಿ ಆಜ್ಯಪಾಕದಲ್ಲಿಳುಹಿಕೊಂಡು ಸೇವಿಸಲು ಖಾಸ, ಶ್ವಾಸ, ವಾತ, ಪಿತ್ತ, ಮಂದಾಗ್ನಿ, ಹೃದಯಶೂಲೆ, ಜ್ವರ ಮುಂತಾಗಿ ಗುಣವಹುದು. ೮

## ಚೂರ್ಣಗಳು

ಲವಂಗಚಕ್ಕೆ ಗ ೪ ತೂಕ, ಹಿಪ್ಪಲಿ, ಜಾಕಾಯಿ, ಶುಂಠಿ, ಗಸಗಸೆ, ಕುರಾಸಾನಿ, ಓಮು, ಅಳಿಲೆಕಾಯಿ, ಚಾರಪಪ್ಪು, ಏಲಕ್ಕಿ, ಇಷ್ಟನು ಚೂರ್ಣಂಗೆಯ್ದು ಗ ೧೨ ತೂಕ ಸಕ್ಕರೆಯುಂ ಬೆರಸಿ ಮೂವೆರಳಿಗೆ ಬಂದಷ್ಟು ಚೂರ್ಣವಂ ಉದಯದಲ್ಲಿ ಸೇವಿಸಲು ಕೆಮ್ಮು ಪರಿಹರ. ೧

ದೇವದಾರು, ರಾಸ್ಮೆ, ಶುಂಠಿ, ಹಿಪ್ಪಲಿ, ಮೆಣಸು, ಅಳಿಲೆಕಾಯಿ, ತಾರೆಕಾಯಿ ನೆಲ್ಲಿ[1]ಕಾಯಿ[1], [2]ವಿಳಂಗ, ಪದ್ಮಕ,[2] ಇವನೆಲ್ಲ ಚೂರ್ಣಿಸಿ [3]ಸಕ್ಕರೆ ವೆರಸಿ ಸೇವಿಸೆ ಪಂಚಖಾಸಂ ಮಾಣ್ಗುಂ[3]. ೨

ಹಿಪ್ಪಲಿ, ಸಕ್ಕರೆ, ಆಡುಸೋಗೆ, ಭತ್ತದ ಅರಳು, ನೆಲ್ಲಿಕಾಯಿ, ಇವಂ ಸಮಾಂಶ ಚೂರ್ಣವ ಮಾಡಿ ತುಪ್ಪ, ಜೇನತುಪ್ಪದಿಂ ಕಲಸಿ ಮೆಲ್ಲಲು ಪಿತ್ತಖಾಸಹರ. ೩

ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಶುಂಠಿ, ಹಿಪ್ಪಲಿ, ಮೆಣಸು, ಕರ್ಕಾಟಕ ಶೃಂಗಿ, ಗಂಟುಭಾರಂಗಿ, ಸೈಂಧವಲವಣ, ಇವನ್ನೆಲ್ಲಾ ಚೂರ್ಣಿಸಿ ವರಹ ತೂಕವಂ ತೆಗೆದುಕೊಳ್ಳೆ ಕೆಮ್ಮು ಬಿಡುವುದು. ೪

ಇಂಗು, ಬಜೆ, ಓಮು, ಶುಂಠಿ, ಏಲಕ್ಕಿ, ಅಳಿಲೆಕಾಯಿ, ಚಂಗಲಕೋಷ್ಟ, ಚಿತ್ರಮೂಲ, ಹಿಪ್ಪಲಿ, ಈ ಒಂಭತ್ತನು ಕ್ರಮದಿಂದ ಏಕೋತ್ತರ ವೃದ್ಧಿಯಾಗಿ ಚೂರ್ಣಿಸಿ ವಸ್ತ್ರಗಾಳಿತವಂ ಮಾಡಿ ಇರಿಸಿಕ್ಕೊಂಡು ಆಗಾಗ ತುಪ್ಪದಲ್ಲಿ ಕಲಸಿ ಮೆಲ್ಲಲು ಪಲವು ತೆರದ ಕೆಮ್ಮು ಶ್ವಾಸ ಸಹ ಪರಿಹರ. ೫

ಇಂಗು ೧ ವರಹತೂಕ, ಬಜೆ ೨ ತೂಕ, ಬಿಳಿ ಎಕ್ಕಬೇರು ೩ ತೂಕ, ಶುಂಠಿ ೪ ತೂಕ, ಓಮು ೫ ತೂಕ, ಅಳಿಲೆಕಾಯಿ ೬ ತೂಕ, ಚಂಗಲಕೋಷ್ಟ ೭ ತೂಕ, ಚಿತ್ರಮೂಲ ೮ ತೂಕ, ಇಷ್ಟನು ಚೂರ್ಣಂಗೆಯ್ದು ದಿನ ೧ಕ್ಕೆ ವರಹ ೩ ತೂಕಮಂ ಉದಯದಲ್ಲಿ ಬಿಸಿನೀರಿಂ ಕೊಡಲು ೧ ಮಂಡಲಕ್ಕೆ ೨೦ ತೆರದ ಕೆಮ್ಮು, ೮೦ ತೆರದ ವಾತ, ೧೦ ವಿಧದ ಕ್ಷಯ, ಅಷ್ಟಾದಶ ಕುಷ್ಠ, ವಿಂಶತಿ ಮೇಹ ಸಹ ಕೆಡುಗುಂ. ೬

[4]ಚಾತು[4]ರ್ಜಾತಕ, ಲವಂಗಚಕ್ಕೆ, ದ್ರಾಕ್ಷಿ, ಖರ್ಜೂರ, ಯಷ್ಟಿಮಧುಕ, ಜಾಕಾಯಿ, ತವಕ್ಷೀರ, ಹಿಪ್ಪಲಿ, ಚಂಗಲಕೋಷ್ಟ, ಧೂಸಕ್ಕರೆ, ನೆಲ್ಲಿಚಟ್ಟು, ಮುಡಿವಾಳ, ಲಾಮಂಚ, ಶ್ರೀಗಂಧ, ಹಿರಿಮದ್ದಿನ ಬೇರು, ಕೊಮ್ಮೆ ಬೇರು, ತಾವರೆ ಗೆಡ್ಡೆ, ಬೇವಿನ ನಾರು, ಜಟಾಮಾಂಸಿ, ಇವಂ ಸಮಭಾಗವಾಗಿ

---

[1] ಚಟ್ಟು (ಗ). [2] ಕರ್ಕಾಟಕ ಶೃಂಗಿ, ಗಂಟುಭಾರಂಗಿ, ಸೈಂಧವಲವಣ (ಗ)
[3] ಗ ೧ ತೂಕ ತಗೆದುಕೂಳ್ಳೆ ಕೆಮ್ಮು ಬಿಡುವುದು (ಗ). [4] ತ್ರಿ (ಗ).

ಚೂರ್ಣಸಿ ಇಮ್ಮಡಿ ಸಕ್ಕರೆ ವೆರಸಿ ಮೂವೆರಳಿನಷ್ಟನು ಎಳನೀರಿನಲ್ಲಿ ಕೊಡಲು ಕ್ಷಯ, ಖಾಸರೋಗಂ ಮಾಣ್ಗುಂ. ೭

## ಲಘುತಾಳೀಶ ಚೂರ್ಣ

ತಾಳೀಸಪತ್ರ ೧ ತೂಕ, ವೆಣಸು ೨ ತೂಕ, ಶುಂಠಿ ೩ ತೂಕ, ಹಿಪ್ಪಲಿ ೪ ತೂಕ, ತವಕ್ಷೀರ ೫ ತೂಕ, ಲವಂಗಚಕ್ಕೆ ೭ ತೂಕ, ಏಲಕ್ಕಿ ೭ ತೂಕ, ಇವಂ ಚೂರ್ಣವಂಮಾಡಿ ಸಕ್ಕರೆವೆರಸಿ ಸೇವಿಸೆ ಖಾಸ, ಶ್ವಾಸ, ಅರುಚಿ, ಛರ್ದಿ, ಪ್ಲೀಹ, ಎದೆನೋವು, ಪಾರ್ಶ್ವಶೂಲೆ, ಪಾಂಡುರೋಗ ಜ್ವರಾತಿಸಾರಂ ಸಹ ಮಾಣ್ಗುಂ. ೮

## ಸುರಸಾದಿ ಚೂರ್ಣ

ಖಚೋರಂ ಗ ೧ ತೂನು, ಕರ್ಕಾಟಕಶೃಂಗಿ ಗ ೨ ತೂನು, ಏಲಕ್ಕುಲು ೨ ಪಲಾಲು, ಚಿತ್ರಮೂಲಂ ೩ ಪಲಾಲು ಇವಿನಿ ಚೂರ್ಣಂಚೇಸಿ ವಸ್ತ್ರಗಾಳಿತಂ ಚೆಟ್ಟಿ ಲೇಹ್ಯಪಾಕಮುನ ವಂಡಿಂಚಿ ತೇನೆ ೪ ಪಲಾಲು ಬೋಸಿ ಕಲಪಿ ಉದಯಮುನ ಮುಂದುಸೇವಿಂಚೇದಿ, ಸಕಲರೋಗಂ, ಶ್ವಾಸಂ, ಖಾಸಂ, ಸಕಲ ಛರ್ದುಲು ಸಹ ಗುಣಮೌನು. ೯

## ರಾಸ್ನ್ಯಾದಿ ಚೂರ್ಣ

ಪರಂಗಿ ಚಕ್ಕ ಸೇರು ೧, ಶುಂಠಿ ಗ ೨ ತೂನು, ಚಿತ್ರಮೂಲಂ ಗ ೨ತೂನು, ಪಿಪ್ಪಳ್ಳು ಗ ೨ ತೂನು, ಮಿರಿಯಾಲು ಗ ೨ ತೂನು, ಕಠಕ್ಕಾಯಲು ಗ ೩ ತೂನು, ತಾಂದ್ರಿಕಾಯಿ, ಉಸುರಿಕ ಪಪ್ಪು, ಲವಂಗಂ, ಲವಂಗಪತ್ರ, ನಾಗಕೇಸರಾಲು, ಚಂಗಲಕೋಷ್ಟಂ, ಗಂಟುಭಾರಂಗಿ, ಪಿಪ್ಪಲಮೂಲಂ, ಅಜಾಮೋದಂ, ಜಾಜಿ ಕಾಯಿ, ಜಾಪತ್ರಿ, ವಾದಮ್, ವಿಳಂಗಾಲು, ರಾಸ್ನ, ತಪಸಿನಾರು ಇವಿ ವಗಕು ಗ ೨ ತೂನು ಚೂರ್ಣಂಚೇಸಿ ತೇನೆತೊ ಇಚ್ಚೇದಿ. ದಗ್ಗುಲು, ಶ್ಲೇಷ್ಮಂ, ಶೂಲ, ನೊಪ್ಪುಲು, ವಟ್ಟಿನೊಪ್ಪುಲು, ವಾಯುನೊಪ್ಪುಲು ಸಹ ಮಾನುನು. ೧೦

ಗರುಗವಿತ್ತುಲ ಚೂರ್ಣಂ ಒಕ್ಕ ಭಾಗಂ, ಓಮುಪೊಟ್ಟುಚೂರ್ಣಂ ಒಕ ಭಾಗಂ, ಮಿರಿಯಪುಪೊಡಿ ಒಕಭಾಗಂ, ರೆಂಡು ಕೊಮ್ಮುಲು ವಜ, ಇಂತ ಚೂರ್ಣಂ ಚೇಸಿ ನೇಯಿತೊ ಕಲಪಿ ಸೇವಿಂಚಿತೆ ಪುಟ್ಟುಗೂರುಲು ಮಾನುನು. ೧೧

## ಶ್ಲೇಷ್ಮರಾಜ ಚೂರ್ಣ

ಹಿಪ್ಪಲಿ, ಶುಂಠಿ, ಗಂಟುಭಾರಂಗಿ, ಅಜಾಮೋದ, ವೆಣಸು, ಜೀರಿಗೆ, ವಾಯುವಿಳಂಗ, ಲವಂಗ, ಗಂಧಿಗತಗರ, ಜಾಪತ್ರೆ, ಅಳಿಲೆಕಾಯಿ, ನೆಲ್ಲಿಕಾಯಿ,

ಚಕಂ, ಗುಲ್ಮಂ, ಕ್ಷಯರೋಗಂ, ಖಾಸಶ್ವಾಸಮುಲು, ಗ್ರಹಣಿ, ವಿಷಮಜ್ವರ ಮುಲು, ಮಹೋದರಂ, ಪಾಂಡುರೋಗಂ, ಪ್ರಾತಜ್ವರಮು ಸಹ ಮಾನುನು. ೧

## ಗಂಡೂಷ.

ಕರಕ್ಕಾಯುಲು, ಶುಂಠಿ, ಶರ್ಕರ, ವೆಲಿಗಾರಂ, ಪಟಿಕಂ, ಪೆಟಲುಪ್ಪು, ತೇನೆ ಸಹ ನಿಮ್ಮಪುಲುಸುನ ಮೆತ್ತಗಾನೂರಿ ಗಂಡೂಷಂಚೇಯುನು ಛರ್ದಿನಾಶನಂ. ೧

ಶುದ್ಧಿ ಚೇಸಿನ ಗಂಧಕಂ ೨ ರೂಕ ಎತ್ತು ಚೂರ್ಣಿಂಚಿ ನಿಮ್ಮಪುಲುಸುನ ನೂರಿ ನಾಲಿಕಕುಲೇಪನಂ ಜೇಸಿತೆ ವಾಂತಿ ನಿಲುಚುನು. ೨

ವೆರಿಗಾಕುರಸಂ ಸೇರು ೧, ಸಜ್ಜರಸಂ ಗ ೧ ತೂನು, ಏಲಕ್ಕುಲು ಗ ೩ ಎತ್ತು, ನೇಮಲಿ ಯಿಾಕಲಭಸ್ಮಂ ಗ ೧ ತೂ, ಇಂತ ಚೂರ್ಣಂ ಜೇಸಿ ಸನ್ನಗಾನೂರಿ ನಾಲಿಕಕು ಲೇಪನಂಜೇಸಿತೆನು ತ್ರಾಗಿತೆನು ವಾಂತಿ ನಿಲುಚುನು. ೩

ಅಂತು ಸಂಹಿತೆ ೧೭, ಕಷಾಯ ೯, ಚೂರ್ಣ ೧, ಲೇಹ್ಯ೨, ರಸಾಯನ ೧, ಗಂಡೂಷ ೩ ಸಹ ಪ್ರಯೋಗ ೩೩ ಕ್ಕಂ ಶ್ರೀ ಶ್ರೀ

ಅಂತು ಛರ್ದಿರೋಗದ ಬಗೆ ೧ಕ್ಕೆ ಕುಳ ೪ಕ್ಕೆ ಸಂಹಿತೆ ೫೦, ಕಲ್ಕ ೯, ಕಷಾಯ ೧೭, ಚೂರ್ಣ ೮, ಲೇಹ್ಯ ೭, ಗಂಡೂಷ ೫, ನಸ್ಯ ೧, ವಟಿಕ ೧, ರಸಾಯನ ೧, ಗಂಜಿ ೨, ಕೂಡ ಪ್ರಯೋಗ ೧೦೨ಕ್ಕಂ ಸಮಾಪ್ತಂ.

———

## ಹೃದ್ರೋಗ.

ನಿದಾನ ಮೆಂತೆಂದಡೆ.—ವಾತಪಿತ್ತ ಶ್ಲೇಷ್ಮಗಳೊಂದೊಂದರಿಂದಲೂ, ಈ ಮೂರೂಕೂಡಿದ ದ್ರೋಷತ್ರಯದಿಂದಲೂ ಕ್ರಿಮಿಯಿಂದಲೂ ಹೃದ್ರೋಗವೈದು ತೆರನಾಗಿರ್ಪುದು. ಈ ಪ್ರಕಾರಮಾಗಿ ಎದೆಯಲ್ಲಿ ನೋವುಕಾಣಿಸಿ ತೀಟೆಯುಂ ಟಾಗಿರ್ಪುದೆ ಕ್ರಿಮಿಯಿಂದ ಉಂಟಾದ ಹೃದ್ರೋಗವೆಂದರಿದು ತತ್ಸಾಧನ ಚಿಕಿತ್ಸೆಯಂ ಮಾಡುವುದು.

### ಚಿಕಿತ್ಸೆ—ಸಂಹಿತೆಗಳು.

ಔಡಲದ ಬೇರನ್ನು ಹಾಲೊಳು ಹಾಕಿ ಕಾಸಿ ಸೇವಿಸಲು ವಾತದಿಂದಾದ ಹೃದ್ರೋಗಂ ಮಾಣ್ಗುಂ. ೧

ಇಂಗು, ಸೈಂಧವ, ಶುಂಠಿ ಇವಂ ಚೂರ್ಣಿಸಿ ಹಸಿ ಶುಂಠಿರಸದಿಂ ಸೇವಿಸೆ ಹೃದ್ರೋಗ ಶಮನಮಕ್ಕುಂ. ೨

ಅರಗಿನ ಚೂರ್ಣವಂ ವಸ್ತ್ರಗಾಳಿತಂಗೈದು ಜೇನುತುಪ್ಪವೆರಸಿ ಕುಡಿಯೆ ಎದೆನೋವು ಪರಿಹರಮಕ್ಕುಂ. ೩

ರಂಜಿಕೆಸೊಪ್ಪಿನ ರಸವಂ ತೆಗೆದು ಮೂರುದುಡ್ಡು ತೂಕದಲ್ಲಿ ನಾಲ್ಕು ಕಾಳು ಜೀರಿಗೆ ಹಾಕಿ ತೆಗೆದುಕೊಳ್ಳಲು ಹೃದ್ರೋಗ ಪರಿಹರ. ೪

ಅಡವಿಗುಂಬಳದ ಗೆಡ್ಡೆ ಮುಂಗೈಗಾತ್ರವಂ ಹಾಲಹೊಯ್ದು ಕುಟ್ಟಿ ರಸವ ತೆಗೆದು ಆ ರಸಂ ಒಂದು ಬಟ್ಟಲಂಕೊಳ್ಳೆ ಎದೆನೋವು ಮಾಣ್ಗುಂ. ೫

ಪಾರಿಜಪಾಕು ಚಿಗುರು, ಬೆಲ್ಲಂ, ನೇಯಿ ಕೂಡ ಕಲಪಿ ಈಯುನು ರೊಮ್ಮು ನೊಪ್ಪಿ ನಿಲುಚುನು. ೬

ಮುಲ್ಲಂಗಿ ಗಡ್ಡಲ ರಸಂ, ನಿಂಬಪುಲುಸು, ನೂನೆ ಸಹ ತ್ರಾಗನು ರೊಮ್ಮು ನೊಪ್ಪಿ ಮಾನುನು. ೭

ನೂನೆಸೇರು ೧ ಲೋನು ಉಪ್ಪುಕೊಣಿದಿಡು ಬೋಸಿ ಒಕ ನಿಂಬಕಾಯು ಪಿಂಡಿಕೊನಿ ತ್ರಾಗಿತೆ ರೊಮ್ಮು ನೊಪ್ಪಿ ನಿಲುಚುನು. ೮

ತಾಟಿಬೆಲ್ಲಂ, ವೆಲ್ಲುಲ್ಲಿ ಸಹ ನೂರಿ ತಿಂಟೆನು ಗುಂಡಿನೊಪ್ಪು ಮಾನುನು. ೯

ಸಂವತ್ಸರ ಲವಣಂ ಗ ೧ ತೂಕ, ಬಿಕ್ಕುಟಾಕುಪಸುರು ಸೇರು ೧, ಪಿಪ್ಪಳ್ಳು, ವೆಲ್ಲುಲ್ಲಿ, ಮಿರಿಯಾಲು ಸಹ ಕಲಪಿ ತ್ರಾಗನು ಗುಂಡೆಲ ಶೂಲ ನಿಲುಚುನು. ೧೦

ಚವುಡ ಉಪ್ಪಲೂರ ಬಟ್ಟಿ ಆವುನೇಯಿ ಕಲಪಿ ದಿನಂ ದುಡ್ಡು ೩ ತೂನು ತ್ರಾಗನು ಗುಂಡೆಲ ನೊಪ್ಪು ಮಾನುನು. ೧೧

ನೂನೆ ಸೇರು ೧, ರಾತಿ ಉಪ್ಪು ಸೇರು ೧, ಒಕನಿಂಬಕಾಯ ಪುಲುಸು ಪಿಂಡಿ ಪೋಟಕು ದುಡ್ಡು ೮ ತೂನು ಪ್ರಕಾರಂ ಮೂಡುದಿನಮುಲು ಇಚ್ಚೇದಿ ಗುಂಡೆಲ ನೊಪ್ಪು ಮಾನುನು ೧೨

ಎಳನೀರಕಾಯ ತೆಚ್ಚಿ ಚಕ್ಕಿಬಾನಲೊ ಆ ಕಷಾಯಮುನು ಉಂಚಿ ಜಿತ್ತಡು ನೀಳ್ಳು ಆ ಕಾಯಿಮೀದ ಉಂಡೇಟಚ್ಚು ದೋಸಿ ಉಡಕನಿಚ್ಚಿ ಕಡಕು ತೀಸಿ ಬಿಲ್ಲಗಾ ತೆಗಕೋಸಿ ಆಂದುಲೊ ಪಿಪ್ಪಳ್ಳು ಪುಡಿ ದು. ೧ ತೂನು ಬೋಸಿ ಪೊಂಗುನು ಆ ಎಳನೀರು ಕಂಚುಲೊ ಬೋಸಿಕೊನಿ ರೋಪಲಿಕಿ ಪುಚ್ಚುಕೋಗಾನು ರೊಮ್ಮು ನೊಪ್ಪಿ ಮಾನುನು. ೧೩

ತಪಸಿ ಆಕು, ವೆರಿಪುಚ್ಚವೇಳ್ಳು, ಚವ್ಯಂ, ಚಿತ್ರಮೂಲಂ, ಶುಂಠಿ, ಪಿಪ್ಪಳ್ಳು, ಮಿರಿಯಾಲು, [1]ಇವಿಕಿಸಮಂ[1] ಸಮುದ್ರಲವಣಂ, ಜಿಲ್ಲೆಡುಪೂವುಲು, ಇವಿ ಕರುಕುಚೇಸಿ ಚೂರ್ಣಿಂಚಿ ಪೆರುಗುತೊ ಇಚ್ಚಿತೆ ಗುಲ್ಮನುಂಡಿಯ್ಯೈನ, ರೊಮ್ಮು ನೊಪ್ಪಿ, ಪಾಂಡು, ಮೂಲವ್ಯಾಧುಲು ಸಹ ಮಾನುನು. ೧೪

ಕೋಲಕಳ್ಳಿವೇರು, ಊಡುಗವೇರು, ಮುನುಗವೇರು, ಉಪ್ಪಿವೇರು, ಚಿತ್ರಮೂಲಂ, ನಾಗವೇರು, ಸಾಸುವುಲು ಮಿರಿಯಾಲು, ವೆಲ್ಲುಲ್ಲಿ ಇವಿ ಸಮಾಂಶಂ,

---

[1] (ಗ) ಪ್ರತಿಯಲ್ಲಿಲ್ಲ.

ಪಚ್ಚಿಪಾಲು, ಅಮಿದಪುನೂನೆ, ಮಂಚಿನೂನೆ, ಜೇಡಿನೂನೆ, ಮಾದರಿಂಚಿ ಬೆಲ್ಲಂ, ನೇತಿಕೊ ಪುಚ್ಚುಕೊನನು ರೊಮ್ಮುಶೂಲ ಮಾನುನು. ೧೫

ಚಿತ್ರಮೂಲಂ ಬೊಚ್ಚೆಡು, ಕಲ್ಲುಪ್ಪು, ಇವಿರೆಂಡುನು ಮಸಿಗಾವೇಸಿ ಸುನ್ನಂ ವಿಡಿಯಂತಂ ಕರಿತೊಬುಚ್ಚು ಕೊನನು ರೊಮ್ಮು ಶೂಲಲು ಮಾನುನು. ೧೬

## ಕಲ್ಕಗಳು.

ಸೈಂಧವಲವಣ, ಯವಕ್ಷಾರ ಸಹ ಬಿಸಿನೀರಿಂದಾದರು ತುಪ್ಪದಲಾದರು ಅರೆದು ಕುಡಿಯಲು ಹೃದ್ರೋಗಂ ಮಾಣ್ಗುಂ ೧

ಇಂಗು, ಸೈಂಧವ, ಶುಂಠಿ, ತಿಗಡೆ, ಚಂಗಲಕೋಷ್ಟ, ಬಜೆ, ಬೋಳತರಂ, ವಾಯಿವಿಳಂಗ ಇವಂ ಗೋಮೂತ್ರದಲ್ಲರೆದು ಕುಡಿಯ ಕೊಡಲು ಹೃದ್ರೋಗಂ ಕೆಡುಗುಂ. ೨

ಗಲಜರವೇಳ್ಳು, ಚಿಟಿಕೆನಪೆವಿಫಲಂ ತೆಚ್ಚಿ ಜೆತ್ತೆಡುಪ್ರಮಾಣಂ ನರಿಕಿ ಪಿಚ್ಚುನು ನಿಂಬಪುಲುಸುನ ನೂರಿ ಅವೇರುನು ಪಚ್ಚಿಂಚಿ ಬಟ್ಟಜುಟ್ಟಿ ನಿಪ್ಪುಲು ಮೀದ ಕಾಲವೇಸಿ ಬಟ್ಟಕಾಲನು ವೇರು ಮಾಡುಕುಂಡ ತೀಸಿ ಇಂಗುವ ಗ ೧ ತೂನು, ಸೈಂಧವ ಗ ೧ ತೂನು, ಗಲಜರವೇರು ಸಹ ನಿಂಬಪುಲುಸುನ ನೂರಿ ಲೋಪಲಿಕಿ ಪುಚ್ಚುಕೊಂಟೆ ಗುಂಡೆಶೂಲಲು ಮಾನುನು. ೩

ಗಚ್ಚಕೊನಲ ರಸಮುತೋನು ವಿರಿಯಾಲ ನೂರಿತ್ರಾಗನು ಗುಂಡೆಲನೊಪ್ಪಿ ನಿಲುಚುನು. ೪

ಸಂವತ್ಸರಲವಣಂ, ಇಂಗುವ, ಶುಂಠಿ, ಸಹ ವೇನೀಳ್ಳತೊ ನೂರಿ ಈಯುನು ಗುಂಡೆಲ ಶೂಲ ಗುಣಮೌನು. ೫

## ಕಷಾಯಗಳು

ಅಮಿದವೇರನಾರು, ಮಾರೆಡುಪಂಡು, ಪೆದ್ದಮುಲುಕ, ರಾಮುಮುಲುಕ, ಮಾದಾಳಪುವೇರು, ವೆಂಡಿಕೊಂಡವೇರು, [1]ಪಲ್ಲೇರು ವೇರು[1], ಯವಕ್ಷಾರಂ, ಇಂಗುವ, ಪಂಚಲವಣಾಲು, ಅಮಿದಮು, ಇವಿನಿ ಕಷಾಯಂಬೆಟ್ಟಿ ಇಚ್ಚಿತೆ ರೊಮ್ಮು ನೊಪ್ಪಿ, ಮೇಹಶೂಲಲು ಸಹ ಗುಣಮೌನು. ೧

ಬೆಲ್ಲವತ್ತದ ಬೇರು, ನರುವಲದ ಬೇರು, ಗುಳ್ಳದ ಬೇರು, ಪಾದರಿ ಬೇರು, ಹೆಮ್ಮರದ ಬೇರು, ಗುಳ್ಳ, ಹೆಗ್ಗುಳ್ಳ, ಎರಡೆಲೆಹೊನ್ನೆ, ಮೂರೆಲೆಹೊನ್ನೆ, ನೆಗ್ಗಿಲು ಸಹ ದಶಮೂಲವೆನಿಸಿಕೊಂಬ ಈ ಬೇರುಗಳು, ಕಳ್ಳಂಗಡಲೆ, ಶುಂಠಿ, ಸಹ ಕಷಾಯ ವಿಟ್ಟು ಸಲ್ಲನಾರು, ಅರಗು ಇವು ಪ್ರತ್ಯೇಕಂ ಗ ೨ ತೂಕವಂ ಚೂರ್ಣಿಸಿ ಇದ ರೊಳು ಹಾಕಿ ಆ ಕಷಾಯವಂ ಸೇವಿಸೆ ವಾತದಿಂ ಪುಟ್ಟಿದ ಹೃದ್ರೋಗ, ಗುಲ್ಮ, ಶೂಲೆ, ಎದೆನೋವು, ಶ್ವಾಸ, ಖಾಸ, ಸಹ ಮಾಣ್ಗುಂ. ೨

---

[1] (ಗ) ಪ್ರತಿಯಲ್ಲಿಲ್ಲ.

ಮೇಲೆ ಪೇಳ್ದ ದಶಮೂಲಂಗಳು, ಕಳ್ಳಂಗಡಲೆ, ಶುಂಠಿ ಸಹ ಕಷಾಯವಿಕ್ಕಿ ಕಲ್ಲನಾರ ಚೂರ್ಣವೆರಸಿ ಸೇವಿಸೆ ಹೃದ್ರೋಗಂ ಶಮನಮಕ್ಕು. ೩

ಕೊತ್ತುಂಬರಿ, ಶುಂಠಿ, ಗುಳ್ಳ, ನೆಲಗುಳ್ಳ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ನೆಗ್ಗಿಲು, ಆವರಿಕೆ ಬೇರು, ಇವಂ ಕಷಾಯವಿಕ್ಕಿ ಜೇನುತುಪ್ಪವೆರಸಿ ಕುಡಿಯೆ ಪಿತ್ತದಿಂ ಪುಟ್ಟಿದ ಹೃದ್ರೋಗಂ ಮಾಣ್ಗುಂ. ೪

ಹಿಪ್ಪಲಿ, ಕಳ್ಳಂಗಡಲೆ, ಆಷಾಡಿ ಬೇರು, ನೆಗ್ಗಿಲ ಬೇರು, ಇವಂ ಒಂದು ಪಡಿ ಹಾಲಿನಲ್ಲಿ ಹಾಕಿ ಅರೆವಸವಾಗುವಂತೆ ಕಾಸಿ ಶರ್ಕರೆವೆರಸಿ ಕುಡಿಯೆ ಪಿತ್ತದಿಂದಾದ ಎದೆನೋವು ಶಮನಮಕ್ಕುಂ. ೫

ಕೊಮ್ಮೆ ಬೇರು, ಶುಂಠಿ, ಮೆಣಸು, ಹಿಪ್ಪಲಿ, ಆಳಿಲೆಕಾಯಿ, ಕೊತ್ತಂಬರಿ, ಕರಿಬೇವು ಇವಂ ಕಷಾಯವಿಕ್ಕಿ ಸೈಂಧವ ಚೂರ್ಣ ವೆರಸಿ ಕುಡಿಯೆ ವಾತದಿಂ ಪುಟ್ಟಿದ ಹೃದ್ರೋಗಂ ಮಾಣ್ಗುಂ. ೬

ಉಳ್ಳಿ, ಕೊಮ್ಮೆ ಬೇರು, ಶುಂಠಿ, ಹುರುಳಿ, ಉದ್ದು ಇವಂ ಸಮಾನಂಗೊಂಡು ಸೈಂಧವ ಚೂರ್ಣವ ಹಾಕಿ ಎಳ್ಳೆಣ್ಣೆಯ ಬಿಟ್ಟು ಕುಡಿಯೆ ಶ್ಲೇಷ್ಮದಿಂದಾದ ಹೃದ್ರೋಗಂ, ಗುಲ್ಮ ಮುಂತಾಗಿ ಮಾಣ್ಗುಂ ೭

ರೊಕ್ಕಿ ಬೇರು, ಔಡಲದ ಬೇರು, ಹಳದಿ ಗೋರಟೆ ಬೇರು, ಶುಂಠಿ, ರಾಸ್ಮೆ, ಕೊಮ್ಮೆ ಬೇರು ಇವಂ ಕಷಾಯವಿಟ್ಟು ಇಂಗಿನ ಚೂರ್ಣವ ಹಾಕಿ ಸೇವಿಸೆ ಎದೆನೋವು, ಶ್ವಾಸ, ಖಾಸ, ಗುಲ್ಮ ಸಹ ಮಾಣ್ಗುಂ. ೮

ಕೊತ್ತುಮ್ಮಲು, ಶುಂಠಿ, ಪೆದ್ದಮುಲುಕ, ನೇಲಮುಲುಕ, ಮುಯ್ಯಾಕು, ಪೊನ್ನಗುಮ್ಮಡು, ಚಿಟ್ಟಮುಟ್ಟವೇರು, ಇವಿನಿ ಕಷಾಯಂಬೆಟ್ಟಿ ಈಯುನು ಹೃದ್ರೋಗಂ, ಒಳ್ಳುನೊಪ್ಪುಲು ಸಹ ಮಾನುನು. ೯

ಅಂತು ಸಂಹಿತೆ ೧೬, ಕಲ್ಕ ೫, ಕಷಾಯ ೯ ಸಹ ಪ್ರಯೋಗ ೩೦ಕ್ಕಂ ಶ್ರೀ.

---

## ಮದಮೂರ್ಛಾ—ಸನ್ಯಾಸರೋಗಂ

ನಿದಾನವೆಂತೆಂದಡೆ.—ರಜೋಗುಣದ ಪೆರ್ಚುಗೆಯುಂಟಾದವಂಗೆ, ಜ್ಞಾನ ವಿರಹಿತನಾದ ಮೂಢನಿಗೆ, ತನಗೆ ಹಿತವಲ್ಲದಾಹಾರಮಂ ಕೊಂಬಾತಂಗೆ ಮದವೆಂದು, ಮೂರ್ಛೆಯೆಂದು, ಸನ್ಯಾಸವೆಂದು ಮೂರು ಪ್ರಕಾರವಾದ ರೋಗಗಳುಂಟಾಗುವವು; ರಸಧಾತು, ರಕ್ತಧಾತು ಮೇದೋಧಾತುಗಳಲ್ಲಿ ಸಂಚರಿಪ ನಾಡೀರಂಧ್ರಗಳ ನಿರೋಧದಿಂದಮೀವ್ಯಾಧಿ ಪುಟ್ಟುಗುಂ. ಇದರಲ್ಲಿ ರಸಧಾತುವೆಂಬ

ನಾಡೀನಿರೋಧದಿಂದ ಮದಮೂರ್ಛೆಯೆಂಬ ರೋಗ ಉದಯಿಸುವುದು. ರಕ್ತ ಧಾತುವೆಂಬ ನಾಡೀನಿರೋಧದಿಂ ಸನ್ಯಾಸವೆಂಬ ರೋಗಂ ಸಂಜನಿಸುವುದು. ಈ ಮದಾತ್ಯಯ ರೋಗದಿಂದಲೂ ಮದಮೂರ್ಛೆರೋಗಂ ಬಲವಂತಮಕ್ಕುಂ. ಇವೆರಡು ರೋಗಕ್ಕಿಂತಲೂ ಕ್ರಮದಿಂದೊಂದಕ್ಕೊಂದು ಬಲೀಯವಾಗಿ ಸನ್ಯಾಸ ವೆಂಬ ರೋಗವು ಮತ್ತು ಬಲವತ್ತಾಗಿಹುದು. ಈ ರೋಗಗಳಲ್ಲಿ ಮದಾತ್ಯಯ ವೆಂಬ ರೋಗವು ದೋಷತ್ರಯದಿಂದಲೂ, ರಕ್ತದ ಹೆಚ್ಚುಗೆಯಿಂದಲೂ, ಮದ್ಯಪಾನ ದಿಂದಲೂ, ವಿಷಪ್ರಯೋಗದಿಂದಲೂ ಉಂಟಾಗಿಕ್ಕುಂ. ವಾತಪಿತ್ತ ಶ್ಲೇಷ್ಮಗಳೊಂ ದೊಂದರಿಂದಲೂ, ದೋಷತ್ರಯದಿಂದಲೂ ಪುಟ್ಟುವುದಾದ ಮದಮೂರ್ಛೆಯು ನಾಲ್ಕು ತೆರನಾಗಿರ್ಪುದು. ಮತಾಂತರೆ, ಮದಾತ್ಯಯದಲ್ಲಿಯೂ ಮದಮೂರ್ಛೆ ಯಲ್ಲಿಯೂ ವೇಗವಾಗಿ ವಾತಪಿತ್ತಹರವಾದ ಚಿಕಿತ್ಸೆಯನ್ನೇ ಮಾಡುವುದು. ಮದಾ ತ್ಯಯ ಮದಮೂರ್ಛೆ ಸನ್ಯಾಸಗಳೆಂಬ ಮೂರು ರೋಗಗಳಲ್ಲಿಯೂ ಪೈತ್ಯಪೆರ್ಚುಗೆ ಯಾಗಿ ಕೂಡಿಹುದರಿಂ ಪೈತ್ಯಹರಮಾದ ಮುಖ್ಯವಾದ ಚಿಕಿತ್ಸೆಯಂ ಮಾಡಿಸುವುದು. ವಾತಾದಿ ದೋಷಗಳು ವಾಕ್ಕು, ದೇಹ, ಮನಸ್ಸುಗಳಂ ನಿರೋಧಿಸಿ ಅತ್ಯಂತ ಬಲ ವುಳ್ಳುದಾಗಿ ಪ್ರಾಣಸ್ಥಾನವಾದ ಹೃದಯವನಾಶ್ರಯಿಸಿ ಸನ್ಯಾಸವೆಂಬ ರೋಗ ವನ್ನುಂಟುಮಾಡುವುದು. ಇದರಿಂದೀರೋಗವುಳ್ಳವರು ಕಟ್ಟಿಗೆಯಂತೆ ನಿಶ್ಚೇಷ್ಟೆ ಯುಳ್ಳವರಾಗಿ ಮೃತಪ್ರಾಯರಾಗಿ ಇರುತ್ತಮಿಹರು; ಈ ವ್ಯಾಧಿಗೆ ಶೀಘ್ರವಾಗಿ ತಕ್ಕ ಚಿಕಿತ್ಸೆಯನು ಮಾಡದಿರ್ದೊಡೆ ಆ ವ್ಯಾಧಿಯ ವೇಗದಿಂ ಶೀಘ್ರದಿಂದಲೆ ಮರಣವನ್ನೈದುತಿಹರು. ಅದರಿಂದೀಸನ್ಯಾಸರೋಗದಲ್ಲಿ ತೀಕ್ಷ್ಣವಾದ ಅಂಜನ ನಶ್ಯಂಗಳಂ ಮಾಡಿಸುವುದು. ಅಪಸ್ಮಾರವ್ಯಾಧಿಯಲ್ಲಿ ಯಾವ ಚಿಹ್ನೆಗಳುಂಟಾ ಗಿರ್ಪುದೊ ಆ ಚಿಹ್ನೆಗಳೆ ಈ ಮದಮೂರ್ಛಾ ಸನ್ಯಾಸವೆಂಬ ರೋಗಗಳಲ್ಲಿಯೂ ಉಂಟಾಗಿರ್ಪುದೆಂದು ತಿಳಿದು ತತ್ಸಾಧನ ಚಿಕಿತ್ಸೆಯಂ ಮಾಡುವುದು.

## ಸಂಹಿತೆಗಳು

ಮದಮೂರ್ಛೆಯಿಂ ಮರವೆಯಾಗಿರ್ದವರಿಗೆ ಕ್ರೂರವಾದ ಚಿಕಿತ್ಸೆಗಳಂ ನಡೆಸಿ ಜ್ಞಾನವಂ ಪುಟ್ಟಿಸಿ ಆ ಬಳಿಕ ಬೆಳ್ಳುಳ್ಳಿ ರಸವಂ ಪಾನವ ಮಾಡಿಸುವುದು; ಮದಮೂರ್ಛೆ ವ್ಯಾಧಿ ಪರಿಹರಮಕ್ಕುಂ. ೧

ಮಾದಳದ ಹಣ್ಣಿನ ಕೇಸರದಲ್ಲಿ ಶುಂಠಿ, ಹಿಪ್ಪಲಿ, ಮೆಣಸು, ಸೈಂಧವಗಳ ಚೂರ್ಣವ ಹಾಕಿ ಮೆಲ್ಲಲು ಸನ್ಯಾಸರೋಗಂ ಗುಣವಾಕ್ಕುಂ. ೨

## ಕಷಾಯಗಳು

ಸಿಹಿ ಹಾಲೆ ಬೇರಿನ ಕಷಾಯವಂ ಸೇವಿಸಲು ಸನ್ಯಾಸರೋಗ ಪರಿಹರ. ೧

ಅಳಲೆಕಾಯಂ ಕಷಾಯವಿಕ್ಕಿ ಕೊಡಲು ಸನ್ನ್ಯಾಸರೋಗ ಶಮನಮಕ್ಕುಂ. ೨

ದ್ರಾಕ್ಷಿಹಣ್ಣು, ಯಷ್ಟಿಮಧುಕ, ಇಪ್ಪೆಹೂವು, ಹಿಪ್ಪಲಿ, ಖರ್ಜೂರ, ಸೊಗದೆ ಬೇರು, ಮುಡಿವಾಳ, ಕೊಡಸಾರಿಗೆಡ್ಡೆ ಇವಂ ಕಷಾಯವಿಕ್ಕಿ ಆರಿಸಿ ಕೊಡಲು ಮದಮೂರ್ಛೆ ಪರಿಹರಮಕ್ಕುಂ. ೩

ಶ್ರೀಗಂಧ, ದ್ರಾಕ್ಷೆ, ಯಷ್ಟಿಮಧುಕ, ಇಪ್ಪೆಹೂವು, ಹಿಪ್ಪಲಿ, ಖರ್ಜೂರಂ, ಸುಗಂಧಪಾಲು, ತುಂಗಗಡ್ಡಲು, ವಟ್ಟಿವೇಳ್ಳು ಇವಿನಿ ಸಮಾಂಶಂ ಕಷಾಯಂಗಾಚಿ ಈಯುನು ಮೂರ್ಛಲು ನಿಲುಚುನು, ೪

## ನಶ್ಯ

ಮೊಲೆಹಾಲಿನಲ್ಲಿ ಹಸುವಿನ ಹಾಲು, ಜೇನುತುಪ್ಪ, ಸಕ್ಕರೆಗಳ ಕೂಡಿ ನಸ್ಯಂ ಮಾಡೆ ಮದಮೂರ್ಛೆ, ಸನ್ನ್ಯಾಸರೋಗಂ ಕೆಡುಗುಂ. ೧

ದ್ರಾಕ್ಷಿಹಣ್ಣು, ಯಷ್ಟಿಮಧುಕ, ಇಪ್ಪೆಹೂವು, ಹಿಪ್ಪಲಿ, ಖರ್ಜೂರ, ಶ್ರೀಗಂಧ, ಸೊಗದೆ, ಭದ್ರಮುಸ್ತೆ ಇವಂ ಮೊಲೆಹಾಲಿನಲ್ಲಿ ನಸ್ಯಂಗೆಯ್ಯೆ ಮದಮೂರ್ಛೆ ಪರಿಹರ. ೨

ಕಲ್ಯಾಣ ಘೃತವನಾದರು, ಮಹಾತಿಕ್ತ ಘೃತವನಾದರು, ಷಟ್ಫಲ ಘೃತವನಾದರು ಸೇವಿಸೆ ಮದಮೂರ್ಛೆ ಸನ್ನ್ಯಾಸವೆಂಬ ರೋಗ ಗುಣಮಕ್ಕುಂ. ೩

ಅಂತು ಪ್ರಯೋಗ ೯ ಕ್ಕಂ ಶ್ರೀ.

---

## ತೃಷ್ಣಾರೋಗ

ನಿದಾನಂ.—ವಾತದೋಷದಿಂದಲೂ, ಪಿತ್ತದೋಷದಿಂದಲೂ, ಶ್ಲೇಷ್ಮ ದೋಷದಿಂದಲೂ, ಈ ಮೂರು ಕೂಡಿದ ದೋಷತ್ರಯದಿಂದಲೂ, ಧಾತುನಾಶನ ದಿಂದಲೂ ಪುಟ್ಟಿದ ತೃಷೆಯು ಐದು ಪ್ರಕಾರವಾಗಿ ಕೃತ್ರಿಮದಿಂ ಕೂಡಿದ ತೃಷೆ ಗೂಡಿ ಆರು ಪ್ರಕಾರವಾಗಿರ್ಪುದೆ ತೃಷ್ಣಾರೋಗಲಕ್ಷಣಂ. ತೃಷ್ಣೆಯೆಂದೊಡಂ, ದಾಹವೆಂದೊಡಂ, ಬಾಯಾರಿಕೆಯೆಂದೊಡಂ, ನೀರಡಿಕೆಯೆಂದರಿವುದು.

### ಚಿಕಿತ್ಸೆ—ಸಂಹಿತೆಗಳು

ಕೊತ್ತುಂಬರಿ, ಶುಂಠಿ, ಪರ್ಪಾಟಕ, ನೆಲಬೇವು, ನೇರಿಲ ಚಿಗುರು ಇವಂ ಜಜ್ಜಿಗುಟ್ಟಿ ರಾತ್ರಿಯಲ್ಲಿ ತಣ್ಣೀರಲ್ಲಿ ಹಾಕಿ ಇರಿಸಿ ಪ್ರಾತಃಕಾಲದಲ್ಲಿ ಶೋಧಿಸಿ ಕೊಂಡು ಒಂದು ಬೊಟ್ಟು ಜೇನುತುಪ್ಪವ ಹನಿಸಿ ಸೇವಿಸಲು ದಾಹ ಹರಮಕ್ಕುಂ. ೧

ಅತ್ತಿಬೇರಂ ಜಜ್ಜಿಗಟ್ಟಿ ನೀರಿನಲ್ಲಿ ನೆನೆಯಿಕ್ಕಿ ಉದಯದಲ್ಲಿ ಶೋಧಿಸಿಕೊಂಡು ತೆಗೆದುಕೊಳ್ಳಲು ದಾಹ ಶಮನಮಕ್ಕುಂ. ೨

ಹಾವಸೆ, ಬೊಬ್ಬುಳಿಮರದ [1]ತಿಗಡು[1] ಇವೆರಡನು ಕುಟ್ಟಿ ಸೊಲಗೆ ರಸವಂ ತೆಗೆದು ಶೋಧಿಸಿಕೊಂಡು ಲೋಳಿಸರದ ಹಳುಕು ೧ ಸೇರೆಯಷ್ಟನು ಕೂಡಿ ಸಕ್ಕರೆ ವೆರಸಿ ತೆಗೆದುಕೊಳ್ಳೆ ದಾಹಂ ಮಾಣ್ಗುಂ. ೩

ಆಲದ ಬಿಳಲು, ಆಲದ ಕೊನರು, ಯಷ್ಟಿಮಧುಕ, ಚಂಗಲಕೋಷ್ಟ, ನ್ಕೆದಿರೆ ಗೆಡ್ಡೆ, ನೆಲ್ಲ ಅರಳು ಇವಂ ಸಮಚೂರ್ಣವ ಮಾಡಿ ಸಮಸಕ್ಕರೆಯು ಪಾನದಲಾದರೂ ಜೇನುತುಪ್ಪದಲಾದರೂ ಕಲಸಿ ಗುಳಿಗೆಯುಮಾಡಿ ಬಾಯೊಳಿರಿಸಿಕೊಂಡಿರಲು ನೀರ ದಾಹಂ ಕೆಡುಗುಂ. ೪

ಆಕಲಕರಗಾನಿ, ಉಸುರಿಕಪಪ್ಪುಗಾನಿ, ಪೆರುಗು ಶುಂಠಿಗಾನಿ ತಿನನು ತ್ರೋವನಡಚಿನ ದಪ್ಪಿ ಮಾನುನು. ೫

ಏಲಕ್ಕುಲು, ರಾಜಾನಪು ಪೇಲಾಲು ಇವಿನಿ ಶರ್ಕರತೊ ತಿನನು ದಾಹ ಮಡಗುನು. ೬

ಉಸುರಿಕಪಪ್ಪು, ತುಂಗಮುಸ್ತುಲು ಸಹ ಕೂಡ ತಿನನು ದಾಹಮಣಗುನು. ೭

ತಿಪ್ಪತೀಗ ರಸಮುನು ಚಕ್ಕ ಕಲಪಿ ಇಚ್ಚಿತೆ ದಾಹಹರಂ. ೮

ಪೆಸಲು ಗಂಟುನು ಚೆರುಕು ರಸಮುನು ಗೂರ್ಚಿ ಇಂದುರೊ ಪನ್ನೆಂಡು ತೂಕಮು ಚಕ್ಕರಗಲಪಿ ಈಯುನು ದಾಹಂ ಗುಣಮೌನು. ೯

ರೇನು ಗಿಂಜಲೋನಿ ಪಲುಕುಲು ಗ ೨ ತೂನು, ಮಿರಿಯಾಲು ಗ ೧ ತೂನು ಸಹ ಚನ್ನೀಳ್ಳತೊ ಈಯುನು ಮಹತ್ತ್ಯೈನ ದಾಹಮಣಗುನು. ೧೦

ಹಸುವಿನ ಮಜ್ಜಿಗೆ, ಅಂಬಿಲ, ಹುಣಿಸೆಹಣ್ಣು, ದಾಳಿಂಬದ ಹಣ್ಣು, ಮಾದಳದ ಹಣ್ಣು ಈ ೫ ಪಂಚಾಮ್ಲವೆನಿಸಿಕೊಂಬುವು ; ಇವಂ ಪ್ರತ್ಯೇಕವಾಗಿ ಸೇವಿಸೆ ಸಕಲ ತೃಷ್ಣೆಯೂ ಪರಿಹರಮಕ್ಕುಂ. ೧೧

ಮೊಸರಿನಲ್ಲಿ ಬೆಲ್ಲದ ಪುಡಿಯಂ ಹಾಕಿ ಸೇವಿಸೆ ವಾತದಿಂದಾದ ತೃಷ್ಣೆ ಗುಣಮಹುದು ೧೨

ದ್ರಾಕ್ಷಿಹಣ್ಣಿನಲ್ಲಿ ಪಾನಕವಮಾಡಿ ಪಾನವಮಾಡಲು ದಾಹ ಪರಿಹರ. ೧೩

ಹಸುವಿನ ಹಾಲೊಳಾದೊಡಂ, ಆಡಿನ ಹಾಲೊಳಾದೊಡಂ, ಎಮ್ಮೆಯ ಹಾಲೊಳಾದೊಡಂ ಈ ಬಗೆ ಹಾಲಿನಲ್ಲಿ ಶರ್ಕರೆಗೂಡಿ ಪಾನವಮಾಡೆ ಬಾಯಾರಿಕೆ ಗುಣಮಹುದು. ೧೪

ಶುಂಠಿ, ಹಿಪ್ಪಲಿ, ಮೆಣಸು ಇವಂ ಎಳನೀರಿನಲ್ಲಿ ಕದಡಿ ಜೇನುತುಪ್ಪವೆರಸಿ ಕುಡಿಯೆ ಬಾಯಾರಿಕೆ, ವಿಷೂಚಿ, ತಾಪ ಸಹ ಮಾಣ್ಗುಂ. ೧೫

---

1 ಚಿಗುರು (ಗ)

ನೀರುಳ್ಳಿ, ಬೆಲ್ಲ, ಹುಣಿಸೆಹಣ್ಣು ಇವನ್ನು ಕೂಡ ಕಲಸಿ ಮೆಲ್ಲಲು ಬಾಯಾರಿಕೆ ಪರಿಹಾರವಹುದು. ೧೬

ಯಷ್ಟಿಮಧುಕಂ, ವಿರಿಯಾಲು, ಇಪ್ಪಪೂವು ಇವಿನಿ ಸಮಾಂಶಂ ಚೂರ್ಣಂ ಜೇಸಿ ಗ ೩ ತೂನು ಚನ್ನೀಳ್ಳತೊ ಇಚ್ಚಿತೆ ಶ್ಲೇಷ್ಮದಾಹಂ ಮಾನುನು. ೧೭

ವಟ್ಟಿವೇಳ್ಳು, ನಾಗಕೇಸರಂ, ಇವಿನಿ ಸಮಂಗಾ ಚೂರ್ಣಿಂಚಿ ಪಂಚದಾರ ಕಲಪಿ ಚನ್ನೀಳ್ಳತೊ ಈಯುನು ಶ್ಲೇಷ್ಮದಪ್ಪಿ ಮಾನುನು. ೧೮

ಮಾಮೆಡುಚಕ್ಕ, ನೇರೆಡುಚಕ್ಕ ಈ ರೆಂಡುನು ದಂಚಿ ರಸಂ ತೀಸಿ ಚಾರೆಡು ರಸಮುತೊ ಕಿಂಚಿತ್ತು ಕೊತ್ತಸುನ್ನಂ ವೇಸಿ ತ್ರಾಗನು ದಾಹತಾಪಂ, ಬಡಲಿಕ ಸಹ ವಿಡುಚುನು. ೧೯

ಬೂದಿಗುಂಬಳದ ಕಾಯನೆರಡಾಗಿ ಕತ್ತರಿಸಿ ಬೀಜಗಳ ತೆಗೆದುಹಾಕಿ ಖಂಡ ಸಕ್ಕರೆ, ಉದ್ದಿನ ಚೂರ್ಣ ಸಹ ಕಲಸಿ ಕುಂಬಳಕಾಯ ಒಳಭಾಗಕ್ಕೆ ಮಂದವಾಗಿ ಲೇಪಿಸಿ ರಾತ್ರಿಯಲ್ಲಿ ಇಬ್ಬನಿಯೊಳಿರಿಸಿ ಉದಯಕ್ಕೆ ತೆಗೆದುನೋಡೆ ಕುಂಬಳದ ಹೋಳಿನಲ್ಲಿ ಪಾನದ ಹಾಗೆ ಬಂದಿರುವ ನೀರನು ಮುಡಿವಾಳ, ಲಾಮಂಚಗಳಿಂದ ಸೇವಿಸೆ ಅತಿದಾಹಂ, ಪೈತ್ಯರೋಗ ಶಮನಮಕ್ಕುಂ. ೨೦

## ಕಲ್ಕಗಳು

ಯಷ್ಟಿಮಧುಕಂ, ಪಿಪ್ಪಳ್ಳು ಇವಿ ರೆಂಡುನು ಮಾಮೆಡುಚಕ್ಕ, ನೇರೆಡುಚಕ್ಕ ರಸಮುನ ನೂರಿ ಉಂಟಲು ಚೇಸಿ ಒಕ ಉಂಟ ತಿನನು ದಾಹಂ ಮಾನುನು. ೧

ಶುಂಠಿ, ಮೆಣಸು, ಧಾಗುಡಿಬೇರು, ಶ್ರೀಗಂಧ ಸಹ ಚೂರ್ಣಂಗೆಯ್ದು ಬಿಸಿನೀರಿಂ ಕುಡಿಯೆ ದಾಹ ಶಮನಮಕ್ಕುಂ. ೨

ಏಲಕ್ಕಿ, ಜೀರಿಗೆ, ಕೊತ್ತುಂಬರಿ, ಕುಂಬಳದ ಬೀಜ, ದ್ರಾಕ್ಷಿಹಣ್ಣು, ಯಷ್ಟಿಮಧುಕ, ಸಕ್ಕರೆ, ಸಹ ಸಮಭಾಗವಾಗಿ ಎಳನೀರಿಂದರೆದು ಕದಡಿ ಕುಡಿಯೆ ದಾಹಜ್ವರದ ತಾಪ, ಬಳಲಿಕೆ ಸಹ ಪರಿಹರವಹುದು. ೩

ಆಲದ ಮೊಗ್ಗು, ಶ್ರೀಗಂಧ ಇವಂ ಎಳನೀರಿನಿಂದರೆದು ಸಕ್ಕರೆವೆರಸಿ ಕುಡಿಯೆ ದಾಹ, ಬಳಲಿಕೆ ಸಹ ಮಾಣ್ಗುಂ. ೪

ಮರಿ ಊಡಲು, ಚಲ್ಲಗಡ್ಡಲು, ಭೂಶರ್ಕರ, ತವಕ್ಷೀರಿ, ಆವುಪಾಲು, ಪಲ್ಲೇರು ಸಹ ನೂರಿ ತೀಸುಕೊಂಟೆ ದಾಹಂ ಮಾನುನು. ೫

ಗಾರವೇರು, ತಿಪ್ಪತೀಗ, ಕರಕ್ಕಾಯಲು, ಪರ್ಪಾಷ್ಟಕಂ, ಭದ್ರಮುಸ್ತುಲು, ಕಟುಕರೋಹಿಣಿ ಇಂತ ಸಮಭಾಗಂ ಕಷಾಯಂ ಬೆಟ್ಟಿ ಅಷ್ಟಾವಶೇಷಮುಗ ಕಷಾಯಂಗಾಚಿ ವಡುಚುಕೊನಿ ದ್ರಾಕ್ಷಪಂಡು ನೂರಿಯ್ಯೈನ ಈ ದ್ರವ್ಯಮುಲ ಕಲ್ಕಂ ನೂರಿಯ್ಯೈನ ಸೇವಿಂಚಿತೆ ನೋರರುಯೆಂಡೇದಿ, ಜ್ವರಂ, ತಪ್ಪುಮಾಟಲಾಡೇದಿ ಒಳ್ಳುನೊಪ್ಪಿ, ತಲನೊಪ್ಪಿ, ವಿಷಮಜ್ವರಮುಲು, ತಾಪಮು ಸಹ ಗುಣಮೌನು. ೬

## ಕಷಾಯಗಳು

ಭದ್ರಮುಸ್ತೆ, ಲಾಮಂಚ, ಪರ್ಪಾಷ್ಟಕ, ಶ್ರೀಗಂಧ, ಕುರುವೇಲು, ದುಂಪರಾಸ್ಮೆ, ಶುಂಠಿ ಇವು ಪ್ರತ್ಯೇಕ ಗ ೧ ತೂಕವಂ ಕಷಾಯಂ ಕಾಸಿ ಕೊಡಲು ನೀರಡಿಕೆ, ವಾಂತಿಗೂಡಿದ ವಿಷಮಜ್ವರ ಸಹ ಮಾಣ್ಗುಂ. ೧

ಶ್ರೀಗಂಧ, ಕೊತ್ತುಂಬರಿಬೀಜ, ಯಷ್ಟಿಮದುಕ ಸಹ ಸಮಭಾಗ ಕಷಾಯವಿಕ್ಕಿ ಕೊಡಲು ದಾಹ ಹರವಹುದು. ೨

ಮರಿಕೊನಲು, ರಾವಿಕೊನಲು, ಮೇಡಿಕೊನಲು, ನೇರೆಡುಕೊನಲು, ಮಾಮಿಡಿಕೊನಲು ಇವಿ ಕಪಾಯಂ ಜೇಸಿಕೊನಿ ತ್ರಾಗನು ದಾಹಂ ಮಾನುನು. ೩

ಒಂದು ಹಿಡಿ ಜೀರಿಗೆಯಂ ಬೈಗಿನಲ್ಲಿ ನೆನೆಯಹಾಕಿ ಬೆಳಗಾಗ ಈ ನೆನದ ಜೀರಿಗೆಯ ಸಂಗಡ ಬೆಲ್ಲವತ್ತದ ತಿರುಳು, ಲವಂಗ ಸಹ ಹಾಕಿ ಅಷ್ಟಾವಶೇಷ ಕಷಾಯಮಾಡಿ ಕಡೆಯಲ್ಲಿ ಬಸಿದುಕೊಂಡು ಆ ಬೆಂದ ದ್ರವ್ಯವಂ ಈ ಉದಕದಿಂದ ಕಷಾಯದಲ್ಲಿ ಬೆರಸಿ ಕೊಡಲು ಬಹಳವಾದ ಬಾಯಾರಿಕೆ, ಜ್ವರದ ತಾಪದಿಂ ಪುಟ್ಟಿದ ಬಾಯಾರಿಕೆ ಸಹ ಗುಣಮಕ್ಕುಂ. ೪

ಕೊತ್ತುಂಬರಿ, ಶುಂಠಿ, ಪರ್ಪಾಷ್ಟಕ, ನೇರಿಲ ಚಿಗುರು ಇವಂ ರಾತ್ರಿಯಲ್ಲಿ ನೆನೆಯಹಾಕಿ ಪ್ರಾತಃಕಾಲದಲ್ಲಿ ಕಾಸಿ ಶೋಧಿಸಿ ಜೇನುತುಪ್ಪವೆರಸಿ ಸೇವಿಸೆ ದಾಹ ಶಮನಮಕ್ಕುಂ, ೫

ಶ್ರೀಗಂಧ, ಪದ್ಮಕ, ಯಷ್ಟಿಮಧುಕ, ತಾವರೆಯ ಹೂವಿನ ಕೇಸರ, ಇಪ್ಪೆ ಹೂವು, ಅಳಿಲೆಕಾಯಿ, ನೆಲ್ಲಿಚಟ್ಟು, ಕೊತ್ತುಂಬರಿ, ಮುಡಿವಾಳ, ನೈದಿಲೆಗೆಡ್ಡೆ, ಇವಂ ಕಷಾಯಕಾಸಿ ಸಕ್ಕರೆ ಜೇನುತುಪ್ಪವೆರಸಿ ಕೊಡಲು ಬಾಯಾರಿಕೆ, ಪೈತ್ಯ ವಾಯು ಸಹ ಶಮನಮಕ್ಕುಂ. ೬

ದ್ರಾಕ್ಷಿಹಣ್ಣು, ಯಷ್ಟಿಮಧುಕ, ಇಪ್ಪೆಹೂವು, ಖರ್ಜೂರದ ಹಣ್ಣು, ಶ್ರೀಗಂಧ, ಸೊಗದೆ, ಮುಡಿವಾಳ, ಭದ್ರಮುಸ್ತೆ, ಲಾಮಂಚ, ಇವಂ ಕಷಾಯವನಿಟ್ಟು ಆದರೂ ಶೀತಕಷಾಯವನಾದರೂ ಸೇವಿಸೆ ಸಮಸ್ತ ತೃಷ್ಣೆ, ಮದಮೂರ್ಛೆ, ಬುದ್ಧಿಭ್ರಂಶ ಇವೆಲ್ಲ ಪರಿಹಾರಮಕ್ಕುಂ. ೭

ಕೊಡನಾರಿಗೆಡ್ಡೆ, ಓವು, ತಪಸಿಚಕ್ಕೆ, ಬಜೆ, ಶುಂಠಿ, ಚಿತ್ರಮೂಲ, ಕೊತ್ತುಂಬರಿ, ಮುಡಿವಾಳ, ಕರ್ಪೂರಶುಂಠಿ, ಬೆಲ್ಲವತ್ತದ ಬೇರು ಇವಂ ಕಷಾಯಮಾಡಿ ಕುಡಿಯೆ ಬಾಯಾರಿಕೆ ಪರಿಹರಮಕ್ಕುಂ. ೮

ಶುಂಠಿ, ಕಳ್ಳಂಗಡಲೆ, ಬೆಲ್ಲವತ್ತದ ಬೇರು ಸಹ ಕಷಾಯಕಾಸಿ, ಕುಡಿಯೆ ಬಾಯಾರಿಕೆ, ತಾಪ, ಭ್ರಮೆ ಸಹ ಪರಿಹರಮಕ್ಕುಂ. ೯

ಉಸುರಿಕಪಪ್ಪು, ತುಂಗಮುಸ್ತ ಸಹ ಕಷಾಯಂ ಕಾಚಿ ತ್ರಾಗನು ದಪ್ಪಿ ಮಾನುನು. ೧೦

ಪನ್ನೀರುಗಡ್ಡ, ಪಿನ್ನಪೀಚರ, ರಾಸ್ನ, ಯಷ್ಟಿಮಧುಕಂ, ಪಣ್ಣೀರು ವೇರು, ಪೆದ್ದಪೀಚರು ವೇರು, ಪಸುಪು, ಇವನ್ನಿಟಿಕಿ, ಸಮಂ ಕೊಂಡ ಪಿಂಡವೇರು ಸಹ ಕಷಾಯಂಕಾಚಿ, ಚಲ್ಲಾರ್ಚಿ ತೀಸುಕೊನನು ದಾಹಂ ಗುಣಮೌನು. ೧೧

ಇರಿಗಿ[1] ಚೆ[1]ಟ್ಟು, ಯಷ್ಟಿಮಧುಕಂ, ಚಂಗಲಕೋಷ್ಟಂ, ಕುರಿವೇಲು, ಲವಂಗಾಲು, ಪಸುಪು, ಕೊತ್ತುಂಬರಿ, ಜಿಲಕರ, ಇವಿನಿ ಸಮಭಾಗಂ ಕಷಾಯಂಬೆಟ್ಟಿ ಕಯುನು ದಾಹಂ ವಿಡುಚುನು. ೧೨

## ಗುಳಿಗೆ

ಯಷ್ಟಿಮಧುಕ, ಹಿಪ್ಪಲಿ ಇವೆರಡನ್ನು ಸಮತೂಕ ಚೂರ್ಣವ ಮಾಡಿ ಮಾವಿನ ತಿಗಡೆ ಸ್ವರಸದಿಂದ ಅರೆದು ಗುಳಿಗೆಯಂ ಮಾಡಿ ಒಣಗಿಸಿ ದಾಹವೆತ್ತಿದಾಗ ಬಾಯೊಳೊಂದು ಗುಳಿಗೆಯಂ ಹಾಕಿಕೊಳ್ಳಲು ದಾಹಂ ಮಾಣ್ಗುಂ. ೧

ಮರಿವೂಡಲು, ಚಕ್ಕರ, ಚಂಗಲಕೋಷ್ಟಂ, ಕಮಲಂ, ರಾಜಾನಪುಪಿಂಡಿ ಇವಿನಿ ಸಮಚೂರ್ಣಂ ಚೇಸಿ ಕಲಪಿ ಗುಳಿಗಲು ಚೇಸಿ ವಟಿಕಂ ನೋಟಲೊ ವೇಸುಕೊನನು ದಾಹಂ ಮಾನುನು. ೨

ಆಲದ ಪಟ್ಟೆ, ತಾವರೆ ಗೆಡ್ಡೆ, ಯಷ್ಟಿಮಧುಕ, ಭತ್ತದ ಅರಳಿನ ಚೂರ್ಣ, ನೈದಿಲೆ ಗೆಡ್ಡೆ ಇವಂ ಸಮಭಾಗ ಚೂರ್ಣವನ್ನು ಜೇನುತುಪ್ಪದಿಂ ಕಲಸಿ ತಾರೆ ಕಾಯಿ ಪ್ರಮಾಣಂ ವಟಿಕವನ್ನು ಮಾಡಿ ಒಂದು ಪಟಕವಂ ಬಾಯೊಳಿಟ್ಟುಕೊಂಡಿರಲು ದಾಹ ಶಮನಮಕ್ಕುಂ. ೩

ಆಲದ ಬಿಳಲ ಕೊನರು, ಯಷ್ಟಿಮಧುಕ, ಚಂಗಲಕೋಷ್ಟ, ನೈದಿಲು ಗೆಡ್ಡೆ, ಭತ್ತದ ಅರಳು ಇವಂ ಸಮಾಂಶವಾಗಿ ಎಳನೀರಿಂದರೆದು ಗಜ್ಜುಗತೋರ ಗುಳಿಗೆಯಂ ಮಾಡಿ ನೆಳಲಲೊಣಗಿಸಿ ಬಾಯಾರಿದಾಗ ಒಂದು ಗುಳಿಗೆಯಂ ಬಾಯೊಳಿರಿಸಲು ತೃಷ್ಣೆ ಹರಮಕ್ಕುಂ. ೪

ಪರಂಗಿಚಕ್ಕ, ನೀರಬೊಬ್ಬುಲವಿತ್ತಲು, ಪೆದ್ದತಂಗೆಡುವಿತ್ತಲು, ಚಿತ್ರಮೂಲಂ, ಕರ್ಪೂರಂ, ಶಿಲಾಜಿತು, ಕುಂಕುಮಂ, ಕಸ್ತೂರಿ, ಕಸಕಸಲು ಇವಿನಿ ಚೂರ್ಣಂಜೇಸಿ, ಅರಟಿದುಂಪ ಸ್ವರಸಮುಲೊ ಮರ್ದಿಂಚಿ ಪೋಕಂತುಗುಳಿಗಲು ಜೇಸಿ ಒಕಟಿ ಇಚ್ಚಿತೆ ದಾಹಂ ಪರಿಹರಮೌನು. ೫

## ಗಂಡೂಷ

ಬೆಲ್ಲದ ಪಾನವ ಗಂಡೂಷ ಮಾಡಿಸುವುದು. ೧

ಹಾಲೊಳಾದರು ಗಂಡೂಷವ ಮಾಳ್ಪುದು. ೨

ಒಂದ ಜೇನುತುಪ್ಪವನಾದರು ಗಂಡೂಷವ ಮಾಡುವುದು. ೩

[1] ಚಿ. (ಗ)

ಮಾದಳದ ಹಣ್ಣಿನಿಂದಾದರು ಗಂಡೂಷವ ಮಾಡುವುದು. ೪

ತುಪ್ಪದಿಂ ಗಂಡೂಷವ ಮಾಡಿಸುವುದು. ೫

ಈ ಗಂಡೂಷಂಗಳೆಲ್ಲಂ ವಾತದಿಂ ಪುಟ್ಟಿದ ತೃಷೆಯಂ ಪರಿಹಾರಂಗೆಯ್ವುವು.

ಯಷ್ಟಿಮಧುಕ, ಜೀರಿಗೆ, ಚಂಗಲಕೋಷ್ಟ, ಶುಂಠಿ, ಸೈಂಧವ ಇವಂ ಚೂರ್ಣಿಸಿ ಸಮಸಕ್ಕರೆವೆರಸಿ ನಿಂಬೆಹಣ್ಣಿನ ರಸದಿಂ ಕಲಸಿ ನಾಲಗೆಯಲ್ಲಿ ನೆಕ್ಕಿಕೊಳ್ಳಲು ದಾಹ ಶಮನವಹುದು. ೬

ದ್ರಾಕ್ಷಿಹಣ್ಣಿನ ಪಾನವಂ ಗಂಡೂಷಂಗೈವುದು. ೭

ಅಂಬಿಲವನಾದರು ಗಂಡೂಷಂ ಮಾಳ್ಪುದು. ೮

ನಾಲಗೆ ಮುಳ್ಳಾಗಿ ಬಾಯಾರಿಕೆ ಎತ್ತಿದವರಿಗೆ–ಬಿಳಿಗುರುಗಂಜಿ ಬೇರನ್ನೂ, ತುರುಕ ಬೇವಿನ ಹಣ್ಣನೂ ಕಟುಕರೋಹಿಣಿಯನ್ನೂ ಕೂಡ ತೇದು ನಾಲಗೆಗೆ ಲೇಪವಮಾಡಲು ನೀರಡಿಕೆ ಮಾಣ್ಗುಂ. ೯

ಯಷ್ಟಿಮಧುಕ, ಹಿಪ್ಪಲಿ, ಮಾವಿನ ತಿಗುಡು, ನೇರಿಲ ತಿಗುಡು ಇವನ್ನು ಅರೆದು ಗುಳಿಗೆಯಂ ಮಾಡಿ ನಾಲಿಗೆಯ ಮೇಲಿರಿಸಿಕೊಂಡಿರಲು ದಾಹ ನಿಲ್ಲುವುದು. ೧೦

ಯಷ್ಟಿಮಧುಕ, ಶುಂಠಿ, ವೆಲಗಾರಂ, ತೇನೆ, ಪಂಚದಾರ, ಇಂತವಟ್ಟಿನಿ ಅನುಕುಗಾ ಕಲಿಪಿ ನಿಮ್ಮಪಂಡುರಸಮುನ ಗಂಡೂಷಂಚೇಯುನು ದಾಹಂ ನಿಲುಚುನು. ೧೧

ಹಿಪ್ಪಲಿ, ಜೀರಿಗೆ, ಶುಂಠಿ, ಲವಂಗ, ಸೈಂಧವಲವಣ, ಬಿಳುಗಾರ, ಪಟಿಕ, ಏಲಕ್ಕಿ, ಲಾಮಂಚ ಇವಂ ಸಮಾಂಶ ಚೂರ್ಣಮಾಡಿ ಗ ೧ ತೂಕವಂ ಜೇನುತುಪ್ಪ, ಸಕ್ಕರೆ, ಮಾದಳದ ಹಣ್ಣಿನ ರಸದಲ್ಲಿ ಸಹ ಕಲಸಿ ನಾಲಗೆಗೆ ಲೇಪವಂ ಮಾಡೆ ದಾಹ, ಛರ್ದಿ, ಅರೋಚಕ, ಸಹ ಮಾಣ್ಗುಂ. ೧೨

## ಲೇಪ.

ವಟ್ಟಿವೇಳ್ಳು, ಶ್ರೀಗಂಧಂ ರೆಂಡುನು ಮೂಡೆತ್ತು ಚನ್ನೀಳ್ಳತೊ ಕಲಪಿ ಇಟ್ಟಿ ಈ ಔಷಧವಳಿಕಿ ಲೇಪನಂ ಚೇಸಿತೆ ದಾಹಮುನುಂಡಿ ಅಯಿನ ಆರಾಬಾಲು ಮಾನುನು. ೧

ದಾಳಿಂಬ, [1]ಎಲಚಿ[1]ಯೆಲೆ, ಲೋಧ್ರ, ಬೆಲ್ಲ ಇವನೆಲ್ಲ ಮಾದಳದ ಹಣ್ಣಿನ ರಸದಲ್ಲರೆದು ನೆತ್ತಿಯಂ ಪೂಸೆ ನೀರಡಿಕೆ ಪರಿಹರಮಕ್ಕುಂ. ೨

ಹೊಂಗೆಬೀಜವಂ ಎಮ್ಮೆಯ ಹಾಲೊಳರೆದು ಶರೀರಕ್ಕೆ ತೊಡೆಯೆ ಎಂಥಾ ದಾಹವೂ ಪರಿಹರಮಕ್ಕುಂ. ೩

ಅಂತು ತೃಷ್ಣಾರೋಗದ ಬಗೆ ೧ಕ್ಕೆ ಸಂಹಿತೆ ೨೧, ಕಲ್ಕ ೬, ಕಷಾಯ ೧೨, ಗುಳಿಗೆ ೫, ಗಂಡೂಷಾದಿ ೧೨, ಲೇಪ ೩ ಸಹ ಪ್ರಯೋಗ ೫೯ ಕ್ಕಂ ಸಮಾಪ್ತಂ.

---

೧ (ಗ) ಏಲಕ್ಕಿ.

## ಅರ್ಶರೋಗಂ

ನಿದಾನಂ.—ವಿರುದ್ಧವಾದ ಆಹಾರ, ಒಡಂಬಡದಿರ್ಪ ಆಹಾರಾದಿಗಳಿಂದಲೂ, ಪ್ರಕೋಪಿಸಿದ ವಾತಾದಿ ದೋಷಗಳಿಂದ ಪ್ರತ್ಯೇಕ ಮೂರು ವಿಧವಾಗಿಯೂ ತ್ರಿದೋಷದಿಂದಲೂ ರಕ್ತಪೆರ್ಚಿ ಇಹುದರಿಂದಲೂ, ತನ್ನ ಸಹಜವಾಗಿ ಪುಟ್ಟುವುದರಿಂದಲೂ ಕೂಡ ಮೂಲವ್ಯಾಧಿ ಮೂರು ಪ್ರಕಾರವಾಗಿ ಅಪಾನದ್ವಾರದ ಮೂರು ನರಗಳ ಮೂಲದಲ್ಲಿ ಕಾಣಿಸಿಕೊಂಬುದು. ಆ ಮೂಲವ್ಯಾಧಿಯ ಪೂರ್ವರೂಪ, ಅನ್ನದಲ್ಲಿ ಅರೋಚಕವು, ಅಗ್ನಿವೈಷಮ್ಯವು, ತೊಡೆಗಳಲ್ಲಿ ನೋವು, ನರಗಳ ನಾಳದಲ್ಲಿ ಧ್ವನಿಯು, ಕಮುರುದೇಗು, ಕಣ್ಣುಹುಬ್ಬುಗಳಲ್ಲಿ [1] ಬಾತುಂಟಾಗಿಹುದಿವೆಲ್ಲಂ [1] ಮೂಲವ್ಯಾಧಿಯಲ್ಲಿ ಮೊದಲು ಕಾಣಿಸಿಕೊಂಬ ಚಿಹ್ನೆಗಳೆಂದರಿದು ತದುಪಶಮ ಚಿಕಿತ್ಸೆಯುಂ ನಡೆಸುವ ವೈದ್ಯನೇ ಪಂಡಿತನೆನಿಸಿಕೊಂಬನು.

### ವಾತದಿಂದುಂಟಾದ ಮೂಲವ್ಯಾಧಿ ಲಕ್ಷಣ

ತೊಂಡೆಕಾಯಿ, ಹತ್ತಿಹರಳು, ಸಾಸುವೆಗಳ ಹಾಗೆ ಆಸನ ಒಡೆದುಕೊಂಡು ಧ್ವನಿಯುಂಟಾಗಿ ಅವುಗೂಡಿ ನೋವನುಂಟುಮಾಡುತ ಹೊಟ್ಟೆಕಳೆವುದೊಂದು ಬಗೆಯಾಗಿಯೂ, ಮಲವ ಬಂಧಿಸಿ ನೋವನ್ನುಂಟುಮಾಡುತ ನಾನಾ ರೋಗಗಳ ಪುಟ್ಟಿಸುವದೊಂದು ಬಗೆಯಾಗಿಯೂ ಇಂತೆರಡು ಪ್ರಕಾರವಾಗಿರ್ಪುದೆ ವಾತದಿಂ ಪುಟ್ಟಿದ ಮೂಲವ್ಯಾಧಿಯೆಂದರಿವುದು.

### ಪಿತ್ತದಿಂಪುಟ್ಟಿದ ಮೂಲವ್ಯಾಧಿ ಲಕ್ಷಣ

ಮಲ ಹಳದಿಯ ವರ್ಣವಾಗಿಯೂ, ಕೆಂಪಾಗಿಯೂ ಆಸನವು ಕೆಂಪಾಗಿ ಮುಟ್ಟಿದರೆ ಅಸಹ್ಯವಾಗಿ ಮೃದುವಾಗಿ ಸ್ರವಿಸುತ ತೊಯ್ದು ಇರುವುದೇ ಪಿತ್ತದಿಂ ಪುಟ್ಟಿದ ಮೂಲರೋಗವೆಂದರಿವುದು.

### ಶ್ಲೇಷ್ಮದಿಂಪುಟ್ಟಿದ ಮೂಲವ್ಯಾಧಿ ಲಕ್ಷಣ

ಕ್ಷಾರವಸ್ತು ಹುಳಿಗಳ ಸೇವನೆಯಿಂದ ಅತ್ಯಂತ ಶೈತ್ಯವಾಗಿ ಜಡವಾಗಿ ಹಸುವಿನ ಮೊಲೆಯಾಕಾರವಾಗಿ ಬಿಳುಪಾಗಿ ನೀರಾಗಿ ತೀಟೆಯುಂಟಾಗಿ ಮಲವು ಸುರಿವುತ ಆಸನವು ಇದೇ ರೂಪಿನಲ್ಲಿ ಬಿಳುಪಾಗಿ ನೀರಾಗಿ ಸುರಿವುತ್ತಿಹುದೇ ಶ್ಲೇಷ್ಮದಿಂದಾದ ಮೂಲವ್ಯಾಧಿಯೆಂದರಿವುದು.

ಮತ್ತಂ ಈ ಮೂರು ಲಕ್ಷಣವೂ ಕೂಡಿಕೊಂಡಿರ್ಪುದೇ ತ್ರಿದೋಷದಿಂ ಪುಟ್ಟಿದ ಮೂಲವ್ಯಾಧಿಯೆಂದರಿವುದು. ಮತ್ತಂ ಕೆಂಪಾಗಿ ರಕ್ತಸುರಿವುತ ಪಿತ್ತಾ

[1] (ಗ) ಬಾಕುಳಿವೆಲ್ಲಾ

ಧಿಕ್ಯದಿಂದ ಬೇಸಗೆಯಲ್ಲಿ ರೋಗ ಪೆರ್ಚಿ ಕೈಕಾಲು, ಮುಖ, ಹೊಕ್ಕುಳ ಕುಳಿ, ಗುದಸ್ಥಾನ, ಮೇಹಸ್ಥಾನ, ಎದೆ, ಅಳ್ಳೆ ಈ ಸ್ಥಳಗಳಲ್ಲಿ ನೋವು ಉಂಟಾಗಿ ಜೆವರುತ ಛರ್ದಿಯುಃ, ಬಾಯಾರಿಕೆಯುಃ, ಅನ್ನದ ಅರೋಚಕವು, ಭ್ರಮೆಯುಃ, ರಕ್ತಾತಿಸಾರವು ಈ ಲಕ್ಷಣಮುಳ್ಳುದೆ ಅಸಾಧ್ಯಮೂಲವ್ಯಾಧಿಯೆಂದರಿವುದು. ಮತ್ತಮಿಾ ಮೂಲವ್ಯಾಧಿಯ ಆಗಮನಹೇತುವೆಂತೆಂದೊಡೆ :—

ಹೆಸರುಕಟ್ಟು, ಹುರುಳಿಕಟ್ಟು, ಬೇಳೆಯೆಸರು, ಮಜ್ಜಿಗೆ, ಒಂದೇಬಗೆ ಸಣ್ಣಕ್ಕಿ ಅನ್ನವೆ ಮಿತವಾದ ಭೋಜನ, ಮುಂತಾದಾಹಾರಗಳಿಂದ ಮೂಲವ್ಯಾಧಿಯ ಮೊಳೆಗಳು ಪುಟ್ಟುವುವು. ಈ ಆರ್ಶರೋಗವೇ ಮೂಲವ್ಯಾಧಿಯೆಂದು ತಿಳಿದು ನೋಡುವುದು ; ಮೂಲವ್ಯಾಧಿಯ ಚಿಕಿತ್ಸೆಯಂ ಮಾಳ್ಪುದು.

## ಚಿಕಿತ್ಸೆ—ಸಂಹಿತೆಗಳು

ಬೋಳನಾಗಕೇಸರ, ಖಂಡಶರ್ಕರೆ, ಎಳ್ಳುಃ ಸಹ ಬೆಲ್ಲದಲ್ಲಿ ಕೂಡಿಸಿ ಮೆಲ್ಲಲುಃ ಮೂಲವ್ಯಾಧಿ ಪರಿಹಾರವಹುದು. ೧

ಹುರಿಗಡಲೆ ಅರೆಪಡಿಯನ್ನು ಗೇರಹರಳನ್ನು ಹನ್ನೆರಡಾಗಲಿ ಹದಿನೈದಾಗಲಿ ಕೂಡಿ ಕುಟ್ಟಿ ಮೂರು ದಿವ ಮೆಲ್ಲಲು ಮೂಲವ್ಯಾಧಿಯ ನೋವು ನಿಂತು ಗುಣವಾಗುವುದು. ೨

ಬಂದರೆ ಬೀಜವನ್ನು ನೀರಲ್ಲರೆದು ತೆಗೆದುಕೊಳ್ಳಲು ಮೂಲವ್ಯಾಧಿಯ ರಕ್ತ ನಿಂತು ಗುಣಮಕ್ಕುಂ. ೩

ಬೋಳದರಗನ ಸೊಪ್ಪು, ಎಳ್ಳು, ಬೆಲ್ಲ ಸಹ ಬೆಳ್ಳುಳ್ಳಿಯ ಹಾಗೆ ಮಾಡಿ ಕುಟ್ಟಿ ಹಸುವಿನ ತುಪ್ಪದಲ್ಲಿ ಮೆಲ್ಲಲು ಮೂಲವ್ಯಾಧಿಯ ಒಳಮೊಳೆ ಮಾಣುವುದು. ೪

ಮೂಲಂಗಿಯನು ಈ ಸೊಪ್ಪನು ಸಹ ಚೆನ್ನಾಗಿ ಇಡಿದು ರಸವ ತೆಗೆದು ಪಾವಿನಷ್ಟರಲ್ಲಿ ಎಳ್ಳೆಣ್ಣೆ ದು ೧ ತೂಕವಂ ಬೆರಸಿ ಮೂರುದಿನ ಕುಡಿಯಲು ಮೂಲವ್ಯಾಧಿಯ ಮೊಳೆ ಕರಗುವುದು. ೫

ಗುಳ್ಳದ ಬೇರಿನ ತಿಗುಡು, ಮುಳ್ಳುಸೊಂಡೆ ಬೇರಿನ ತಿಗುಡು, ಇವಂ ಸಮಾನಗೊಂಡರೆದು ಮುದ್ದೆಯ ಮಾಡಿ ಮರಗಡೆ ಸೊಪ್ಪಿನ ರಸವಂ ಹಿಂಡಿಕೊಂಡು ಅರೆವನದಷ್ಟನ್ನು ಕಟ್ಟುಮೊಸರಿನಲ್ಲರೆದು ಮುದ್ದೆಯ ಮಾಡಿ ಮೊದಲರೆದ ಮುದ್ದೆಯನೂ ಕದಡಿ ಸಕ್ಕರೆಗೂಡಿ ಸೇವಿಸೆ ಮೂಲವ್ಯಾಧಿಯ ಒಳಮೊಳೆ ಕರಗಿ ಗುಣವಹುದು. ೬

ಶುಂಠಿ, ಮೆಣಸು, ಬೆಲ್ಲ, ವಾಯುವಿಳಂಗ, ಆಳಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಎಳ್ಳು, ಗೇರಹರಳು, ಇವಂ ಸಮಾಂಶವಾಗಿಡಿದು ಚಿಗುಳಿಯ ಹಾಗೆ ಉಂಡೆಯ ಮಾಡಿ ಗಜ್ಜುಗ ಪ್ರಮಾಣವಂ ಜೇನುತುಪ್ಪದಿಂ ಪ್ರತಿದಿನವೂ ಸೇವಿಸಲು ಮೂಲವ್ಯಾಧಿ, ಅಗ್ನಿಮಾಂದ್ಯ ಸಹ ಗುಣವಹುದು. ೭

ಆಡಿನ ಹಾಲಾಗಲಿ, ಕರಿಹಸುವಿನ ಹಾಲಾಗಲಿ ಸೇರು ಅರೆಯನ್ನು ಒಂದು ಮಡಕೆಗೆ ಹೊಯ್ದು ಮೇಲೆ ಅರುವೆಯಂ ಬಾಯಿಕಟ್ಟುಕಟ್ಟಿ ಕಾಮಕಸ್ತೂರಿ ಸೊಪ್ಪನು ಕುಟ್ಟಿ ಆ ಅರುವೆಯ ಮೇಲಿಟ್ಟು ಉಕ್ಕು ಬಂದ ಮೇಲೆ ರಸವ ಹಿಂಡಿ ಆ ಹಾಲನೂ ಈ ರಸವನೂ ಕೂಡಿಸಿ ಏಳುದಿನ ಕೊಳ್ಳಲು ಮೂಲವ್ಯಾಧಿಯು ಮೊಳೆ ಬಿದ್ದು ಗುಣವಾಗುವುದು. ೮

ಅಳಿಲೆಕಾಯಿ, ಚಿತ್ರಮೂಲ, ಗೇರಹರಳು, ಎಳ್ಳು ಇವನೆಲ್ಲ ಇಡಿದು ಬೆಲ್ಲ ವೆರಸಿ ತೆಗೆದುಕೊಳ್ಳಲು ಮೂಲವ್ಯಾಧಿ, ಕುಷ್ಠರೋಗ ಸಹ ಕೆಡುಗುಂ. ೯

ಅಳಿಲೆಕಾಯಿ ೨೦೦ ನು ನಾಗಳ ಗೋಮೂತ್ರದಲ್ಲಿ ಹಾಕಿ ಗೋಮೂತ್ರ ಇಂಗುವ ತನಕ ಮಂದಾಗ್ನಿಯಲ್ಲಿ ಪಾಕವ ಮಾಡಿ ತೆಗೆದು ಒಣಗಿಸಿ ದಿನಂಪ್ರತಿಯುಲ್ಲಿಯೂ ಆ ಅಳಿಲೆಕಾಯಿ ೨ ನು ಚೂರ್ಣಿಸಿ ಜೇನುತುಪ್ಪದಿಂ ಸೇವಿಸಲು ಮೂಲವ್ಯಾಧಿ ಹರ. ೧೦

ಬೆಲ್ಲ, ಶುಂಠಿ, ಮೆಣಸು, ಹಿಪ್ಪಲಿ, ತ್ರಿಫಲ, ವಾಯುವಿಳಂಗ, ಎಳ್ಳು, ಗೇರಹರಳು, ಚಿತ್ರಮೂಲ ಇವನೆಲ್ಲ ಸಮಭಾಗವಾಗಿ ಕುಟ್ಟಿ ಚಿಗುಳಿಯಂತೆ ಉಂಡೆಯ ಮಾಡಿ ಗಜ್ಜುಗ ಪ್ರಮಾಣವಂ ಜೇನುತುಪ್ಪದಿಂ ಸೇವಿಸೆ ಮೂಲವ್ಯಾಧಿ ಪರಿಹರ. ೧೧

ಶೋಧಿಂಚಿನ ಸುನ್ನಮುನು ಗಜ್ಜುಕಾಯಂತ ಮೂಡು ಉಂಟಲು ಜೇಸಿ ಅರಟಿಪಂಡುಲೊ ಬೆಟ್ಟಿ ಮಿಂಗಿಂಚೇದಿ ಮೂಲವ್ಯಾಧಿ ಮಾನುನು. ೧೨

ನೆಮಲಿ ಅಡುಗಾಕು, ನಲ್ಲ ವಡ್ಲಬೀಯಂ, ಕೊಟ್ಟಿ ನೇಯಿ ಪಂಚದಾರತೊ ಸೇವಿಂಚೇದಿ ಮೂಲವ್ಯಾಧಿ ಗುಣಮೌನು. ೧೩

ಮೂಲಂಗಿಗೆಡ್ಡೆ ಸೊಪ್ಪು ಸಹ ಇಡಿದು ಈ ರಸದಲ್ಲಿ ಗ ೧ ತೂಕ ರಕ್ತಬೋಳವ ಹಾಕಿ ಸೊಲಿಗೆಯಷ್ಟು ರಸವಂ ತೆಗೆದುಕೊಳ್ಳಲು ಮೊಳೆಬಿದ್ದು ಹೋಗುವುದು. ೧೪

ಉತ್ತರಣೆ ಸೊಪ್ಪಿನ ರಸ ಅರೆಪಾವಿನಲ್ಲಿ ಎಳ್ಳೆಣ್ಣೆ ದುಡ್ಡುತೂಕವ ಹಾಕಿ ಮೂರು ದಿನ ತೆಗೆದುಕೊಳ್ಳಲು ಮೂಲವ್ಯಾಧಿ ಪರಿಹರ. ೧೫

ನೆಲಗುಳ್ಳದ ಕಾಯೊಳಗಣ ಬೀಜವಂ ತೆಗೆದು ಆ ಸಿಪ್ಪೆಯಂ ತೊಳೆದು ತುಪ್ಪದಿಂ ಹುರಿದು ಸಕ್ಕರೆವೆರಸಿ ಪ್ರಾತಃಕಾಲದಲ್ಲಿ ಮೂರು ದಿನ ಮೆಲ್ಲಲು ಮೂಲವ್ಯಾಧಿ ಪರಿಹಾರಮಕ್ಕುಂ. ೧೬

ಹೆಸರಿನಲ್ಲಿ ಕಡುಬನು ಮುನ್ನದಿನ ರಾತ್ರಿಯೇ ಮಾಡಿ ಇರಿಸಿಕೊಂಡಿದ್ದು ಉದಯ ಕಾಲದಲ್ಲಿ ಆ ಕಡುಬು ಮುಳುಗುವಷ್ಟು ತುಪ್ಪವ ಹೊಯ್ದು ಆ ಕಡುಬಂ ೭ ದಿನ ಮೆಲ್ಲಲು ಮೂಲವ್ಯಾಧಿ ಗುಣವಹುದು. ೧೭

ಉದ್ದಿನ ಬೇಳೆಯಂ ನನೆಯು ಹಾಕಿ ತಿರುಹಿ ಔಡಲದೆಣ್ಣೆಯಲ್ಲಿ ಸಪ್ಪೆ ಒಡೆಯಂ ಮಾಡಿ ಬಿಸಿಬಿಸಿಯಾರದೆ ಈ ಒಡೆಯಂ ೭ ದಿನ ಮೆಲ್ಲಲು ಮೂಲವ್ಯಾಧಿ ಪರಿಹರ. ೧೮

ಅರಳಿ ಬೀಜ, ಗೇರುಬೀಜ, ಕರಿಯೆಳ್ಳು, ಹಳೆಬೆಲ್ಲ ಇವಂ ಪ್ರತ್ಯೇಕ ಚೂರ್ಣಿಸಿ ಮೆಲ್ಲಲು ೭. ದಿನಕ್ಕೆ ಮೂಲವ್ಯಾಧಿ ಪರಿಹಾರವಹುದು. ೧೯

## ಕಷಾಯಗಳು

ಅಳಿಲೆಕಾಯಿ, ಚಿತ್ರಮೂಲ, ಶುಂಠಿ ಇವಂ ಕಷಾಯವಿಕ್ಕಿ ಯವಕ್ಷಾರದ ಚೂರ್ಣವ ಹಾಕಿ ಪಾನವ ಮಾಡಲು ಮೂಲವ್ಯಾಧಿಯು ಮೊಳೆಯ ಬುಡವನೆ ಕಿತ್ತು ಹಾಕುವುದು. ೧

ಅಳಿಲೆಕಾಯಿ, ಬೆಲ್ಲವತ್ತದ ಬೇರು, ಹೊಂಗೆಯ ಒಳನಾರು, ಹಿಪ್ಪಲಿ [1]ಈ ಮೂಲ, [1]ಶುಂಠಿ ಸಹ ಕಷಾಯಂ ಕಾಸಿ ಸೈಂಧವ ಚೂರ್ಣವೆರಸಿ ಸೇವಿಸಲು ಮೂಲವ್ಯಾಧಿ, ಗುಲ್ಮ, ಗೆಂಡೆ, ಪ್ಲೀಹ ಸಹ ಪರಿಹಾರಮಕ್ಕುಂ. ೨

ನೆಲಬೇವು, ಭದ್ರಮುಸ್ತೆ, ಶ್ರೀಗಂಧ, ಕೋಲು ಮುಲುಕನ ಬೀಜ, ಈ ಚಕ್ಕೆ, ಧಾತಕೀಕುಸುಮ, ಮರದರಿಸಿನ ಸಹ ಕಷಾಯಂ ಮಾಡಿ ಸೇವಿಸಲು ರಕ್ತ ಮೂಲ ವ್ಯಾಧಿ ಪರಿಹರ. ೩

ಕೆಂಪಿನ ಉತ್ತರಣೆ ಬೇರಂ ಕಷಾಯವಿಕ್ಕಿ ಸೇವಿಸೆ ರಕ್ತ ಮೂಲವ್ಯಾಧಿ ಹರ. ೪

ಬೆಲ್ಲವತ್ತದ ಬೇರು, ಬೆಳ್ಳುಳ್ಳಿ, ಹುರುಳಿ, ನುಗ್ಗೆತೊಕ್ಕು, ಚಿತ್ರಮೂಲ, ಚವ್ಯ, ಹಿಪ್ಪಲಿ, ಶುಂಠಿ, ಹಿಪ್ಪಲಿಮೂಲ, ಅಡಕೆಚಟ್ಟಿನ ಬೇರು, ಹೊಂಗೆನಾರು, ಅಳಿಲೆ ಕಾಯಿ, ಗಂಟು ಭಾರಂಗಿ ಇಷ್ಟನು ಸಮಾಂಶವಾಗಿ ಕಷಾಯವ ಕಾಸಿ ಸೇವಿ ಸಲು ಸಕಲ ಮೂಲವ್ಯಾಧಿ ಹರ. ೫

ಸೈಂಧವ, ಇಂಗು, ಯವಕ್ಷಾರ, ಸದ್ಯಕ್ಷಾರ, ಬಜೆ, ಹಿಪ್ಪಲಿ, ಗಜ್ಜುಗದ ತಿರುಳು, ತಾರೆಕಾಯಿ ಇವಂ ಕಷಾಯವ ಕಾಸಿ ಸೇವಿಸಲು ಸಕಲ ಮೂಲ ವ್ಯಾಧಿ ಪರಿಹಾರಮಕ್ಕುಂ. ೬

ಅಳಿಲೆಕಾಯಿ, ಬೆಲ್ಲವತ್ತದ ಬೇರಿನ ತೊಕ್ಕು, ಕೊಮ್ಮೆ ಬೇರು, ನಾರಂ ಬೇಳೆ, ಹೊಂಗೆ ಬೇರು, ಹಿಪ್ಪಲಿ, ಈ ಮೂಲ, ಚವ್ಯ, ಚಿತ್ರಮೂಲ, ಶುಂಠಿ, ಸೈಂಧವ, ಇವಂ ಸಮಭಾಗ ಕಷಾಯವಿಟ್ಟು ಕೊಡಲು ಮೂಲವ್ಯಾಧಿ, ಭಗಂದರ, ಗುಲ್ಮ ಸಹ ಗುಣಮಕ್ಕು. ೭

ಅಳಿಲೆಕಾಯಿ ಸೈಂಧವಗಳ ಕಷಾಯವಿಕ್ಕಿ ಕೊಡಲು ಮೂಲವ್ಯಾಧಿ, ಗುಲ್ಮ, ಪ್ಲೀಹ ಸಹ ಗುಣಮಕ್ಕು. ೮

ತಪಸಿ ನಾರು, ಹಿಪ್ಪಲಿ, ಶುಂಠಿ, ಚಿತ್ರಮೂಲ ಇವಂ ಕಷಾಯವಿಕ್ಕಿ ಕೊಡಲು ಮೂಲವ್ಯಾಧಿ, ಅರೋಚಕ, ಗುಲ್ಮ ಸಹ ಕೆಡುಗುಂ. ೯

---

[1] ಚಿತ್ರಮೂಲ (ಗ).

ಮುಳ್ಳಕೊಗ್ಗೆಬೇರು, ಶುಂಠಿ, ಅಳಿಲೆಕಾಯಿ ಇವಂ ಕಷಾಯವಿಕ್ಕಿ ಕೊಡಲು ಮೂಲವ್ಯಾಧಿ, ಅಗ್ನಿಮಾಂದ್ಯ, ಗುಲ್ಮ ಸಹ ಗುಣಮಕ್ಕು. ೧೦

ಚಿತ್ರಮೂಲ, ವಾದಕ್ಕಿ, ಹಿಪ್ಪಲಿ, ಮೆಣಸು ಇವೆಲ್ಲವಂ ಸಮಭಾಗ ಕಷಾಯ ವಿಕ್ಕಿ ಇಷ್ಟರ ಸಮತೂಕ ಅಳಿಲೆಕಾಯಿ ಚೂರ್ಣವ ಬೆರಸಿ ಅಂಬಿಲದಲ್ಲಿ ಕದಡಿ ಕೊಡಲು ಮೂಲವ್ಯಾಧಿ ಹರ. ೧೧

ರಡ್ಡಿವಾರಿನಾನಿಬಾಲು, ಸಮೂಲಂ ಕಷಾಯಂಗಾಚಿ ವಡುಚುಕೊನಿ ಇಂದುಲೊ ಗುಗ್ಗಿಲಂ ಚೂರ್ಣಂ ೧ ॥ ಎತ್ತು ಶರ್ಕರವೇಸಿ ಸೇವಿಂಚಿತೆ ರಕ್ತ ಮೂಲಂ ನಿಲುಚುನು. ೧೨

## ಚೂರ್ಣಗಳು

ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲ, ದೇವದಾರು, ರಾಸ್ಮೆ, ವಿಳಂಗ, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಅಮರದವಳ್ಳಿ ಇವಂ ಚೂರ್ಣಿಸಿ ಸಕ್ಕರೆ ಗೂಡಿ ಸೇವಿಸಲು ಸಕಲ ಮೂಲವ್ಯಾಧಿ ಪರಿಹಾರಮಕ್ಕುಂ. ೧

## ಕಾಂತಾಯನ ಹರೀತಕ್ಯಾದಿ ಚೂರ್ಣ.

ಅಳಿಲೆಕಾಯಿ ಚೂರ್ಣ ಹಲ ೫, ಯವಕ್ಷಾರ ೨ ಹಲ, ಮೆಣಸು ೧ ಹಲ, ಜೀರಿಗೆ ೧ ಹಲ, ಹಿಪ್ಪಲಿ ಹಲ ೧, ಈ ಮೂಲ ಹಲ ೨, ಚವ್ಯ ಹಲ ೩, ಚಿತ್ರಮೂಲ ಹಲ ೪, ಶುಂಠಿ ೫ ಹಲ, ಗೇರಹಣ್ಣಳು ೮ ಹಲ, ಸೂರಣದ ಗೆಡ್ಡೆ ೮ ಹಲ, ಇವಂ ಚೂರ್ಣವಮಾಡಿ ಇಷ್ಟರ ಮೂರುಮಡಿ ಬೆಲ್ಲದಲ್ಲಿ ಕಲಸಿ ನಾಲ್ಕು ವರಹಾತೂಕ ಉಂಡೆಯಂ ಪ್ರಾತಃಕಾಲದಲ್ಲಿ ಭಕ್ಷಿಸಿ ಆಮೇಲೆ ಹುಳಿ ಮಜ್ಜಿಗೆಯಲ್ಲಿ ಅನ್ನವನುಂ ಬುದು. ಮೂಲವ್ಯಾಧಿ, ಶ್ವಾಸ, ಖಾಸ, ಗ್ರಹಣಿ, ಪಾಂಡುರೋಗ ಮುಂತಾಗಿ ಸಕಲವ್ಯಾಧಿ ಪರಿಹರಮಕ್ಕುಂ. ೨

ನೆಲಬೇವು, ಕೊಡನಾರಿಗೆಡ್ಡೆ, ಶ್ರೀಗಂಧ, ಕೊಡಸಿಗೆ ಬೀಜ, ಧಾತಕೀ ಕುಸುಮ, ಮರದರಿಸಿನ ಇವಂ ಸಮಭಾಗವಾಗಿ ಚೂರ್ಣಿಸಿ ಹಸುವಿನ ತುಪ್ಪದಿಂ ಕಲಸಿ ಸೇವಿಸೆ ರಕ್ತಮೂಲವ್ಯಾಧಿಹರ ೩

ಸೂರಣದ ಗೆಡ್ಡೆ ೧೬ ಭಾಗ, ಚಿತ್ರಮೂಲ ೮ ಭಾಗ, ಶುಂಠಿ ೪ ಭಾಗ, ಹಿಪ್ಪಲಿ ೨ ಭಾಗ, ಮೆಣಸು ೧ ಭಾಗ, ಈ ಪ್ರಕಾರದಿಂ ಕೂಡಿ ಚೂರ್ಣವಮಾಡಿ ಇದರ ಸಮಭಾಗ ಬೆಲ್ಲ ಬೆರಸಿ ಇಡಿದು ಚಿಗುಳಿಯು ಹಾಗೆ ಉಂಡೆಯಮಾಡಿ ಪ್ರತಿ ದಿನವೂ ೧ ೪ ತೂಕವಂ ಸೇವಿಸೆ ಮೂಲವ್ಯಾಧಿ ಗುಣಮಕ್ಕುಂ. ೪

## ಧೂಮ

ಎಕ್ಕದ ಹಾಲಿನಲ್ಲಿ ಎರಡು ಗೇಣಗಲ ಎರಡು ಗೇಣುದ್ದದ ಪಾವಡೆಯಂ ಚೆನ್ನಾಗಿ ನೆನೆಯಿಸಿ ಅರಿಸಿನದ ಪುಡಿಯನ್ನು ಹಾಕಿ ೫ ಕಪ್ಪರಸಟ್ಟಿಯ ಹುಳುವಂ

ತಂದು ಈ ಅರುವೆಯುನ್ನೈದು ಪಾಲಾಗಿ ಹರಿದು ಐದು ಬತ್ತಿಯಮಾಡಿ ಚೆನ್ನಾಗಿ ಒಣಗಿಸಿ ಈ ಐದು ಬತ್ತಿಯಲ್ಲೂ ಈ ಐದು ಹುಳುವನಿರಿಸಿ ಒಂದು ಮುಚ್ಚಳದಲ್ಲಿ ಕೆಂಡವನಿರಿಸಿ ಈ ಒಂದು ಬತ್ತಿಯನಾಕೆಂಡದ ಮೇಲಿಟ್ಟು ಮೇಲೊಂದು ಮುಚ್ಚಳವ ಮುಚ್ಚಿ ನಡುವೆ ವೆಜ್ಜಮಾಡಿ ಆ ವೆಜ್ಜದಲ್ಲಿ ಬಂದ ಹೊಗೆಯಂ ಮೊಳೆಗೆ ಐದು ದಿನ ಶಾಖ ಕೊಡಲು ಐದು ಬತ್ತಿಯೊಳಗಾಗಿ ಮೊಳೆ ಕರಗಿ ಗುಣಮಕ್ಕುಂ. ೧

ಉಳ್ಳಿಯ ಸಿಪ್ಪೆ, ಓವು, ಬೇವಿನ ಸೊಪ್ಪು ಸಹ ಕಗ್ಗಲಿಯ ಕೊಳ್ಳಿಯ ಬೆಂಕಿಯ ಮೇಲೆ ಹಾಕಿ ಆ ಹೊಗೆಯಂ ಆಸನಕ್ಕೆ ತೋರಿಸಲು ಮೂಲವ್ಯಾಧಿ ಪರಿಹರ. ೨

ಜಿಲ್ಲೆಡುವೇರುಚಕ್ಕ ಕರುದುವ, ಪಸುಪು, ಕೊಮ್ಮುವೇಳ್ಳು, ತಾಳಕಂ ಈ ನಾಲ್ಗುನು ನೀಡನೆ ಎಂಡಿಂಚಿ ಸಮಭಾಗಮುಲು ಚೂರ್ಣಂಜೇಸಿ ಚಿಂತಚಕ್ಕಲ ಬೊಚ್ಚೆಡ ನಿಪ್ಪುಲಸೇಸಿ ಮೂರೆಡು ಗುಂತನು ತ್ರವ್ವಿ ಅಂದುಲೊ ಆ ನಿಪ್ಪುಲನು ವೇಸಿ ಈ ಚೂರ್ಣಮುನು ಆ ನಿಪ್ಪುಮಿಾದ ವೇಸಿ ಅಂದುಮಿಾದ ಕಂತ ಗಲ ಪೆಂಟ ವೇಸಿ ಅಂದುಮಿಾದ ಕೂಚುಕೊನಿ ಆಪಗ ಸೋಕಿಂಚಿನಮಾತ್ರಂ [1]ತೊಲಲು ಸೊಡುಗುನಕ ಇರುವ್ವೈ ದಿವಸಮುಲು ರೇಪುರೆಂಡುಗಡಿಯಲು ತೂರ್ಪುರೆಂಡು ಗಡಿಯಲು ಕಾಚೇದಿ ಮೂಲರೋಗಂ ಮಾನುನು.[1] ೩

ರೊಕ್ಕಂಟಿ ಬಲಡ ಪುರು[2]ಪುಲು[2] ದೋಶೆಡುದೆಚ್ಚಿ ಗುರಿಗಲವೇಸ್ತೆ ಅವಿ ಚಚ್ಚಿ ಎಂಡಿತೆ ವಾನಿ ಪೊಡಿಸೇಸಿ ಅವಿಗಲಪಿ ಪಗೆವೇಸೇದಿ ಮೂಲರೋಗಂ ಮಾನುನು. ಪುಲುಸು, ಆವಾಲು, ನೂನೆ ಸಹ ವರ್ಜ್ಯಂ. ೪

## ಬತ್ತಿ

[3]ಮಂಗಾರೆಕಾಯಿ,[3] ಚಂಗಲಕೋಷ್ಟ, ಜೇಪಾಳದ ಬೀಜ, ಸಾಸುವೆ, ಹಿಪ್ಪಲಿ, ಇಲ್ಲಣ ಇವಂ ಚೂರ್ಣವಮಾಡಿ ಜೇನುತುಪ್ಪ, ಗೋಮೂತ್ರದಿಂ ಕಲಸಿ ಹೆಬ್ಬೆಟ್ಟು ತೋರ ಬತ್ತಿಯಮಾಡಿ ತುಪ್ಪವ ತೊಡೆದು ಆಸನಕ್ಕೆ ಏರಿಸಲು ಮೂಲ ವ್ಯಾಧಿ ಮೊಳೆ ಪರಿಹರ. ಹೊಟ್ಟೆಯುಬ್ಬರ ಮಾಣ್ಗುಂ. ೧

ಉಪ್ಪು, ಹುಣಿಸೆಹಣ್ಣು, ಹಿಪ್ಪಲಿ ಜೇಪಾಳದ ಬೀಜ, ಮಗ್ಗಾರೆಕಾಯಿ, ಇಲ್ಲಣ, ಚಂಗಲಕೋಷ್ಟ ಇವಂ ಗೋಮೂತ್ರದಿಂದರೆದು ಬೇಯಿಸಿ ಹೆಬ್ಬೆಟ್ಟಿನ ತೋರ ಬತ್ತಿಗೆ ತೊಡೆದು ಆಸನಕ್ಕೆ ಏರಿಸೆ ಮೊಳೆ ಕರಗುವುದು. ೨

ಬಿಡುಲವಣ, ಶುಂಠಿ, ಹಿಪ್ಪಲಿ, ಮೆಣಸು, ಬೆಲ್ಲ, ಇವಂ ಗೋಮೂತ್ರದಿಂ ಪಾಕವಮಾಡಿ ಹೆಬ್ಬೆಟ್ಟಿನ ತೋರ ಬತ್ತಿಯಂಮಾಡಿ ಅದಂತೊಡೆದು ಆಸನಕ್ಕೆ ಏರಿಸಲು ಮೂಲದ ಮೊಳೆ ಕರಗುವುದು. ಮಲಮೂತ್ರಬಂಧ, ಹೊಟ್ಟೆಯುಬ್ಬರ ಸಹ ಮಾಣ್ಗುಂ. ೩

---

[1] (ಗ) ಪ್ರತಿಯಲ್ಲಿಲ್ಲ. [2] (ಗ). ಗು. [3] (ಗ) ಪ್ರತಿಯಲ್ಲಿಲ್ಲ.

## ಲೇಪಗಳು

ಗೋಮೂತ್ರ, ಸಜ್ಜಿಗೆ, ದಂತಿ, ನೀರಹಿಪ್ಪಲಿ ಬೇರು, ಚಿತ್ರಮೂಲ ಇವನ ರೆದು ಗುದಕ್ಕೆ ಪೂಸಲು ಮೂಲವ್ಯಾಧಿ ಹರ. ೧

ವೈಲತುತ್ತವಂ ಬೋಗುಡಿಚೆ ಸೊಪ್ಪಿನ ರಸದಲ್ಲಿ ತೇದು ಹೊರಮೊಳೆಗೆ ತೊಡೆಯೆ ಮೊಳೆ ಮಾಣುವುದು. ೨

ಹಾವುಮೆಕ್ಕೆ ಬೇರನ್ನು ನಿಂಬೆಹುಳಿಯಲ್ಲರೆದು ತೊಡೆಯೆ ಮೊಳೆ ಮೂರು ದಿನಕ್ಕೆ ಬಿದ್ದುಹೋಗುವುದು. ೩

ಬೆಲ್ಲಗಣಿಕೆ ಸಮೂಲವನಿಡಿದು ರಸವಂ ಹಿಂಡಿಕೊಂಡು ಅದರಲ್ಲಿ ಒಳ್ಳೆಣ್ಣೆಯು ಬೆರಸಿ ಆ ಎಣ್ಣೆಯಂ ಆಸನದಿಂದ ಹೆಗಲು ಪರಿಯಂತವೂ ಬೆನ್ನಿಗೆ ಊರ ತೊಡೆವುದು ಮೊಳೆ ಮಾಣುವುದು. ೪

ಮೂಲದ ಮೊಳೆಗೆ ಎಣ್ಣೆಯಂ ತೊಡೆದು ಅರಿಸಿನದ ಚೂರ್ಣವ ಕಳ್ಳಿ ಹಾಲಿನಲ್ಲಿ ಕಲಸಿ ಮೊಳೆಯ ಮೇಲೆ ತೊಡೆಯಲು ಮೂರು ದಿನಕ್ಕೆ ಮೊಳೆ ಕರಗುವುದು. ೫

ದಂತಿ, ಕೋಳಿಕುಟುಗನ ಗೆಡ್ಡೆ, ಚಿತ್ರಮೂಲ, ಶುಂಠಿ, ಹಿಪ್ಪಲಿ, ಮೆಣಸು ಸೈಂಧವಲವಣ, ಇವನರೆದು ಎಕ್ಕದ ಹಾಲಿನಲ್ಲಿ ಕಲಸಿ ಗುದಕ್ಕೆ ಪೂಸ ಮೂಲ ವ್ಯಾಧಿ ಮಾಣುವುದು. ೬

ಮೊಂಡಗಳ್ಳಿ ಮೊಗರು, ಕಹಿಸೋರೆಯೆಲೆ, ಹೊಂಗೆನಾರು, ಕಳ್ಳಿಹಾಲು, ಸಹ ಆಡಿನ ಮೂತ್ರದಿಂದರೆದು ಲೇಪವಂ ಮಾಡೆ ಮೊಳೆ ಕರಗಿಹೋಗುವುದು. ೭

ಕಹಿ ಹೀರೆಕಾಯಿ ಎರಡನು ಚೂರ್ಣಿಸಿ ಅಂಬಿಲದಲ್ಲರೆದು ಲೇಪಿಸೆ ಮೊಳೆ ಕರಗುವುದು. ೮

ಯವಕ್ಷಾರ, ಚಿತ್ರಮೂಲಂಗಳಂ ಮುಂಡಗಳ್ಳಿಹಾಲಿಂದರೆದು ಎಣ್ಣೆಯಲ್ಲಿ ಕಾಯಿಸಿ ಮೊಳೆಗೆ ಲೇಪವಂ ಮಾಡೆ ಕರಗಿಹೋಗುವುದು. ೯

ಜಾಯಿಕಾಯಂ ಎಳವದನಾಗಿ ತುಪ್ಪದಿಂ ಹುರಿದು ಸಜ್ಜರಸವಂ ಸಣ್ಣನಾಗಿ ಪುಡಿಮಾಡಿ ಈ ಪುಡಿಯನೂ, ಜಾಯಿಕಾಯಿ ಪುಡಿಯನೂ ತುಪ್ಪದಲ್ಲಿ ಅರೆದು ಆಸನದ ಮೊಳೆಗೆ ಲೇಪವಂ ಮಾಡಿ ಒಂದಿಷ್ಟುಹೊತ್ತು ಕಾಯಿಸುವುದು. ವೀಳೆದೆಲೆ ಹಾಕಿ ಕಟ್ಟಿಕೊಂಡು ನಾಲ್ಕುಗಳಿಗೆ ಮಲಗಿರುವುದು. ಈ ರೀತಿಯಲ್ಲಿ ನಾಲ್ಕು ದಿವಸ ಈ ಔಷಧಿಯಂ ತೊಡೆಯುತಾ ಇರಲು ಮೊಳೆ ಕರಗಿ ನೋವು ನಿಲ್ಲುವುದು. ೧೦

ಹೊಸ ಹೆಂಚನು ಸಣ್ಣನಾಗಿ ಪುಡಿಮಾಡಿ ವಸ್ತ್ರಗಾಳಿತವಂ ಮಾಡಿ ಕಡಲೆ ಸೊಪ್ಪನು ಸಹ ಅರಳಿಯೆಲೆಯೊಳಿಟ್ಟು ಹೆಂಚಿನ ಪುಡಿಯನದರ ಮೇಲೆ ಹಾಕಿ ಆಸನಕ್ಕೆ ಕಟ್ಟಿಕೊಂಡು ಬೆರಳಿನಲ್ಲಿ ಒಳಯಿಂಕೆ ಹೋಗುವಹಾಗೆ ಮೊಳೆಯ ದಬ್ಬಿ ಎರಡು ಮೂರು ಜಾವವಿರುವುದು. ಈ ರೀತಿಯಲ್ಲಿ ಮೂರುದಿವಸ ಪ್ರಯೋಗಿಸೆ ಮೂಲ ವ್ಯಾಧಿ ಗುಣಮಕ್ಕುಂ. ೧೧

ಅಮರದವಳ್ಳಿ, ಕಹಿಸೋರೆ ಸೊಪ್ಪು, ಹೊಂಗೆ ಚಿಗುರು, ಇವೆಲ್ಲ ಎಕ್ಕದ ಹಾಲು, ಆಡಿನ ಮೂತ್ರಗಳಿಂದರೆದು ಲೇಪಂ ಮಾಡಲು ಮೂಲವ್ಯಾಧಿ ಹರ. ೧೨

ಸೈಂಧವ, ದೇವದಾರಿ ಬೀಜ ಸಹ ಅಂಬಿಲದಲ್ಲರೆದು ಲೇಪಂಗೆಯ್ಯೆ ಮೊಳೆ ಕರಗಿಹೋಗುವುದು. ೧೩

ಬಲಿತ ಕಹಿ ಹೀರೆಕಾಯಿ ಗೂಡನಿಡಿದು ಚೂರ್ಣವಮಾಡಿ ಉಮ್ಮತ್ತದ ಬೇರು, ಆನೆಕೊಂಬ ಸುಟ್ಟ ಕರಿ ಇವ ಚೂರ್ಣಿಸಿ ನೀರಿಂದರೆದು ಲೇಪಂ ಮಾಡಲು ಮೊಳೆ ಕರಗಿ ಬೀಳುವುದು. ೧೪

ವ್ಯೈಲತುತ್ತಂ ತಗಿನಟ್ಟು ಪೆಟ್ಟುಕೊನಿ ಇನುಪುಪಾಳಮು ಮೀದ ಆಮಿದ ಮುತೊ ಮರ್ದಿಂಚಿ ಪಿಡಕನುಗ್ಗುಲ ಅಗ್ನಿಜೀಸಿಕೊನಿಯುಂಡಿ ಮೊಲಲಕು ಆ ಮರ್ದಿಂಚಿನ ಔಷಧಮುನು ಚರಿಮಿ ಆ ಪಿಡಕಲ ಅಗ್ನಿಸೆಕಮುತೊ ಆ ಮೊಲಲ ಕಾಚೇದಿ, ಚುರುಚುರುಕುಮನಿ ತೀಸಿ ಈ ಲಾಗುನ ಮೂಡುಮಾಟ್ಲು ಔಷಧಂ ಬೆಟ್ಟಿ ಮೊಲಲುಕು ಕಾಚೇದಿ ಮೊಲಲು ಕರಗಿ ಗುಣಮೌನು. ೧೫

ಪಂದಿನೆಯ್ಯಿನಿ ಆಸನಮುಕು ಚರಿವಿ ಚಿಂತನಿಪ್ಪುಲತೊ ಕಾಚಿತೆ ಮೂಲವ್ಯಾಧಿ ಮೊಲ ಗುಣಮೌನು. ೧೬

ಆಲದ ಮರದ [1]ಕೊನೆಯ ಜಡೆಯ ಕೊನೆಯ ಚಿಗುರಂ[1] ಸಣ್ಣನಾಗಿ ಅರೆದು ಮೊಳೆಗೆ ಲೇಪಂ ಮಾಡಿ ಮೂರು ದಿನ ಕಾಯಿಸಲು ಮೂಲವ್ಯಾಧಿ ಗುಣಮಕ್ಕುಂ. ೧೭

ರಸಬಾಳೆ ಹಣ್ಣಿನ ಸಿಪ್ಪೆಯ ಭಸ್ಮಮಂ ಮಾಡಿ ಎಳ್ಳೆಣ್ಣೆಯಲ್ಲಿ ಕಲಸಿ ಮೊಳೆಗೆ ಲೇಪಿಸೆ ಗುಣಮಕ್ಕು. ೧೮

ನಿಂಬೆ ಚಿಗುರು ಒಂದು ಹಿಡಿಯನ್ನು ಪಾವು ಬೆಣ್ಣೆಯಲ್ಲಿ ಹಾಕಿ ಚೆನ್ನಾಗಿ ಕಾಯಿಸಿ ಆ ತುಪ್ಪವಂ ಆಸನದೊಳಗೆ ಏಳುದಿನ ಲೇಪಂ ಮಾಡೆ ಮೂಲವ್ಯಾಧಿ ಪರಿಹಾರಮಕ್ಕುಂ. ೧೯

## ಘೃತಗಳು--ಭಲ್ಲಾತಕೀಘೃತ

ನೂರುಹಲ ಗೇರಹಣ್ಣಂ ನಾಗಳ ನೀರಿನಲ್ಲಿ ಹಾಕಿ ಪಾಕವ ಮಾಡಿ ಒಂದು ಕೊಳಗ ನೀರು ಉಳಿವಂತೆ ಕಾಸಿ ಅದರಲ್ಲಿ ಶುಂಠಿ, ಹಿಪ್ಪಲಿ, ಮೆಣಸು, ಹಿಪ್ಪಲಿಮೂಲ, ಚಿತ್ರಮೂಲ, ಗಜಹಿಪ್ಪಲಿ, ಇಂಗು, ಚವ್ಯ, ವಾದಕ್ಕಿ, ಪಂಚಲವಣ, ಸದ್ಯಕ್ಷಾರ ಇವಂ ಪ್ರತ್ಯೇಕಂ ಅರೆಹಲ ಪ್ರಕಾರಂ ಚೂರ್ಣಿಸಿ ಆ ಕಷಾಯದಲ್ಲಿ ಒಂದು ಬಳ್ಳ ಹಸುವಿನ ತುಪ್ಪ, ಮೊಸರ ನೀರು ೧ ಬಳ್ಳ, ಅಂಬಿಲ ೧ ಬಳ್ಳ ಹನಿಸಿ ಪಾಕವಮಾಡಿ ಹದದಲ್ಲಿಳುಹಿ ಈ ತುಪ್ಪವಂ ಪ್ರತಿದಿನ ಪ್ರಾತಃಕಾಲದಲ್ಲ ದೇಹಾನು ಗುಣ್ಯವಾಗಿ ಸೇವಿಸಲು ಮೂಲವ್ಯಾದಿ, ಮಂದಾಗ್ನಿ, ಗ್ರಹಣೀದೋಷ, ಪ್ಲೀಹೆ, ಮಹೋದರ, ಗೆಂಡೆ, ಗಂಡಾಮಾಲೆ, ಶ್ಲೇಷ್ಮ ಸಹ ಮಾಣ್ಗುಂ. ೧

[1] (ಗ) ಬಿಳಲ ಮೊಗರಂ

## ಕಂಕುಷ್ಠಾದಿ ಘೃತಂ

ಇಂಗು, ಸೈಂಧವ, ತಿಗಡೆ, ಮಂಡಗಳ್ಳಿಯ ಚಕ್ಕೆ, ಬಜೆ, ಅಳಿಲೆಕಾಯಿ, ಚಿತ್ರಮೂಲ, ಇವಂ ಕಲ್ಕವಮಾಡಿ ನಾಲ್ಕುಬಳ್ಳ ಹಸುವಿನ ಹಾಲಿನಲ್ಲಿ ಒಂದು ಬಳ್ಳ ಹಸುವಿನ ತುಪ್ಪವ ಹಾಕಿ ಕಲ್ಕವ ಕದಡಿ ಒಂದುಮಾನ ಮಂಡಗಳ್ಳಿ ಹಾಲ ಹನಿಸಿ ಚೆನ್ನಾಗಿ ಪಾಕವ ಮಾಡಿ ಇಳುಹಿಕೊಂಡು ಪಾನಾಭ್ಯಂಗವಸ್ತಿಗಳಂ ಮಾಡಲು ಮೂಲವ್ಯಾಧಿ, ಉದಾವರ್ತ, ಅದ್ಮಾನ ಸಹ ಮಾಣ್ಗುಂ. ೨

## ಸಿದ್ಧಘೃತಂ

ನೇಯಿ ಸೇರು ೬, ಮೇಕಪಾಲು ಸೇರು ೮, ಪೆರುಗು ೮, ಇವಿನಿ ಚಟ್ಟಿಲೊ ಬೋಸಿ ತೇನೆತೊ ಪಾಕಮುಗ ಕಾಚುಕೊನಿ ಇಂದುಕು ವೇಸೆ ಕಲ್ಕದ್ರವ್ಯಂ.— ಮಾಮಿಡಿವಿತ್ತಲು, ಶುಂಠಿ, ಮಿರಿಯಾಲು, ಪಿಪ್ಪಳ್ಳು, ತುಂಗಮುಸ್ತಲು, ಬಿಲ್ವಪತ್ರ ಪಂಡು ಬೆಸಂ, ವೆಲಗಕಾಯಿ ಬೆಸಂ, ಚಿಂತಗಿಂಜಲ ಪೊಟ್ಟು, ಧಾತಕೀಕುಸುಮಂ, ಚಂದನಂ, ಲಾಮಂಚಂ, ಮುಡಿವಾಳಂ, ಲೋಧ್ರಚಕ್ಕ, ಲಾಳಂ ವೇರು, ಪದ್ಮಕ ಮುಲು, ಮಂಜಿಷ್ಟ, ರೇಣಚಕ್ಕ, ಚವ್ಯಂ, ಲವಂಗಚಕ್ಕ, ಏಲಕ್ಕುಲು, ಲವಂಗಪತ್ರ, ಯಷ್ಟಿಮಧುಕಂ, ಬೂರುಗಬಂಕ, ಕಳ್ಳಂಗಡಲೆ ವೇರು—ಇವಿ ವಗಕು ಗ ೪ ತೂನು ಗೂರ್ಚಿ ಚೂರ್ಣಂ ಜೇಸಿ ವಸ್ತ್ರಗಾಳಿತಂ ಬೆಟ್ಟಿ ಆ ಪಕ್ವಮುಲೊ ವೇಸಿ ಕಲಪಿ ನೇಯಿ ನಿಲುಗ ಕಾಚುಕೊನಿ ಪಕ್ವಂ ತಲಸಿ ದಿಂಚಿ ರೋಗಸ್ತುನಿಕಿ ಈ ನೇಯಿ ಗ ೪ ತೂನು ಇಚ್ಚಿತೆ ರಕ್ತಮೂಲಂ, ನಡುವುನೊಪ್ಪಿ ಸಹ ಮಾನುನು. ೩

## ಭಲ್ಲಾತಕೀಘೃತಂ

ಜೀಡಿಗಿಂಜಲು ಸೇರು ೧॥, ಮೇಕಪಾಲು ಸೇರು ೧॥, ನೀಳ್ಳು ಸೇರು ೬೪ ಸಹ ಕುಂಡಲೊ ಬೋಸಿ ನೀಳ್ಳು ಇಮಿರೆದನಕ ಕಷಾಯಂ ಕಾಚಿ ನಿಲಚಿನ ಪಾಲು ಜೀಡಿಗಿಂಜಲನು [1]ಶೋದಿಂಚಿ[1] ಇಂದುಲೊ ನೇಯಿ ಸೇರು೨೪ ಬೋಸಿ ಆ ಪಾಲು ಇಮಿರೆದನಕ ಕಾಚಿ ಅವೆನಕ ೪ ಸೇರ್ಲು ತೇನೆ ಬೋಸಿ ಪಕ್ವಮುಗ ಕಾಚಿ ಇಂದು ಲೊ ವೇಸೆ ಕಲ್ಕದ್ರವ್ಯಮುಲು.—ಯಷ್ಟಿಮಧುಕಂ ಸೇರು ೪, ನೆಲ್ಲಿಚೆಟ್ಟು ಸೇರು ೪, ಕರಕ್ಕಾಯಿಪುಡಿ ಸೇರು ೨, ಲೋಹಭಸ್ಮಂ ಸೇರು ೧, ಅಮೃತವಲ್ಲಿ ಚೂರ್ಣಂ ಸೇರು ೧,—ಇವಿನ್ನಿ ಚೂರ್ಣಿಂಚಿ ವಸ್ತ್ರಗಾಳಿತಂ ಜೇಸಿ ಈ ಚೂರ್ಣಮುನು ಆ ನೇಯಿಲೊ ವೇಸಿ ಚಿಕ್ಕಣಪಾಕಮುಗ ದಿಂಚಿ ಚಲ್ಲಾರಿನ ತರುವಾತ ೪ ಸೇಲ್ಲು ತೇನೆ ಬೋಸಿ ಕಲಪಿ ನೇಯಿ ಕುಂಡಲೊ ಏಡುದಿನಮುಲು ಉಂಚುಕೊನೇದಿ ; ಈ ನೇಯಿ ತೀಸುಕೊನೆ ಕ್ರಮಂ.—ಪೂಟಕು ದು ೧ ತೂನು ಪ್ರಕಾರಂ ರೆಂಡು ಪೂಟಲು ತೀಸುಕೊನನು ರಕ್ತಮೂಲಂ ನಿಲುಚುನು. ೪

---

[1] (ಗ) ಕೊಂಚಿ

## ಲೇಹ್ಯಗಳು—ಭಲ್ಲಾತಕೀ ಲೇಹ್ಯ

ಗೇರಹರಳು [1]ಹಲ ೧ನ್ನು ಜಜ್ಜುಗುಟ್ಟಿ ೮[1] ಕೊಳಗ ಗೋಮೂತ್ರದಲ್ಲಿ ಹಾಕಿ ಚಾತುರ್ಭಾಗಾವಶೇಷವಾಗಿ ಕಾಸಿ ೧೦೦ ಹಲ ಅಳಿಲೆಕಾಯಿ ಚೂರ್ಣವನದರೊಳು ಹಾಕಿ ೨ ಬಳ್ಳ ಹಸುವಿನ ತುಪ್ಪವ ಹನಿಸಿ ಪಾಕವಮಾಡಿ ಹದದಲ್ಲಿಳುಹಿಕೊಂಡು ಆರಿದ ಬಳಿಕ ಜೇನುತುಪ್ಪ [2]ಹಲ ೬ನ್ನು[2] ಹೊಯ್ದು ಚೆನ್ನಾಗಿ ತೊಳಸಿ ಲೋಹಪಾತ್ರೆಯಲ್ಲಿಟ್ಟುಕೊಂಡು ದೇಹಾನುಗುಣವಾಗಿ ಸೇವಿಸಲು ಮೂಲವ್ಯಾಧಿ, ಗುಲ್ಮ, ಪ್ಲೀಹ, ಕ್ರಿಮಿ, ಮಹೋದರ ಸಹ ಪರಿಹಾರಮಕ್ಕುಂ. ೧

## ಕೋಡೀಶಾದಿ ಲೇಹ್ಯ

ಕೊಡಸಿಗೆ ಚಕ್ಕೆ [3]೫೦[3] ಹಲವನ್ನು ಜಜ್ಜುಗುಟ್ಟಿ ನಾಗಳ ನೀರಲ್ಲಿ ಹಾಕಿ, ಕಷಾಯುವ ಕಾಯಿಸಿ ಚಾತುರ್ಭಾಗವಾಗಿಳುಹಿಕೊಂಡು ಅದರಲ್ಲಿ ೧೫ ಹಲ ಬೆಲ್ಲವಹಾಕಿ ಕಷಾಯಕಾಸಿ ಪುನಃ ಪಾಕವಮಾಡಿ ಗೇರಹರಳು, ವಾಯುವಿಳಂಗ, ಶುಂಠಿ, ಹಿಪ್ಪಲಿ, ಮೆಣಸು, ಅಳಿಲೆಕಾಯಿ, ನೆಲ್ಲಿಚಟ್ಟು, ರಸಾಂಜನ, ಅಭ್ರಕ, ಚಿತ್ರಮೂಲ, ಕೊಡಸಿಗೆಬೀಜ, ಅತಿಬಜೆ, ಬಿಲ್ವಪತ್ರೆಹಣ್ಣು, ಇವು ಬಗೆ ೧ ಕ್ಕೆ ಅರೆಪಾವಿನಲ್ಲಿ ಚೂರ್ಣವ ಮಾಡಿ ಆ ಪಾಕದಲ್ಲಿ ಕಲಸಿ ಪುನಃ ಆಡಿಗೆಯು ಮಾಡಿ ತೊಳಸಿ ಆರಿದ ಬಳಿಕ ಎರಡು ಸೇರು [4]ತುಪ್ಪ[4] ವ ಹನಿಸಿ ಈ ಲೇಹ್ಯವನ್ನು ತಾರೆಕಾಯ ಪ್ರಮಾಣ ಜೇನುತುಪ್ಪ, ಮಜ್ಜಿಗೆ, ಬಿಸಿನೀರು—ಇದರಲ್ಲಿ ಯಾವುದರಲ್ಲಿಯಾದರೂ ತೆಗೆದುಕೊಳ್ಳೆ ಮೂಲವ್ಯಾಧಿ, ವಾತಪಿತ್ತಶ್ಲೇಷ್ಮ ಸನ್ನಿಪಾತ, ಗ್ರಹಣಿ, ಉದರವ್ಯಾಧಿ, ಆಮ್ಲಪಿತ್ತ, ಅತಿಸಾರ, ಪಾಂಡು, ಅರೋಚಕ, ರಕ್ತಗ್ರಹಣಿ, ಬಿಕ್ಕಳು, ಸ್ವೇದ, ಕಾಮಾಲೆ ಮುಂತಾದ ವ್ಯಾಧಿಗಳೆಲ್ಲಂ ಗುಣಮಕ್ಕುಂ. ೨

## ಕುಟಜಾದಿ ಲೇಹ್ಯ

[5] ಕೊಡಸಿಗೆ ಚಕ್ಕೆ ೧೦೦ ಹಲ ಇವನೆಲ್ಲ ಚೂರ್ಣಿಸಿ ವಸ್ತ್ರಗಾಳಿತವಂ ಮಾಡಿ ಕಷಾಯದಲ್ಲಿ ಕದಡಿ ಶೋಧಿಸಿ [5] ೩೦ ಹಲ ಬೆಲ್ಲ, ತುಪ್ಪ ೨೦ ಹಲ ಸಹ ಹನಿಸಿ ತಳಹತ್ತದ ಹಾಗೆ ಸಟ್ಟುಗದಿಂ ತೊಳಸಿ [6] ಲೇಹ್ಯಪಕ್ವದಿಂ ದಿಳುಹಿ [6] ತುಪ್ಪವುಂಡ ಗಡಿಗೆಯಲ್ಲಿ ತುಂಬಿ ಬಾಯಿಕಟ್ಟುಕಟ್ಟಿ ಮುಚ್ಚಳವಂ ಮುಚ್ಚಿ ಧಾನ್ಯಪುಟದಲ್ಲಿ ಒಂದು ಪಕ್ಷವಿರಿಸಿ ತೆಗೆದು ದಿನ ಪ್ರತಿಯಲ್ಲೂ ಉದಯಕಾಲದಲ್ಲಿ ನಾಲ್ಕು

---

[1] (ಗ) ೨ ಕೊಳಗದಪ್ಪರಲ್ಲಿ ೧೬. [2] (ಗ) ೨ ಬಳ್ಳ. [3] (ಗ) ೬೦. [4] (ಗ) ಜೇನುತುಪ್ಪ [5] ಕೊಡಸಿಗೆ ಚಕ್ಕೆ ೧೦೦ ಹಲವನ್ನು ಜಜ್ಜುಗುಟ್ಟಿ ನಾಗಳ ನೀರಿನಲ್ಲಿ ಹಾಕಿ ಕಷಾಯವಕಾಸಿ ಆ ಕಷಾಯದಲ್ಲಿ, (ಗ) [6] ಲೇಹ್ಯಪಾಕವಾದ ಬಳಿಕ ಮೊದಲು ಲೇಹ್ಯದಲ್ಲಿ ಹೇಳಿದ ಚೂರ್ಣದ್ರವ್ಯವನೆ ಚೂರ್ಣಿಸಿ ತೊಳಸಿ. (ಗ)

ವರಹ ತೂಕವಂ ಸೇವಿಸಲು ರಕ್ತಾರ್ಶ, ಗ್ರಹಣಿ, ಶ್ವಾಸ, ಖಾಸ, ಅಗ್ನಿಮಾಂದ್ಯ ಸಹ ಗುಣಮಕ್ಕು. ೩

ಕುಪ್ಪಾಕುರಸಂ ಪಡಿ ೨, ನೂನೆ ಪಡಿ ೧, ನಸಲು ತೀಸಿನ ವೆಲ್ಲುಲ್ಲಿ ಪಾಯ ಲು ೨ ಪಾವು ಸಹ ಬೋಸಿ ಲೇಹ್ಯಪಾಕಮುನ ವಂಡಿ ನೆಲ್ಲಿಕಾಯ ಪ್ರಮಾಣಂ ಪ್ರಾತಃಕಾಲಮಂದು ಇಚ್ಚೇದಿ; ಮಾಪುನ ಈ ರಾಗುನೆ ಇಚ್ಚೇದಿ. ಐದುವಗಲ ಮೂಲವ್ಯಾಧಿ ಸಹ ಮಾನುನು. ೪

## ತೈಲಗಳು—ಹರೀತ ಮಂಜರೀ ತೈಲ

[1] ೧ ಬಳ್ಳ ತುಪ್ಪ, ಚಿಲಕೀರೆ ಸೊಪ್ಪಿನ ರಸ ೧ ಮಾನ, ಎಣ್ಣೆ ೧ ಮಾನ ಸಹ ಹನಿಸಿ ನಾಲ್ಕು ವರಹ ತೂಕ ಸೈಂಧವ ಚೂರ್ಣವ ಹಾಕಿ [1] ಪಾಕವ ಮಾಡಿ ಹದದಲ್ಲಿಳುಹಿ ಆ ತೈಲದಿಂದ ವಸ್ತಿಯಂ ಕಟ್ಟಿಸಲು ಮೂಲವ್ಯಾಧಿ, ಗುಲ್ಮವ್ಯಾಧಿ, ಮಹೋದರ ಸಹ ಪರಿಹರಮಕ್ಕು. ೧

[2] ಆಮಿದಮುಲೋನಿ ಮಡ್ಡಿ, ಚಿಕ್ಕಣಪು ಪೋಕಂತ ತೀಸಿ [2] ಕುಟ್ಟಾಕು ರಸಂ, ವೆಲ್ಲುಲ್ಲಿ, ಬೋಡತರಾಕುರಸಂ, ನೀರ ಜುಟ್ಟಾಕು ರಸಂ, ಗಜ್ಜಾಕು ರಸಂ ಚಿತ್ರಮೂಲಂ, ವೀನಿ ಸಮಂಗಾ ಕೂರ್ಚಿ ನೂನೆತೊ ಬೋಸಿ ಕಾಚಿ ಲೋನಿಕಿ ಗೊನಿ ಆಸನಮುನಕು ಚರಿಮಿತೆ ವೆಲಮೊಲಲು ಮಾನುನು. ೨

## ಗುಳಿಗೆ

ಕರಕ್ಕಾಯ ೫ ಭಾಗಮುಲು, ಮಿರಿಯಾಲು ೧ ಭಾಗಂ, ಜಿಲಕರ ೧ ಭಾಗಂ ಪಿಪ್ಪಲಿ ೧ ಭಾಗಂ, ಪಿಪ್ಪಲಿ ಮೂಲಂ ೨ ಭಾಗಂ, ಚವ್ಯಂ ೩ ಭಾಗಮುಲು, ಚಿತ್ರಮೂಲಂ ೪ ಭಾಗಮುಲು, ಶುಂಠಿ ೫ ಭಾಗಮುಲು, ಯವಕ್ಷಾರಂ ೨ ಭಾಗಂ, ಎಂಡಿನ ಕಂದ ೮ ಭಾಗಮುಲು, ಜೀಡಿಗಿಂಜಲು ೮ ಭಾಗಂ, ಇನ್ನಿ ದಂಚಿ ವಸ್ತ್ರ ಗಾಳಿತಂ ಜೇಸಿ ಸಮಬೆಲ್ಲಂ ಯಕಲಗೊಟ್ಟಿ ಪಿಟ್ಟು ಬೆಟ್ಟಿ ಗುಳಿಗಲು ಜೇಸಿ ತೇನೆತೊ ಇಚ್ಚಿತೆ ಮೂಲವ್ಯಾಧಿ ಮಾನುನು. ೧

## ಸೂರಣಾದಿ ವಟಕಂ

ಕಾಡು ಸೂರಣದ ಗೆಡ್ಡೆ ೧೬ ಹಲ, ಕತ್ತರಿಸಿದ ಗೇರಬೀಜ ೮ ಹಲ ಶುಂಠಿ ೪ ಹಲ, ಮೆಣಸು ೧ ಹಲ, ಪಿಪ್ಪಲಿ ಮೂಲ ೧ ಹಲ, ದೇಶಾವಾರದ ಹಿಪ್ಪಲಿ ಮೂಲ, ಯವಕ್ಷಾರ, ಚವ್ಯ, ನೆಲ್ಲಿಚಟ್ಟು, ಬೇವಿನ ಹರಳು, ಆಳಿಲೆಕಾಯಿ, ತಾರೆ ಕಾಯಿ, ವಂಗಭಸ್ಮ, ಜಾಗಗೆಡ್ಡೆ, ಮಂಗರವಳ್ಳಿ ಬೇರು, ಇವು ಪ್ರತ್ಯೇಕ ೨ ಹಲ

---

[1] ಚಿಲಕೀಸೊಪ್ಪಿನ ರಸ ೧ ಮಾನ, ಎಣ್ಣೆ ಒಂದು ಮಾನ, ಸೈಂಧವ ಚೂರ್ಣ ಗ ೧ ಎತ್ತು, ಸಹ. (ಗ) [2] ಆಮಿದಮು ಲೋನಿ ಮಟ್ಟು ಚಕ್ಕಣ ಕಟ್ಟಾಕು ರಸಂ, (ಗ)

ಸಹ ಇವೆಲ್ಲವಂ ಚೂರ್ಣಿಸಿ ಇಮ್ಮಡಿ ಬೆಲ್ಲವ ಹಾಕಿ ಗಜ್ಜುಗ ಪ್ರಮಾಣ ವಟಕವಂ ಮಾಡಿ ಹೊತ್ತು ಒಂದಕ್ಕೆ ೧ ವಟಕವಂ ಹಸುವಿನ ಮಜ್ಜಿಗೆಯಿಂದಾದರೂ ತಣ್ಣೀರೊಳಾದರೂ ತೆಗೆದುಕೊಳ್ಳೆ ಅರ್ಶರೋಗ, ಗ್ರಹಣೀರೋಗ, ಕುಷ್ಟ, ಭಗಂದರ, ಮೇಹ, ಪಾಂಡು, ಕ್ಷಯಜ್ವರ, ಕ್ರಿಮಿರೋಗ, ಮುಂತಾಗಿ ಮಾಣ್ಗುಂ ೨

## ಮೂಲಿಕೆಗಳು

ಶನಿವಾರದ ದಿವಸ ಸಂಜೆಯಲ್ಲಿ ಗುರತನೋಡಿ ಮುಟ್ಟಿದರೆಮುನಿವನ ತಾಳನರ್ಚಿಸಿ ಎಳೆಯಂ ಕಟ್ಟಿಸಿ ಬಂದು ಆದಿವಾರ ಮೌನದಲ್ಲಿ ಹೋಗಿ ಹಣ್ಣನಾಗಲಿ ಬೆಲ್ಲವನಾಗಲಿ ತೆಗೆದುಕೊಂಡು ಒಂಬತ್ತೆಲೆ ಒಂಬತ್ತಡಕೆಯಿಂದರ್ಚಿಸಿ ಎರಡು ಬೇರಂ ತಂದು ಒಂದು ಬೇರನಿಳಿಯ ತೆಗೆದು ಒಂದು ಬೇರ ಏರ ತೆಗೆದು ಎರಡನು ಕೂಡ ಉಡಿಯಲ್ಲಿ ರಕ್ಷೆಯ ಕಟ್ಟಲು ಒಳಮಳೆ, ಹೊರಮಳೆ, ರಕ್ತ ಸುರಿವುದು ಸಹ ನಾನಾ ಬಗೆ ಮೂಲವ್ಯಾಧಿಯು ಗುಣಮಕ್ಕು. ೧

ಕಾಯಿ ಸುಂಕಾಗಿ ಹೂವು ಬಿಳಿದಾಗಿ ಇರುವ ಗಂಡುಕೊಗ್ಗಿ ಗಿಡುವಿಗೆ ಶನಿವಾರ ಸಾಯಂಕಾಲದಲ್ಲಿ ಪೂಜಿಸಿ ಸುತ್ತ ತಾ ಬೇರುಕಿತ್ತು ಹೋಗದ ಹಾಗೆ ಚಕ್ಕಪಾರೆಯಲ್ಲಿ ಸುತ್ತ ಅಗೆದು ಸೂಜಿಗಾತ್ರ ಬೇರ ಬಿಟ್ಟು ಅಗೆದ ಮಣ್ಣನು ಜಗಲಿಯ ಮಾಡಿ ಅರಿಸಿನದ ದಾರವಂ ಗಿಡುವಿಗೆ ಕಟ್ಟಿ ಅಡಕೆ ೫, ಎಲೆ ೧೦, ಹಣ್ಣು, ಕಾಯಿ, ಚಿಗುಳಿ, ತಂಬಿಟ್ಟು ನನೆಯಕ್ಕಿ, ನನೆಗಡಲೆ ಸಹ ನೈವೇದ್ಯ ಮಾಡಿ ಮೌನದಲ್ಲಿ[1] ಪ್ರದಕ್ಷಿಣವಾಗಿ[1] ಮೂರುಸುತ್ತು ಬಂದು ಈ ಗಿಡದ ತಳವನು ಎಡದ ಕೈಯ್ಯಲಿ ಹಿಡಿದುಕೊಂಡು ಯಾರು ಎಂಬ ಹಾಗೆ ಕೇಳಿದರೆ ಮೂಲವ್ಯಾಧಿಯವರು ಎಂದು ಹೇಳಿ ಹಿಂದುಮುಖವಾಗಿ ಗಿಡುವ ಕಿತ್ತುಹಾಕಿ ಬಿಡುವುದು; ಈ ಗಿಡುವ ಕೀಳುವಾಗ ಮಾತಾಡದೆ ಮೌನದಲ್ಲಿರುವುದು; ಅಮೃತ ಹಸ್ತದವರ ಕೈಯಲಿ ಈ ಕ್ರಿಯೆಯ ಮಾಡಿಸೆ ಮೂಲವ್ಯಾಧಿ ಮಾಣ್ಗುಂ. ೨

## ಪ್ರಯೋಗ

ಕನ್ನೆ ತೊಟ್ಟಿಯ ಬಡಗವರಿದ ಬೇರಂ ಸಿದ್ಧಿ ದಿನ ತಂದು ಅರ್ಚನೆಯ ಮಾಡಿ ಮಡಗಿಕೊಂಡು ನನೆ ಹೊರಟಾಗ ನಿತ್ಯವೂ ಮೂರು ಬಾರಿ ಮುಟ್ಟಿಸೆ ನನೆ ಮೇಲಕ್ಕೇರುವುದು. ೩

ಚಿಪ್ಪುಹಂದಿ ಚಿಪ್ಪಿನಲ್ಲಿ ಉಂಗರವ ಮಾಡಿ ವಾಮಹಸ್ತದ ಬೆರಳಿಟ್ಟುಕೊಂಡು ಮೊಳೆತಾಗುವ ಹಾಗೆ ಪ್ರಯೋಗಿಸಲು ಮೂಲವ್ಯಾಧಿ ಮಾಣ್ಗುಂ ೧

ಮತ್ತಮಿಾ ಮೂಲವ್ಯಾಧಿಗೆ ಪಥ್ಯಾಪಥ್ಯವರ್ಗಂಗಳಂ ಪೇಳಲ್ಪಡುತ್ತಿಹುದದೆಂತೆನೆ.—ಹೆಸರ ಕಟ್ಟು, ಹುರುಳಿ ಕಟ್ಟು, ಬೇಳೆಯೆಸರು, ಮಜ್ಜಿಗೆ, ಒಂದೇ

---

[1] ಅಪ್ರದಕ್ಷಿಣವಾಗಿ (ಗ).

ಬಗೆಯಾದ ಸಣ್ಣಕ್ಕಿ, ಅನ್ನವೇ ಮಿತವಾದ ಭೋಜನ, ಮುಂತಾದಾಹಾರಗಳಿಂದ ಮೂಲವ್ಯಾಧಿಯು ಮೊಳೆಗಳು ಹುಟ್ಟುವವಾದಕಾರಣ ಅಪಥ್ಯಂಗಳೆಂದರಿವುದು. ಮತ್ತಂ ನಾಡ ಸೂರಣ, ಉದ್ದು, ಹಿಂಡಿ, ಹೆಸರು, ಮೀನು, ಶೀತದ್ರವ್ಯ, ಸೋರೆ ಕಾಯಿ, ಸೌತೆಕಾಯಿ, ಅವರೆ ಹಿಟ್ಟು, ಬಲ್ಲವತ್ತದ ಕಾಯಿ, ಬಸಲೆ ಸೊಪ್ಪು, ಎಣ್ಣೆ, ಅನೂಪಮಾಂಸ, ಬಿದಿರ ಕಳಿಲೆ, ಕುಕ್ಕುಟಾಸನವಾಗಿ ಕುಳ್ಳಿರುವುದು, ಕುದುರೆ ಮೊದಲಾದ ವಾಹನಗಳ ಏರಾಟ, ತಣ್ಣೀರ ಸ್ನಾನ, ಚಪ್ಪರದವರೆಕಾಯಿ ಮೊದಲಾದ ಶಿಂಬಿಧಾನ್ಯ, ದಿವಾನಿದ್ರೆ ಮುಂತಾದಿವೆಲ್ಲಂ ಅಪಥ್ಯದ್ರವ್ಯಗಳೆಂದರಿವುದು. ಮತ್ತಂ ಮೊಸರ ಕಳಲು, ಚಿಲ್ಲದ ಕಾಯಿ, ಪಡವಲಕಾಯಿ, ಸೂರಣ, ತುಪ್ಪ, ಬೆಣ್ಣೆ, ಹಸುವಿನ ಮಜ್ಜಿಗೆ, ಇಂಗು, ಮೆಣಸು, ನೆಲ್ಲಿಕಾಯಿ, ಗುಳ್ಳದ ಕಾಯಿ ಕೊಮ್ಮೆ ಸೊಪ್ಪು, ಮೂಲಂಗಿ, ಜೀರಿಗೆ, ಹುರುಳಿ, ಚಕ್ಕೋತನ ಸೊಪ್ಪು. ಮಂಗರ ವಳ್ಳಿ ಸೊಪ್ಪು, ಮುಂತಾದಿವೆಲ್ಲಂ ಪಥ್ಯದ್ರವ್ಯಗಳೆಂದು ತಿಳಿವುದು.

ಅಂತು ಮೂಲವ್ಯಾಧಿ ಬಗೆ ೧ಕ್ಕೆ ಸಂಹಿತೆಗಳು ೧೯, ಕಷಾಯ ೧೨ ಚೂರ್ಣ ೪, ಧೂಪ ೪, ಬತ್ತಿ ೩, ಲೇಪ ೧೯, ಘೃತ ೪, ಲೇಹ್ಯ ೪, ತೈಲ ೨, ಗುಳಿಗೆ ೨, ಮೂಲಿಕೆ ೩, ಪ್ರಯೋಗ ೧ ಪಥ್ಯಾಪಥ್ಯವರ್ಗ ಸಹ ಪ್ರಯೋಗ ೭೭ಕ್ಕಂ ಸಮಾಪ್ತಂ.

---

## ಉದಾವರ್ತ ರೋಗಂ

ಲಕ್ಷಣಂ.— ಹೆಸರು, ನವಣೆ, ಕಂಬು, ಕಡಲೆ ಮೊದಲಾದ ರೂಕ್ಷ ವಸ್ತುಗಳಾದ ಗ್ರಾಹಿಗಳಾದ ಆಹಾರ ಸೇವನೆಯಿಂದ ಸ್ವಸ್ಥಾನದಲ್ಲಿದ್ದ ವಾಯುವು ಪ್ರಕೋಪಿಸಿ ಬಲಿಷ್ಠವಾಗಿ ಅಧೋಮುಖವಾದ ನಾಡೀಪ್ರವಾಹಂಗಳಂ ತಡೆದು ಸಹಿಸಲು ಶಕ್ಯವಲ್ಲದಿರುವ ಉಪದ್ರವಮನುಂಟುಮಾಡುತ್ತ ಆ ಮೂಲರೋಗದ ಲಕ್ಷಣಗಳೆಲ್ಲವೂ ಉಂಟಾಗಿರ್ಪುದೆ ಉದಾವರ್ತವೆಂಬ ರೋಗವು. ವಾಯುವೇ ಹೆಚ್ಚಾಗಿ ಪ್ರಕೋಪಿಸಿದಂಥ ಶರೀರದಲ್ಲಿ ಈ ಮೂಲರೋಗವಲ್ಲದೆ ಉದಾವರ್ತವೆಂಬ ರೋಗವು ಪುಟ್ಟುವುದು. ಅಪಾನವಾಯುವು ಪಕ್ವಾಶಯದಲ್ಲಿ ಪ್ರಕೋಪಿಸಿದಂಥದ್ದಾಗಿ ಮಲಮೂತ್ರ ನಿರೋಧವಮಾಡಿ ತಾನೆ ಬಲಿಷ್ಠವಾಗಿ ಕೆಳಕ್ಕೂ ಮೇಲಕ್ಕೂ ಹೋಗುತ್ತಾ ಬರುತ್ತ, ನಾಡೀರಂಧ್ರಗಳ ತಡೆದು ಉಬ್ಬಸವನುಂಟು ಮಾಡುವುದೆ ಉದಾವರ್ತ ರೋಗವೆನಿಸಿಕೊಂಬುದು. ಉದಾವರ್ತ ರೋಗ ರೂಪವೆಂತೆನೆ ಹೊಟ್ಟೆಯುಬ್ಬರಿಸಿಕೊಂಡು ಕಣ್ಣುಗಳು ಗುಳಿಬಿದ್ದು ಬಹಳ ಉಪದ್ರವದೊಡನೆ ಕೂಡಿ ಕಷ್ಟಪಡುತ್ತ ಉದ್ವೃತ್ತವಾಗಿ ಹೊಟ್ಟೆಶೂಲೆಯುಳ್ಳ ಉದಾವರ್ತ ರೋಗಮುಂಟಾದ ಮನುಜನನ್ನು ಚಿಕಿತ್ಸೆಯ ಮಾಡದೆ ಬಿಡುವುದು.

## ಚಿಕಿತ್ಸೆ—ಪ್ರವೃತ್ತಿಯಾಗುವುದಕ್ಕೆ ಕಲ್ಕಗಳು

ಅಂಗುರದ ಗೆಡ್ಡೆ, ಅಡವಿ ಹಾಗಲದ ಗಡ್ಡೆ, [1] ದುಂದುರುಪೆಗೆಡ್ಡೆ, [1] ನೆಲಾವರಿಕೆ ಬೇರು, ಇವು ಪ್ರತ್ಯೇಕ ಸಮಭಾಗಂ ಚೂರ್ಣಮಾಡಿ ಬಿಸಿನೀರಿಂದರೆದು ಕಲಸಿ ನೆಳಲಲ್ಲಿರಿಸಿಕೊಂಡು ವಾತಶರೀರಕ್ಕೆ ಗ ೧ ತೂಕ, ಪಿತ್ತಧಾತುವುಳ್ಳವರಿಗೆ ಗ ॥ ತೂಕ, ಶ್ಲೇಷ್ಮಶರೀರಕ್ಕೆ ವರಹ ತೂಕವನ್ನು [2] ವರಹ ತೂಕ ಓವನು ಕೂಡಿ [2] ಅರೆದು ಕೊಟ್ಟು ಬಿಸಿನೀರಿಂ ಕುಡಿಯಿಸೆ ಚೆನ್ನಾಗಿ ವಿರೇಚನಮಕ್ಕು. ಮಜ್ಜಿಗೆಯೋಗ ಪಥ್ಯ. ಇದರಿಂ ಮಹಾ ಬಳಲಿಕೆ ಹುಟ್ಟಿದರೆ ಶುಂಠಿ ಪುಡಿಯಂ ಹಾಕಿ ಮಜ್ಜಿಗೆಯಂ ತೆಗೆದುಕೊಳ್ಳುವುದು. ಅದಕ್ಕೂ ನಿಲ್ಲದಿದ್ದರೆ ಆವರಿಕೆ ಬೇರಿನ ಚಕ್ಕೆಯನರೆದು ಮಜ್ಜಿಗೆಯಲ್ಲಿ ಕೊಡಲು ನಿಲ್ಲುವುದು. ೧

ತಿಗಡೆಯಂ ವರಹ ತೂಕವಂ ಎಳನೀರಿನಲ್ಲರೆದು ತೆಗೆದುಕೊಳ್ಳಲು ಮಲ ಬಿಡುವುದು ; ಸರ್ವದೋಷಂ ಕೆಡುಗುಂ. ೨

ಅಳಲೆಕಾಯಿ, ಹಿಪ್ಪಲಿ, ಸೈಂಧವ ಇವಂ ಬಿಸಿನೀರೊಳರೆದು ಕುಡಿಯೆ ವಿರೇಕಮಕ್ಕು. ೩

ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲ, ತಿಗಡೆ ಇವನೆಲ್ಲ ಚೂಣಿಸಿ ಬಿಸಿನೀರಿಂ ತಗೆದುಕೊಳ್ಳೆ ವಿರೇಕಮಕ್ಕು. ೪

ನೆಲ್ಲಿಚಟ್ಟು, ಅಳಲೆಕಾಯಿ, ಹಿಪ್ಪಲಿ, ಚಿತ್ರಮೂಲ, ಸೈಂಧವ ಲವಣ ಇಷ್ಟನೂ ಚೂರ್ಣಂ ಮಾಡಿ ಬಿಸಿನೀರಿಂಕೊಳ್ಳೆ ಪ್ರವೃತ್ತಿಯಹುದು. ೫

[3] ದುಂಡುಗವೇಳ್ಳನು [3] ಮೇಕಪಾಲುತೊ ನೂರಿ ತ್ರಾಗನು ವಿರೇಕಮು ನಿಲುಚುನು. ೬

### ಕಷಾಯಗಳು

ತಿಗಡೆ ಚೂರ್ಣವಂ ಮಧುರ ದ್ರವ್ಯದಲ್ಲಿ ಕೂಡಿ ಕಷಾಯವಂ ಮಾಡಿಕೊಡಲು ಪಿತ್ತರೋಗಡವನಿಗೆ ವಿರೇಕಮಕ್ಕುಂ. ೧

ಹುರುಳಿ, ಉಳ್ಳಿ, ಔಡಲದ ಬೇರು, ಅಳಲೆಕಾಯಿ, ಹಿಪ್ಪಲಿ ಮೂಲ, ಶುಂಠಿ, ಇವಂ ಸಮಾಂಶವಾಗಿ ಕಷಾಯವೆತ್ತಿ ಅಷ್ಟಾವಶೇಷವಾಗಿ ಕಾಸಿ ಔಡಲದೆಣ್ಣೆ ವೆರಸಿಕೊಡಲು ಉದಾವರ್ತ ರೋಗಂ ಮಾಣ್ಗುಂ. ೨

ತಿಗಡೆ, ಕಟ್ಟುವತ್ತಿಗೆ ಬೇರು, ಇವೆರಡನು ಕಷಾಯಂ ಕಾಸಿ ಅಷ್ಟಾವಶೇಷವಾದುದಂ ಔಡಲದೆಣ್ಣೆ ಕೂಡಿಕೊಡಲು ಉದಾವರ್ತ, ಅಧ್ಮಾನ, ಮೂತ್ರ ಕಟ್ಟು ಸಹ ಪರಿಹರ. ೩

ಅಳಲೆಕಾಯಿ, ಹುರುಳಿ, ಬೆಳ್ಳುಳ್ಳಿ, ಸಹ ಕಷಾಯವಕಾಯಿಸಿ ಔಡಲದೆಣ್ಣೆ ವೆರಸಿ ಕೊಡಲು ಉದಾವರ್ತ ಗುಣಮಕ್ಕುಂ ೪

---

[1] (ಕ) ದುಮ್ಮಲಪಿ ಗಡ್ಡೆ. [2] (ಗ) ಪ್ರತಿಯಲ್ಲಿಲ್ಲ. [3] (ಗ) ಮುಂಡಗಳ್ಳಿ ವೇಳ್ಳನು.

ತಿಗಡೆ, ಪಿಪ್ಪಳ್ಳು, ವಜ, ಪಿಪ್ಪಲಿಮೂಲಂ, ಶುಂಠಿ, ಗಲಜರ ವೇರು, ನೇಲತಂಗೇಡು, ರೇಲವೇಳ್ಳು, ಮುಲುವೆಂಪಲು, ದೇವದಾರು, ಪಸುಪು, ಜಿಲ್ಲೆಡು ಪಟ್ಟ, ಕುಂಟಗಲಗರ, ಓಮಮು, ನೇಲವಮುಲಕ, ಕಟುಕರೋಹಿಣಿ, ಕರಕ್ಕಾಯು, ಪೆದ್ದಮುಲಕ, ನೇಲವೇಮು, ಪೊಡಪತ್ರ, ನೀಲಿವೇಳ್ಳು, ಪಿಪ್ಪಳ್ಳು, ಚವ್ಯಂ, ಗೆಂಟಿನ ವೇಳ್ಳು ಇವಿ ಸಮಭಾಗಂ ಕಷಾಯಂ ಕಾಚಿ ಈಯುನು ಭೇದಿಯೌನು. ಜ್ವರಂ ಸಹ ವಿಡುಚುನು. ೫

## ಸಂಹಿತೆಗಳು

ಅಳಲೆಕಾಯಿ, ಹಿಪ್ಪಲಿ, ಬಜೆ, ಅತಿಬಜೆ, ಬಿಡುಲವಣ ಇವಂ ಚೂರ್ಣಿಸಿ ಬಿಸಿನೀರಿಂ ಕದಡಿ ಔಡಲದೆಣ್ಣೆ ಮಿಶ್ರವಾಗಿ ಕುಡಿಯಿಸೆ ಉದಾವರ್ತ, ಗುಲ್ಮ, ಹೊಟ್ಟೆಯುಬ್ಬರ, ಎದೆನೋವು, ಮಲಬದ್ಧ ಇವಿಷ್ಟು ಪರಿಹರಮಕ್ಕು ೧

ಅಳಲೆಕಾಯಿ, ತಿಗಡೆ, ಕಟುಕರೋಹಿಣಿ, ಇವಂ ಚೂರ್ಣಿಸಿ ಮುಂಡಗಳ್ಳಿ ಹಾಲಿನಲ್ಲಿ ಭಾವನೆಯಂ ಮಾಡಿ ಗೋಮೂತ್ರದಲ್ಲಿ ಕದಡಿ ಪಾನವಮಾಡೆ ಪ್ರವೃತ್ತಿಯಹುದು. ಇದರಿಂ ಉದಾವರ್ತರೋಗ ಪರಿಹರಮಹುದು. ೨

ಶುಂಠಿ, ಅಳಲೆಕಾಯಿ, ಸೈಂಧವ, ಈ ಮೂರನು ಸಮನಾಗಿ ಚೂರ್ಣಂ ಮಾಡಿ ಬಿಸಿನೀರಿಂ ಕೊಡಲು ಸುಖಪ್ರವೃತ್ತಿಯಹುದು. ೩

ತಿಗಡೆ, ಸೈಂಧವಲವಣ, ಶುಂಠಿ, ಇವಂ ಚೂರ್ಣಿಸಿ ಮಾದಳದ ಹಣ್ಣಿನ ರಸದಲ್ಲಿ ಸೇವಿಸೆ ವಾತಪ್ರಕೃತಿಯಾತಂಗೆ ವಿರೇಕಮಕ್ಕು. ೪

ಹಿಪ್ಪಲಿ, ಶುಂಠಿ, ತಿಗಡೆ, ಯವಕ್ಷಾರ, ಸಹ ಚೂರ್ಣವಮಾಡಿ ಮಧುವಿಂ ಸೇವಿಸೆ ಶ್ಲೇಷ್ಮರೋಗದವನಿಗೆ ವಿರೇಕಮಹುದು. ೫

ನೆಲಾವರಿಕೆಬೇರಂ ಸಣ್ಣನಾಗಿ ಅರೆದು ಉಪ್ಪು, ಪುಣಸು, ಹುಳಿ ಸಹ ಹಾಕಿ ಬೇಳೆಯೆಸರಿನಲ್ಲಿ ಕದಡಿ ಕಾಸಿ ಒಗ್ಗರಿಸಿ ಆ ಬೇಳೆಯ ರಸವನ್ನು ಅನ್ನಕ್ಕೆ ಕಲಸಿ ಊಟಮಾಡಿ ಆಮೇಲೆ ಎರಡುವೀಳ್ಯವಂ ಮಾಡಲು ವಿರೇಕಮಕ್ಕುಂ. ೬

ನೆಲಮಾವಿನ ಸೊಪ್ಪಿನ ರಸವಂ ತೆಗೆದದರಲ್ಲಿ ಅವರೆಯ ತೋರ ಸುಣ್ಣವಂ ಕಲಸಿ ಕಾಲ ಉಗುರ ಕಣ್ಣಿಗೆ ತೊಡೆದು [1]ಬೆನ್ನ ಹುರಿಗೆ ಕೈಯೆಣ್ಣೆಯಂ[1] ತೊಡೆದುಕೊಂಡು ಬಿಸಿಲ ಕಾಸುತ ವೀಳ್ಯವ ಹಾಕಿಕೊಳ್ಳಲು ವಿರೇಚನಮಕ್ಕುಂ. ೭

ಜೇಪಾಳದೊಣಗಣ ಮೊಳೆಯಂ ತೆಗೆದು ಶುದ್ಧವಮಾಡಿ ಒಂದು ಹೆಸರು ಬೇಳೆಯಷ್ಟು ಜೇಪಾಳದ ಬೀಜದಲ್ಲಿ ಅವರೆಯ ಕಾಯ ಗಾತ್ರ ಶುಂಠಿ ತೊಕ್ಕ ತೆಗೆದು ನುರುಕಿಹಾಕಿ ಅವರೆಯ ಗಾತ್ರ ಬೆಲ್ಲವನ್ನು ಕೂಡಿ ಕಲಸಿ ಆ ಗುಳಿಗೆಯ ನುಂಗಲು ವಿರೇಕಮಕ್ಕುಂ. ೮

ನೆಲಗುಳ್ಳದ ಗಿಂಜನು ನಾಲ್ಕು ಮೆಣಸನು ಕೂಡ ಅರೆದು ಬೆರಳಿಗೆ ತೊಡೆದುಕೊಂಡು ಆಸನದೊಳಯಿಂಕೆ ಏರಿಸಲು ಬಂಧಿಸಿದ ಮಲ ಬಿಡುವುದು. ೯

---

[1] (ಗ) ಪ್ರತಿಯಲ್ಲಿಲ್ಲ.

ಪಿಡಿಕೆಡು ಗಿಂಟವೇಳ್ಳನು ವೋಕಪಾಲು ಜೋಸಿ ದಂಟಿ ಗಿದ್ದೆಡು ರಸಮುಲೊ ಪೋಕಂತ ಬೆಲ್ಲಂ ವೇಸುಕೊನಿ ತ್ರಾಗನು ರೆಂಡು ಮಾಟ್ಲುವಾಂತಿ, ಐದುಮಾಟ್ಲು ವಿರೇಕಮು ಸಹ ಅವುನು. ೧೦

ಶುಂಠಿ, ಪಿಪ್ಪಳ್ಳು, ಮಿರಿಯಾಲು, ನೇಪಾಳಂ, ಕರಕ್ಕಾಯಲು, ವೀನಿ ಸರಿಗಾ ಬುಚ್ಚುಕೊನಿ ನಿಮ್ಮಪಂಡ್ಲ ರಸಮುನ ಮರ್ದಿಂಚಿ ರೇನುಗಿಂಜಂತ ಪುಚ್ಚು ಕೊನನು ವಿರೇಕಮೌನು. ೧೧

ಉತ್ತರೇನಿ ಆಕುನು ನೂರಿನ ಮುದ್ದಲೊ ಉಸಿರಿಕಾಯಂತ ಅರೆಸೇರು ನೂನೆತೊ ಕಲಪಿ ತ್ರಾಗನು ಕಡುಪು ದಿಗುನು. ೧೨

ಪಾಮುದೊಂಡಗಡ್ಡ ಯೊಕ್ಕಪೈತೋಲ ಗೀಚಿ ಎಂಡಬೆಟ್ಟಿ ಚೂರ್ಣಂಜೇಸಿ ಇಂದುಕು ಸಮಭಾಗಂ ತ್ರಿಕಟುಕಮುಲ ಚೂರ್ಣಂ ಲೆಸ್ಸ ಕಲಪಿ ಪೂಟಕು ಗ ೧ ತೂನು ಲೆಕ್ಕಮುನ ಉಪ್ಪು, ಪೆರುಗುತೊ ತೀಸುಕೊನನು ಶ್ಲೇಷ್ಮಪ್ರಕೃತಿ ವಾರಿಕಿ ಪ್ರವೃತ್ತಿ ಬಾಗುಗ ಅವುನು. ೧೩

ಜೇಪಾಳದ ಬೀಜ ಒಂದು ಹಿಡಿಯಂ ಸಗಣಿಗದಡಿನಲ್ಲಿ ಬೇಯಿಸಿ ಆ ಬೀಜವಂ ತೆಗೆದು ರೋಳಿಸರದ ಹಳುಕಿನ ಸಂಗಡ ಬೇಯಿಸಿ ಪುನಃ ಕುದಿಸಿ ಹೆಚ್ಚಾಗಿ ಹಸುವಿನ ಹಾಲ ತಂದು ಕೆಲವು ಹಾಲಿನಲ್ಲಿ ಈ ಬೀಜವನರೆದು ಕಡಮೆ ಹಾಲಿನಲ್ಲಿ ಕದಡಿ ಕಾಸಿ ಹೆಪ್ಪಗೊಟ್ಟು ಮೊಸರ ಕಡೆದು ಬೆಣ್ಣೆಯ ತೆಗೆದು ಮಡಗಿ ಕೊಂಡು ತೊಗರಿಪ್ರಮಾಣ ಬೆಣ್ಣೆಯನಾದರೂ ಬೆಣ್ಣೆಯ ಕಾಸಿದ ತುಪ್ಪವನಾದರೂ ಸೇವಿಸಲು ವಿರೇಚನವಹುದು. ೧೪

## ಚೂರ್ಣಗಳು—ಐಪತ್ಯಾದಿಚೂರ್ಣ

ನೆಲ್ಲಿಚಟ್ಟು, ವಾಯಿವಿಳಂಗ, ಏಲಕ್ಕಿ, ಲವಂಗ, ಲವಂಗಪತ್ರೆ, ಕೊಡನಾರಿ ಗೆಡ್ಡೆ, ಹಿಪ್ಪಲಿ, ಶುಂಠಿ, ಮೆಣಸು, ಅಳಿಲೆಕಾಯಿ, ಇವಂ ಚೂರ್ಣಿಸಿ ಇಪ್ಪರ ಮುಮ್ಮಡಿ ತಿಗಡೆಯ ಚೂರ್ಣವ ಬೆರಸಿ ತೆಗೆದುಕೊಂಬ ಚೂರ್ಣವ ಸಮಸಕ್ಕರೆವೆರಸಿ ಸೇವಿಸಲು ಪ್ರವೃತ್ತಿಯು, ಉರಿಪೈತ್ಯ, ಶುಕ್ಲಪ್ರಮೇಹ, ತ್ರಿದೋಷದಿಂದಾದ ಗುಲ್ಮ, ಜಲೋದರ, ಹಳೆಜ್ವರ, ಕ್ಷಯ, ಪಾಂಡುರೋಗ ಸಹ ಗುಣವಹುದು. ೧

## ನಾರಾಚುಚೂರ್ಣ

ತಿಗಡೆ ಗ ೧ ತೂಕ, ಹಿಪ್ಪಲಿ ಗ ೪ ತೂಕ, ಇವಂ ಚೂರ್ಣವಂ ಮಾಡಿ ಗ ೧ ತೂಕ ಸಕ್ಕರೆವೆರಸಿ ಜೇನುತುಪ್ಪದಿಂ ಸೇವಿಸೆ ವಿರೇಕವಹುದು. ೨

ಶುಂಠಿ, ಹಿಪ್ಪಲಿ, ಮೆಣಸು, ದಂತಿ, ತಿಗಡೆ, ಕಟ್ಟುವತ್ತಿಗೆ ಬೀಜ, ಒಂದೆಲಗ, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಕಕ್ಕೆ, ಲವಂಗಚಕ್ಕೆ, ಲವಂಗಪತ್ರೆ,

ವಿಲಕ್ಕಿ ಇವಂ ಚೂರ್ಣವಂಮಾಡಿ ಬೆಲ್ಲವೆರಸಿ ಜೇನುಗೂಡಿ ಸೇವಿಸೆ ಸುಖವಿರೇಕ ಮಾಗಿ ಉದರವ್ಯಾಧಿಯುಂ ಕೆಡುಗುಂ. ೩

ನೆಲಾವರಿಕೆಯ ಚೂರ್ಣವಂ ಸಕ್ಕರೆವೆರಸಿ ಉದಯದಲ್ಲಿ ಸೇವಿಸೆ ಸುಖ ವಿರೇಕಮಕ್ಕುಂ. ೪

ನೇಲದಂತಿ, ತಿಗಡ, ನೇಲತಂಗೆಡು, ವಿಳಂಗಮುಲು ವೀನಿ ಸಮಾಂಶಮುಗ ಚೂರ್ಣಿಂಚಿ ಸಮಭಾಗಂ ಪಂಚದಾರ ಕಲಪಿ ತೀಸುಕೊನನು ವಿರೇಕಮೌನು. ೫

ನೆಲ್ಲಿಚಟ್ಟು, ವಾಯುವಿಳಂಗಂ, ಲವಂಗಚಕ್ಕ, ಲವಂಗಪತ್ರ, ನಾಗಕೇಸರ, ಶುಂಠಿ, ಮಿರಿಯಾಲು, ಪಿಪ್ಪಳ್ಳು, ತುಂಗಮುಸ್ತಲು, ಕರಕಾಯ ಇನ್ನಿ ವಗ ಒಕ್ಕಂ ಟಿಕಿ ಗ ೪ ತೂನು, ತಿಗಡ ೧೨ ತೂನು ದೀನಿಕಿ ಸಮಂ ಶರ್ಕರವೇಸಿ ಈಯುನು ಕಡುಪುಶೂಲಲು, ಅಗ್ನಿಮಾಂದ್ಯಂ, ಮೂಲವ್ಯಾಧಿವೊಲಲು, ಮರಿನ್ನಿ ಅಷ್ಟಾದಶ ಕುಷ್ಠಂ, ಪ್ರಮೇಹಂ, ಕ್ರಿಮಿರೋಗಂ, ಗುಲ್ಮರೋಗಂ, ವಾತಪಿತ್ತ ಶ್ಲೇಷ್ಮಾದಿ ರೋಗಮುಲು ಗುಣಮೈ ಅಮಾಂತಿಕ ವಿರೇಕಮೈ ದೀಪನಮೈ ಸೌಖ್ಯಕರಮೈ ಮನೋಹರಮೈ ರಾಜಯೋಗ್ಯಮೈ ಯುಂಡುನು. ೬

## ಗುಳಿಗೆ

ಶುಂಠಿ, ಹಿಪ್ಪಲಿ, ಇಂಗು, ಬೆಳ್ಳುಳ್ಳಿ, ಚಿತ್ರಮೂಲ, ಕಲ್ಲುಪ್ಪು, ಸೈಂಧವ ಲವಣ, ಗಾಜುಲವಣ, ಬಿಡುಲವಣ, ಸಂವತ್ಸರಲವಣ, ಇವನೆಲ್ಲ ಸಮಚೂರ್ಣಂ ಗೆಯ್ದು ಕಳ್ಳಿಹಾಲಿನಲ್ಲಿ ಮೂರು ಭಾವನೆಯಂ ಮಾಡಿ ಕಡಲೆಯ ಪ್ರಮಾಣ ಗುಳಿಗೆ ಯಂ ಕಟ್ಟಿ ಅಭ್ಯಂಗನವಂ ಮಾಡಿ ಆ ಮರುದಿವಸ ಉದಯದಲ್ಲಿ ಒಂದು ಗುಳಿ ಗೆಯಂ ಪುಡಿಮಾಡಿ ಬಿಸಿನೀರಿನಿಂದ ಕದಡಿ ಕೊಡಲು ಸುಖಪ್ರವೃತ್ತಿಯಹುದು. ಬಳಲಿಕೆಪುಟ್ಟಿದರೆ ಮೊಸರನ್ನವನ್ನಿಕ್ಕಿಸುವುದು. ೧

ಸೈಂಧವಲವಣ, ಗಾಜುಲವಣ, ಬಿಡುಲವಣ, ಯವಕ್ಷಾರ, ಸರ್ಜ್ಯಕ್ಷಾರ, ಜೇಪಾಳ, ಶುಂಠಿ, ಹಿಪ್ಪಲಿ, ಇಂಗು, ಓವು, ಸೋಮಿಚಕ್ಕೆ, ಸಹ ಚೂರ್ಣವಂಮಾಡಿ ಕಳ್ಳಿಹಾಲಿನಲ್ಲಿ ಕಲಸಿ ಕಡಲೆತೋರ ಗುಳಿಗೆಯಂ ಮಾಡಿ ದೊಡ್ಡವರಿಗೊಂದುಗುಳಿಗೆ ಸಣ್ಣವರಿಗೆ ಅರೆಗುಳಿಗೆ ಮೇರೆಯಲ್ಲಿ ಜೇನುತುಪ್ಪದಲ್ಲಿ ಕಲಸಿ ಕೊಡಲು ವಿರೇಕವ ಹುದು. ಮೊಸರು ಮಜ್ಜಿಗೆ ಅನ್ನ ಪಥ್ಯ. ೨

ಶುದ್ಧಿಮಾಡಿದ ಜೇಪಾಳ ಗ ೪ ತೂಕ, ಶುಂಠಿ ಗ ೩ ತೂಕ, ಶುದ್ಧಗಂಧಕ ಗ೨ ತೂಕ, ಮೆಣಸು ಗ ೧ ತೂಕ, ಶುದ್ಧ ಬಿಳುಗಾರ ಗ ೧ ತೂಕ, ಇವನೆಲ್ಲ ಚೂರ್ಣಿಸಿ ತಣ್ಣೀರಿನಿಂದ ಸಣ್ಣನಾಗಿ ಅರೆದು ಗುಂಜಿ ಪ್ರಮಾಣ ಗುಳಿಗೆಯಂ ಮಾಡಿ ತಣ್ಣೀರಿಂ ಕಲಸಿ ಕೊಡಲು ವಿರೇಕವಹುದು. ೩

ಜೇಪಾಳದ ಬೀಜ ೨೦ ನ್ನು ನಿಂಬೆಹಣ್ಣಿನಲ್ಲಿ ದ್ರಾವರವಮಾಡಿ ಅದರೊಳು

ತುಂಬಿ ಆರು ದಿನವಿರಿಸಿ ಆಮೇಲೆ ತೆಗೆದು ಒಳಗಣ ಮೊಳೆಯನು,ಮೇಲಣ ಸಿಪ್ಪೆಯನು ತೆಗೆದು ಹಾಕಿ ನಿಂಬೆಹಣ್ಣಿನ ಬೀಜ ದುದ್ದೆಸಹ ತೆಗೆದು ಶುಂಠಿ, ಹಿಪ್ಪಲಿ, ಸಹ ಇವನೆಲ್ಲ ಅರೆದು ಉದ್ದಿನ ಗಾತ್ರ ಗುಳಿಗೆಯಂ ಮಾಡಿ ಒಂದು ಗುಳಿಗೆಯಂ ಬೆಲ್ಲದಲ್ಲಿ ಕಲಸಿ ಮೆದ್ದು ಒಂದುಸೇರು ಬಿಸಿನೀರ ತೆಗೆದುಕೊಳ್ಳಲು ವಿರೇಕವಹುದು. ೪

ನೇಪಾಳಪುಗಿಂಜಲು, ಕರಕ್ಕಾಯುಲು, ಪಿಪ್ಪಳ್ಳು, ವೀನಿ ಸಮಚೂರ್ಣಂ ಜೇಸಿ, ಬ್ರಹ್ಮ ಚೆಮುಡುಪಾಲುನು ತಡಿಸಿ ಗುರಿಗಿಂಜಲಂತವಟಕಮುಲು ಜೇಸಿ ವೇನಿಳ್ಳತೊ ಈಯುನು ವಿರೇಕಿಂಚುನು ; ಚನ್ನೀಳ್ಳತೊ ಈಯುನು ವಾಂತಿಯಾನು. ೫

ಶುಂಠಿ, ಹಿಪ್ಪಲ, ಮಿರಿಯಾಲು, ಕರಕತಾಂಧ್ರಿ, ಉಸುರಿಕೇಲು, ವೆಲಿಗಾರಂ [1]ತುತ್ತಂ[1] ವೀನಿ ಸರಿಗಾ ನೇಪಾಳಂ, ನಿಮ್ಮಪಂಡ್ಲು ಪುಲುಸುತೊ ಮರ್ದಿಂಚಿ ರೇಣುಗಿಂಜಲಂತ ವಟಕಮುಲು ಜೇಸಿ ವೇನೀಳ್ಳುತೊ ಕೊನನು ವಿರೇಕಮೌನು. ೬

ನೇಪಾಳಂ, ಗಂಧಕಂ, ಬೆಲ್ಲಂ, ವೀನಿ ಸಮಭಾಗಮುನ ಕೂಡಿ ಚೆಮುಡು ಪಾಲುತೊ ಮರ್ದಿಂಚಿ, ರೇಣುಗಿಂಜಲಂತ ವಟಕಂಜೇಸಿ ಬೆಲ್ಲಮುತೊ ದೀನಿನಿ ವೇನೀಳ್ಳುತೊ ತ್ರಾಗನು ವಿರೇಕಮೌನು. ೭

ನೇಲತಂಗೇಡುವೇರು, ರೇಲಚಿಗುಳ್ಳು, ತೆಲ್ಲಗಿಂಟಿನ ವೇಳ್ಳು, ಕರಕ್ಕಾಯ, ನೇಪಾಳಂ, ಇಂತ ಸಮಾಂಶಂಗೂರ್ಚಿ ಚೂರ್ಣಂ ಜೇಸಿ ಕಳ್ಳಿಪಾಲುತೊ ಮೂಡು ಭಾವನಮುಲು ಜೇಸಿ ಮರೀಚಪ್ರಮಾಣಂ ಗುಳಿಗಲು ಜೇಸಿ ಒಕ ಗುಳಿಗನು ಬೆಲ್ಲಮುತೊ ಈಯುನು ವಿರೇಚನಮೌನು. ೮

ಜೇಪಾಳದ ಬೀಜ, ಹಿಪ್ಪಲಿ, ಆಳಿಲೆಕಾಯಿ, ಈ ಮೂರರ ಸಮ ಅಭ್ರಕಭಸ್ಮ ಇವಂ ಮಂಡಗಳ್ಳಿ ಹಾಲನಲ್ಲಿ ಭಾವನೆಯಂ ಮಾಡಿ ಮೆಣಸಿನ ಪ್ರಮಾಣ ಒಂದು ಗುಳಿಗೆಯಂ ತಾಂಬೂಲದಲ್ಲಿ ಹಾಕಿಕೊಂಡು ಒಂದಿಷ್ಟು ತಣ್ಣೀರ ಕುಡಿಯೆ ವಮನವಹುದು ; ಬಿಸಿನೀರಿಂಕುಡಿಯೆ ವಿರೇಕಮಕ್ಕು. ೯

ಬೇಲದ ವಾಟೆ, ಬೆಲ್ಲವತ್ತದ ವಾಟೆ, ಮಾವಿನ ಹಗಿನು, ಎಲವದ ಹಗಿನು, ಓವು, ಲವಂಗ, ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲ, ಸೈಂಧವ, ಧಾತಕೀ ಕುಸುವ ಜೀರಿಗೆ, ಸಾಸುವೆ, ಇಂಗು, ಅಗುಳಶುಂಠಿ, ಇವಂ ನಿಂಬೆಯ ಹುಳಿಯಲ್ಲಿ ಅರೆದು ತಾರೆಕಾಯ ಪ್ರಮಾಣ ಗುಳಿಗೆಯಂ ಮಾಡಿ ಕಟ್ಟುವೊಸರಿಂ ಕೊಡಲು ಆಮಾಂತ್ಯ ವಿರೇಕಮಕ್ಕು. ೧೦

ಚಿತ್ರಮೂಲ, ಇಂಗು, ಅಗುಳಶುಂಠಿ, ಚಂಗಲಕೋಷ್ಟ, ಲಾವಂಚ, ಲವಣ, ಜೀರಿಗೆ, ಕೊತ್ತುಂಬರಿ, ಹಿಪ್ಪಲಮೂಲ, ಕೊಟ್ಟೆಬೇರು, ಓವು, ಗಂಟುಭಾರಂಗಿ, ಯವಕ್ಷಾರ, ಸರ್ಜಕ್ಷಾರ, ಲವಂಗಪತ್ರೆ, ನೆಗ್ಗಿಲ ಬೇರು, ಕರಿ ಜೀರಿಗೆ, ಇವಂ

[1] (ಗ) ಪ್ರತಿಯಲ್ಲಿಲ್ಲ

ಸಮಭಾಗಂ ಚೂರ್ಣಂಮಾಡಿ ನಿಂಬೆಯ ಹಣ್ಣಿನ ರಸದಲ್ಲಿ ಮರ್ದಿಸಿ ತಾರೆಕಾಯ ಪ್ರಮಾಣ ಗುಳಿಗೆಯಂಮಾಡಿ ನೆಳಲಲೊಣಗಿಸಿ ಭೋಜನವಂ ಮಾಡಿದ ತರು ವಾಯ ಜೇನುತುಪ್ಪದಿಂ ಕೊಡಲು ಉದಾವರ್ತ ರೋಗಂ ಗುಣಮಕ್ಕು. ೧೧.

## ಬತ್ತಿ

[1] ತುಪ್ಪ [1] ಕೀರೆ ಸೊಪ್ಪಿನ ರಸವಂ ಕೈಯ್ಯೆಣ್ಣೆಯಲ್ಲಿ ಬೆರಸಿ ಅರಳೆಯ ಬತ್ತಿಗೆ ಊಡಿ ಆ ಬತ್ತಿಯನಾಸನಕ್ಕೇರಿಸಲು ಹೊಟ್ಟೆ ಕಳೆವುದು. ೧.

## ಲೇಪಗಳು

ನೇಪಾಳದ ಬೀಜವಂ ಗಿರಿಕರ್ಣಿಕೆಯ ರಸದಿಂ ಮರ್ದಿಸಿ ನಾಭಿಗೆ ಲೇಪವ ಮಾಡೆ ಶೀಘ್ರ ವಿರೇಕಮಕ್ಕು. ೨

ಕಹಿ ಹೀರೆಯ ಬೀಜವನ್ನು ಹರಳೆಣ್ಣೆಯಲ್ಲಿ ಅರೆದು ಅಂಗಾಲಗೆ ಲೇಪಿಸೆ ತತ್ ಕ್ಷಣವೇ ವಿರೇಚನವಹುದು. ೩

ಜೇಪಾಳದ ಬೀಜವಂ ಕಹಿಸೋರೆಯ ಬೀಜ ಸಹ ಪಾತಾಳ ಯಂತ್ರದಿಂ ತೈಲವ ತೆಗೆದು ಕಹಿಸೋರೆಯ ಬಲಿತ ಕಾಯೊಳಗಣ ಬೀಜವ ತೆಗೆದು ಆ ತೈಲವ ತುಂಬಿ ಪಕ್ಷದಿವಸ ಧಾನ್ಯಪುಟ ವಿಟ್ಟು ಮೇಲೆ ತೆಗೆದು ನಾಭಿಗೂ ಅಂಗಾಲಗೂ, ಲೇಪವಮಾಡೆ ಆಮಾಂತ್ಯ ವಿರೇಚನವಕ್ಕುಂ; ಎದೆಗೆ ಲೇಪಿಸೆ ಪಿತ್ತ ಶಮನ ವಹುದು; ಅಂಗಾಲಗೆ ನಿಂಬೆಹಣ್ಣಂ ಒಟ್ಟಿ ಕಾಲಂ ತೊಳೆಯೆ ನಿಲ್ಲುವುದು. ೪

ಪರ್ಪಾಷ್ಟಕಾಯ ವಿತ್ತಲು, [2] ತೆಲ್ಲಗಿರಿಕರ್ಣಿಕ ವಿತ್ತಲು, [2] ಗುರಿಗಿಂಜಲು, ಗಂಧಕಂ, ವೆಲಿಗಾರಂ, ಪಾದರಸಂ, ಚೇದಿಬೀರು ವಿತ್ತಲು, ಚೇತಿಪೊಳ್ಳ, ಆಮಿ ದಪು ವಿತ್ತಲು, [3] ಕಾಕಿಕೊಂಡ ವಿತ್ತಲು [3] ರೇಲವಿತ್ತಲು, ಕರಕ್ಕಾಯ, ತಿಗಡ, ಮೋದುಗ ವಿತ್ತುಲು ವೀನಿ ಸಮಭಾಗಮುಗ ಚೂರ್ಣಂ ಜೇಸಿ ನಲ್ಲೇರು ರಸಮು ತೋನು ಬೊಂತಕಳ್ಳಿ ಪಾಲುತೋನು ಮೂಡುದಿನಮುಲು ಮರ್ದಿಂಚಿ ವೆರಿ ಸೋರಕಾಯಿಲೊ ನಿಂಚಿ ಎಂಡರೊ ಉಂಚಿತೆ ತೈಲಂ ವಚ್ಚುನು. ಈ ವಚ್ಚಿನ ತೈಲಮುನು ಉಂಡುಕೊನಿ ಗ ೧ ತೂನು ತೈಲಂ ನಾಭಿಕಿ ಲೇಪಿಂಚಿತೆ ಆ ಕ್ಷಣಮೆ ವಿರೇಚನಮೌನು; ಈ ತೈಲಮುನು ಪಾದಮುನಕು ಲೇಪಂ ಜೇಸಿತೆ ಪದಿಮಾಟ್ಲು ವಿರೇಚನಮೌನು: ಈ ತೈಲಮುನು ಮೂಸಿ ಚೂಸಿತೆ ಐದು ಮಾಟುಲು ವಿರೇಚನ ಮೌನು: ಇದಿ ಸುಖ ವಿರೇಚನಮು. ಈ ತೈಲಪು ಪೇರು ಲೋಕನಾಥರಸಮು, ಈ ತೈಲಮುನುಂಚಿ ಪಂಚವಿಧ ಗುಲ್ಮಲು ಸಮಸ್ತ ಶೂಲಲು ಸಹ ಗುಣಮೌನು. ೫

---

[1] (ಗ) ಚಿಲು. [2] (ಗ) ಪ್ರತಿಯಲ್ಲಿಲ್ಲ. [3] (ಗ) ಪ್ರತಿಯಲ್ಲಿಲ್ಲ.

## ಆಘ್ರಾಣ

ಅಡವಿ ವಿತ್ತುಲ ತೈಲಮುನು ನಿಂಮ ಪಂಟಿಕಿ ಚಮರಿ ಆ ನಿಂಮ ಪಂಡುನು ಎನ್ನಿಮಾಟ್ಲು ಕಂಪು ಚೂಸಿತೆ ಅನ್ನಿ ಮಾಟ್ಲು ವಿರೇಚನ ಮೌನು. ೧

ದಂತಿ, ಕಟ್ಟುವತ್ತಿಗೆ ಬೀಜ, ಒಂದೆಲಗ, ಅಳಿಲೆಕಾಯಿ, ತಾರೆಕಾಯಿ, ನೆಲ್ಲಿ ಚಟ್ಟು, ಕಕ್ಕೆಬೀಜ ಇವಂ ಸಮಾನಗೊಂಡು ಚೂರ್ಣವಂ ಮಾಡಿ ಗೋಮೂತ್ರದಲ್ಲಿ ರಾತ್ರಿಯೆಲ್ಲ ನನೆಯಿಕ್ಕಿ ಹಗಲಲ್ಲಿ ಒಣಗಿಸಿ ಈ ರೀತಿಯಲ್ಲಿ ಏಳುದಿವಸ ರಾತ್ರಿಯೆಲ್ಲ ನನೆಹಾಕಿದ್ದು ಪುನಃ ಬೆಳಗಾಗೆ ಒಣಗಿಸಿ ಆ ಚೂರ್ಣದಲ್ಲಿ ಕಳ್ಳಿಯ ಹಾಲ ಹೊಯ್ದು ಸಣ್ಣನಾಗರೆದು ಗುಳಿಗೆಯಂ ಮಾಡಿ ಒಣಗಿಸಿ ಬೇಕಾದಾಗ ಒಂದು ಗುಳಿಗೆಯಂ ಪುಡಿಮಾಡಿ ಪರಿಮಳದ ಹಬ್ಬಿನ ಮೇಲೆ ತಳಿದು ಮೂಸಿ ನೋಡೆ ವಿರೇಕಮಕ್ಕು. ಇದು ರಾಜಯೋಗ್ಯಂ. ೨

## ಕಲ್ಯಾಣಕ್ಷಾರ

ಶುಂಠಿ, ಹಿಪ್ಪಲಿ, ಮೆಣಸು, ಸಂವತ್ಸರ ಲವಣ, ಕಾಚು ಲವಣ, ಅಳಿಲೆ ಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಕಟ್ಟುವತ್ತಿಗೆ, ಮುಂಡಗಳ್ಳಿ, ಗೇರ ಹರಳು, ಚಿತ್ರಮೂಲ, ಇವಂ ಸಮಾಂಶವಾಗಿ ಜಜ್ಜುಗುಟ್ಟಿ ಕೈಯಣ್ಣೆಯಲ್ಲಿ ನನೆಯ ಹಾಕಿ ಆ ಬಳಿಕ ಗೋಮೂತ್ರದಲ್ಲಿ ನನೆಯಿಸಿ ಆ ಮೇಲೆ ಒಣಗಿಸಿ ಒಂದು ಭಾಂಡದಲ್ಲಿ ತುಂಬಿ ಬಾಯಿಗೆ ಮುಚ್ಚಳವಂ ಮುಚ್ಚಿ ಶೀಲುಮಣ್ಣು ಕೊಟ್ಟು ಗಜಪುಟವ ಹಾಕಿ ಸಾಂಗ ಶೀತಳವಾದ ಮೇಲೆ ಆ ಕ್ಷಾರಗಳ ತೆಗೆದುಕೊಂಡು ದಿನ ಪ್ರತಿಯೂ ಉದಯಕಾಲದಲ್ಲಿ ದೇಹಾನುಗುಣವರಿತು ಬಿಸಿನೀರಿಂದಾಗಲಿ ಹಸುವಿನ ತುಪ್ಪ ದಿಂದಾಗಲಿ ಭೋಜನ ಮಾಡುವಾಗ ಮೊದಲ ಕವಳದಲ್ಲಿ ಗ ೧ ತೂಕವಂ ಸೇವಿಸೆ ಉದಾವರ್ತ, ಮಲಬಂಧ, ಗುಲ್ಮ, ಎದೆನೋವು ಸಹ ಮಾಣ್ಗುಂ.

ಅಂತು ಉದಾವರ್ತ ರೋಗಕ್ಕೆ ಕಲ್ಕ ೬, ಕಷಾಯ ೫, ಸಂಹಿತೆ ೧೪, ಚೂರ್ಣ ೬, ಗುಳಿಗೆ ೧೧, ಬತ್ತಿ ೧, ಲೇಪ ೪, ಆಘ್ರಾಣ ೨, ಕ್ಷಾರ ೧, ಸಹ ಪ್ರಯೋಗ ೫೦ ಕ್ಕಂ ಸಮಾಪ್ತಂ.

---

## ಅತಿಸಾರ ರೋಗ

ನಿದಾನ.—ಕಂಡಕಂಡ ಪದಾರ್ಥವೆಲ್ಲವನು ಇಚ್ಛೆಗೊಂಡು ಭೋಜನವಂ ಮಾಡುವಂಥವರಿಗೆ ಅತಿಸಾರರೋಗಮುಂಟಾಗುತ್ತಿಹುದು. ಆ ಅತಿಸಾರ ರೋಗವು ವಾತದೋಷದಿಂದಲೂ ಪಿತ್ತದೋಷದಿಂದಲೂ ಶ್ಲೇಷ್ಮದೋಷದಿಂ

ದಲೂ ಮೂರೂ ಕೂಡಿದ ತ್ರಿದೋಷದಿಂದಲೂ ಭಯದಿಂದಲೂ ಶೋಕದಿಂದಲೂ ಈ ಪ್ರಕಾರದಿಂದ ಆರು ವಿಧವಾಗಿ ಪುಟ್ಟುತ್ತಿರ್ಕುಂ. ಇದರಲ್ಲಿ ವಾತಾತಿಸಾರ ವೆಂತನೆ ಕೆಂಪಾಗಿ ನೊರೆಗೂಡಿ ಅಡಿಗಡಿಗೆ ಅಲ್ಪಸ್ವಲ್ಪವಾಗಿ ಒಂದೊಂದುವೇಳೆ ಕೂಗುತ ಹೊಟ್ಟೆಕಳವುದೆ ವಾತಾತಿಸಾರ ಲಕ್ಷಣ : ಮತ್ತಂ ರಕ್ತ ಕೂಡಿಕೊಂಡು, ಕಪ್ಪುವರ್ಣ ಹಳದಿವರ್ಣವಾಗಿಯೂ ಹೊಟ್ಟೆಶೂಲೆ ಸಂತಾಪ ಮೈಯ್ಯುರಿತ ಅಂಗೈಯ್ಯಂಗಾಲುಗಳಲ್ಲಿ ಉರಿವುದು ಮೂರ್ಛೆಯು ಬೆವರು ಬಾಯಾರಿಕೆಯೂ ಉಂಟಾಗಿ ತೋರ್ಪುದೆ ಪಿತ್ತಾತಿಸಾರವೆನಿಸಿಕೊಳ್ಳುವುದು. ಮತ್ತಂ ನೋವು ಉಂಟಾಗಿ ನಯವಾಗಿ ಮಿಂಚಾಗಿ ಗಟ್ಟಿಯಾಗಿ ನಿಬಿಡವಾಗಿ ಅಡಿಗಡಿಗೆ ತೀವ್ರ ಗೈವುತ್ತಿಹುವುದೆ ಶ್ಲೇಷ್ಮಾತಿಸಾರವೆನಿಸಿಕೊಂಬುದು. ಮತ್ತಂ ಹಂದಿಯ ಮಾಂಸ ಹಂದಿಯ ತುಪ್ಪದ ವರ್ಣಕ್ಕೆ ಸರಿಯಾಗಿರುವ ಅತಿಸಾರವೆ ತ್ರಿದೋಷದಿಂ ಪುಟ್ಟಿದ ಅತಿಸಾರವೆನಿಸಿಕೊಳ್ಳುವುದು. ಮತ್ತಂ ಭಯದಿಂದಲೂ ಶೋಕದಿಂದಲೂ ಪುಟ್ಟಿದ ಎರಡುವಿಧದತಿಸಾರವೂ ವಾತಾತಿಸಾರದಲ್ಲಿ ಪೇಳಿದ ಸಕಲ ಲಕ್ಷಣ ಮುಳ್ಳುದೆಂದರಿವುದು. ಮತ್ತಮಿಾ ಆರು ವಿಧವಾದ ಅತಿಸಾರಗಳಲ್ಲಿ ಅಸಾಧ್ಯಾತಿ ಸಾರಮಾವುದೆನೆ ಜೇನುತುಪ್ಪ ಎಣ್ಣೆ ಪಳನೀರುಗಳ ಹಾಗೆ ನಾನಾವರ್ಣಗಳಾಗಿ ದುರ್ಗಂಧದೊಡನೆ ಕೂಡಿ ಹೀಲಿಯ ಗರಿಯೋಪಾದಿಯಲ್ಲಿಯೂ ಬೆಂದಹಾಗೆಯೂ ವಿವರ್ಣವಾಗಿ ನನೆ ಹೊರಟು ಬಡವಾಗಿ ಜ್ವರವುಂಟಾಗಿ ವಿಷ ತಾಗಿದಹಾಗೆ ಉಷ್ಣಗೂಡಿ ನಿತ್ಯವೂ ಹೊಟ್ಟೆಯುಬ್ಬರಿಸುತ ನೋವುವುಂಟಾಗಿರುತ್ತ ಇಹುದೆ ಅಸಾಧ್ಯಾತಿಸಾರವೆಂದರಿದು ಈ ರೋಗಮುಂಟಾದವನು ಜೀವಿಸಲರಿಯ ನೆಂದು ನಿಶ್ಚೈಸುವುದು. ಮತಾಂತರೆ ಅತಿಸಾರವೆಂಬ ಸಂಕ್ಷೇಪದಿಂದ ಆಮಾತಿಸಾರ ಪಕ್ವಾತಿಸಾರವೆಂದೆರಡು ತೆರನದರಲ್ಲಿ ನೀರಿನಲ್ಲಿ ಮಲವ ಹಾಕಿ ನೋಡಲು ಮುಳುಗಿದರೆ ಆಮಾತಿಸಾರ, ತೇಲದರೆ ಪಕ್ವಾತಿಸಾರವೆಂದರಿವುದು.

## ಜ್ವರಾತಿಸಾರ

### ಚಿಕಿತ್ಸೆ—ಸಂಹಿತೆಗಳು

ಬಾಳೆಯ ಹೂವಿನ ರಸದಲ್ಲಿ ಸಣ್ಣನಾಗಿ ಜೀರಿಗೆಯನರೆದು ದಾಳಿಂಬದ ಕಾಯೊಳಿಕ್ಕಿ ಆ ಕಾಯನು ಬಾಳೆಯ ಕಾಯ ಮೋತೆಯ ಸಿಪ್ಪೆಯೊಳಗೆ ಹುದುಗಿಸಿ ಅರುವೆಯಿಂ ಸುತ್ತಿ ಸಗಣಿಯನು ಕೆಮ್ಮಣ್ಣನು ಮೆತ್ತಿ ಒಣಗಿಸಿ ಕಾಯಿ ಬೇಯದ ಹಾಗೆ ಪುಟವಿಕ್ಕಿ ತೆಗೆದು ಸಣ್ಣನಾಗಿ ಅರೆದು ಕಾಸಿನಗಲ ಬಿಲ್ಲೆಯಂ ಮಾಡಿ ಒಣಗಿಸಿ ಜೇನುತುಪ್ಪದಿಂ ಕೊಡಲು ಜ್ವರಾತಿಸಾರ ಸಂಗ್ರಹಣೀರೋಗ ಸಹ ಮಾಣ್ಗುಂ. ೧

ಅಜಾಮೋದ, ಎಲವದ ಹಗಿನು, ಧಾತಕೀಕುಸುಮ, ಶುಂಠಿ ಇವಂ ಕ್ರಮದಿಂ ವೃದ್ಧಿಯಾಗಿ ಹೆಚ್ಚಿಸಿ ಚೂರ್ಣವ ಮಾಡಿ ಮೊಸರಿಂ ಕಲಸಿ ಕೊಡಲು ಜ್ವರಾತಿಸಾರ, ಸರ್ವಗ್ರಹಣಿ, ಸರ್ವಾತಿಸಾರ ಸಹ ಪರಿಹರಮಕ್ಕುಂ. ೨

ಶುಂಠಿ, ಹಿಪ್ಪಲಿ, ಮೆಣಸು, ಜೀರಿಗೆ, ಲವಂಗ, ಯವಕ್ಷಾರ, ಸೈಂದವ ದಾಳಿಂಬದ ಕಾಯ ತೊಕ್ಕು, ಮಾವಿನ ಬೀಜ, ಎಲವದ ಹಗಿನು, ಧಾತಕೀ ಕುಸುಮ ಕೊಡಸಿಗೆ ಬೀಜ, ಕೊಳವಳಿಕೆ ಬೀಜ, ಕುರಾಸಾನಿ, ಓವು, ಗಸಗಸೆ, ಜಾಕಾಯಿ, ನಾಗಕೇಸರಿ, ಗಜ ಹಿಪ್ಪಲಿ, ಜಾಪತ್ರೆ, ಅತಿಬಜೆ, ಇವಂ ಸಮತೂಕವಾಗಿ ಮಜ್ಜಿಗೆ ಯಲರೆದು ಕೊಡೆ ಜ್ವರಾತಿಸಾರವು ಗುಣಮಕ್ಕುಂ. ೩

ಶುಂಠಿ, ಹಿಪ್ಪಲಿ, ಮೆಣಸು, ಅಳಿಲೆಕಾಯಿ, ಚಿತ್ರಮೂಲ, ಕರಿಬೇವು, ಜಾಕಾಯಿ, ಇವಂ ಸಮಭಾಗವಾಗಿ ಮೊಸರ ನೀರಿಂದರೆದು ಸಕ್ಕರೆಯಂ ಹಾಕಿ ಕಲಸಿ ತಾರೆಕಾಯಷ್ಟು ಗುಳಿಗೆಯಂ ಮಾಡಿ ಉದಯದಲ್ಲಿ ಕಟ್ಟು ಮೊಸರಿಂ ಕೊಳ್ಳಲು ಜ್ವರಾತಿಸಾರ, ಹೊಟ್ಟೆಬೇನೆ ಸಹ ಕೆಡುಗುಂ. ೪

ಕೊಡಸಿಗೆ ತಿಗುಡು, ಓಮು, ಅತಿಬಜೆ, ಭದ್ರಮುಸ್ತೆ ಇವಂ ಮೊಸರಿಂದರೆದು ಗಟ್ಟಿಮಜ್ಜಿಗೆಯಲ್ಲಿ ಕದಡಿ ಹಾಳಿತವಾಗಿ ಉಪ್ಪು ಇಂಗು ಸಹ ಹಾಕಿ ಎಣ್ಣೆ ತುಪ್ಪ ದಲ್ಲಿ ಒಗ್ಗರಿಸಿ ಅನ್ನಕ್ಕೆ ಕಲಸಿಕೊಂಡು ಊಟಮಾಡಲು ಜ್ವರಾತಿಸಾರ ಗುಣಮಕ್ಕು. ಇದಂ ಕೊಡಶಾದಿ ಪಳಿದ್ಯವೆಂದರಿವುದು. ೫

## ಕಷಾಯಗಳು

ನೆಲಬೇವು, ಅತಿಬಜೆ, ಶುಂಠಿ, ಭದ್ರಮುಸ್ತೆ, ಅಮರದವಳ್ಳಿ, ಕೊಡಸಿಗೆ ಬೇರು, ಹೆಮ್ಮರದ ಚಕ್ಕೆ, ಇವಂ ಸಮಾನಗೊಂಡು ಕಷಾಯವಿಟ್ಟು ಸೇವಿಸೆ ಜ್ವರಾತಿಸಾರ ಗುಣಮಕ್ಕು. ೧

ಹೆಮ್ಮರದ ಚಕ್ಕೆ, ಭದ್ರಮುಸ್ತೆ, ಅತಿಬಜೆ, [1] ಕೊಡಸಿಗೆ, ಬಿಲ್ವಪತ್ರೆಯ ಕಾಯಿ, [1] ದಾಳಿಂಬದ ಹೂ, ಅಚದ ಹೂ, ಇವಂ ಸಮಾಂಶವಾಗಿ ಕಷಾಯಂ ಮಾಡಿ ಸೇವಿಸಲು ಜ್ವರಾತಿಸಾರ ನಾಶನಮಕ್ಕು. ೨

ಜಾಪತ್ರೆ, ಕೊಡಸಿಗೆ ಬೇರು, ಅಚದ ಹೂ, ಅತಿಬಜೆ, ಅಮರದವಳ್ಳಿ, ಶುಂಠಿ, ಇವಂ ಸಮಭಾಗವಾಗಿ ಕಷಾಯವ ಕಾಸಿ ಕೊಡಲು ಜ್ವರಾತಿಸಾರಂ ಕೆಡುಗುಂ. ೩

ಹೆಮ್ಮರದ ತೊಕ್ಕು, ಅತಿಬಜೆ, ಭದ್ರಮುಸ್ತೆ, ಶುಂಠಿ, ಬೆಲ್ಲವತ್ತದ ಕಾಯ ತಿರುಳು, ದಾಳಿಂಬದ ಕಾಯ ಸಿಪ್ಪೆ, ಇವಂ ಕಷಾಯವಂಮಾಡಿ ಕುಡಿಯೆ ಜ್ವರಾತಿ ಸಾರಂ ಗುಣಮಕ್ಕುಂ. ೪

---

[1] (ಗ) ಕೊಡಸಿಗೆ ಬೀಜ, ಅತ್ತಿಕಾಯಿ.

ತುರುಚನ ಬೇರಿನ ತೊಕ್ಕು, ಶುಂಠಿ, ಬೆಲ್ಲವತ್ತದ ಬೇರಿನ ತೊಕ್ಕು, ಅಗುಳು ಶುಂಠಿ, ಕೊಡನಾರಿ ಗೆಡ್ಡೆ, ಇವಂ ಪ್ರತ್ಯೇಕ ಗ ೪ ತೂಕವಂ ಬಳ್ಳ ನೀರಿನಲ್ಲಿ ಹಾಕಿ ಅಷ್ಟಾವಶೇಷವಾಗಿ ಕಷಾಯವಕಾಸಿ ಪಾನವಮಾಡೆ ಜ್ವರಾತಿಸಾರಂ ಮಾಣ್ಗುಂ. ೫

## ಕಲ್ಕ

ಪೆದ್ದಮಾನಿಚಕ್ಕ, ಅತಿಬಜ, ಮುಸ್ತಲು, ಶುಂಠಿ, ಓಮು, ಕೋಡೀಶ ವಿತ್ತಲು ಇವಿನ್ನಿ ಧಾನ್ಯಪು ಕರಿತೊ ನೂರಿ ಈಯುನು ಜ್ವರಾತಿಸಾರಂ ನಿಲುಚುನು. ೧

## ಗುಳಿಗೆ

ಮಾವಿನ ಬಿತ್ತದ ಬೇ [1] ಳೆ [1], ಧಾತಕೀ ಕುಸುಮ, ಕಾವಿಕಲ್ಲು, ನೀಲಾಂಜನ, ಕೊಡಸಿಗೆ ಚಕ್ಕೆ, ಶುಂಠಿ, ಬೂರುಗದ ಮೇಣ, ಭದ್ರಮುಸ್ತೆ, ಮರದರಿಸಿನ, [2] ಮುನುಗುದಿದಾವರೆ [2], ಕೋಡೀಶಪಾಲ, ಬೇಲದ ಹಣ್ಣಿನ ತಿರುಳು, ಇವಂ ಸಮಭಾಗ ಚೂರ್ಣವಂ ಮಾಡಿ ಹೆಮ್ಮರದ ಚಕ್ಕೆಯ ಕಷಾಯವಿಕ್ಕಿ ಶುಂಠಿಯ ರಸವ [3] ಸ್ವಲ್ಪ [3] ವಾಗಿ ಹನಿಸಿ ಈ ಚೂರ್ಣವಮಾಡಿ ಕಲಸಿ ತಾರೆಕಾಯ ಪ್ರಮಾಣ ಗುಳಿಗೆಯಂ ಮಾಡಿ ಜೇನುತುಪ್ಪದಲ್ಲಿಯಾದರೂ ಮೊಸರಿನಲ್ಲಿಯಾದರೂ ತೆಗೆದುಕೊಳ್ಳಲು ಜ್ವರಾತಿಸಾರ, ಸಮಗ್ರಗ್ರಹಣಿ ಸಹ ಮಾಣ್ಗು. ೧

ಖರ್ಜೂರಪು ಗಿಂಜನು ನಾನವೇಸಿ ವಿತ್ತುತೀಸಿ ಜಾಕಾಯಿ, ಜಾಪತ್ರಿ, ಲವಂಗಂ, ಕುರಾಸಾನಿ, ಓಮು, ಇವಿನ್ನಿ ಸಹ ಪ್ರತ್ಯೇಕಂ ಗ ೧ ತೂನು ಲೆಕ್ಕ ಮುನ ಗೂರ್ಚಿ ಆ ಖರ್ಜೂರಪು ಗಿಂಜಲೊ ನಿಂಚಿ ಥಂಗಿ ಆಕನು ನೂರಿ ಆ ಖರ್ಜೂರಂ ಪಂಡುಕು ಕಿಂದ ಮೀದ ಮೆತ್ತಿ ಬಟ್ಟಜುಟ್ಟಿ ಮನ್ನುಲ ಮೆತ್ತಿ ಪುಟಂ ವೇಸಿ ತೀಸಿ ಚನುಪಾಲು ಕೊಬ್ಬೆರ ರಸಮು ಚೇತನು ಮರ್ದಿಂಚಿ ಮಾತ್ರಲು ಗಟ್ಟಿ ಈ ಮಾತ್ರಲುನು ಕೊಬ್ಬೆರ ರಸಮುನನೀಯುನು ಜ್ವರಾತಿಸಾರಮುಲು, ಪುರಾಣಜ್ವರಮುಲು ಸಹ ನಿಲುಚುನು. ೨

ಜೀರಿಗೆ, ವಾದಕ್ಕಿ ಜಾಕಾಯಿ, ಥಂಗಿಬೀಜ, ಬೂರುಗದ ಮೇಣ, ಮಾದಳದ ಹಣ್ಣಿನ ಕುಸುಮ, ಹುಣಸೆ ಬೀಜದ ಹುರುಪು, ಮಾವಿನ ಬೀಜದ ತಿರುಳು, ಇಂಗು, ದಾಳಿಂಬದ ಓಟೆ, ಇವಂ ಸಮಾಂಶವಾಗಿ ನಿಂಬೆಯ ಹಣ್ಣಿನ ರಸದೊಳರೆದು ಐದು ಪುಟವಂ ಹಾಕಿ ಆ ಮೇಲೆ ಬಾಳೆಯ ಹೂವಿನ ರಸದಿಂದರೆದು ಇದರಲ್ಲಿ ಒಂದು ದ್ರವ್ಯದಷ್ಟು ಹಿಪ್ಪಲಿಚೂರ್ಣವನು ಈ ಹಿಪ್ಪಲಿಯೊಳರ್ಧ ಗಾಜುಲವಣವನ್ನು ಚೂರ್ಣವಂ ಮಾಡಿ ಹಾಕಿ ಬಿಸಿನೀರಿಂ ಕಲಸಿ ಗುಲಗಂಜಿ ಪ್ರಮಾಣ ಗುಳಿಗೆಯಂ ಮಾಡಿ ಒಂದು ಗುಳಿಗೆಯಂ ಕೊಡೆ ಜ್ವರಾತಿಸಾರ ಗ್ರಹಣಿ ಮುಂತಾಗಿ ಮಾಣ್ಗುಂ. ೩

---

[1] (ಗ) ರು. [2] (ಗ) ಮನುಗುಡಿದಾವರೆ. [3] (ಗ) ಸ್ವರಸ.

ಏಲಕ್ಕಿ, ಲವಂಗ, ಮೆಣಸು, ಶುಂಠಿ, ಬೆಳುಗಾರ, ನಿಂಬೆಯ ಬೀಜ, ಇವಂ ಸಮಭಾಗವಾಗಿ ಮಾದಳದ ಹಣ್ಣಿನ ರಸದಿಂದರೆದು ಭಾವಂಜಿಯೇೞೆ ರಸದಿಂ ದರೆದು ಜಾವ ಮರ್ದಿಸಿ ಕುಕ್ಕುಟ ಪುಟವಂ ಹಾಕಿ ತೆಗೆದು ಕೆಂಪಿನ ಹತ್ತಿಯ ಕಾಯ ರಸದಿಂದರೆದು ಕಡಲೆಯಷ್ಟು ಗುಳಿಗೆಯಂ ಮಾಡಿ ಒಣಗಿಸಿ ಒಂದು ಗುಳಿಗೆಯಂ ಕೆಂಪಿನ ಹತ್ತಿಯ ಕಾಯ ರಸದಿಂದರೆದು ಕಲಸಿಕೊಡಲು ಜ್ವರಾತಿ ಸಾರ, ಗ್ರಹಣಿ, ಸಹ ಗುಣಮಕ್ಕು. ೪

ನೂನೆ ಮುಂತೆಡು, ಮಾಮಿಡು ವೇರು ಚಕ್ಕ, ನೇರೆಡು ವೇರು ಚಕ್ಕ, ದಾಡಿಂಬಕಾಯ, ಮಾರೆಡು, ವೊರುಗು, ರಾವಿಚಕ್ಕ, ಮರಿವೂಡಲು, ಬಲುಸು ವೇರು ಚಕ್ಕ, ತಂಗೆಡುವೇರು ಚಕ್ಕ, ಜಿಬಿಲಕವೇಳ್ಳು ಚಕ್ಕ, ಚಿಂತಮಾನಿ ಚಕ್ಕ, ನುರಿಗಾಯ, ಚಿಂತಗಿಂಜಲ ಪೊಟ್ಟು, ಶುಂಠಿ ಈ ದ್ರವ್ಯಮುಲು ಪ್ರತ್ಯೇಕಂ ಗ ೩ ಎತ್ತು, ಕಾಚು, ಕರಕ್ಕಾಯ, ಗುಗ್ಗಿಲಂ, ಮಿರಿಯಾಲು, ಮುಲುಗೊಬ್ಬ ವಿತ್ತುಲು, ಜಾಜಿಕಾಯ, ಉಮ್ಮೆತ್ತವಿತ್ತುಲು, ಸಮುದ್ರ ಶೋಕಿ ವಿತ್ತುಲು, ಆಫೇನಂ ಇವಿ ವಗಕು ಗ ೧ ತೂನು ಇನ್ನಿಟಿಕಿ ಸಮಂ ಪೊಸ್ತು ಭಂಗಿಪೊಡಿ ಸಹ ಇಂತ ಚೂರ್ಣಂ ಜೇಸಿ ಮಾಮಿಡಿ ಚಕ್ಕ ಕಷಾಯಮುಲೊ ಮೂನಾಳ್ಳು ಮರ್ದಿಂಚಿ ಗಜ್ಜಕ್ಕಾಯಂತು ಗುಳಿಗಲು ಜೇಸಿ ಉಂಚುಕೊನಿ ಒಕ ಉಂಟನು ಪೊಡಿ ಜೇಸಿ ಶೊಂಟಿನಿ ಕಾಲ್ಚಿನ ಮಸಿನೀಳ್ಳುತೊ ಇಚ್ಚಿತೆ ಜ್ವರಾತಿಸಾರಮುಲು ನಿಲಚುನು: ಪೆರುಗುತೊ ಈಯುನು ಸಕಲವ್ಯೆನ ಗ್ರಹಣಿಲು ಮಾನುನು. ೫

ಅಂತು ಸಂಹಿತೆ ೫, ಕಷಾಯ ೫, ಕಲ್ಕ ೧, ಗುಳಿಗೆ ೫, ಸಹ ಪ್ರಯೋಗ ೧೬ ಕ್ಕಂ ಸಮಾಪ್ತಂ.

---

## ರಕ್ತಾತಿಸಾರ

### ಚಿಕಿತ್ಸೆ—ಸಂಹಿತೆಗಳು

ಜೀರಿಗೆ, ವಾದಕ್ಕಿ, ಎಲವದ ಹಗಿನು, ಜಾಕಾಯಿ, ಮಾವಿನ ಕಾಯಿ ವಾಟೆ ತಿರುಳು, ನೇರಿಲ ಬೀಜ, ಲವಂಗ, ಧಾತಕೀಕುಸುಮ ಇವಂ ಸಮಾನಗೊಂಡು ದಾಳಿಂಬದ ವೊಗರು ಕಾಯಲ್ಲಿ ಪೋಟೆಯ ಮಾಡಿ ತುಂಬಿ ಕೆಮ್ಮಣ್ಣ ಮೆತ್ತಿ ಪುಟವ ಹಾಕಲು ಆ ಕೆಮ್ಮಣ್ಣು ಕಪ್ಪಹುದು. ಆ ಬಳಿಕ ತಗೆದು ಕೆಮ್ಮಣ್ಣಿನ ಕರುಕ ತೆಗೆದು ಹಾಕಿ ಆ ಅವುಷಧಿಯನು ದಾಳಿಂಬದ ವಾಟೆ ಸಹ ಅರೆದು ಕಟ್ಟುಮೊಸರಲ್ಲಿ ನುಂಗಲು ಹೊಟ್ಟೆಯ ರಕ್ತಂ ಮಾಣ್ಗು. ೧

ನಲ್ಲ ಎನುಮು ಪಾಲುನು ಒಕಪಾಲುಗ ಮುಯ್ಯಿಕ ಪೊಂಗಕುಂಡ ಕಾಚಿ ಅಂದುರೊ ಆವುಪೆರುಗು ಬೋಸಿ ಇಂಚುಕ ಸೈಂಧವಲವಣಂ ವೇಸಿ ದಾನಿ ಮೂಡು ಪೂಟ ಇಚ್ಚಿತೆ ಒಕಒಕಪೂಟು ಇಚ್ಚೇಟಪ್ಪುಡು ಉಮ್ಮೆ ಶ್ಯಾಕುನ ನಜಿಲಗಿ ಒಕಬೊಟ್ಟು ರಸಮುನು ಪಿಂಡಿ ಇಚ್ಚಿತೆ ಈಲಾಗುನ ಮೂಡು ಪೂಟಲು ಇಚ್ಚಿತೆ ರಕ್ತಾತಿಸಾರಂ ಮಾನುನು. ೨

ಹಸುವಿನ ಮೊಸರನು ಕೈಯಿಂದ ಅಲುಬಿ ಮಾಡಿದ ಮಜ್ಜಿಗೆಯಲ್ಲಿ ಹುಣಿಸೆ ಬೇರನರೆದು ಕುಡಿಯೆ ರಕ್ತಾತಿಸಾರಂ ಮಾಣ್ಗುಂ. ೩

ಹಸುವಿನ ಮಜ್ಜಿಗೆಯಲ್ಲಿ ಬೇಲದ ಚಿಗುರನರೆದು ಕುಡಿವುದು. ೪

ಒಂದ, ಕಡವದ ತೊಕ್ಕನರೆದು ಕುಡಿವುದು. ೫

ಅವರಿಕೆ ತೊಕ್ಕನರೆದು ಹಸುವಿನ ಬೆಣ್ಣೆಯಲ್ಲಿ ಅರೆದು ಕೊಡುವುದು. ೬

ಹೆಮ್ಮರದ ತೊಕ್ಕನರೆದು ಕುಡಿವುದು. ೭

ಮಗ್ಗಾರೆ ಹೂವನರೆದು ತೆಗೆದುಕೊಳ್ಳುವುದು. ೮

ದಾಳಿಂಬದ ಹೂವನಾದರೂ ಅರೆದು ಪಾನವಂ ಮಾಳ್ಪುದು, ಈ ಪ್ರಯೋಗ ಗಳಿಂದ ರಕ್ತಾತಿಸಾರಂ ಕೆಡುಗುಂ. ೯

ಆಡಿನ ಹಾಲನಲ್ಲಿ ಸಕ್ಕರೆ ಜೇನುತುಪ್ಪ ಸಹ ಕೂಡಿ ಊಟಕ್ಕೆ ಮೊದಲೆ ತೆಗೆದು ಕೊಳ್ಳಲು ರಕ್ತಾತಿಸಾರ ಹರ. ೧೦

ಹಸುವಿನ ಬೆಣ್ಣೆಯಲ್ಲಿ ಸಕ್ಕರೆಯನ್ನೂ ಜೇನುತುಪ್ಪವನ್ನೂ ಬೆರಸಿ ಸೇವಿಸೆ ರಕ್ತಾತಿಸಾರಂ ಮಾಣ್ಗುಂ. ೧೧

ಹೆಮ್ಮರದ ತೊಕ್ಕನು ಈ ಸೊಪ್ಪನು ಇಡಿದು ಮುದ್ದೆಯಮಾಡಿ ಮೇಲೆ ಬಿಲ್ವಪತ್ರೆಗಳ ಸೊಪ್ಪುಗಳ ಮುಚ್ಚಿ ಶೀರುಮಣ್ಣುಗೊಟ್ಟು ಲಘುಪುಟವಿಟ್ಟು ಬವರಿಸಿ ತೆಗೆದು ಆ ರಸವ ಹಿಂಡಿಕೊಂಡು ಸಕ್ಕರೆಯನಾದರೂ, ಜೇನುತುಪ್ಪವನಾದರೂ ಕೂಡಿ ಕೊಡಲು ರಕ್ತಾತಿಸಾರ ಪರಿಹರವಹುದು. ೧೨

ನಿಂಬೆಯ ಹಣ್ಣಿನ ರಸದಲ್ಲಿ ರಾಯಪುಡಿ ಸಕ್ಕರೆ ಹಾಕಿ ಕೊಡಲು ಮೂರು ದಿನಕ್ಕೆ ಹೊಟ್ಟೆರಕ್ತಂ ನಿಲ್ಲುವದು. ೧೩

ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲ, ಆಳಲೆಕಾಯಿ,, ಆಡುಸೋಗೆಯ ಬೇರು, ಮುಂಡಗಳ್ಳಿಯ ಬೂದಿ, ಉತ್ತರಣೆಯ ಬೂದಿ, [1]ಉಳ್ಳಿ,[1] ಜೀರಿಗೆ, ಸೈಂಧವ, [2]ಶುಂಠಿ[2] ಸಹ ಚೂರ್ಣವಮಾಡಿ ಶುಂಠಿಯ ರಸದಿಂ ಆಮಳಕಪ್ರಮಾಣವನರೆದು ಬಿಸಿನೀರಿಂ ಕುಡಿಯೆ ಹೊಟ್ಟೆರಕ್ತಂ ತೀರ್ಗುಂ. ೧೪

ಗೂಳದ ಸೊಪ್ಪನು ನೀರಲ್ಲಿ ಹಾಕಿ ಕಿವಿಚಿ ಕಲಸಿದರೆ ಮುದ್ದೆಮಂದವಹುದಾ ಸೊಪ್ಪಂ ತೆಗೆದುಹಾಕಿ ಆ ನೀರಂ ಕುಡಿಯೆ ರಕ್ತಾತಿಸಾರ ಪರಿಹರ. ೧೫

---

[1] (ಗ) ಪ್ರತಿಯಲ್ಲಿಲ್ಲ [2] (ಗ) ಪ್ರತಿಯಲ್ಲಿಲ್ಲ

ವಡವಾರದ ಸೊಪ್ಪುಗ ಹಿಡಿ, ಬಣತಿಗೆಯಕ್ಕಿ ಒಂದುಮಾನ ಸಹ ಹಿಟ್ಟುತೊಳಸಿ. ಸಪ್ಪೆದುಪ್ಪದಿಂ ಮೆಲ್ಲಲು ಹೊಟ್ಟೆರಕ್ತ ಮಾಣ್ಗು. ೧೬

## ಕಲ್ಕಗಳು

ಆವರಿಕೆ ತೊಕ್ಕು, ಅತಿಬಜೆ, ಭದ್ರಮುಸ್ತೆ, ಶುಂಠಿ, ಸಹ ಅರೆದು ತೆಗೆದುಕೊಳ್ಳಲು ರಕ್ತಾತಿಸಾರಂ ನಿಲ್ಗುಂ. ೧

ಅಂಕೋಲೆಯ ಬೇರಿನ ತೊಕ್ಕು, ಅಗುಳುಶುಂಠಿ, ಮರದರಿಸಿನ ಇವಂ ಸಮಾನಂಗೊಂಡು ಅಕ್ಕಿಗಟ್ಟಿನಲ್ಲರೆದು ಕೊಡಲು ರಕ್ತಸಾರಂ ಮಾಣ್ಗುಂ. ೨

ಎಳನೀರಂ ಮೊಗಳ ತೆಗೆದು ಅದರಲ್ಲಿ ಗ ಲ ತೂಕ ಅಳಲೆಕಾಯ ಚೂರ್ಣವ ಹಾಕಿ ತತ್‌ಕ್ಷಣವೆ ಕುಡಿಯಲು ರಕ್ತಾತಿಸಾರಂ ಕೆಡುಗುಂ. ೩

ಗಜ್ಜುಗದ ತಿರುಳು, ಧಾತಕೀಕುಸುಮ, ಹುಣಿಸೆಬೀಜದ ಹುರುಕು, ಮಾವಿನ ಬೀಜದ ತಿರುಳು, ಕಾಡು ಇವಂ ಬಿಸಿನೀರೊಳರೆದು ಸೇವಿಸೆ ರಕ್ತಾತಿಸಾರ, ಶ್ಲೇಷ್ಮಾತಿಸಾರ, ಸಕಲಾತಿಸಾರ ಸಹ ಪರಿಹರಮಕ್ಕುಂ. ೪

ಅಂಕೋಲೆ ಬೇರಿನ ತೊಕ್ಕನು ಮೊಸರನೀರಿಂದರೆದು ಕೊಡಲು ಎಂತಪ್ಪ ಅತಿಸಾರವೂ ಶಮನವಕ್ಕುಂ ೫

ಮಾದಿಗಾವರಿಕೆ ಬೇರಿನ ತೊಕ್ಕು, ಅತಿಬಜ, ಕೊಡನಾರಿಗೆಡ್ಡೆ, ಶುಂಠಿ, ಇವಂ ಸಮಾಂಶವಾಗಿ ಹಸುವಿನ ಮಜ್ಜಿಗೆಯಿಂದರೆದು ಕೊಡಲು ರಕ್ತಾತಿಸಾರಂ ಮಾಣ್ಗುಂ. ೬

ಅಳಲೆಕಾಯನು ಎರಡುಭಾಗವಾಗಿ ಹೋಳಮಾಡಿ ಬೀಜವ ತೆಗೆದುಹಾಕಿ ಅದರಲ್ಲಿ ಹಿಪ್ಪಲಿ, ಕಿರುನೆಲ್ಲಿಬೇರಿನ ತೊಕ್ಕು, ವಾದಕ್ಕಿ ಸಹ ತುಂಬಿ ಎರಡು ಹೋಳನೂ ಮುಚ್ಚಿ ಎಣ್ಣೆಯಲ್ಲಿ ಹುರಿದು ಮಜ್ಜಿಗೆಯಲ್ಲರೆದು ಕೊಡಲು ರಕ್ತಾತಿಸಾರ, ಶ್ಲೇಷ್ಮಾತಿಸಾರ ಸಹ ಗುಣಮಕ್ಕು. ೭

ಆಲದ ಬೀಳಲ ಮೊಗರನ್ನು ಹಸುವಿನ ಮಜ್ಜಿಗೆಯಿಂದರೆದು ಕುಡಿಯೆ ರಕ್ತಾತಿಸಾರ, ಪಿತ್ತಾತಿಸಾರ ಸಹ ಮಾಣ್ಗುಂ. ೮

## ಕಷಾಯಗಳು

ಅಗುಳುಶುಂಠಿ, ಸೊಗದೆಬೇರು, ಲೋಧ್ರ, ಯಷ್ಟಿಮಧುಕ ಇವಂ ಹಾಲೊಳು ಹಾಕಿ ಕಷಾಯಕಾಸಿ ಜೇನುತುಪ್ಪ, ಸಕ್ಕರೆವೆರಸಿ ತೆಗೆದುಕೊಳ್ಳಲು ರಕ್ತಾತಿಸಾರ ತೀರ್ಗುಂ ೧

ಶುಂಠಿ, ಪಿಪ್ಪಳ್ಳು, ಅಡ್ಡಸರಂ, ತುಂಗಮುಸ್ತುಲು, ಬಿಲ್ವಪತ್ರವೇರು, ಅಗುಲುಶುಂಠಿ, ಗಜಪಿಪ್ಪಳ್ಳು, ಕೋಡೀಶಪಾಲವಿತ್ತುಲು, ಚಂಗಲಕೋಷ್ಠಂ, ಅತಿ

ವಜ, ಲವಂಗಮುಲು, ಪಿಪ್ಪಲಮೂಲಂ, ಧಾತಕೀಕುಸುಮಂ ಇವಿ ಸಮಂಗಾ ಕಷಾಯಂಗಾಚಿ ಈಯುನು ರಕ್ತಾತಿಸಾರಮುಲು ನಿಲುಚುನು. ೨

## ಚೂರ್ಣಗಳು—ವ್ಯೋಷಾದಿ ಚೂರ್ಣ.

ಶುಂಠಿ, ಹಿಪ್ಪಲಿ, ಮೆಣಸು, ಬಜೆ, ಅಳಿಲೆಕಾಯಿ, ಕರಿಬೇವು, ಜೀರಿಗೆ, ಗಜ್ಜುಗದ ತಿರುಳು, ವಾದಕ್ಕಿ, ಸೈಂಧವ ಸಹ ಪ್ರತ್ಯೇಕ ಗ ೪ ತೂಕ ಪ್ರಕಾರದಲ್ಲಿ ಇದರೊಳಗೆ ಗಜ್ಜುಗದ ತಿರುಳು, ಬಜೆ, ಅಳಿಲೆಕಾಯಿಗಳನ್ನು ಭಸ್ಮವಮಾಡಿ ಕಡಮೆ ದ್ರವ್ಯಂಗಳಂ ಹುರಿದು ಚೂರ್ಣವಂ ಮಾಡಿ ಆ ಭಸ್ಮವನ್ನು ಕೂಡಿ ಊಟವ ಮಾಡು ವಲ್ಲಿ ಮೊದಲ ಮೂರು ಕವಳ ಅನ್ನಕ್ಕೆ ನಾಲ್ಕುವರಹ ತೂಕದ ಚೂರ್ಣವನ್ನು ಕಾಸಿದ ಎಣ್ಣೆ ಸಹ ಕಲಸಿಕೊಂಡು ಊಟವ ಮಾಡಿ ಕಡಮೆ ಭೋಜನವನ್ನು ಅತಿಸಾರಕ್ಕೆ ಹಿತವಾದ ಪಥ್ಯದಲ್ಲಿ ಊಟಮಾಡುವುದು. ರಕ್ತಾತಿಸಾರ, ಆಮಾತಿಸಾರ ವಿಷೂಚಿ, ಗ್ರಹಣಿ, ಹೊಟ್ಟೆಶೂಲೆ ಸಹ ಪರಿಹಾರವಾಗಿ ದೀಪನ ಪಚನಮಕ್ಕು. ೧

## ದಾಳಿಂಬಾದಿ ಚೂರ್ಣ

ದಾಳಿಂಬದ ಕಾಯು ತೊಕ್ಕು, ಮಾವಿನ ಬೀಜ, ಬೇಲದ ಎಳೆಕಾಯಿ, ಬೆಲ್ಲ ವತ್ತದ ಹೀಚು, ಎಲವದ ಹಗಿನು, ಧಾತಕೀಕುಸುಮ, ಕುರಾಸಾನಿ ಓವು, ವಾದಕ್ಕಿ ಅತಿಬಜೆ, ಕೊಡಸಿಗೆ ಬೀಜ, ಶುಂಠಿ, ಭದ್ರಮುಸ್ತೆ, ಜಾಕಾಯಿ, ಹಿಪ್ಪಲಿ, ಲೋಧ್ರ, ತುಪ್ಪದೇವದಾರು, ಬಿಳಿಸಾಸುವೆ, ಸಹ ಸಮಭಾಗ ಚೂರ್ಣವಮಾಡಿ ಎಮ್ಮೆಯ ಕಟ್ಟುಮೊಸರಿನಲ್ಲಿ, ಸೇವಿಸೆ ರಕ್ತಾತಿಸಾರ, ಆಮಾತಿಸಾರ, ಹೊಟ್ಟೆಶೂಲೆ ಸಹ ಪರಿಹರ. ೨

## ಸಂಜೀವೀ ಚೂರ್ಣ

ನೇರಿಲ ಬೀಜ, ಮಾವಿನ ಬೀಜ, ಗೇಕಿನ ಗಡ್ಡೆ, ಅತಿಬಜೆ, ಶುಂಠಿ, ಕರಿಜೀರಿಗೆ, ಬೆಲ್ಲವತ್ತದ ಕಾಯಿ, ಗೇರ ಬೀಜ, ಕೊಡಸಿಗೆ ಬೀಜ, ಆಲದ ಬಿಳಲು, ಧಾತಕೀ ಕುಸುಮ, ಎಲವದ ಹಗಿನು, ಪುಲ್ಲಂಪುರುಚೆಯ ಸೊಪ್ಪು, ರಕ್ತಮಂಡಲ, ಉತ್ತರಣೆಯ ಸೊಪ್ಪು, ರಸಾಂಜನ, ದಾಳಿಂಬದ ವಾಟೆ—ಇವಂ ಚೂರ್ಣವಂ ಮಾಡಿ ಇಷ್ಟರ ಸಮಾನ ಖಂಡಸಕ್ಕರೆವೆರಸಿ ಅರಳ ಗಂಜಿಯಲಿ ಅನುಪಾನವಿಕ್ಕಿ ಕೊಡಲು ರಕ್ತಾತಿಸಾರಂ, ಉಷ್ಣಾತಿಸಾರಂ, ಜ್ವರಾತಿಸಾರಂ ಸಹ ಪರಿಹರಮಕ್ಕುಂ. ೩

## ಗುಳಿಗೆ

ಜಾಕಾಯಿ, ಜಾಪತ್ರೆ, ಲವಂಗಂ, ಜಿಲಕರ, ಪಿಪ್ಪಳ್ಳು, ಕುರಾಸಾನಿ, ಓಮಮು ಪೊಂಗಿನ ವೆಲಿಗಾರಂ, ವೀನಿ ನೂರಿ ನಿಮ್ಮಕಾಯುಲೊ ಉಂಚಿ ಚೀರು

ಮನ್ನಲಿಚ್ಚಿ ಪುಟಂಬೆಟ್ಟಿ ತೀಸಿ ನಿಮ್ಮ ಪುಲುಸು ಚೇತನೇ ಆ ಔಷಧಮುನು ಎಲಮಂದುನು ನೂರಿ ಮಾತ್ರಲುಗಟ್ಟಿ ಪೆರುಗುತೊ ಇಚ್ಚಿತೆ ರಕ್ತಾತಿಸಾರಂ ನಿಲುಚುನು. ೧

ಅಂತು ಸಂಹಿತೆ ೧೬, ಕಲ್ಕ ೮, ಕಷಾಯ ೨, ಚೂರ್ಣ ೩, ಗುಳಿಗೆ ೧, ಸಹ ಪ್ರಯೋಗಂ ೩೦ ಕ್ಕಂ ಸಮಾಪ್ತಂ.

---

## ಆಮಾತಿಸಾರ

### ಚಿಕಿತ್ಸೆ—ಸಂಹಿತೆಗಳು

ಪಡವಾರದ ಬೇರು ೧ ಹಿಡಿ, ಅಡಕೆಚಿಟ್ಟಿನ ಬೇರು ೧ ಹಿಡಿ, [1]ತೆಂಗಿನ ಬೇರು[1] ೧ ಹಿಡಿ, ಇದರಲ್ಲಿ ರಸವಂ ತೆಗೆದುಕೊಂಡು ಕಾಸಿ ಏಳು ಪುಟ ಹಾಕಿದ ಧಂಗಿಗೆ ೧ ತೂಕವಂ ಹಾಕಿ ರಾತ್ರಿಯಲ್ಲಿ ತೆಗೆದುಕೊಳ್ಳುವುದು ; ಆಮಾತಿಸಾರಂ ಮಾಣ್ಗುಂ. ೧

ಜಾಕಾಯಿ, ಜಾಪತ್ರೆ, ಕುರಾಸಾನಿ, ಓವು, ಎಲೆಮದ್ದು ಇವೆಲ್ಲವಂ ಸಮಭಾಗ ಚೂರ್ಣಂಮಾಡಿ ತೆಂಗಿನ ಕಾಯಲ್ಲಿ ತುಂಬಿ ಪುಟವ ಹಾಕಿ ತೆಗೆದು ಅರೆದು ಹಾರಿವಾಣದ ಸೊಪ್ಪಿನಲ್ಲಿ ಮರ್ದಿಸಿ ಕೊಡಲು ಆಮಾತಿಸಾರಂ ಮಾಣ್ಗುಂ. ೨

ಲವಂಗಮುಲು, ಮೆಂತ್ಯಮು, ಶುಂಠಿ, ದಾಳಿಂಬಕಾಯಿ ಸಹ ಲೆಸ್ಸಗ ಕಾಲ್ಚಿ ಅನ್ನಿಲೋನಿ ಗಿಂಜಲುನು ಇವಿ ಅನ್ನಿ ನೇಯಿಲೋನು ಎರ್ರಗಾ ಉಡುಕಬೆಟ್ಟಿ ಆ ಕಾಚಿನ ನೇಯಿದೋಸಿ ನುನ್ನಗಾ ನೂರಿ ಉಂಟಚೇಸಿ ಕ್ರಿಂದನು ಮೀದನು [2]ಪಿರಿನ[2] ನೆಯ್ಯಿಬೆಟ್ಟಿ ಮೂಡು ಉಂಟಲು ಇಚ್ಚಿತೆ ಆಮಾತಿಸಾರಂ ನಿಲುಚುನು ; ಪಥ್ಯಂ ನೇಯಿವಂಟಕಂ ಆಮೀದ ಕೊಂಚಮು ಪೆರುಗುವಂಟಕಮು. ೩

ಪಿಪ್ಪಲಿ, ಅತಿಬಜೆ, ಭದ್ರಮುಸ್ತೆ, ಶುಂಠಿ, ಇವಂ ಚೂರ್ಣವಂ ಮಾಡಿ ಬಿಸಿನೀರಲ್ಲಿ ಕದಡಿ ಪಾನವ ಮಾಡಲು ಆಮಾತಿಸಾರ ಪಕ್ವವಹುದು. ೪

ಒಂದು ಬಳ್ಳ ಹಾಲಿನಲ್ಲಿ ಮೂರುಬಳ್ಳ ನೀರಕೂಡಿ ಭದ್ರಮುಸ್ತೆಯ ಚೂರ್ಣ ಗ ೨೦ ತೂಕವಂ ಹಾಕಿ ಕದಡಿ ಹಾಲು ಉಳಿವಂತೆ ಕಾಸಿ ಆ ಹಾಲನು ಸೇವಿಸೆ ಶೂಲೆ ಸಹಿತವಾದ ಆಮಾತಿಸಾರಂ ಗುಣಮಕ್ಕು. ೫

ಶುಂಠಿ, ವಾದಕ್ಕಿ, ಸೈಂಧವ, ಹುಣಿಸೆಬೀಜದ ತೊಕ್ಕು ಇಷ್ಟರ ಸಮಾನ ಅಳಲೆಕಾಯಿ ಸಹ ಚೂರ್ಣವ ಮಾಡಿ ಬಿಸಿನೀರಿಂದಾಗಲಿ ಮಜ್ಜಿಗೆಯಿಂದಾಗಲಿ ಸೇವಿಸೆ ಆಮಾತಿಸಾರ ಪರಿಹರ. ೬

ಜಾಕಾಯಿ, ಜಾಪತ್ರೆ, ಭದ್ರಮುಸ್ತೆ, ಲವಂಗ, ಕಾಡು, ಜೀರಿಗೆ, ಚಿತ್ರಮೂಲ, ಶುಂಠಿ, ಹಿಪ್ಪಲಿ, ಮೆಣಸು, ವಾದಕ್ಕಿ, ಏಲಕ್ಕಿ, ಸೈಂಧವ, ಹೆಮ್ಮರದ ಚಕ್ಕೆ,

---

[1] (ಗ) ಪ್ರತಿಯಲ್ಲಿಲ್ಲ [2] (ಗ) ಸೇರಿನ

ಅತಿಬಜೆ, ಬಿಲ್ವಪತ್ರೆ, ಡೋಳಕ, ಇಂಗು, ಅಳಿಲೆಕಾಯಿ, ವಿಜಯ, ಎಳ್ಳು, ಇವಂ ಪ್ರತ್ಯೇಕ ಸಮಾನವಾಗಿ ಚೂರ್ಣಿಸಿ ಎಕ್ಕದೆಲೆಯ ರಸ, ಉಮ್ಮತ್ತದ ಸೊಪ್ಪಿನ ರಸ, ಲೊಕ್ಕಿಸೊಪ್ಪಿನ ರಸ, ಈ ರಸಗಳಂ ಕೂಡಿಸಿ ಇದರಲ್ಲಿ ಚೂರ್ಣವ ಕಲಸಿ ಕೆಂಪಾಗಿ ಹುರಿದು ಸೀದುಹೋಗದಂತೆ ಇಳುಹಿಕೊಂಡು ಸೂಕ್ಷ್ಮಚೂರ್ಣವ ಮಾಡಿ ಜೇನು ತುಪ್ಪದಲ್ಲಾದರೂ ಮೊಸರಲ್ಲಾದರೂ ಅರೆದು ಎಣ್ಣೆಯಲ್ಲಿ ಕೊಡಲು ಆಮಾತಿಸಾರಂ ಪರಿಹರವಹುದು. ೭

ಸೈಂಧವ, ಹಿಪ್ಪಲಿ, ಅಳಿಲೆಕಾಯಿ, ಹೊಂಗೆನಾರು, ಶುಂಠಿ, ಇವನೆಲ್ಲ ಅರೆದು ಅಲ್ಪ ಬಿಸಿಯಾದ ನೀರಿನಲ್ಲಿ ಮಜ್ಜಿಗೆಯ ಹಸಿಸಿ ಆದರಲ್ಲಿ ಕದಡಿ ಸೇವಿಸಲು ಆಮಾತಿಸಾರಂ ಗುಣಮಕ್ಕುಂ. ೮

ಲವಂಗ, ವಾಡಕ್ಕಿ, ಹಿಪ್ಪಲಿ, ಅಳಿಲೆಕಾಯಿ, ಶುಂಠಿ, ಸೈಂಧವ ಇವಂ ಬಿಸಿನೀರಿನಲ್ಲರೆದು ಸೇವಿಸೆ ಆಮಾತಿಸಾರ ಪರಿಹರ. ೯

ಬಜೆ, ಲವಣ ಸಹ ಕಲ್ಕವ ಮಾಡಿಕೊಟ್ಟು ವಮನಮಾಡಿಸಿ ಲಂಘನವಿರಿಸಿ ಆ ಬಳಿಕ ಸಾಸುವೆಯಂ ಬಿಸಿನೀರಿಂದರೆದು ಕಲ್ಕವ ಮಾಡಿ ಕೊಡಲು ಆಮಾತಿಸಾರ, ಉದಾವರ್ತ, ಪರಿಣಾಮಶೂಲೆ ಸಹ ಮಾಣ್ಗುಂ. ೧೦

ಕರಿಬೇವು, ಅಳಿಲೆಕಾಯಿ, ಶುಂಠಿ, ಹಿಪ್ಪಲಿ, ಮೆಣಸು, ಉಳ್ಳಿ, ಸೈಂಧವ, ಇಂಗು ಇವಂ ಅಂಬಿಲದಲ್ಲರೆದು ಕೊಡಲು ಆಮಾತಿಸಾರ, ಆಮಶೂಲೆ ಸಹ ಪರಿಹರ. ೧೧

## ಕಷಾಯಗಳು

ಶುಂಠಿ, ಅತಿಬಜೆ, ಇಂಗು, [1]ಭದ್ರ ಮುಸ್ತೆ[1], ಕೊಡಸಿಗೆ, ಚಿತ್ರಮೂಲ ಇವಂ ಕಷಾಯಂಕಾಸಿ ಕುಡಿಯೆ ಆಮಾತಿಸಾರ, ರಕ್ತಾತಿಸಾರ, ಸಹ ಗುಣಮಕ್ಕು. ೧

[2]ಬೆಲ್ಲವತ್ತದ ಬೇರು[2], ಭದ್ರಮುಸ್ತೆ, ಅತಿಬಜೆ, ಕೊಡಸಿಗೆಬೀಜ, ಹಿಪ್ಪಲಿ, ಹಿಪ್ಪಲಿಮೂಲ, ಚವ್ಯ, ಚಿತ್ರಮೂಲ, ಶುಂಠಿ ಇವಂ ಕಷಾಯಂ ಕಾಸಿ ಸೇವಿಸೆ ಆಮಾತಿಸಾರ, ರಕ್ತಾತಿಸಾರಂ ತೀರ್ಗುಂ. ೨

ಹಿಪ್ಪಲಿಮೂಲ, ಭದ್ರಮುಸ್ತೆ, ಲೋಧ್ರ, ಅತಿಬಜೆ, ಕೊಡಸಿಗೆಬೀಜ, ಶುಂಠಿ, ಇವಂ ಕಷಾಯಕಾಸಿ ಕುಡಿಯೆ ಆಮಾತಿಸಾರ, ರಕ್ತಾತಿಸಾರ ಸಹ ಗುಣ. ೩

ಕೊತ್ತುಂಬರಿ, ಕೊಡಸಿಗೆ ಬೀಜ, ಅತಿಬಜೆ, ಬೆಲ್ಲವತ್ತದ ಕಾಯಿ ಇವಂ ಕಷಾಯಕಾಸಿ ಕುಡಿಯೆ ನೋವುಗೂಡಿ ರಕ್ತಸಹಿತಮಾದ ಆಮಾತಿಸಾರ ಕೆಡಗುಂ. ೪

ಹಿಪ್ಪಲಿಮೂಲ, ಭದ್ರಮುಸ್ತೆ, ಹೊಂಗೆನಾರು, ಅತಿಬಜೆ, ಚಿತ್ರಮೂಲ, ಬೆಲ್ಲವತ್ತದ ಕಾಯಿ, ಶುಂಠಿ, ಇವಂ ಕಷಾಯವಿಕ್ಕಿ ಸೇವಿಸೆ ನೋವು ಸಹಿತವಾದ ಆಮಾತಿಸಾರ, ಪಕ್ವಾತಿಸಾರ ಸಹ ಪರಿಹರ. ೫

---

[1] (ಕ) ಪ್ರತಿಯಲ್ಲಿಲ್ಲ. [2] (ಗ) ಪ್ರತಿಯಲ್ಲಿಲ್ಲ.

ಕೊಡಸಿಗೆ ಬೀಜ, ಅತಿಬಜೆ, ಬಿಲ್ವಪತ್ರೆ ಹಣ್ಣು, ಲೋಳಿಸರ, ಭದ್ರಮುಸ್ತೆ, ಇವಂ ಕಷಾಯ ಮಿಟ್ಟು ಕೊಡಲು ಆಮಾತಿಸಾರ, ರಕ್ತಾತಿಸಾರ, ಅಜೀರ್ಣಾತಿಸಾರ ಸಹ ಗುಣವಹುದು. ೬

ಶುಂಠಿ, ಕಗ್ಗಲಿ ತೊಕ್ಕು, ಅತಿಬಜೆ, ಕೊಡನಾರಿಗೆಡ್ಡೆ, ಬೆಲ್ಲವತ್ತದ ಬೇರ ತೊಕ್ಕತೆಗೆದ ಒಳಗಣ ಬೇರು, ಅಗುಳುಶುಂಠಿ, ಹಿಪ್ಪಲಿ, ವಾದಕ್ಕಿ, ಇವಂ ಪ್ರತ್ಯೇಕ ಗ ೪ ತೂಕವಂ ಬಳ್ಳ ನೀರಿನಲ್ಲಿ ಅಷ್ಟಾವಶೇಷ ಕಷಾಯಂ ಕಾಸಿ ತೆಗೆದುಕೊಳ್ಳಲು ಆಮಾತಿಸಾರ, ರಕ್ತಾತಿಸಾರ, ಹೊಟ್ಟೆಬೇನೆ ಸಹ ಮಾಣ್ಗುಂ. ೭

ಮಾರೆಡುವೇಳ್ಳು, ವಟ್ಟಿವೇಳ್ಳು, ನೆಲ್ಲಿಚಟ್ಟು, ಅತಿವಜ, ಕೊಡಸಿಪಾಲವಿತ್ತಲು, ಪಂಚಕೋಲಮುಲು ವೀನಿ ಕಷಾಯಂ ಕಾಚಿ ಇಚ್ಚಿತೆ ಆಮಾತಿಸಾರಂ ನಿಲು ಚುನು. ೮

ತುಂಗಗಡ್ಡಲು, ಮಾರೆಡುವೇಳ್ಳು, ಅತಿಬಜೆ, ಕೋಡೀಶಪಾಲವಿತ್ತುಲು, ಶುಂಠಿ ಇವಿ ಕಷಾಯಂ ಜೇಸಿ ಈಯುನು, ಅಮಾತಿಸಾರಂ ಮಾನುನು. ೯

## ಕಲ್ಕಗಳು

ಶುಂಠಿ, ಅತಿಬಜೆ, ಇಂಗು, ಭದ್ರಮುಸ್ತೆ, ಕೊಡಸಿಗೆಬೀಜ, ಚಿತ್ರಮೂಲ ಸಹ ಮೊಸರಿನೊಳರೆದು ತೆಗೆದುಕೊಳ್ಳಲು ಆಮಾತಿಸಾರ, ರಕ್ತಾತಿಸಾರ; ವಾತಾತಿ ಸಾರ ಸಹ ತೀರ್ಗುಂ. ೧

ಭದ್ರಮುಸ್ತೆ, ಅರಿಸಿನ, ಅಗುಳುಶುಂಠಿ, ಇಂಗು, ಸಹ ಗ್ರಾಹಿ ಕೊಂಡವಾಗಿ ಬಿಸಿಮಾಡಿ ಕಟ್ಟುಮೊಸರಿನಲ್ಲಿ ಅರೆದುಕೊಡಲು ಆಮಾತಿಸಾರಂ ತೀರ್ಗುಂ. ೨

ಸೈಂಧವ ಲವಣ, ಕೊಡಸಿಗೆಬೀಜ, ಕಟುಕರೋಹಿಣಿ, ಅರಳಿಮೊಗರು, ಇವಂ ಮೊಸರಿನೊಳರೆದು ಗ್ರಾಹಿ ಮಾಡಿ ಕಟ್ಟುಮೊಸರಿನೊಳನುಪಾನವ ಮಾಡಿ ಕೊಡೆ ಆಮಾತಿಸಾರಂ ಕೆಡುಗುಂ. ೩

ಬೆಲ್ಲವತ್ತದ ತಿರುಳು, ಅಳಿಲೆಕಾಯಿ, ಶುಂಠಿ, ಅಗುಳುಶುಂಠಿ, ವಾಯುವಿಳಂಗ, ಸಹ ಬಿಸಿಯುಂ ಮಾಡಿ ಕರಿಬೇವಿನ ರಸದಿಂದರೆದು ಗ್ರಾಹಿ ಮಾಡಿ ಕಟ್ಟು ಮೊಸರಿನಲ್ಲಿ ಸೇವಿಸೆ ಆಮಾತಿಸಾರಂ ನಿಲ್ಗುಂ. ೪

ಏಲಕ್ಕಿ, ಕೊಡಸಿಗೆ ಬೀಜ, ಲೋಧ್ರ, ಅರಿಸಿನ, ಸೊಗದೆಬೇರು, ಸಹ ಬಿಸಿ ನೀರೊಳರೆದು ಮೂರುವೇಳೆ ಗ್ರಾಹಿಮಾಡಿ ಕಟ್ಟುಮೊಸರಂ ಕೊಡಲು ಆಮಾತಿ ಸಾರಂ ಗುಣಮಕ್ಕುಂ. ೫

ಕೊಡಸಿಗೆ ಬೀಜ, ಅತಿಬಜೆ, ಶುಂಠಿ, ಬೆಲ್ಲವತ್ತದ ತಿರುಳು, ಇಂಗು, ಬಜೆ, ಭದ್ರಮುಸ್ತೆ, ಅಗುಳುಶುಂಠಿ, ಇವಂ ಬಿಸಿಮಾಡಿ ಮೊಸರ ನೀರೊಳರೆದು ಪುನಃ ಗ್ರಾಹಿಮಾಡಿ ತೆಗೆದುಕೊಳ್ಳಲು ಆಮಾತಿಸಾರಂ ತೀರ್ಗುಂ. ೬

ಶುಂಠಿ, ಹಿಪ್ಪಲಿ, ಮೆಣಸು, ಬಜೆ, ಅತಿಬಜೆ, ಅಗುಳುಶುಂಠಿ, ಇಂಗ, ಸಂವತ್ಸರ ಲವಣ, ಅಳಲೆಕಾಯಿ, ಸಹ ಬಿಸಿನೀರೊಳರೆದು ಕೊಡಲು ಪೆರ್ಚಿದ ಆಮಾತಿಸಾರಂ ಗುಣಮಹುದು. ೭

ಬಜೆ, ಬೆಲ್ಲವತ್ತ್ತದ ತಿರುಳು, ಶುಂಠಿ, ಚಂಗಲಕೋಷ್ಟ, ಓವು, ಪಡವಲ, ವಾಯುವಿಳಂಗ, ಇವಂ ಬಿಸಿನೀರಿಂದರೆದು ಕೊಡಲು ಆಮಾತಿಸಾರಂ ನಿಲ್ಗುಂ. ೮

ಎಲವದ ಹಗಿನು, ಲೋಧ್ರ, ಅಗುಳುಶುಂಠಿ, ಧಾತಕೀ ಕುಸುಮ, ಇವಂ ಮೊಸರನೀರಿಂದರೆದು ಗ್ರಾಹಿಮಾಡಿ ಸೇವಿಸೆ ಆಮಾತಿಸಾರ ಪರಿಹಾರ. ೯

ಮಾವಿನ ಬೀಜ, ನೇರಿಲ ಹೂವು, ತಾವರೆ ಗೆಣಸು, ಬೆಲ್ಲವತ್ತ್ತದ ತಿರುಳು, ಸಹ ಮೊಸರನೀರಿನೊಳರೆದು ಗ್ರಾಹಿಮಾಡಿ ಕಟ್ಟು ಮೊಸರಿಂ ಕೊಳ್ಳೆ ಆಮಾತಿಸಾರ ತೀರ್ಗುಂ. ೧೦

ಹೆಮ್ಮರದ ತಿಗುಡು, ಶುಂಠಿ, ಯಷ್ಟಿಮಧುಕ, ಇವಂ ಅಂಬಿಲದಲ್ಲರೆದು ಮೂರುವೇಳೆ ಗ್ರಾಹಿಮಾಡಿ ಕಟ್ಟುಮೊಸರಿಂ ಕೊಳ್ಳೆ ಆಮಾತಿಸಾರಂ ತೀರ್ಗುಂ. ೧೧

ಕೊಡಸಿಗೆ ಬೀಜ, ಈ ತೊಕ್ಕು, ದಾಳಿಂಬದ ಓಟೆ, ಲೋಧ್ರ, ಧಾತಕೀ ಕುಸುಮ, ಇವಂ ಅಕ್ಕಿಗಚ್ಚಿನೊಳರೆದು ಗ್ರಾಹಿಮಾಡಿ ಕೊಡೆ ಆಮಾತಿಸಾರಂ ನಿಲ್ಗುಂ. ೧೨

ಶುಂಠಿ, ನೆಯ್ದಿಲ ಗೆಡ್ಡೆ, ಬೆಲ್ಲವತ್ತ್ತದ ತಿರುಳು, ಇವಂ ಮೊಸರ ನೀರೊಳರೆದು ಅರಳಿಯ ಚಿಗುರಿನಿಂ ಪುಟವಿಟ್ಟು ಮೊಸರಿನಿಂದಾಗಲಿ ಹುಳಿಮೊಸರಿನಿಂದಾಗಲಿ ಕೊಳ್ಳೆ ಆಮಾತಿಸಾರ ಪರಿಹರವಹುದು. ೧೩

ಲವಂಗ, ವಾದಕ್ಕಿ, ಹಿಪ್ಪಲಿ, ಅಳಲೆಕಾಯಿ, ಶುಂಠಿ, ಸೈಂಧವ ಇವಂ ಸಮಾಂಶವಾಗಿ ಬಿಸಿನೀರಿಂದರೆದು ಸೇವಿಸೆ ಆಮಾತಿಸಾರ ಶಮನವಹುದು. ೧೪

ನೆಲ್ಲರಳ ಮಜ್ಜಿಗೆಯಿಂದರೆದು ಅಂಬಿಲದಲ್ಲ ಕದಡಿ ಕೊಡಲು ಆಮಾತಿಸಾರ ಹರ. ೧೫

ಲವಂಗ, ಹಿಪ್ಪಲಿ, ವಾದಕ್ಕಿ, ಬೆಲ್ಲವತ್ತ್ತದ ಕಾಯಿ, ಶುಂಠಿ, ಮಾವಿನ ಬೀಜದ ತಿರುಳು, ಎಲವದ ಹಗಿನು, ಧಾತಕೀ ಕುಸುಮ, ಜೀರಿಗೆ ಇವು ಪ್ರತ್ಯೇಕ ಗ ೧ ತೂಕಮಂ ಮಜ್ಜಿಗೆಯಲ್ಲಿ ಅರೆದು ಕೊಡಲು ಆಮಾತಿಸಾರಂ ಗುಣಮಕ್ಕುಂ. ೧೬

ಶುಂಠಿ, ಕಗ್ಗಲಿ ತೊಕ್ಕು, ಅತಿಬಜೆ, ಕೊನ್ನಾರೆ, ಬೆಲ್ಲವತ್ತ್ತದ ಬೇರು, ಅಗುಳು ಶುಂಠಿ, ಹಿಪ್ಪಲಿ, ವಾದಕ್ಕಿ, ಕೊಡಸಿಗೆ ಬೀಜ, ಇವು ಪ್ರತ್ಯೇಕ ಗ ೧ ತೂಕಮಂ ಮಜ್ಜಿಗೆಯಿಂದರೆದು ಕುಡಿಯೆ ಆಮಾತಿಸಾರ, ರಕ್ತಾತಿಸಾರ ಹೊಟ್ಟೆಬೇನೆ ಸಹ ಮಾಣ್ಗುಂ. ೧೭

ಸೈಂಧವ, ಹಿಪ್ಪಲಿ, ಅಳಲೆಕಾಯಿ, ಹೊಂಗೆನಾರು, ಶುಂಠಿ, ಇವನೆಲ್ಲ ಅರೆದು ಅಲ್ಪ ಬಿಸಿಯಾದ ನೀರಿನಲ್ಲ ಮಜ್ಜಿಗೆಯ ಹನಿಸಿ ಅದರಲ್ಲಿ ಕದಡಿ ಸೇವಿಸೆ ಆಮಾತಿಸಾರಂ ಗುಣಮಕ್ಕುಂ. ೧೮

ಲವಂಗ, ವಾದಕ್ಕಿ, ಹಿಪ್ಪಲಿ, ಅಳಲೆಕಾಯಿ, ಶುಂಠಿ, ಸೈಂಧವ, ಇವಂ ಬಿಸಿನೀರಿಂದರೆದು ಸೇವಿಸೆ ಆಮಾತಿಸಾರ ಪರಿಹಾರ. ೧೯

ಬಜೆ, ಲವಣ ಸಹ ಕಲ್ಕವ ಮಾಡಿಕೊಟ್ಟು ವಮನವ ಮಾಡಿಸಿ ಲಂಘನ ವಿರಿಸಿ ಬಳಿಕ ಸಾಸುವೆಯುಂ ಬಿಸಿನೀರಿಂದರೆದು ಕದಡಿ ಕೊಡಲು ಆಮಾತಿಸಾರ ಶೂಲೆ, ಉದಾವರ್ತ, ಪರಿಣಾಮಃಶೂಲೆ ಸಹ ಮಾಣ್ಗುಂ. ೨೦

## ಗುಳಿಗೆ—ಪುಟದಾಳಿಂಬಾದಿವಟಕ

ಶುಂಠಿ, ಅತಿಬಜೆ, ಅಗುಳುಶುಂಠಿ, ಬೆಲ್ಲವತ್ತದ ಕಾಯಿ, ದಾಳಿಂಬದ ಕಾಯಿ, ಓವು, ಲವಂಗಚಕ್ಕೆ, ಜೀರಿಗೆ, ಜಾಕಾಯಿ, ಲವಂಗ, ಭದ್ರಮುಸ್ತೆ, ಕೊಡಸಿಗೆ ಬೀಜ, ಈ ಚಕ್ಕೆ, ಧಾತಕೀಕುಸುಮ, ಎಲವದ ಹಗಿನು, ಕಾಚು, ಹೆಮ್ಮರದ ಚಕ್ಕೆ, ಮಹಿಷಾಕ್ಷಿ ಗುಗ್ಗುಳ, ಬೇಲದ ಹಗಿನು ಇವಂ ಸಮ ಚೂರ್ಣಂ ಗೆಯ್ದು ಬಾಳೆಹೂವಿನ ರಸದಿಂ ಮರ್ದಿಸಿ ದಾಳಿಂಬದ ಬಟ್ಟಲೊಳು ತುಂಬಿ ಮೇಲೊಂದು ಬಟ್ಟಲ ಮುಚ್ಚಿ ಪುಟವನ್ನಿಕ್ಕಿ ತೆಗೆದು ಆ ಬಿಸಿಯ ಹದದಲ್ಲಿ ಗುಳಿಗೆಯ ಮಾಡಿ ಒಣಗಿಸಿ ಅನುಪಾನವರಿತುಕೊಡಲು ಆಮಾತಿಸಾರ, ರಕ್ತಾತಿಸಾರ, ಗ್ರಹಣಿ, ಮಂದಾಗ್ನಿ ಮುಂತಾಗಿ ಸರ್ವಾತಿಸಾರ ದೋಷವೂ ಮಾಣ್ಗುಂ. ೧

## ಚೂರ್ಣ

ದಾಳಿಂಬದ ಹೀಚು, ಹುಣಿಸೆ ಎಲೆಯ ಕಡ್ಡಿ, ಬೇಲದ ಹಣ್ಣು, ಬೆಲ್ಲವತ್ತದ ಹೀಚು, ಎಲವದ ಹಗಿನು, ಧಾತಕೀಕುಸುಮ, ಅಜಾಮೋದ, ಅತಿವಜೆ, ಕೊಡಸಿಗೆ, ಭದ್ರಮುಸ್ತೆ, ಓವು, ಜೀರಿಗೆ, ಕೊಡಸಿಗೆ ಬೀಜ, ಕರಿಜೀರಿಗೆ, ಉದ್ದು, ಸಾಸುವೆ, ಇವನೆಲ್ಲ ಚೂರ್ಣವಂ ಮಾಡಿ ಎಮ್ಮೆಯ ಕಟ್ಟುವೊಸರಿನಲ್ಲಿ ಕೊಡಲು ಆಮಾತಿಸಾರ ಹೊಟ್ಟೆನೋವು, ಜ್ವರಾತಿಸಾರ, ಸಂಗ್ರಹಣಿ, ಸಹ ಮಾಣ್ಗುಂ. ೧

ದಾಳಿಂಬ ಬೊಡ್ಡ, ಮಾವಿಡಿ ಗಿಂಜಲು, ಸೈಂಧವ ಲವಣಂ, ಮಾದಿಫಲಂ ಗಂಧಕಂ, ಪಿಪ್ಪಳ್ಳು, ಶುಂಠಿ, ಅಜಾಮೋದಂ, ಅತಿವಜ, ಬೂರುಗ ಬಂಕ, ಜಾಜಿಕಾಯಿ, ಮಾರೆಡು ಪಂಡು, ಮಾಮಿಡಿ ವಡ ಪಿಂದಲು, ವೀನಿ ಸಮಭಾಗ ಮುಗಾ ಕೂರ್ಚಿ ಚೂರ್ಣಂ ಜೇಸಿ ಮಜ್ಜಿಗತೋನು ಈ ಚೂರ್ಣಮುನು ಬುಚ್ಚು ಕೊನನು ಆಮಾತಿಸಾರಂ, ರಕ್ತಾತಿಸಾರಂ, ಅಜೀರ್ಣಶೂಲ ಇವಿನ್ನಿ ಮಾನುನು. ೨

ಅಂತುಸಂಹಿತೆ ೧೧, ಕಷಾಯ ೬, ಕಲ್ಕ ೨೦, ಗುಳಿಗೆ ೧, ಚೂರ್ಣ ೨ ಸಹ ಪ್ರಯೋಗ ೪೩ ಕ್ಕಂ ಸಮಾಪ್ತ.

---

## ವಾತಾತಿಸಾರ

### ಚಿಕಿತ್ಸೆ— ಕಲ್ಕ

ಬೆಲ್ಲಪತ್ತ್ರದ ಹೀಚು, ಬೇಲದ ಹೀಚು, ಹಿಪ್ಪಲಿ, ಶುಂಠಿ, ಸಹ ಎಳ್ಳೆಣ್ಣೆಯೊಳ್ ರೆದು ಸೇವಿಸೆ ವಾತಾತಿಸಾರ, ನೋವು, ಶ್ಲೇಷ್ಮಾತಿಸಾರ ಸಹ ಮಾಣ್ಗುಂ. ೧

### ಕಷಾಯಗಳು

ಮುಟ್ಟಿದರೆ ಮುನಿವ, ಧಾತಕೀಕುಸುಮ, ಶುಂಠಿ, ಬೆಲ್ಲವತ್ತ್ರದ ಕಾಯು ತಿರುಳು, ಹಿಪ್ಪಲಿಮೂಲ, ಭದ್ರಮುಸ್ತೆ, ಇವು ಪ್ರತ್ಯೇಕ ೪ ವರಹ ತೂಕವಂ ಬಳ್ಳ ನೀರಿನಲ್ಲಿ ಅಷ್ಟಾವಶೇಷ ಕಷಾಯಂ ಕಾಸಿ ಸೇವಿಸೆ ವಾತಾತಿಸಾರ ಪರಿಹರಮಕ್ಕು. ೧

ಕೊಡಸಿಗೆ ಬೀಜ, ವಾದಕ್ಕಿ, ಶುಂಠಿ, ಅಗುಳುಶುಂಠಿ, ಬೆಲ್ಲವತ್ರದ ಹೀಚು, ಕಳ್ಳಂಗಡಲೆ ಬೇರು, ಹಿಪ್ಪಲಿ, ಇವಂ ಸಮಭಾಗವಾಗಿ ಬಳ್ಳ ನೀರಿನಲ್ಲಿ ಹಾಕಿ ಅಷ್ಟಾಂಶವಾಗಿ ಕಷಾಯಂ ಕಾಸಿ ಇಳುಹಿ ಸೇವಿಸೆ ವಾತಾತಿಸಾರ ಪರಿಹಾರ. ೨

ಗಜ್ಜುಗದ ತಿರುಳು, ಅಳಿಲೆಕಾಯಿ, ಶುಂಠಿ, ವಾದಕ್ಕಿ, ಕಿರುನೆಲ್ಲಿ ಸಹ ಸಮ ಭಾಗವಾಗಿ ಕಷಾಯವಿಟ್ಟು ಅಷ್ಟಾವಶೇಷವಾಗಿ ಕಾಸಿ ಅದರಲ್ಲಿ ಸ್ವಲ್ಪ ಎಣ್ಣೆಯಂ ಕಿಂಚಿತ್ ಇಂಗಿನ ಚೂರ್ಣ ಸಹ ಬೆರಸಿ ಕುಡಿಯೆ ವಾತಾತಿಸಾರಂ, ಶ್ಲೇಷ್ಮಾತಿ ಸಾರಂ ಸಕಲಾತಿಸಾರ ಸಹ ಮಾಣ್ಗುಂ. ೩

ಅಂತು ಕಲ್ಕ ೧, ಕಷಾಯ ೩ ಸಹ ಪ್ರಯೋಗ ೪ ಕ್ಕಂ ಸಮಾಪ್ತಂ.

---

## ಪಿತ್ತಾತಿಸಾರ

### ಚಿಕಿತ್ಸೆ—ಸಂಹಿತೆಗಳು

ಸಕ್ಕರೆಯನು, ಜೇನುತುಪ್ಪವನು ಆಡಿನ ಹಾಲಿನಲ್ಲಿ ಬೆರಸಿ ಭೋಜನಕ್ಕೆ ಮೊದಲೆ ಸೇವಿಸೆ ಪಿತ್ತಾತಿಸಾರ ರಕ್ತಾತಿಸಾರ ಸಹ ಪರಿಹರಮಕ್ಕುಂ. ೧

ಹಸುವಿನ ಬೆಣ್ಣೆಯಲ್ಲಿ ಸಕ್ಕರೆ ಜೇನುತುಪ್ಪ ಸಹ ಕೂಡಿ ಮೆಲ್ಲಲು ಪಿತ್ತಾತಿ ಸಾರ, ರಕ್ತಾತಿಸಾರ ಸಹ ಮಾಣ್ಗುಂ. ೨

ಶ್ರೀಗಂಧವಂ ಅಕ್ಕಿ ಗಚ್ಚಿನಲ್ಲಿ ಕದಡಿ ಜೇನುತುಪ್ಪ ಸಕ್ಕರೆ ವೆರಸಿ ಕುಡಿಯೆ ಪಿತ್ತಾತಿಸಾರ, ರಕ್ತಾತಿಸಾರ, ಪ್ರಮೇಹ ಸಹ ಪರಿಹರವಹುದೆಂದು ಆತ್ರೇಯ ರಿಂದ ಪೇಳಲ್ಪಟ್ಟಿತು. ೩

## ಕಲ್ಕ

ಶುಂಠಿ, ಕೋಡೀಶಪಾಲ, ಅತಿವಜ, ಶುಂಗಮುಸ್ತಲು, ಮಾಮಿಡಿ ಗಿಂಜಲು, ದಾಡಿಂಬ ಚಿಪ್ಪ, ಚಿಂತಗಿಂಜಲ ಪೊಟ್ಟು, ಬೂರುಗ ಬಂಕ, ಸೈಂಧವಲವಣಂ, ಲೋಧ್ರಂ, ಅಗುಲುಶುಂಠಿ, ಓಮಮು ವೀನಿ ವಗಕು ವರಹಮು ಎತ್ತು ರೆಕ್ಕಮುನ ಪಚ್ಚಿಬಿಯ್ಯಮು ಕಡುಗುತೊ ನೂರಿ ಈಯುನು ಪಿತ್ತಾತಿಸಾರಂ ಮಾನುನು. ೧

## ಕಷಾಯಗಳು

ಶಿವನ್ನಿ ಬೇರು, ಅತಿಬಜೆ, ತಾವರೆಗೆಣಸು, ಕೊಡಸಿಗೆಬೀಜ, ಶುಂಠಿ, ಸಹ ಕಷಾಯುಂಮಾಡಿ ಜೇನುತುಪ್ಪವೆರಸಿ ಕುಡಿಯೆ ಪಿತ್ತಾತಿಸಾರಂ ತೀರ್ಗುಂ. ೧

ಶುಂಠಿ, ಕಾಚು, ಯಷ್ಟಿಮಧುಕ, ಕಳ್ಳಂಗಡಲೆ, ಮುಡಿವಾಳ, ಬೆಲ್ಲವತ್ತದ ಹೀಚು, ನೆಲದುರುಚನ ಬೇರು, ಲಾಮಂಚ, ಭದ್ರಮುಸ್ತೆ, ಇವಂ ಸಮಭಾಗ ಕಷಾಯಂ ಕಾಸಿ ಅಷ್ಟಾವಶೇಷವಾದುದನಿಳುಹಿಕೊಂಡು ಸೇವಿಸೆ ಪಿತ್ತಾತಿ ಸಾರಂ ಮಾಣ್ಗುಂ. ೨

ಲಾಮಂಚ, ಯಷ್ಟಿಮಧುಕ, ಮುಡಿವಾಳ, ಕೊಡಸಿಗೆ ಬೀಜ, ಇವಂ ಕಷಾಯವಿಟ್ಟು ಕುಡಿಯೆ ಪಿತ್ತಾತಿಸಾರಂ ನಿಲ್ಗುಂ. ೩

ಧಾತಕೀಕುಸುಮ, ಅತಿಬಜೆ, ಭದ್ರಮುಸ್ತೆ, ಹುಣಸೆ ಬೇರು, ಹೆಮ್ಮರದ ತೊಕ್ಕು, ಕೊಡಸಿಗೆ ಬೀಜ, ಮಾವಿನ ಬೀಜ, ಎಲವದ ಹಗಿನು, ಈ ಕಡ್ಡಿ ಎಲೆ ಸಹ ಸಮತೂಕವಾಗಿ ಕಷಾಯಂ ಕಾಸಿ ಕುಡಿಯೆ ಪಿತ್ತಾತಿಸಾರ, ರಕ್ತಾತಿಸಾರ ಸಹ ಮಾಣ್ಗುಂ. ೪

ವಡವಾರದ ಸೊಪ್ಪಿನ ಕಷಾಯವ ಸೇವಿಸೆ ಪಿತ್ತಾತಿಸಾರ ಪರಿಹಾರ. ೫

ಹೆಮ್ಮರದ ತೊಕ್ಕು, ದಾಳಿಂಬದ ಕಾಯ ಸಿಪ್ಪೆ, ತುರುಚನ ಬೇರು, ಭದ್ರ ಮುಸ್ತೆ, ಹಿಪ್ಪಲಿ, ಶುಂಠಿ, ಕೊಡಸಿಗೆ ಬೀಜ, ದೇವದಾರೆಯ ತೊಕ್ಕು, ಬೆಲ್ಲವತ್ತದ ತೊಕ್ಕು, ಅತಿಬಜೆ, ಇವಂ ಸಮಾನವಾಗಿ ಕಷಾಯಂ ಮಾಡಿ ಕುಡಿಯೆ ಪಿತ್ತಾತಿ ಸಾರ ರಕ್ತಾತಿಸಾರ ಸಹ ಗುಣಮಹುದು. ೬

ಧಾತಕೀ ಕುಸುಮ, ಅತಿಬಜೆ, ಶುಂಠಿ, ಕೊಡಸಿಗೆ ಬೀಜ, ಕೊಡನಾರಿ ಗೆಡ್ಡೆ, ಇವಂ ಪ್ರತ್ಯೇಕ ೪ ವರಹ ತೂಕವಂ ಬಳ್ಳ ನೀರಿನಲ್ಲಿ ಹಾಕಿ ಅಷ್ಟಾವಶೇಷವಾಗಿ ಕಾಯಿಸಿ ಕುಡಿಯೆ ಪಿತ್ತಾತಿಸಾರಂ ಕೆಡುಗುಂ. ೭

ಅಂತು ಪ್ರಯೋಗ ೧೧ ಕ್ಕಂ ಸಮಾಪ್ತ.

———

## ಶ್ಲೇಷ್ಮಾತಿಸಾರ

### ಚಿಕಿತ್ಸೆ—ಸಂಹಿತೆಗಳು

ಅಳಲೆಕಾಯಿ, ಗಜ್ಜುಗದ ತಿರುಳು, ಶುಂಠಿ, ಕರಿಬೇವಿನ ಸೊಪ್ಪು, ವಾದಕ್ಕಿ ಸಹ ಚೆನ್ನಾಗಿ ಹುರಿದು ಜೇನುತುಪ್ಪದಿಂ ಸೇವಿಸೆ ಶ್ಲೇಷ್ಮಾತಿಸಾರಂ ಮಾಣ್ಗುಂ. ೧

ಶುಂಠಿ, ಹಿಪ್ಪಲಿ, ಮೆಣಸು, ಸೈಂಧವ, ಕರಿಬೇವಿನ ಸೊಪ್ಪು, ಬೆಳ್ಳುಳ್ಳಿ, ಚಿತ್ರಮೂಲ, ಕೊಮ್ಮೆಬೇರು, ಇವನೆಲ್ಲವಂ ಸ್ವಲ್ಪ ಎಣ್ಣೆಯ ಬಿಟ್ಟು ಹುರಿದು ಪುಲ್ಲಂ ಪುರುಚೆ ಸೊಪ್ಪಿನ ರಸದಲ್ಲರೆದು ಅದೇ ರಸದಲ್ಲಿ ಕಡಡಿ ಪಳಿದ್ಯವ ಮಾಡಿ ಒಗ್ಗರಿಸಿ ಅನ್ನಕ್ಕೆ ಹನಿಸಿಕೊಂಡು ಮೊದಲ ಕವಳವನೂಟಮಾಡಲು ಶ್ಲೇಷ್ಮಾತಿಸಾರಂ ಮಾಣ್ಗುಂ. ೨

ತಪಸಿಯ ಬೇರು, ಶುಂಠಿ, ಹಿಪ್ಪಲಿ, ಮೆಣಸು, ಬೆಲ್ಲವತ್ತದ ಬೇರು, ಚಿತ್ರಮೂಲ, ದಾಳಿಂಬದ ವಾಟೆ, ಇಂಗು ಇವಂ ಮಜ್ಜಿಗೆಯಲ್ಲರೆದು ಮಜ್ಜಿಗೆಯಲ್ಲೆ ಕದಡಿ ಪಳಿದ್ಯವ ಮಾಡಿ ಮೊದಲ ಕಬಳಕ್ಕೆ ಹನಿಸಿಕೊಂಡು ಊಟವ ಮಾಡಲು ಶ್ಲೇಷ್ಮಾತಿಸಾರ ಹರ. ೩

### ಕಲ್ಕಗಳು

ಚವ್ಯ, ಅತಿಬಜೆ, ಚಂಗಲಕೋಷ್ಟ, ಕಟುಕರೋಹಿಣಿ ಇವಂ ಮೊಸರಿನಲ್ಲರದು ಕಟ್ಟು ಮೊಸರಿಂ ಗ್ರಾಹಿಮಾಡಿ ಕಟ್ಟುಮೊಸರನಿಕ್ಕೆ ಶ್ಲೇಷ್ಮಾತಿಸಾರ ಪರಿಹರ. ೧

ಅಳಲೆಕಾಯಿ, ಶುಂಠಿ, ಭದ್ರಮುಸ್ತೆ, ಬೆಲ್ಲಪತ್ತದ ತಿರುಳು ಇವಂ ಮೊಸರ ನೀರಿಂದರೆದು ಗ್ರಾಹಿಮಾಡಿ ಕಟ್ಟುಮೊಸರಿಂ ಕೊಡಲು ಶ್ಲೇಷ್ಮಾತಿಸಾರಂ ಮಾಣ್ಗುಂ.

ಚಿತ್ರಮೂಲ, ಹಿಪ್ಪಲಿ ಮೂಲಿ, ಹಿಪ್ಪಲಿ, ಗಜಹಿಪ್ಪಲಿ ಸಹ ಮೊಸರ ನೀರಿಂದರೆದು ಗ್ರಾಹಿ ಮಾಡಿ ಕಟ್ಟು ಮೊಸರನಿಕ್ಕಿ ಕೊಡೆ ಶ್ಲೇಷ್ಮಾತಿಸಾರಂ ತೀರ್ಗುಂ. ೩

ವಾಯಿವಿಳಂಗ, ಬಜೆ, ದೇವದಾರು, ಕೊತ್ತುಂಬರಿ ಸಹ ಮೊಸರ ನೀರಿನೊಳರೆದು ಗ್ರಾಹಿಮಾಡಿ ಕಟ್ಟು ಮೊಸರನಿಕ್ಕಿ ಕೊಡೆ ಶ್ಲೇಷ್ಮಾತಿಸಾರಂ ಗುಣಮಕ್ಕುಂ.

### ಕಷಾಯುಗಳು

ಹೊಂಗೆ ತೊಕ್ಕನಕ್ಕಿಯ ಗಚ್ಚಿನಲ್ಲಿ ಅಷ್ಟಾವಶೇಷವಾಗಿ ಕಷಾಯವ ಕಾಸಿ ಇದರೊಳು ಕಿಂಚಿತ್ತಾಗಿ ಇಂಗು ವೆರಸಿ ಕುಡಿಯ ಶ್ಲೇಷ್ಮಾತಿಸಾರ ಶಾಂತಮಹುದು.

ಭದ್ರಮುಸ್ತೆ, ಹೊಂಗೆತೊಕ್ಕು, ಶುಂಠಿ ಸಹ ಸಮಾಂಶ ಕಷಾಯ ಕಾಸಿ ಅಷ್ಟಾವಶೇಷವಾದುದರಲ್ಲಿ ಹಿಪ್ಪಲಿ ಚೂರ್ಣ ವರಹ ತೂಕವಂ ಹಾಕಿ ಸೇವಿಸೆ ಶ್ಲೇಷ್ಮಾತಿಸಾರ, ಹೊಟ್ಟೆನೋವು, ಗ್ರಹಣಿ, ಪ್ರವಾಹಿಸಿ ಹೋಗುವ ಅತಿಸಾರ ಸಹ ಗುಣಮಕ್ಕು. ೨

ಇಂಗು, ಅತಿಬಜೆ, ಶುಂಠಿ, ಹಿಪ್ಪಲಿ, ಮೆಣಸು, ಅಳಲೆಕಾಯಿ ಇವು ಪ್ರತ್ಯೇಕ ೪ ವರಹ ತೂಕವಂ ಅಷ್ಟಾವಶೇಷವಾಗಿ ಕಷಾಯಂ ಕಾಸಿ ವರಹ ತೂಕ ಸ್ಯೆಂಧವ ಚೂರ್ಣವ ಹಾಕಿ ಕುಡಿಯೆ ಶ್ಲೇಷ್ಮಾತಿಸಾರ ಕೆಡುಗುಂ. ೩

## ಅಂಬಷ್ಠಾದಿ ಕಷಾಯ

ಅಂಬಟೆ ತೊಕ್ಕು, ಕಾಡು ಬಾಳೆಯ ಮೋತೆ, ಹೆದ್ದುಂಬೆ ಸೊಪ್ಪು, ಅಗಳು ಶುಂಠಿ, ಚಿತ್ರಮೂಲ, ಹುಣಿಸೆ ಬೇರಿನ ತೊಕ್ಕು, ಬೆಲ್ಲ, ಗಣಿಕೆ ಬೇರು, ಕೊಡನಾರಿ ಗೆಡ್ಡೆ, ಬೆಳ್ಳುಳ್ಳಿ, ಇಂಗು, ಮಾವಿನ ಬೀಜ, ಬೆಲ್ಲವತ್ತದ ಕಾಯಿ, ನೇರಿಲ ತೊಕ್ಕು, ಕರಿ ಅಗಿಲು ಚಕ್ಕೆ, ಎಲವದ ಹಗಿನು, ಅಳಿಲೆಕಾಯಿ ಇವಂ ಕಷಾಯವಿಕ್ಕಿ ಸೇವಿಸೆ ಶ್ಲೇಷ್ಮಾತಿಸಾರ ಪರಿಹರ. ೪

ಬೆಲ್ಲವತ್ತದ ಎಳೆ ಕಾಯಿ, ಕರ್ಕಾಟಕಶೃಂಗಿ, ಭದ್ರಮುಸ್ತೆ, ಅಳಿಲೆಕಾಯಿ, ಶುಂಠಿ ಇವಂ ಕಷಾಯವಿಕ್ಕಿ ಸೇವಿಸಲು ಶ್ಲೇಷ್ಮಾತಿಸಾರಂ ಮಾಣ್ಗುಂ, ೫

ಬಜೆ, ವಿಳಂಗ, ತಪಸಿ ನಾರು, ಕೊತ್ತುಂಬರಿ, ಶುಂಠಿ, ದೇವದಾರು, ತುಪ್ಪ ದೇವದಾರು ಇವಂ ಕಷಾಯ ಕಾಸಿ ಸೇವಿಸೆ ಶ್ಲೇಷ್ಮಾತಿಸಾರಂ ನಿಲ್ಗುಂ. ೬

ಅಗುಲುಶುಂಠಿ, ಕಾನುಗುವೇರು ಚಕ್ಕ, ಪಿಪ್ಪಲಿ, ಈ ಮೂಲಂ, ಚವ್ಯಂ, ಚಿತ್ರಮೂಲಂ, ಕರಿವೇಪಲು, ಶುಂಠಿ, ಕರಕ್ಕಾಯಲು, ಮುಲುವೆಂಪಲು, ಮಾರೆಡು ವೇಳ್ಳು ಇವಿನಿ ಕಷಾಯಂ ಕಾಚಿ ಈಯುನು ಶ್ಲೇಷ್ಮಾತಿಸಾರಂ, ಗುಲ್ಮಾತಿಸಾರಂ ಸಹ ಮಾನುನು. ೭

ಹೊಂಗೆ ಮರದ ತೊಕ್ಕನು ಅಂಬಿಲದಲ್ಲಿ ಹಾಕಿ ಅಷ್ಟಾವಶೇಷವಾಗಿ ಕಷಾಯಂ ಕಾಸಿ ಇಂಗಿನ ಚೂರ್ಣವೆರಸಿ ಕೊಡಲು ಶ್ಲೇಷ್ಮಾತಿಸಾರ ಗುಣವಹುದು. ೮

## ಚೂರ್ಣ

ಅಳಿಲೆಕಾಯಿ, ಗಜ್ಜುಗದ ತಿರುಳು, ಶುಂಠಿ, ಕರಿಬೇವಿನ ಸೊಪ್ಪು, ವಾದಕ್ಕಿ ಇವಂ ಸಮಾಂಶವಾಗಿ ಬಿಸಿಮಾಡಿ ಚೂರ್ಣಂಗೈದು ಜೇನುತುಪ್ಪದಲ್ಲಿ ಕಲಸಿ ಸೇವಿಸೆ ಶ್ಲೇಷ್ಮಾತಿಸಾರಂ ಪರಿಹರಮಕ್ಕು. ೧

## ಘೃತ—ಜಂಭಾರಿಘೃತ

ನೇರಿಲ ತೊಕ್ಕು, ಮಾವಿನ ಬೀಜ, ಹೆಮ್ಮರದ ತೊಕ್ಕು, ಅತಿಬಜೆ, ಮರದರಿಸಿನ ಕಗ್ಗಲಿಯ ತೊಕ್ಕು, ನೈದಿಲಗೆಡ್ಡೆ, ಅಮಟೆ ಚಕ್ಕೆ, ದಾಳಿಂಬದ ತೊಕ್ಕು, ಲೋಧ್ರದ ಚಕ್ಕೆ, ಕೊಡಸಿಗೆ ಚಕ್ಕೆ, ಕರ್ಪೂರಶುಂಠಿ, ಬೆಲ್ಲವತ್ತದ ಚಕ್ಕೆ, ಮುಡಿವಾಳ,

ಯಷ್ಟಿಮಧುಕ, ಶುಂಠಿ ಇವಂ ಕಲ್ಕವ ಮಾಡಿ ಪುಲ್ಲಂಪುರುಚೆಯ ರಸ ೧ ಬಳ್ಳ, ಆಷಾಡಿ ಗೆಣಸಿನ ರಸ ೧ ಬಳ್ಳ, ತುಪ್ಪ ೧ ಬಳ್ಳ ಸಹ ಹನಿಸಿ ಇದರೊಳಾಕಲ್ಕವ ಕೂಡಿ ತುಪ್ಪ ಉಳಿಯ ಕಾಯಿಸಿ ಹದದಲ್ಲಿಳುಹಿ ದೇಹಾನುಗುಣವಾಗಿ ತೆಗೆದುಕೊಳ್ಳಲು ಶ್ಲೇಷ್ಮಾತಿಸಾರ, ರಕ್ತಪಿತ್ತ, ಆಸನದ ಉರಿ, ಗ್ರಹಣಿ ಸಹ ಗುಣಮಕ್ಕು. ೧

ಅಂತು ಸಂಹಿತೆ ೩, ಕಲ್ಕ ೪, ಕಷಾಯ ೮, ಚೂರ್ಣ ೧, ಘೃತ ೧ ಸಹ ಪ್ರಯೋಗ ೧೭ಕ್ಕಂ ಸಮಾಪ್ತ.

---

## ದೋಷಾತಿಸಾರ

### ಚಿಕಿತ್ಸೆ–ಕಷಾಯುಗಳು

ಭದ್ರಮುಸ್ತೆ, ಅಮರದವಳ್ಳಿ, ಗಜ್ಜುಗದ ತಿರುಳು, ಜೀರಿಗೆ, ಮಾವಿನ ಬಾಳಕ, ಕೋಡೀಶಪಾಲು, ಅತಿಬಜೆ, ಶುಂಠಿ, ನೆಲಬೇವು ಇವಂ ಸಮಭಾಗ ಕಷಾಯಂ ಕಾಸಿ ಕೊಡಲು ದೋಷಾತಿಸಾರಂ ಮಾಣ್ಗುಂ. ೧

ಭಂಗಿಯ ಬೀಜ, ಭದ್ರಮುಸ್ತೆ, ಕೊಡಸಿಗೆ ಬೇರು, ಹೊನ್ನೆ ಹೂವು, ಬಿಲ್ವಪತ್ರೆ ಕಾಯಿ, ಅಮರದವಳ್ಳಿ, ನೆಲಬೇವು, ಅತಿಬಜೆ, ಶುಂಠಿ ಸಹ ಸಮಾಂಶ ಕಷಾಯಂ ಕಾಸಿ ಕುಡಿಯೆ ದೋಷಾತಿಸಾರಂ ಗುಣಮಕ್ಕು. ೨

ತುಂಗಮುಸ್ತಲು, ತಿಪ್ಪತೀಗ, ಗಜ್ಜಪಪ್ಪು, ಜಿಲಕರ, ಮಾರೆಡುಪಂಡು, ಕೋಡೀಶಪಾಲವಿತ್ತಲು, ಶುಂಠಿ, ನೇಲವೇಮು ವೀನಿ ಕಷಾಯಂ ಬಟ್ಟಿ ಇಯುನು ದೋಷಾತಿಸಾರಂ ಗುಣಮೌನು. ೩

### ವಟಿಕ

ಓವು, ಚಿತ್ರಮೂಲ, ಚವ್ಯ, ಶುಂಠಿ, ಹಿಪ್ಪಲಿ, ಮೆಣಸು, ಸೈಂಧವಲವಣ, ಸಂವತ್ಸರ ಲವಣ, ಬಿಡುಲವಣ, ಸದ್ಯಕ್ಷಾರ, ಯವಕ್ಷಾರ, ಹಿಪ್ಪಲಿಮೂಲ, ಇಂಗು ಇಂತಿವಂ ಚೂರ್ಣಂಗೈದು ಮಾದಳದ ಹಣ್ಣಿನ ರಸದಿಂ [1] ಮೂರು ಭಾವನೆಯಂ ಕೊಟ್ಟು ಬದರಿ [1] ಪ್ರಮಾಣ ವಟಕವಂ ಮಾಡಿ ಒಂದು ವಟಕವಂ ಸೇವಿಸೆ ದೋಷಾತಿಸಾರಂ ಕೆಡುಗುಂ ; ಅಗ್ನಿಬಲವುಂಟಾಗುವುದು. ೧

ಅಂತು ಕಷಾಯ ೩, ವಟಕ ೧, ಸಹ ಪ್ರಯೋಗ ೪ಕ್ಕಂ ಸಮಾಪ್ತಂ.

---

[1] (ಗ) ಭಾವನೆಯಂ ಕೊಟ್ಟು ಎಲಚಿಕಾಯ.

## ಸರ್ವಾತಿಸಾರ

### ಚಿಕಿತ್ಸೆ–ಸಂಹಿತೆಗಳು

ಹೆಮ್ಮರದ ತೊಕ್ಕು, ಅತಿಬಜೆ, ಕೊನ್ನಾರೆ, ಶುಂಠಿ, ಬೆಲ್ಲವತ್ತದ ಹಣ್ಣು ಇವೆಲ್ಲ ಸಮಭಾಗವಾಗಿ ಕೂಡಿ ಬಾಳೆಯು ಹೂವಿನ ರಸದಿಂದರೆದು ದಾಳಿಂಬದ ಕಾಯಲ್ಲಿ ಪುಟವನಿಕ್ಕಿ ಅದಂ ಕಾಸಿನಗಲ ಬಿಲ್ಲೆಯಂ ಮಾಡಿ ಒಣಗಿಸಿ ಜೇನುತುಪ್ಪದಿಂ ಕೊಳ್ಳೆ ಅತಿಸಾರ, ಗ್ರಹಣಿ ಸಹ ಮಾಣ್ಗುಂ. ೧

ಹುಣಸೆಬೀಜದ ಹುರುಕು, ಶುಂಠಿ, ಅಜಾಮೋದ, ಸೈಂಧವಲವಣ, ಭಂಗಿ ಸಹ ಅರೆದು ಹುಳಿ ಮೊಸರಿಂ ಕೊಡಲು ಅತಿಸಾರ ಗ್ರಹಣಿ ಸಹ ಕೆಡುಗುಂ. ೨

ಬಿಳಿ ಅರುವೆಯು ಸುಟ್ಟ ಕರುಕು, ಏಲಕ್ಕಿ ಸಹ ಮೊಸರು, ನಿಂಬೆಹುಳಿಯಲ್ಲಿ ಸಹ ಕೂಡಿ ಸೇವಿಸೆ ಎಂತಪ್ಪ ಅತಿಸಾರವಾದೊಡಂ ಮಾಣುವುದು. ೩

ಕೊಡಸಿಗೆ ತಿಗುಡು, ಓವು, ಅತಿಬಜೆ, ಭದ್ರಮುಸ್ತೆ, ಇವಂ ಮೊಸರಿಂದರೆದು ಗಟ್ಟಿಮಜ್ಜಿಗೆಯಲ್ಲಿ ಕದಡಿ ಹಾಳಿತವಾಗಿ ಉಪ್ಪ ಹಾಕಿ ಇಂಗನಿಕ್ಕಿ ಎಣ್ಣೆ ತುಪ್ಪದಲ್ಲಿ ಒಗ್ಗರಿಸಿ ಅನ್ನಕ್ಕೆ ಕಲಸಿಕೊಂಡುಣ್ಣಲು ಅತಿಸಾರಂ ಕೆಡುಗುಂ. ೪

[1] . . . . . . . . . . . . . . . . . . . . . ಸಹ ಚೂರ್ಣಿಸಿ ಜೇನುತುಪ್ಪದಿಂ ಸೇವಿಸಲು ಅತಿಸಾರ ಪರಿಹರ.[1] ೫

ದಾಳಿಂಬದ ಕಾಯಸಿಪ್ಪೆ, ಲವಂಗದ ಚಕ್ಕೆ, ರೋಧ್ರ, ಧಾತಕೀಕುಸುಮ, ನೆಲಗುಳ್ಳದ ಬೇರು, ಇವಂ ಚೂರ್ಣಿಸಿ ಜೇನುತುಪ್ಪದಿಂ ಸೇವಿಸೆ ಪಕ್ವಾತಿಸಾರ ಹರ. ೬

ಹೆಮ್ಮರದ ತೊಕ್ಕನು ತುಪ್ಪವ ಬಿಟ್ಟು ಕುಟ್ಟಿ ಮುದ್ದೆಯಮಾಡಿ ಪಿಟ್ಟಕಟ್ಟಿ ಬೇಯಿಸಿ ಜೇನುತುಪ್ಪದಿಂ ಕಲಸಿ ಸೇವಿಸೆ ಅತಿಸಾರ ಕೆಡುಗುಂ. ೭

ನೇರಿಲ ಚಕ್ಕೆ, ಬಾಳೆಯ ಹೂವನು ಸಹ ತುಪ್ಪವಬಿಟ್ಟು ಕುಟ್ಟಿ ಮುದ್ದೆಯಮಾಡಿ ಪಿಟ್ಟೆಯಕಟ್ಟಿ ಬೇಯಿಸಿ ಜೇನುತುಪ್ಪವಂ ಕಲಸಿ ಸೇವಿಸೆ ಅತಿಸಾರಂ ಕೆಡುಗುಂ. ೮

ಅತ್ತಿಯ ಹಾಲಿನಲ್ಲಿ ಎಳ್ಳೆಣ್ಣೆಯ ಬಿಟ್ಟು ಪಾನವಮಾಡೆ ಸಕಲಾತಿಸಾರಂ ಪರಿಹರಮಕ್ಕುಂ. ೯

[2] ಬೆಳ್ಳುಳ್ಳಿ,[2] ಶುಂಠಿ, ಹಿಪ್ಪಲಿ, ಮೆಣಸು, ವಾದಕ್ಕಿ, ಸೈಂಧವ, ಚಿತ್ರಮೂಲ ಗಜ್ಜುಗದ ತಿರುಳು, ಸಹ ಆಡಿನ ಮೊಸರಿಂ ಕಲಸಿ ಕುದಿಸಿ ಎಣ್ಣೆವೆರಸಿ ಸೇವಿಸುವುದು. ೧೦

• ಹೆಮ್ಮರದ ತೊಕ್ಕನು ಮಜ್ಜಿಗೆಯ ಬಿಟ್ಟು ಕುಟ್ಟಿ ಆ ರಸವಂ ಹಿಂಡಿಕೊಂಡು ಕುಡಿಯ ಅತಿಸಾರಂ ಮಾಣ್ಗುಂ. ೧೧

---

[1] (ಕ) ಪ್ರತಿಯಲ್ಲಿ ಲುಪ್ತವಾಗಿದೆ; (ಗ) ಪ್ರತಿಯಲ್ಲಿಲ್ಲ.

[2] (ಕ) ಪ್ರತಿಯಲ್ಲಿಲ್ಲ.

ಬೆಳ್ಳುಳ್ಳಿ, ಶುಂಠಿ, ಆಡಕೆಚಿಟ್ಟಿನ ಬೇರು, ಇವಂ ಜಜ್ಜುಗುಟ್ಟಿ ಆಡಿನ ಹಾಲಿನಲ್ಲಿ ಬೇಯಿಸಿ ಆ ಹಾಲಂ ಕುಡಿಯೆ ಸರ್ವಾತಿಸಾರಹರ. ೧೨

ಅಪಿನಿ, ಭಂಗಿಬೀಜ, ಕೊಡಸಿಗೆ, ಅತಿಬಜೆ, ಭದ್ರಮುಸ್ತೆ, ಶುಂಠಿ, ಜೀರಿಗೆ, ಬೂರುಗದ ಮೇಣ, ಜಾಯಿಕಾಯಿ, ಗಜ್ಜುಗದ ತಿರುಳು, ಮಾವಿನ ಬೀಜ, ಬಿಲ್ವಪತ್ರೆಯ ಕಾಯಿ, ಹೆಮ್ಮರದ ಚಕ್ಕೆ ಇವನೆಲ್ಲ ಸಮಭಾಗವಾಗಿ ಭಂಗಿಸೊಪ್ಪಿನ ರಸದಿಂ ಮರ್ದಿಸಿ ಮೂರು ಧರಣ ತೂಕವಂ ಜೇನುತುಪ್ಪವೆರಸಿ ಕೊಡಲು ಸಕಲವಾದ ಅತಿಸಾರವೂ ಗುಣವಹುದು. ೧೩

ಮಾವಿನ ಬೀಜದ ತಿರುಳು, ಬಿಲ್ವಪತ್ರೆಯ ಹಣ್ಣು, ಸೈಂಧವಲವಣ, ಶುಂಠಿ, ಹಿಪ್ಪಲಿ, ಓವು, ಕೊನ್ನಾರೆ, ಜೀರಿಗೆ, ಧಾತಕೀಕುಸುಮ, ಬೂರುಗದ ಮೇಣ, ದಾಳಿಂಬದ ವಾಟೆ, ಇವಂ ಸಮಾನವಾಗಿ ಎಮ್ಮೆಯ ಮಜ್ಜಿಗೆಯೊಳರೆದು ಅದರಲ್ಲೇ ಕದಡಿ ಪ್ರಾತಃಕಾಲ ಹೋಳುಸೇರೆಯ ತೆಗೆದುಕೊಂಡು ಭೋಜನದ ವೇಳೆಯಲ್ಲಿ ಅನ್ನಕ್ಕೆ ಹನಿಸಿಕೊಂಡು ಊಟವಮಾಡಲು ಸರ್ವಾತಿಸಾರಂ ಮಾಣುವುದು. ೧೪

ತೆಂಗಿನ ಹಣ್ಣಾದ ಕಾಯನು ಸಣ್ಣನಾಗಿ ತುರಿದು ತನಿರಸವಂ ತೆಗೆದುಕೊಂಡು ಪಾವು ರಸದಲ್ಲಿ ವರಹತೂಕ ಆಳಿಲೆಕಾಯ ಚೂರ್ಣವಂ ಹಾಕಿ ತೆಗೆದುಕೊಳ್ಳಲು ಸರ್ವಾತಿಸಾರಂ ಕೆಡುಗುಂ. ೧೫

ಕಾಚು, ಎಲವದ ಹಗಿನು, ಹುಣಿಸೆಬೀಜದ ಹುರುಕು, ಇಷ್ಟರ ಸಮಾನ ಅಂಕೋಲೆಬೇರಿನ ತಿಗುಡು, ಇಷ್ಟರ ಸಮಭಾಗ ಭಂಗಿಸೊಪ್ಪು ಸಹ ಇವೆಲ್ಲವಂ ಚೂರ್ಣವಂಮಾಡಿ ಅರಗಿನ ಕಷಾಯುವ ಬಿಟ್ಟು ಸ್ವಲ್ಪ ಬೆಲ್ಲವ ಬೆರಸಿ ಸಣ್ಣನಾಗಿ ಮರ್ದಿಸಿ ಜೇನುತುಪ್ಪದೊಳಾಗಲಿ, ಎಳನೀರಿಂದಾಗಲಿ ಕೊಡಲು ಅಸಾಧ್ಯಮಾದ ಅತಿಸಾರ ಗುಣಮಹುದು. ೧೬

ನೀರುಗೊಡಿಮಿಡಿವಿತ್ತುಲು, ಅತಿವಜ, ಬೂರುಗಬಂಕ, ಶುಂಠಿ, ಇವಿನಿ ವೆಚ್ಚಜೇಸಿ ನೀರುಗೊಡಿಮಿಡಿ ಆಕುರಸಮುನ ಪಿಪ್ಪಲಿ ಪ್ರತಿಪಾಕಂ ಬೆಟ್ಟಿ ಈಯುನು ಅತಿಸಾರಮುಲು ಗುಣಮೌನು. ೧೭

ಹೆರಗೊಡಮಿಡಿಯಾಕು ರಸಮುನು, ಎನುಮುಪೇಡ ರಸಮುನು, ರಾತಿಸುನ್ನಮುನು, ಸಹ ಚಿಂತಗಿಂಜಂತನೂನೆತೊ ಗಲಪಿ ತೇನೆ ಪ್ರತಿಪಾಕಂ ಬೆಟ್ಟಿ ಈಯುನು ಅತಿಸಾರಮುಲು, ಶ್ವಾಸಖಾಸಮುಲು ಸಹ ಗುಣಮೌನು. ೧೮

ನಿಂಬಕಾಯಲೊ ಓಮಮುನು ನಿಂಚಿ ಎರ್ರಮನ್ನು ಮೆತ್ತಿ ಪುಟಂಬೆಟ್ಟಿ ತೀಸುಕೊನಿ ಕಿಂಚಿತ್ತು ಮಾಮಿಡಚಕ್ಕ, ಕಿಂಚಿತ್ತು ನೇರೆಡುಚಕ್ಕ ವೇಸಿ ನೂರಿ ಪೋತೆನು ಈನಿನ ಎನುಮು ಪೆರುಗುತೊ ಈಯುನು ಎಟುವಂಟಿ ಅತಿಸಾರಮುಲು ಕಡುಪುರೋಗಂ ಸಹ ಮಾನುನು. ೧೯

ಶುಂಠಿ, ಮೆಣಸು, ಅಳಿಲೆಕಾಯಿ, ವಾದಕ್ಕಿ, ಜೀರಿಗೆ, ಏಲಕ್ಕಿ, ಲವಂಗ, ಜಟಾಮಾಂಸಿ ಇವಂ ನಿಂಬೆಯ ಹಣ್ಣಿನಲ್ಲಿ ಬೀಜವ ತೆಗೆದು ತ.ಂಬಿ. ಒಂದುವೇಳೆ ಕೂರ್ಮಪುಟವಂ ಹಾಕಿ ತೆಗೆದು ಒಂದು ಜಾವ ಬಾಳೆಯ ಹೂವಿನ ರಸದಿಂ ಮರ್ದಿಸಿ ಕೆಂಪಿನ ಹತ್ತಿಯಕಾಯಿ ರಸದಲ್ಲಿ ಶರೀರದ ಹಾಳಿತವರಿತು ಬತ್ತದ ಅರಳಿನ ಚೂರ್ಣವಂ ಹಾಕಿ ತೆಗೆದುಕೊಳ್ಳೆ ಸರ್ವಾತಿಸಾರಂ, ಗ್ರಹಣಿ, ಛರ್ದಿ ಸಹ ಮಾಣ್ಗುಂ. ೨೦

ಎಂಪೆರಿಚಟ್ಟು ಸಮೂಲಮುನ ತೆಚ್ಚಿ ಅದಿ ಪಚ್ಚಿದಿ ತರಿಗಿ ಮಂಗಲಮುನ ಪೆಟ್ಟಿ ಮಸಿಗಾವೆ ನಿಂಚೇದಿ. ಆ ಮಸಿನಿ ಲೆಸ್ಸಗಾನೂರಿ ವಸ್ತ್ರಗಾಳಿತಂ ಚೇಸಿ ಶುಂಠಿ, ಪಿಪ್ಪಲಿ, ಮಿರಿಯಾಲು, ಜಿಲಕರ ಸಹ ಸಮಭಾಗಮುಲು ವೇಸಿ ಪೊಡಿಸೇಸಿ ಈ ನಾಲುಗಿಂಟಿ ಪೊಡಿ ಕೂಡ ಒಗಪಾಲುನು, ಎಂಪೆರಿಚೂರ್ಣಂ ಒಕಪಾಲುನು ಸಮಮುಗ ಸುನ್ನವಿಡಿಯಡು ಪಾಚಿನೀಳ್ಳಲೊ ಕಲಪಿ ತ್ರಾಗನು. ಅತಿಸಾರಂ ಕಡುಪುವ್ಯಾಧಿ ಸಹ ಮಾನುನು. ೨೧

## ಕಲ್ಕಗಳು

ಲವಂಗ, ಹಿಪ್ಪಲಿ, ವಾದಕ್ಕಿ, ಬೆಲ್ಲವತ್ತದ ಕಾಯ ತಿರುಳು, ಶುಂಠಿ, ಮಾವಿನ ಬಿತ್ತಣ, ಎಲವದ ಹಗಿನು, ಧಾತಕೀಕುಸುಮ, ಜೀರಿಗೆ, ಸೈಂಧವ ಇವಂ ಮಜ್ಜಿಗೆಯಲ್ಲರೆದು ಮಜ್ಜಿಗೆಯಲ್ಲೇ ಕದಡಿ ಕುಡಿಯಲು ಅತ್ಯಂತ ದುಸ್ತರವಾದ ಸಕಲಾತಿಸಾರಂ ಪರಿಹಾರವಹುದು. ೧

ಮುಟ್ಟಿದರೆ ಮುನಿವ, ಎಲವದ ಹಗಿನು, ಲೋಧ್ರ, ಅಗುಳುಶುಂಠಿ, ಧಾತಕೀಕುಸುಮ ಇವಂ ಮಜ್ಜಿಗೆಯಲ್ಲರೆದು ಕುಡಿಯೆ ಅತಿಸಾರ ಗುಣಮಹುದು. ೨

ಮಾವಿನ ಬೀಜ, ನೇರಿಲ ಬೀಜ, ಪದ್ಮಕ; ಲೋಧ್ರ, ಬೆಲ್ಲವತ್ತದ ತಿರುಳು, ಇವಂ ಚೂರ್ಣಿಸಿ ಜೇನುತುಪ್ಪದಿಂದಲಾಗಲಿ, ಅಕ್ಕಿಗಚ್ಚಿನಿಂದಲಾಗಲಿ ಸೇವಿಸೆ ಸಕಲಾತಿಸಾರಂ ಶಮನವಹುದು. ೩

ನೇರಿಲ ಚಕ್ಕೆ, ಮಾವಿನ ಬಿತ್ತಣ, ಮತ್ತಿಚಕ್ಕೆ, ಪದ್ಮಕ, ದಾಳಿಂಬದ ಕಾಯ ತೊಕ್ಕು, ಇವಂ ಅಕ್ಕಿಗಚ್ಚಿನಲ್ಲರೆದು ಜೇನುತುಪ್ಪವೆರಸಿ ಕೊಡಲು ಸರ್ವಾತಿಸಾರಹರ. ೪

ಭದ್ರಮುಸ್ತೆ, ಕೊಡಸಿಗೆಬೀಜ, ಎಲವದ ಹಗಿನು, ಬೆಲ್ಲವತ್ತದ ಹೀಚು, ಧಾತಕೀಕುಸುಮ ಇವಂ ಕೈಯೊಳು ತಿಕ್ಕಿ ಮಜ್ಜಿಗೆಯಲ್ಲರೆದು ಕೊಡಲು ಮಹದತಿಸಾರಂ ನಿಲ್ಗುಂ. ೫

ವಾದಕ್ಕಿ, ಎಲವದ ಹಗಿನು, ಶುಂಠಿ, ಧಾತಕೀಕುಸುಮ, ಲವಂಗ ಇವು ಪ್ರತ್ಯೇಕ ಗ ೧ ತೂಕವಂ ಹುಳಿಮಜ್ಜಿಗೆಯಲ್ಲರೆದು ಕೊಡಲು ಸರ್ವಾತಿಸಾರಂ ಗುಣಮಕ್ಕು. ೬

ಲವಂಗಂ, ಪಿಪ್ಪಳ್ಳು, ಓಮಮು, ಮಾರೆಡುಪಂಡು, ಶುಂಠಿ, ಮಾವಿಡಿಗಿಂಜಲು, ಬೂರುಗಬಂಕ, ಧಾತಕೀಕುಸುಮಂ, ಜಿಲಕರ, ಸೈಂಧವಲವಣಂ, ಇವಿನ್ನಿ ಸಮಾಂಶಮುಗ ಮಜ್ಜಿಗತೊ ನೂರಿ ಈಯುನು ಸರ್ವಾತಿಸಾರಂ ನಿಲುಚುನು. ೭

ನುಗ್ಗೆಬೇರಿನ ತೊಕ್ಕು, ಹಿಪ್ಪಲಿ, ಜೀರಿಗೆ ಇವಂ ಬಿಸಿನೀರಿಂದರೆದು ಆಡಿನ ಮೊಸರ ಬೆರಸಿ ಕುಡಿಯೆ ಅತಿಸಾರಂ ಮಾಣ್ಗುಂ. ೮

## ಕಷಾಯಗಳು

ಭದ್ರಮುಸ್ತೆ, ಹೆಮ್ಮರದ ಚಕ್ಕೆ, ನೆಲಬೇವು, ಬೆಲ್ಲವತ್ತದ ಕಾಯಿ, ಮಾವಿನ ಚಕ್ಕೆ, ದಾಳಿಂಬದ ಮೊಗ್ಗು, ಶುಂಠಿ ಇವಂ ಸಮಾನವಾಗಿ ಕಷಾಯುವಿಟ್ಟು ಕೊಡಲು ಅತಿಸಾರಂ ಮಾಣ್ಗುಂ. ೧

ಜಾಯಿಕಾಯಿ, ಉಮ್ಮತ್ತದ ಬೇರು, ಬೂರುಗದ ಮೇಣ, ಕೊಡಸಿಗೆ ಬೀಜ ದಾಳಿಂಬದ ಮೊಗ್ಗು, ಶುಂಠಿ ಇವಂ ಸಮಭಾಗ ಕಷಾಯುವಿಟ್ಟು ಕೊಡಲು ಅತಿಸಾರ ಗುಣಮಕ್ಕು. ೨

ಅಮೃದವಳ್ಳಿ, ಬನ್ನಿಸೊಪ್ಪು, ಬಿಲ್ವಪತ್ರೆಯ ಹಣ್ಣು, ಅತಿಬಜೆ, ಏಲಕ್ಕಿ, ಲವಂಗಪತ್ರೆ, ಲವಂಗದ ತೊಕ್ಕು, ಶುಂಠಿ, ಕೊಡಸಿಗೆ ತೊಕ್ಕು, ಇವಂ ಕಷಾಯುವ ಕಾಸಿ ಕುಡಿಯೆ ಸಕಲವಾದ ಅತಿಸಾರವೂ ಪರಿಹರ. ೩

ಅತಿಬಜೆ, ಬೆಳ್ಳುಳ್ಳಿ, ನುಗ್ಗೆಯ ಪಟ್ಟೆ, ಕರಿಜೀರಿಗೆ, ಸಹ ಸಮಭಾಗ ಕಷಾಯುವಿಕ್ಕಿ ಕೊಡೆ ಸಕಲಾತಿಸಾರಂ ಗುಣಮಕ್ಕು. ೪

ಹೆಮ್ಮರದ ತೊಕ್ಕು, ಅತಿಬಜೆ, ಭದ್ರಮುಸ್ತೆ, ಶುಂಠಿ, ಬೆಲ್ಲವತ್ತದ ತಿರುಳು, ದಾಳಿಂಬದ ಕಾಯ ಸಿಪ್ಪೆ, ಇವಂ ಕಷಾಯುವಿಕ್ಕಿ ಸೇವಿಸೆ ಸಕಲಾತಿಸಾರ, ಸರ್ವಜ್ವರ ಸಹ ಪರಿಹರಮಕ್ಕು. ೫

ಶುಂಠಿ, ಓವು, ಕಿರುಗಡಸಿಗೆ, ಅಗುಳುಶುಂಠಿ, ಚಿತ್ರಮೂಲ, ದೇವದಾರು ಇವು ಪ್ರತ್ಯೇಕ ೪ ವರಹ ತೂಕವಂ ಜಜ್ಜುಗುಟ್ಟಿ ಬಳ್ಳ ನೀರಿನಲ್ಲಿ ಹಾಕಿ ಅಷ್ಟಾವಶೇಷವಾಗಿ ಕಾಯಿಸಿ ಸೇವಿಸೆ ಸರ್ವಾತಿಸಾರ, ಗುದಭ್ರಂಶ, ಉದರಶೂಲೆ ಸಹ ಮಾಣ್ಗುಂ. ೬

ಚಳ್ಳೆಮರದ ತೊಕ್ಕು, ಹೊಂಗೆಯ ತೊಕ್ಕು, ಕೊಡನಾರಿಗೆಡ್ಡೆ, ಶುಂಠಿ, ಜವೆ ಇವಂ ಕಷಾಯುವಿಟ್ಟು ಎಣ್ಣೆವೆರಸಿ ಸೇವಿಸೆ ಅತಿಸಾರ ವಿಷೂಚಿ ಸಹ ಮಾಣ್ಗುಂ. ೭

ನೇಲವೇಮು, ಅತಿವಜ, ಅಗುಳುಶುಂಠಿ, ತುಂಗಮುಸ್ತಲು, ತಿಪ್ಪತೀಗ, ಕೋಡೀಶಪಾಲವಿತ್ತುಲು, ಮಾರೆಡುಪಂಡು, ದಾಡಿಂಬಪಿಂದೆಲು ವೀನಿ ಕಷಾಯುಂ ಬೆಟ್ಟಿ ಈಯುನು ಸರ್ವಾತಿಸಾರಂ ಗುಣಮೌನು. ೮

ಪೆದ್ದತುಂಗಮುಸ್ತಲು, ಪೆದ್ದಮಾನಿಚಕ್ಕ ನೇಲವೇಮು, ಮಾವಿಡಿ

[1]ಪಿಂದಲುಚಕ್ಕ,[1] ಮಾರೆಡುಪಂಡು, ದಾಡಿಂಬಪಿಂದಲು, ವೀನಿ ಕಷಾಯಂಬೆಟ್ಟಿ ಇಚ್ಚಿತೆ ಸರ್ವಾತಿಸಾರಂ ನಿಲುಚುನು. ೯

ಅಗುಳುಶುಂಠಿ, ತುಂಗಮುಸ್ತಲು, ಅತಿವಜ, ಕೋಡೀಶಪಾಲವಿತ್ತುಲು, ಮಾರೆಡುಪಂಡು, ದಾಡಿಂಬಪಿಂದಲು ವೀನಿ ಕಷಾಯಂಬೆಟ್ಟಿ ಈಯುನು ಸರ್ವಾತಿಸಾರಂ ಗುಣಮೌನು. ೧೦

ತಿಪ್ಪತೀಗೆ, ಘಂಗಿಯಾಕು, ಮಾರೆಡುಪಂಡು, ತುಂಗಮುಸ್ತಲು, ಶುಂಠಿ, ಲವಂಗಚಕ್ಕ, ಲವಂಗಪತ್ರ, ಏಲಕ್ಕುಲು, ಕೋಡೀಶಪಾಲವಿತ್ತುಲು, ಅತಿವಜ ವೀನಿ ಕಷಾಯಂಗಾಚಿ ಸೇವಿಂಚಿತೆ ಸರ್ವಾತಿಸಾರಂ ಮಾನುನು. ೧೧

ಗಾಂಧಾರಿವೇಳ್ಳು, ಕೊಡಪಾಲವಿತ್ತುಲು, ತುಂಗಮುಸ್ತಲು, ಕೋಲಹೊನ್ನ, ನೇಲಹೊನ್ನ, ಮಾರೆಡುಪಂಡು, ತಿಪ್ಪತೀಗ, ನೇಲವೇಮು, ಅತಿವಜ, ಅಗುಲುಶುಂಠಿ ಇವಿನ್ನಿ ಕಷಾಯಂಗಾಚಿ ಈಯುನು ಸರ್ವಾತಿಸಾರಂ ಗುಣಮೌನು. ೧೨

ಆರಪೂವು, ತುಂಗಮುಸ್ತಲು, ಅತಿವಜ, ಪೆದ್ದಮಾನಿಚಕ್ಕ, ದಾಡಿಂಬಪಿಂದಲು, ಶುಂಠಿ ವೀನಿ ಕಷಾಯಂಬೆಟ್ಟಿ ಇಚ್ಚಿತೆ ಸರ್ವಾತಿಸಾರಂ ನಿಲುಚುನು. ೧೩

ಪಿಪ್ಪಳ್ಳು, ಚವ್ಯಂ, ಚಿತ್ರಮೂಲಂ, ಅತಿವಜ, ಶುಂಠಿ, ಕರಕ್ಕಾಯಲ ಕರುಕು, ಧಾತಕೀಕುಸುಮಂ, [2]ಅಗುಲುಶುಂಠಿ, ಕಿರುನೆಲ್ಲಿ, ಕಾನುಗಚಕ್ಕ, ಪಸುಪು, ಗಂಟುಭಾರಂಗಿ, ತುಂಗಮುಸ್ತಲು, ಮಾರೆಡುಪಂಡು, ಪೆದ್ದಮಾನಿಚಕ್ಕ, ತೀಟಕಸಿಂದ, ವಾ . . . . . . . . . . . . . . [2] [3]ವೀನಿ ಕಷಾಯಂಬೆಟ್ಟಿ ಇಚ್ಚಿತೆ ಅತಿಸಾರಂ, ಗ್ರಹಣಿ ಸಹ ಮಾನುನು.[3] ೧೪

## ಚೂರ್ಣಗಳು

ಕಪಿತ್ಥಾಷ್ಟಕ, ವಾದಕ್ಕಿ, ಹಿಪ್ಪಲಿಮೂಲ, ಲವಂಗ, ಲವಂಗದ ತೊಕ್ಕು, ಲವಂಗಪತ್ರೆ, ಏಲಕ್ಕಿ, ನಾಗಕೇಸರಿ, ಶುಂಠಿ, ಮೆಣಸು, ಚಿತ್ರಮೂಲ, ಜೀರಿಗೆ, ಗಜ್ಜುಗದ ತಿರುಳು, ಕೊಡನಾರಿಗೆಡ್ಡೆ, ಸಂವತ್ಸರಲವಣ ಇವು ಪ್ರತ್ಯೇಕ ಗ ೧ ತೂಕವುಂ ಹುಣಿಸೆಬೇರಿನ ತೊಕ್ಕು, ಧಾತಕೀಕುಸುಮ, ಬೆಲ್ಲವತ್ತದ ಹೀಚು, ಹಿಪ್ಪಲಿ, ದಾಳಿಂಬದ ಹೀಚು, ಕುರಾಸಾನಿ ಓಮ ಇವು ಪ್ರತ್ಯೇಕಗ [4] ೩ [4] ತೂಕವುಂ ಕೂಡಿಸಿ ಬೆಲ್ಲವತ್ತದಕಾಯ ತಿರುಳು ಗ ೪ ತೂಕವಂ ಸಹ ಇವೆಲ್ಲವಂ ಕೂಡಿಸಿ ಒಣಗಿಸಿ ಚೂರ್ಣವಂಮಾಡಿ ಶರ್ಕರೆ ಗ ೧೮ ತೂಕವಂ ಬೆರಸಿ ನಿತ್ಯವೂ ೪ ತೂಕ ಜೇನುತುಪ್ಪದಿಂದ ಕಲಸಿ ಸೇವಿಸುವುದು ; ಒಂದ, ಈ ಚೂರ್ಣಕ್ಕೆ ಶರ್ಕರೆಯುಂ ಬೆರಸಿ ಚಿಗುಳಿಯ ಹಾಗೆ ಕುಟ್ಟಿ ಉಂಡೆಯ ಮಾಡಿಯಾದರೂ ಸೇವಿಸುವುದು. ಇದರಿಂ ಅತಿಸಾರ, ಗ್ರಹಣಿ, ಗುಲ್ಮ, ಶ್ವಾಸ, ಖಾಸ, ಅಗ್ನಿಮಾಂದ್ಯ, ಪೀನಸ, ಆರೋಚಕ, ಕೊರಳ ನೋವು ಸಹ ಪರಿಹರವುಕ್ಕು. ೧

---

[1] (ಗ) ದಿಂಪಲುಚಕ್ಕ. [2] (ಗ) ಪ್ರತಿಯಲ್ಲಿಲ್ಲ [3] (ಕ) ಪ್ರತಿಯಲ್ಲಿಲ್ಲ. [4] (ಗ)೧.

## ದಾಳಿಂಬಾಷ್ಟಕ

ತವಕ್ಷೀರ ಗ ೪ ತೂಕ, ಏಲಕ್ಕಿ ಗ ೮ ತೂಕ, ನಾಗಕೇಸರಿ ಗ ೮ ತೂಕ, ವಾದಕ್ಕಿ, ಕೊತ್ತಂಬರಿ, ಜೀರಿಗೆ, ಹಿಪ್ಪಲಿಮೂಲ, ಶುಂಠಿ, ಹಿಪ್ಪಲಿ, ಮೆಣಸು ಇವು ಬಗೆ ೧ ಕ್ಕೆ ೧ ಹಲ, ದಾಳಿಂಬದ ಹೀಚು ೮ ಹಲ ಇವನೆಲ್ಲ ಚೂರ್ಣಿಸಿ ವಸ್ತ್ರಗಾಳಿತಂ ಮಾಡಿ ಸಮಸಕ್ಕರೆವೆರಸಿ ಜೇನುತುಪ್ಪದಿಂ ಸೇವಿಸಲು ಅತಿಸಾರ, ಗ್ರಹಣಿ, ಅಗ್ನಿಮಾಂದ್ಯ, ಪೀನಸ, ಕ್ಷಯರೋಗ ಸಹ ಮಾಣ್ಗುಂ. ೨

ಮಾವಿನ ಬೀಜ, ನೇರಿಲ ಬೀಜ, ಪದ್ಮಕ, ಲೋಧ್ರಕ, ಬೆಲ್ಲವತ್ತದ ಕಾಯ ತಿರುಳು ಇವಂ ಚೂರ್ಣವಂ ಮಾಡಿ ಜೇನುತುಪ್ಪದಲ್ಲಿ ಸೇವಿಸಲು ಅತಿಸಾರಂ ಕೆಡುಗುಂ. ೩

## ದಾಳಿಂಬದ ಚೂರ್ಣ

ದಾಳಿಂಬ್ಧದ ಕಾಯ ತೊಕ್ಕು, ಮಾವಿನ ಬೀಜ, ದೇಲದ ಎಳಗಾಯಿ, ಬೆಲ್ಲವತ್ತದ ಹೀಚು, ಎಲವದ ಹಗಿನು, ಧಾತಕೀಕುಸುಮ, ಕುರಾಸಾನಿ ಓವು, ವಾದಕ್ಕಿ, ಅತಿಬಜೆ, ಕೊಡಸಿಗೆಬೀಜ, ಶುಂಠಿ, ಹೆಮ್ಮರದ ತೊಕ್ಕು, ಭದ್ರಮುಸ್ತೆ, ಜಾಯಿಕಾಯಿ, ಹಿಪ್ಪಲಿ, ಲೋಧ್ರ, ತುಪ್ಪದೇವದಾರು, ಬಿಳಿಸಾಸುವೆ ಇವಂ ಸಮಭಾಗವಾಗಿ ಚೂರ್ಣಿಸಿ ಮೊಸರಿನಲ್ಲಿ ಕಲಸಿ ಕೊಡಲು ಸರ್ವಾತಿಸಾರ, ಹೊಟ್ಟೆ ಶೂಲೆ, ಆಮ ಮುಂತಾಗಿ ಸಕಲವಾದ ಅತಿಸಾರವೂ ಕೆಡುಗುಂ. ೪

## ಗಂಗಾಧರಚೂರ್ಣ

ಪೆದ್ದಮಾನಿಚಕ್ಕ, ಅಭ್ರಕಂ, ಶುಂಠಿ, ಆರಪೂವು, ಮಾರೆಡುಪಂಡು, ಲೋಧ್ರ ಪುಚಕ್ಕ, ಕೋಡಿಶಪಾಲ ವಿತ್ತನಮುಲು, ಬೂರುಗಬಂಕ, ಅತಿವಜ, ತುಂಗಮುಸ್ತಲು, ಅಗುಲುಶುಂಠಿ, ಚಿಂತಗಿಂಜಲ ಪೊಟ್ಟು, ಮಾಮಿಡಿಪಿಂದಲು, ವೀನಿ ಸಮಭಾಗಂ ಚೂರ್ಣಂ ಜೇಸಿ ತೇನೆತೊಗಾನಿ ಬಿಯ್ಯಂಕಡಿಗಿನ ನೀಳ್ಳುಲೊಗಾನಿ ಸೇವಿಂಚಿತೆ ಸರ್ವಾತಿಸಾರಂ, ಗ್ರಹಣಿಲು ಸಹ ಮಾನುನು. ೫

## ಲೇಪ

ಬಜೆ, ಬಿಲ್ವಪತ್ರಹಣ್ಣು, ಹಿಪ್ಪಲಿ, ಚಂಗಲಕೋಷ್ಟ, ಸಬ್ಬಸಿಗೆ, ಪಂಚಲವಣ ಇವಂ ಚೂರ್ಣವಂಮಾಡಿ ಬೆಲ್ಲವತ್ತದ ತಿರುಳಿ ಹಾಕಿ ಕಾಸಿದ ತೈಲದೊಳಾಗಲಿ, ಬಜೆ ಹಾಕಿ ಕಾಸಿದ ತೈಲದೊಳಾಗಲಿ ಈ ಚೂರ್ಣವಂ ಹಾಕಿ ಆಸನದ ದ್ವಾರಕೆ ಲೇಪಿಸೆ ಎಡೆವಿಡದೆ ಆಸನ ತೆರೆದಂತೆ ಪೋಪ ಅತಿಸಾರಂ ಮಾಣ್ಗುಂ. ೧

### ಬತ್ತಿ

ಅಂಕೋಲೆಬೇರಿನ ತಿಗುಡು, ಅಗುಳುಶುಂಠಿ, ಮರದರಿಸಿನ, ಇವಂ ಅಕ್ಕಿ ಗಚ್ಚಿನಲ್ಲರೆದು ತಾರೆಕಾಯಿ ಪ್ರಮಾಣಂ ಬತ್ತಿಗೆ ಊಡಿ ಆ ಬತ್ತಿಯಂ ಗುದದೊಳಿಡೆ ಸಕಲಾತಿಸಾರಂ ನಿಲ್ಗುಂ. ೧

### ಘೃತ–ಶುಂಠಿಯ ಘೃತ

ತೊಕ್ಕತೆಗೆದ ಶುಂಠಿ ಒಂದು ಮಾನ, ಹಿಪ್ಪಲಿಮೂಲ ಒಂದು ಪಡಿ ಸಹ ಜಜ್ಜಿ ಗುಟ್ಟಿ ಎರಡುಬಳ್ಳ ನೀರಿನಲ್ಲಿ ಹಾಕಿ ಚತುರ್ಭಾಗಾವಶೇಷವಾಗಿ ಕಾಸಿ ಶೋಧಿಸಿ ಕೊಂಡು ಒಂದು ಮಾನ ತುಪ್ಪವನದರೊಳು ಹುಯಿದು ಹಿಪ್ಪಲಿ, ಹಿಪ್ಪಲಿಮೂಲ, ಚವ್ಯ, ಚಿತ್ರಮೂಲ, ಶುಂಠಿ ಇವು ಪ್ರತ್ಯೇಕ ಗ ೧ ವರಹ ತೂಕವಂ ಚೂರ್ಣಿಸಿ ಇದರಲ್ಲಿ ಹಾಕಿ ಕಾಸಿ ಹದದಲ್ಲಿಳುಹಿ ದಿನಪ್ರತಿಯೂ ಗ ೧ ತೂಕವಂ ಸೇವಿಸೆ ನನೆ ಹೊರ [1] [ಟ] [1] ಸರ್ವಾತಿಸಾರಂ ಮಾಣ್ಗುಂ. ೧

### ವಟಕಗಳು–ಸಿದ್ಧವಟಕ

ಜಾಕಾಯಿ, ವಾದಕ್ಕಿ, ಕುರಾಸಾನಿ ಓವು, ಶುಂಠಿ, ಮೆಣಸು, ಹಿಪ್ಪಲಿ, ಕರಿ ಜೀರಿಗೆ, ಧಾತಕೀಕುಸುಮ, ಸೈಂಧವಲವಣ, ಕಾಚು, ಬೇಲದ ಮೇಣ, ಕೊಡಸಿಗೆ ಬೀಜ, ಅಳಿಲೆಕಾಯಿ, ರೋಧ್ರದ ಚಕ್ಕೆ, ಕೊಡಸಿಗೆ ತೊಕ್ಕು, ಅತಿಬಜೆ, ಅಗಳು ಶುಂಠಿ, ಮಾವಿನ ಬೀಜದ ತಿರುಳು, ಕೊಳವಳಿಕೆ ಬೀಜ, ಭದ್ರಮುಸ್ತೆ, ಹುಣಿಸೆ ಬೀಜದ ತೊಕ್ಕು, ಹೆಮ್ಮರದ ತೊಕ್ಕು ಇವನೆಲ್ಲ ಸಮಭಾಗವಾಗಿ ಭದ್ರಮುಸ್ತೆಯ ಕಷಾಯದಲ್ಲರೆದು ಸಮಾಂಶ ವಿಜಯುವ ಕೂಡಿಸಿ ಎಲಚಿಯ ಪ್ರಮಾಣ ಗುಳಿಗೆಯಂ ಮಾಡಿ ರಾತ್ರಿಯಲ್ಲಿ ಜೇನುತುಪ್ಪದಿಂ ಒಂದು ಗುಳಿಗೆಯಂ ಕಲಸಿ ಮೆಲ್ಲಲು ಸರ್ವಾತಿಸಾರಂ ಮಾಣ್ಗುಂ; ಸಿದ್ಧವಟಕವೆಂದಿದಂ ಆತ್ರೇಯಮುನಿಗಳು ನಿರ್ಮಿಸಿದರು. ೧

### ತಿಂತ್ರಿಣೀವಟಕ

ನೇರಿಲ ತೊಕ್ಕು, ಹೆಮ್ಮರದ ತೊಕ್ಕು ಇವೆರಡರಲ್ಲಿಯೂ ರಸವಂ ತೆಗೆದು ಕೊಂಡು ಶೋಧಿಸಿ ಅದರಲ್ಲಿ ಹುಣಿಸೆ ಬೇರಿನ ತೊಕ್ಕನು ಸಣ್ಣನಾಗಿ ಅರೆದು ಪಾಕವ ಮಾಡಿ ಲೇಹ್ಯದ ಹಾಗೆ ಪಾಕ ಬಂದ ಸಮಯದಲ್ಲಿ ಕಾಚಿನ ಚೂರ್ಣವ ಹಾಕಿ ತೊಳಸಿ ಗಜ್ಜುಗ ಪ್ರಮಾಣ ವಟಕವಂ ಮಾಡಿ ಒಂದು ಮಾತ್ರೆಯಂ ಮೊಸರಿಂ ಕೊಡಲು ಸರ್ವಾತಿಸಾರ, [2] ಸಂ [2] ಗ್ರಹಣಿ ಸಹ ಮಾಣ್ಗುಂ. ೨

---

[1] (ಕ.ಗ.) ಟುದು. [2] (ಗ) ಸರ್ವ.

## ಚೂತಾಸ್ಥಿವಟಕ

ಮಾವಿನ ಬೀಜ, ಬೂರುಗದ ಮೇಣ, ಬಿಲ್ವಪತ್ರೆಯ ಹಣ್ಣು, ಜೇಲದ ಹಣ್ಣಿನ ತಿರುಳು, ಶುಂಠಿ, ಹಿಪ್ಪಲಿ, ಕೊಡಸಿಗೆ, ಆಚದ ಹೂವು, ಅಗುಳುಶುಂಠಿ, ವಾದಕ್ಕಿ, ಜೀರಿಗೆ, ಸೈಂಧವಲವಣ ಇವಂ ಸಮಭಾಗವಾಗಿ ಹುರಿದು ಚೂರ್ಣವ ಮಾಡಿ ಭದ್ರ ಮುಸ್ತೆಯ ಚೂರ್ಣವನು ಕೂಡಿಸಿ ಈ ಭದ್ರಮುಸ್ತೆಯ ಚೂರ್ಣಕ್ಕೆ ನಾಲ್ಕುಮಡಿ ನೀರನು ಕಷಾಯವಿಕ್ಕಿ ಚತುರ್ಥಾಗಾವಶೇಷವಾಗಿ ಕಾಸಿ ಹುರಿದು ಆ ಚೂರ್ಣವ ನೀ ಕಷಾಯದೊಳರೆದು ಗಜ್ಜುಗ ಪ್ರಮಾಣ ಗುಳಿಗೆಯಂ ಮಾಡಿ ಅನುಪಾನವಿಶೇಷದಿಂ ಕೊಡಲು ಅತಿಸಾರಂ ಮಾಣ್ಗುಂ. ೯

## ಜಾತ್ಯಾದಿವಟಕ

ಜಾಕಾಯಿ, ಉಮ್ಮತ್ತದ ಬೀಜ, ಶುಂಠಿ, ಅತಿಬಜೆ, ಮಾವಿನ ಬೀಜದ ಬೇಳೆ, ಆಚದ ಹೂವು, ಧಾತಕೀಕುಸುಮ, ಭಂಗಿ ಇವಂ ಸಮಭಾಗವಾಗಿ ಅಮರದವಳ್ಳಿಯ ರಸದಿಂ ಮರ್ದಿಸಿ ಗಜ್ಜುಗಗಾತ್ರ ಗುಳಿಗೆಯಂ ಮಾಡಿ ಅನುಪಾನ ವಿಶೇಷದಿಂದೀಯಲು ಅತಿಸಾರಂ ಗುಣಮಕ್ಕು. ೪

## ಅತಿಸಾರ ಕುಠಾರವಟಕ

ಕೊಗ್ಗಿಬೀಜ, ಬಿಳುಗಾರ, ಕೊಡಸಿಗೆ, ಆಲದ ಬಿಳಲು, ಜೀರಿಗೆ, ಶುಂಠಿ, ಅಫಿನಿ, ಸೀಸಭಸ್ಮ, ಧಾತಕೀಕುಸುಮ, ಆಚದ ಹೂವು, ಗಜ್ಜುಗದ ತಿರುಳು, ಅತಿಬಜೆ ಇವಂ ಸಮಭಾಗವಾಗಿ ಉಮ್ಮತ್ತದ ಸೊಪ್ಪಿನ ರಸದಲ್ಲಿ ಮರ್ದಿಸಿ ಗಜ್ಜುಗ ಪ್ರಮಾಣ ಗುಳಿಗೆಯಂ ಮಾಡಿ ಹಿಪ್ಪಲಿ, ಜೇನುತುಪ್ಪ ಪ್ರತಿಪಾಕವಿಕ್ಕಿ ಕೊಡಲು ಸಕಲವಾದ ಅತಿಸಾರಂ ಗುಣಮಕ್ಕು. ೫

[1]ಜಾಕಾಯಿ, ಹಿಪ್ಪಲಿ, ಅಫಿನಿ, ಭಂಗಿಯ ಪುಡಿ, ಲವಂಗ, ಉಮ್ಮತ್ತದ ಬೀಜ, ಏಲಕ್ಕಿ, ಸಮುದ್ರಸೋಗೆಯ ಬೀಜ ಇವಂ ಸಮಭಾಗವಾಗಿ ಭಂಗಿ ಸೊಪ್ಪಿನ ರಸದಿಂ ಒಂದು ಜಾವ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಜೇನುತುಪ್ಪದಿಂ ಕಲಸಿ ಕೊಡಲು, ಸಕಲಾತಿಸಾರಂ ಮಾಣ್ಗುಂ.[1] ೬

## ಖಟ್ವಾಂಗಗುಳಿಗೆ

ಹೆಮ್ಮರದ ತೊಕ್ಕನು ನಾಗಳ ನೀರಿನಲ್ಲಿ ಹಾಕಿ ಕಷಾಯವಿಕ್ಕಿ ಚತುರ್ಥಾಗಾವಶೇಷವಾಗಿ ಕಾಯಿಸಿ ಬೇರೊಂದು ಪಾತ್ರೆಯಲ್ಲಿ ಎತ್ತಿ ಪಾಕವ ಮಾಡಿ ಲೇಹ್ಯ ಪಾಕ ಬಂದ ಸಮಯದಲ್ಲಿ ಹಾಕುವ ಕಲ್ಕದ್ರವ್ಯ :—ಧಾತಕೀಕುಸುಮ, ಲೋಧ್ರದ

---

[1] (ಗ) ಪ್ರತಿಯಲ್ಲಿಲ್ಲ.

ಚಕ್ಕೆ, ಬೆಲ್ಲವತ್ತದ ಬೇರು, ಎಲವದ ಹಗಿನು, ಸೈಂಧವ, ಕಾಚು, ಅತಿಬಜೆ, ವಾದಕ್ಕಿ ಕೊಡಸಿಗೆ ಬೀಜ, ಸದ್ಯಕ್ಷಾರ, ಯವಕ್ಷಾರ ಹಿಪ್ಪಲಿಮೂಲ, ದಾಳಿಂಬದ ಹೀಚಿನ ಸಿಪ್ಪೆ, ಜಾಕಾಯಿ, ಭದ್ರಮುಸ್ತೆ, ಶುಂಠಿ, ಹಿಪ್ಪಲಿ, ಮೆಣಸು, ನೇರಿಲ ತೊಕ್ಕು, ಮಾವಿನ ಬೀಜದ ತಿರುಳು, ಲವಂಗ :— ಇವಂ ಪ್ರತ್ಯೇಕ ಎರಡು ಹಲವಂ ಚೂರ್ಣಿಸಿ ಹಾಕಿ ಒಂದು ಮಾನ ಎಣ್ಣೆ ಸಹ ಹನಿಸಿ ಚೆನ್ನಾಗಿ ಕಲಸಿ ಮೂರು ವರಹ ತೂಕಕ್ಕೆ ಸರಿಯಾಗಿ ಗುಳಿಗೆಯಂ ಮಾಡಿ ಎಣ್ಣೆ, ಜೇನುತುಪ್ಪ, ಮೊಸರು, ಮಜ್ಜಿಗೆ ಯಾವುದರಲ್ಲಿಯಾದರೂ ಸೇವಿಸೆ ಸಕಲಾತಿಸಾರಗಳು, ಗ್ರಹಣೀರೋಗ ಸಹ ಗುಣಮಕ್ಕು.

ಜಾಕಾಯಿ, ಜಾಪತ್ರೆ, ಲವಂಗಂ, ಅಕುಮಂದು, ಕುರಾಸಾನಿ, ಓಮಮು, ಸಮುದ್ರಶೋಕಿವಿತ್ತುಲು, ಖರ್ಜೂರಂ, ಅತಿಮಧುರಂ, ಅತಿವಜ, ಬೂರುಗ ಬಂಕ, ಧಾತಕೀಕುಸುಮಂ, ಭಂಗಿ ಇವನ್ನಿ ವೆಚ್ಚಜೇಸಿ ಚೂರ್ಣಿಂಚಿ ನಿಮ್ಮಪುಲುಸುನ ಒಕನಾಡು ಭಂಗಿಯಾಕು ರಸಮುತೊ ಒಕನಾಡು ಸಹ ಮರ್ದನಂ ಜೇಸಿ ಮರಿ ಮಜ್ಜಿಗತೊ ನೂರಿ ಶನಿಗಗಿಂಜಂತ ಮಾತ್ರ ಗಟ್ಟಿ ಪೆರುಗತೊ ಇಚ್ಚಿತೆ ಅತಿಸಾರಂ, ರಕ್ತಾತಿಸಾರಂ ಸಹ ನಿಲುಚುನು. ೮

## ಪಿಪ್ಪಲ್ಯಾದಿವಟಕ

ಪಿಪ್ಪಲಿ ಗ ೮ಂ ತೂಕ, ಚಿತ್ರಮೂಲದ ಬೇರಿನ ತೊಕ್ಕು, ಸೈಂಧವ, ತುತ್ಥ, ಶುಂಠಿ, ಮಂಡೂರ, ಲವಂಗ, ವಾಯಿವಿಳಂಗ, ಇಂಗು ಇವು ಪ್ರತ್ಯೇಕ ಗ ೧೦ ತೂಕ, ಮೆಣಸು ಗ ೨೦ ತೂಕ, ಸಹ ಚೆನ್ನಾಗಿ ಚೂರ್ಣಿಸಿ ತೋಟಮಾದಳದ ಹಣ್ಣಿನ ರಸದಲ್ಲಿ ಐದು ಭಾವನೆಯಂ ಮಾಡಿ ನಿಂಬೆಹಣ್ಣಿನ ರಸದಿಂದೈದು ಭಾವನೆಯಂ ಕೊಟ್ಟು ಖಲ್ವದಲ್ಲಿ ಮರ್ದಿಸಿ ಎಲಚಿ ಬೀಜದ ಪ್ರಮಾಣ ವಟಕವಂ ಮಾಡಿ ನೆಳಲಲ್ಲಿ ಒಣಗಿಸಿ ಇರಿಸಿಕೊಂಡು ದಿನಂಪ್ರತಿಯೂ ಭೋಜನೋತ್ತರದ ಮೇಲೆ ಒಂದು ಗುಳಿಗೆಯಂ ಬಿಸಿನೀರಿಂ ಕೊಡಲು ಸರ್ವಾತಿಸಾರ, ಗ್ರಹಣಿ, ಗುಲ್ಮ, ಪಾಂಡುರೋಗ, ಮೊದಲಾದ ಸಮಸ್ತ ವ್ಯಾಧಿಗಳು ಪರಿಹರಮಕ್ಕು. ೯

ಈ ಅತಿಸಾರಗಳಿಂದ ಆಸನದಿಂದ ನನೆಹೊರಡಲು ಅದೆ ಗುದಭ್ರಂಶವೆನಿಸಿಕೊಂಬುದಾಗುದಭ್ರಂಶಕ್ಕೆ ಎಲಚಿಸೊಪ್ಪಿನ ರಸದಲ್ಲಾದರೂ ಪುಲ್ಲಂಪುರುಚಿ ಸೊಪ್ಪಿನ ರಸದಲ್ಲಾದರೂ ಈ ರಸದ [1] ನಾಲ್ಕರ ಭಾಗದ [1] ಲೊಂದು ಭಾಗ ತುಪ್ಪವ ಹನಿಸಿ ತುಪ್ಪದ ಸರಿ ಹಾಲುಗೂಡಿ ಮೊಸರಲ್ಲಿ ಶುಂಠಿಯನರೆದು ಕದಡಿ ತುಪ್ಪ ಉಳಿವಂತೆ ಕಾಸಿ ಆ ತುಪ್ಪವಂ ಬಿರುಸಾಗಿ ಹೊರಟ ನನೆಗೆ ತೊಡೆದು ಮೃದುವಾಗಿ ಮಾಡಿಕೊಂಡು ಮೆಲ್ಲಗೆ ಒಳಯಿಂಕೆ ತಳ್ಳುವುದು. ಆಡಿನ ಚರ್ಮದಲ್ಲಿ ಕೌಪೀನದಾಕಾರಕ್ಕೆ ನಡುವೆ ಅಗಲವಾಗಿ ಅಪಾನದ್ವಾರದ ಸರಿಸದಲ್ಲಿ ಛಿದ್ರವಮಾಡಿ ಕಟ್ಟಿ

[1] (ಗ) ಪ್ರತಿಯಲ್ಲಿಲ್ಲ.

ಇರಿಸುವುದು. ಈಪ್ರಕಾರ ವಾಲ್ಕು ಹೊತ್ತು ಕಟ್ಟಿರಿಸಲು ಹೊರಟ ನನೆ ಒಳಯಿಂಕೆ ಹೋಗುವುದು. ೧

### ಕಷಾಯ

ಶುಂಠಿ, ಓವು, ಕಿರುಗಡಸಿಗೆ, ಅಗುಳುಶುಂಠಿ, ಚಿತ್ರಮೂಲ, ದೇವದಾರು ಇವು ಪ್ರತ್ಯೇಕ ಗ ೪ ತೂಕವಂ ಜಜ್ಜುಗುಟ್ಟಿ ಬಳ್ಳನೀರಿನಲ್ಲಿ ಹಾಕಿ ಅಷ್ಟಾವಶೇಷ ವಾಗಿ ಕಾಸಿಕೊಡಲು ಅತಿಸಾರ, ಗುದಭ್ರಂಶ, ಉದರಶೂಲೆ ಸಹ ಗುಣವಾಕ್ಕುಂ. ೨

ಅಂತು ಸರ್ವಾತಿಸಾರಕ್ಕೆ ಸಂಹಿತೆ ೨೧, ಕಲ್ಕ ೮, ಕಷಾಯ ೧೪, ಚೂರ್ಣ ೫, ಲೇಪ ೧, ಬತ್ತಿ ೧, ಘೃತ ೧, ವಟಕ ೯, ಪ್ರಯೋಗ ೨ ಸಹ ಚಿಕಿತ್ಸೆ ೬೨ ಕ್ಕಂ ಸಮಾಪ್ತಂ.

---

## ಗ್ರಹಣೀರೋಗ

### ಚಿಕಿತ್ಸೆ— ಸಂಹಿತೆಗಳು

[1] ಉದ್ದಿನ ಹಿಟ್ಟು,[1] ಹಳೆಗೋಧಿಯ ಹಿಟ್ಟು, ಒಂದು ಸೇರೆ ಆಡಿನ ಹಾಲು, ಒಂದು ಸೇರೆ ಅರೆಗಾಸಿದ ತುಪ್ಪ, ಸಹ ಈ ಮೂರನೂ ಕೂಡಿಸಿ ಮೂರು ದಿವಸ ಕೊಳ್ಳಲು ಗ್ರಹಣಿ ಮಾಣ್ಗುಂ. ೧

[2][ನಲ್ಲಏನುಮುಪಾಲುನು][2] ಒಕಪಾಲುಗ ಮುಯ್ಯಕ ಪೊಂಗಕುಂಡ ಕಾಚಿ ಅಂದುಲೊ ಆವು ಪೆರುಗು ಬೋಸಿ ಇಂಚುಕ ಸೈಂಧವಲವಣಂ ವೇಸಿ ದಾನಿ ಮೂಡುಪೂಟಲು ಇಚ್ಚಿತೆ ಗ್ರಹಣಿ, ಕಡುಪುವೇಗಮುಲು ಬಹುಲಮುಗ ಪೋಯೇದಿ ನಿಲುಡುನು. ೨

ಮಾವಿನ ಬೀಜದ ತಿರುಳಂ ಪುಡಿಮಾಡಿ ಅಂಬಿಲದಾಗಲಿ ಮಜ್ಜಿಗೆಯಲಾಗಲಿ ಕುಡಿಯೆ ಗ್ರಹಣಿ ಆ ಕ್ಷಣವೇ ನಿಲ್ಗುಂ. ೩

ನಿಂಬೆಯ ಸೊಪ್ಪನು ಮಜ್ಜಿಗೆಯಲರೆದು ಕುಡಿಯೆ ಗ್ರಹಣಿ ತೀರ್ಗುಂ. ೪

ಮಾವಿನ ಚಕ್ಕೆಯಂ ಸಣ್ಣನಾಗರೆದು ನೀರಿನಲ್ಲಿ ಕಲಸಿ ಜೋಳದಷ್ಟು ಹೊಸ ಸುಣ್ಣವ ಬೆರಸಿ ತೆಗೆದುಕೊಳಲು ಗ್ರಹಣಿ ಕೆಡುಗುಂ. ೫

ತೊಗರಿಬೇಳೆ ಎರಡುವರಹ ತೂಕವಂ ನಿಂಬೆಯ ಹುಳಿಯಲ್ಲಿ ನೆನೆಯಿಕ್ಕಿ ಪೆಳಗಾಗ ಅರೆದು ಕೆಳಗೆ ಮೇಲೆ ಮೊಸರನಿಕ್ಕಿ ಕೊಳಲು ಗ್ರಹಣಿಮಾಣ್ಗುಂ. ೬

ವಡವಾರದ ಸೊಪ್ಪನು ಚೆನ್ನಾಗಿ ಅಕ್ಕಿಯ ಸಂಗಡ ಕುಟ್ಟಿ ರೊಟ್ಟಿಯ ಮಾಡಿ ಮೆಲ್ಲಲು ಗ್ರಹಣಿ ಹೊಟ್ಟೆಯ ಬೇನೆ ಸಹ ತೀರ್ಗುಂ. ೭

---

[1] (ಕ) ಪ್ರತಿಯಲ್ಲಿಲ್ಲ. [2] (ಕ) ಕಲಏನಿಮಿಧಿಪಾಳ್ಳು. (ಗ) ಕರಿಯುನಿಮಿಪಾಳ್ಳು.

ಅಳಿಲೆಕಾಯಿ, ತಾರೆಕಾಯಿ, ನೆಲ್ಲಿಚೆಟ್ಟು, ಗೇರಬೀಜ, ಶುಂಠಿ, ಹಿಪ್ಪಲಿ, ಮೆಣಸು, ಸೈಂಧವಲವಣ, ಸಂವತ್ಸರಲವಣ, ಬಿಡುಲವಣ, ಇವಂ ಗ್ರಾಹಿ ಮಾಡಿ ತುಪ್ಪದಿಂ ಸೇವಿಸೆ ಸರ್ವಗ್ರಹಣಿ, ಪಾಂಡುರೋಗ, ಗುಲ್ಮಶೂಲೆ ಸಹ ಹರ ಮಕ್ಕುಂ. ೮

ಹಿಪ್ಪಲಿ, ಹಿಪ್ಪಲಮೂಲ, ಅಳಿಲೆಕಾಯಿ, ವಾಯಿವಿಳಂಗ ಇವನರೆದು ಮಡಕೆಯ ಒಳಮುಖಕ್ಕೆ ತೊಡೆದು [1] ಅರಿಸಿನ [1], ಮಜ್ಜಿಗೆಯ ಹೊಯ್ದು ಕಾಸಿ ಪಳಿದ್ಯವಂ ಮಾಡಿ ನಿತ್ಯದಲ್ಲಿ ಭೋಜನದಲ್ಲಿ ಹನಿಸಿಕೊಂಡು ಉಣ್ಣಲು ಸರ್ವಗ್ರಹಣಿ, ಮೂಲರೋಗ, ಶ್ವಾಸರೋಗ, ಗುಲ್ಮ, ಕ್ರಿಮಿ ಸಹ ಪರಿಹರಮಕ್ಕುಂ. ೯

ಬೊಬ್ಬುಲ ಚಕ್ಕೆ, ಈ ಒಳನಾರು, ಆವರಿಕೆಯ ತಿಗಡು, ದಾಳಿಂಬದ ಹೀಚು, ಅತಿಬಜೆ ಇವಂ ಮೊಸರಿಂದರೆದು ಅಡಕೆಯ ಪ್ರಮಾಣವಂ ಉದಯ ಸಾಯಂಕಾಲಗಳಲ್ಲಿ ತೆಗೆದುಕೊಳ್ಳೆ ಗ್ರಹಣಿ, ಹೊಟ್ಟೆಯ ನೋವು, ಅತಿಸಾರ ಸಹ ಮಾಣ್ಗುಂ. ಬೆಳತಿಗೆಯಕ್ಕಿಯ ಅನ್ನ, ಶುಂಠಿಯ ಪುಡಿ, ಎಣ್ಣೆ, ಕಟ್ಟುಮೊಸರು ಸಹ ಪಥ್ಯ ೧೦

ನುಗ್ಗೆಸೊಪ್ಪಿನ ರಸದಲ್ಲಿ ಎಣ್ಣೆಯ ಬೆರಸಿ ಕುಡಿಯೆ ಗ್ರಹಣೀರೋಗಂ ನಿಲ್ಗುಂ. ೧೧

ಜಾಕಾಯನ್ನು ನೀರಿಂದರೆದು ಸೌಟಿನಲ್ಲಿ ಕುದಿಸಿ ಗಜ್ಜುಗ ತೋರವಂ ಮೆಲ್ಲಲು ಗ್ರಹಣಿ, ಹೊಟ್ಟೆಬೇನೆ ಸಹ ನಿಲ್ಲುವುದು. ೧೨

ಹೆರಳೆಕಾಯ ರಸವಂ ಹಿಂಡಿಕೊಂಡು ಉಪ್ಪು, ಮೆಣಸು ಹಾಳಿತವಾಗಿ ಹಾಕಿ ಕುದಿಸಿ ಇಂಗು, ಜೀರಿಗೆ, ಮೆಂತ್ಯ, ಸಾಸುವೆ, ಬೆಳ್ಳುಳ್ಳಿ, ಸಹ ಹಾಕಿ ತುಪ್ಪದಲ್ಲಿ ಒಗ್ಗರಿಸಿ ಆ ಕಷ್ಟಡಿಯಂ ಅನ್ನಕ್ಕೆ ಹಾಕಿಕೊಂಡು ಸಿ[2]ಹಿ[2] ಬೆಣ್ಣೆಯ ಹಾಕಿ ಕಲಸಿಕೊಂಡುಣಲು ಗ್ರಹಣಿ, ಹೊಟ್ಟೆಬೇನೆ, ಅರುಚಿ ಸಹ ಮಾಣ್ಗುಂ. ೧೩

ಕೂಟದ ಪಳಿದ್ಯ:—ನುಗ್ಗೆಪಟ್ಟೆ, ದಾಳಿಂಬದ ಮೊಗರು, ಲೊಕ್ಕಿಚಿಗುರು, ಶುಂಠಿ, ಮೆಣಸು, [3]ಹಿಪ್ಪಲಿ,[3] ಉಪ್ಪು, ಸಾಸುವೆ, ಮೆಂತ್ಯ, ಓವು, ಅರಿಸಿನದ ಕೊನೆ ಸಹ ಬಿಸಿಮಾಡಿ ಮಜ್ಜಿಗೆಯೊಳರೆದು ಕದಡಿ ಕಾಸಿ, ಉಳ್ಳಿ, ಇಂಗು, ಜೀರಿಗೆ, ಮೆಂತ್ಯ, ಸಾಸುವೆ, ಕರಿಬೇವು ಸಹ ಒಗ್ಗರಿಸಿ ಅನ್ನಕ್ಕೆ ನೀಡಿ ಬೆಣ್ಣೆಯಲ್ಲಿ ಕಲಸಿ ಊಟವ ಮಾಡಲು ಹೊಟ್ಟೆಬೇನೆ, ಗ್ರಹಣಿ ಸಹ ಗುಣಮಕ್ಕುಂ. ೧೪

ಹಸುವಿನ ಹಾಲಿನಲ್ಲಿ ಪರಮಾನ್ನವ ಮಾಡಿ ಅದಕ್ಕೆ ಹಸುವಿನ ಬೆಣ್ಣೆಯಲ್ಲಿ ಸಪ್ಪೆದುಪ್ಪವ ಕಾಸಿ ಹಾಕಿ ಬಿಸಿ ಹಾಳಿತವಾಗಿ ಊಟವ ಮಾಡಲು ಬಹುಕಾಲದಿಂದನುಸರಿಸಿದ ಎಂಥಾ ಹೊಟ್ಟೆಬೇನೆಯಾದರೂ ಗುಣವಹುದು. ೧೫

ಪುಲ್ಲಂಪುರಚೆ ಸಹಮೂಲ, ಎಲವದ ಹಗಿನು, ಈ ತೊಕ್ಕು, ನೇರಿಲ ಒಳನಾರು, ಕಡವರದ ಒಳನಾರು, ಮಾವಿನ ಒಳನಾರು, ತೆಂಗಿನ ಹೊಂಬಾಳೆಯ

[1] (ಗ) ಪ್ರತಿಯಲ್ಲಿಲ್ಲ. [2] ಡಿ (ಗ). [3] (ಕ) ಪ್ರತಿಯಲ್ಲಿಲ್ಲ

ಕುಸುಮ, ಇವನೆಲ್ಲ ಜಜ್ಜುಗುಟ್ಟಿ ಬಾಳೆಯ ಎಲೆಯ ಮೇಲಿಟ್ಟು, ನಾಲ್ಕು ಸವುಡಾಗಿ ಸುತ್ತಿ ಮೇಲೆ ಸಣ್ಣನಾಗಿ ಬಾಳೆಯ ನಾರಿನಲ್ಲಿ ಕಟ್ಟಿ ಅದರ ಮೇಲೆ ಮಣ್ಣ ನರೆದು ಅಗ್ನಿಯಲ್ಲಿ ಲಘುವಾಗಿ ಬಿಸಿಮಾಡಿ ತೆಗೆದಾರಿಸಿ ರಸವ ಹಿಂಡಿಕೊಂಡು ಆ ರಸದ ಎಂಟರಲ್ಲೊಂದುಪಾಲು ಜೇನುತುಪ್ಪವ ಬಿಟ್ಟು ನಾಲ್ಕು ವರಹ ತೂಕ ಅತಿಬಜೆಯ ಚೂರ್ಣವಂ ಪ್ರತಿಪಾಕವಾಗಿ ಹಾಕಿ ಕೊಡಲು ಸಕಲ ಗ್ರಹಣಿ, ಅಗ್ನಿಮಾಂದ್ಯ, ರಕ್ತಾತಿಸಾರ ಸಹ ಮಾಣ್ಗುಂ. ೧೬

ಕುರಾಸಾನಿ, ಓವು, ಶುಂಠಿ, ಹಿಪ್ಪಲಿ, ಇವಂ ಏಕೋತ್ತರ ವೃದ್ಧಿಯಾಗಿ ಚೂರ್ಣಿಸಿ ಇಷ್ಟರ ಸಮಾನ ಆಳಿಲೆಕಾಯ ಚೂರ್ಣವಂ ಬೆರಸಿ ಮಜ್ಜಿಗೆಯಿಂದ ಗ ೪ ತೂಕವಂ ಸೇವಿಸೆ ಗ್ರಹಣಿ ಹರ. ೧೭

ಪುಲ್ಲಂಪುರುಚೆ ಸೊಪ್ಪಿನ ರಸ ೨ ಬಳ್ಳ, ಮಜ್ಜಿಗೆ ೨ ಬಳ್ಳ, ಸಹ ಕೂಡಿಸಿ ಅದರಲ್ಲಿ ಕರಿಬೇವು ಗ ೨ ತೂಕ, ಬೆಳ್ಳುಳ್ಳಿ ಗ ೫ ತೂಕ, ಶುಂಠಿ ಗ ೫ ತೂಕ, ಮೆಣಸು ಗ ೫ ತೂಕ, ಹಿಪ್ಪಲಿ ಗ ೫ ತೂಕ, ಸೈಂಧವ ಗ ೨ ತೂಕ, ಇಂಗು [1] ಗ [1] ೧ ತೂಕ ಸಹ ಅರೆದು ಕದಡಿ ಪಾಕವ ಮಾಡಿ ಮೂರು ಪಡಿ ಉಳಿವಂತೆ ಕಾಸಿ [2] ಇದ[2] ನ್ನಿಕ್ಕಿ ಒಗ್ಗರಿಸಿ ಅನ್ನಕ್ಕೆ ಹನಿಸಿಕೊಂಡು ಭೋಜನಾದಿಯಲ್ಲಿ ಮೂರು ಕಬಳವನೂಟವ ಮಾಡಲು ಗ್ರಹಣಿ, ಅಗ್ನಿಮಾಂದ್ಯ, ಗುಲ್ಮ ಶೂಲೆ, ವಾತ ಸಹ ಮಾಣ್ಗುಂ. ೧೮

ಆಳಿಲೆಕಾಯ ಚೂರ್ಣ ಗ ೨ ತೂಕ, ಶುಂಠಿಯ ಚೂರ್ಣ ಗ ೧ ತೂಕ, ಸೈಂಧವಲವಣ ಗ ೧೦ ತೂಕ, ಸಹ ಹುಳಿಮಜ್ಜಿಗೆಯಲ್ಲಿ ಕದಡಿ ಪ್ರಾತಃಕಾಲದಲ್ಲಿ ತೆಗೆದುಕೊಂಡರೂ, ಒಂದ ಬಿಸಿನೀರಿನಲ್ಲಿ ಕದಡಿ ಪಾಕವ ಮಾಡಿದರೂ ಗ್ರಹಣಿ ಅಗ್ನಿಮಾಂದ್ಯ, ಉದರಶೂಲೆ ಮುಂತಾಗಿ ಗುಣಮಕ್ಕುಂ. ೧೯

ಬಾಳೆಯ ಹೂವನು ಕುಟ್ಟಿ ರಸವ ತೆಗೆದು ಅದರಲ್ಲಿ ವರಹತೂಕ ಗುಗ್ಗಳದ ಚೂರ್ಣವ ಹಾಕಿ ಕದಡಿ ಕುಡಿಯೆ ಎಂಥ ಹೊಟ್ಟೆಬೇನೆಯಾದರೂ ನಿಲ್ಗುಂ. ೨೦

ಅವಲು, ತೆಲ್ಲ ಆವಾಲು, ಕರಿವೇಪಾಕು, ಜಿಲಕರ, ಶುಂಠಿ, ಪಿಪ್ಪಲಿ, ಮಿರಿಯಾಲು, ಸೈಂಧವ ಲವಣಂ, ವೀನಿ ನೂರಿ ಮಜ್ಜಿಗಲೊ ವೇಸಿ ಕಾಚಿ ತ್ರಾಗಿತೆನು ವಂಟಕಮುಕು ವಿಡುಚುಕೊನಿ ಮುಂದರಗ ಭೋಜನಂ ಜೇಸಿತೆನು ಸಮಸ್ತ ಗ್ರಹಣಿ, ಕಡುಪು ಶೂಲಲು ಸಹ ಗುಣಮೌನು. ೨೧

ಕೋಲುಮುಕ್ಕ ಚೆಕ್ಕ, ಶುಂಠಿ, ಮಿರಿಯಾಲು, ಜಿಲಕರ, ಇಂತ ಸಮಮುಗ ಕೂರ್ಚಿ ಚೂರ್ಣಂಜೇಸಿ ತಂಗೇಡು ಚಕ್ಕ ರಸಮುನ ನೂರಿ ಬಿಲ್ಲ ಚೇಸಿ ರಾಪಿಮಾಕುಲ ಮಿಾದ ಉಂಚಿ ಪೈನ ಆಕನುಂಚಿ ಪುಟಂವೇಸಿ ತೀಸಿ ತಿರಿಗಿ ತಂಗೇಡುಚಕ್ಕ ರಸಮುನ ನೂರಿ ಮರಿ ಪುಟಂಬೆಟ್ಟಿ ಈ ಪ್ರಕಾರಂ ಆರುಮಾಟ್ಲು ಪುಟಂಬೆಟ್ಟಿ

[1] (ಗ) ೪. [2] (ಗ) ಇಂಗು.

ತೀಸುಕೊನಿ ಎನುಮು ಪೆರುಗುತೊ ಇಚ್ಚಿತೆ ಕಡುಪುನೊಪ್ಪಿ, ಆಮಂ, ಗ್ರಹಣಿಲು, ಕಡುಪುರೋಗಂ ಸಹ ಮಾನುನು. ೨೨

[1] ಮಂಚಿವಿಭೂತಿ, ಚಕ್ಕರನು ನಿಮ್ಮಪುಲುಸುನ ಉಂಟಜೇಸಿ [1] ಪೋಕಂತ ಇಚ್ಚಿತೆ ಬಹುಶಃ ವೇಗಮುಲು ಪೋಯೇದಿ ನಿಲುಚುನು. ೨೩

ವೆಂಪಡಿಚಟ್ಟು ಸಮೂಲಂ ಮಂಚಿದಿ ತೆಚ್ಚಿ ಪಚ್ಚಿವಿ ತರಿಗಿ ಮಂಗಲಮುನ ಪೆಟ್ಟಿ ಮಸಿಗಾ ವೇಗಿಂಚೇದಿ, ಆ ಮಸಿನಿ ಲೆಸ್ಸನೂರಿ ವಸ್ತ್ರಗಾಳಿತಂ ಜೇಸಿ ಶುಂಠಿ, ಪಿಪ್ಪಲಿ, ಮಿರಿಯಾಲು, ಜಿಲಕರ ಸಮಭಾಗಮುಲು ವೇಯಿಂಚಿ ಪೊಡಿಜೇಸಿ ಈ ನಾಲುಗಿಂಟಿ ಪೊಡಿ ಕೂಡ ಒಕಪಾಲುನು, ವೆಂಪಡಿಚೂರ್ಣಂ ಒಕಪಾಲುನು ಸಮಮುಗ ಸುನ್ನುಪುದಿಂಡು ಪಾಚಿ ನೀಳ್ಳುತೊ ಕಲಪಿ ತ್ರಾಗನು ಕಡುಪು ವ್ಯಾಧಿ ಮಾನುನು ; ಪಥ್ಯಂ ಪುಲುಸುಕೂರ, ಪೆರುಗು ವಂಟಕಂ. ೨೪

ಸಂವತ್ಸರ ಲವಣಂ, ಯವಕ್ಷಾರಂ, ವಜ, ಕರಕ್ಕಾಯು, ಚಿತ್ರಮೂಲಂ, ಇಂತ ವಟ್ಟುನು ಚೂರ್ಣಂ ಜೇಸಿ ತೇನೆತೊ ವಂಡಿ ವಾಯಿವಿಳಂಗಂ, ಶುಂಠಿ, ಪಿಪ್ಪಲಿ, ಮಿರಿಯಾಲು, ವೀನಿ ಸಮಚೂರ್ಣಂ ಜೇಸಿ ಲೇಹ್ಯಪಾಕಮುಗ ವಂಡಿ ಸೇವಿಂಚಿತೆ ಗ್ರಹಣಿ, ಗುಲ್ಮಂ, ಶ್ವಾಸಖಾಸಮುಲು ಸಹ ಮಾನುನು. ೨೫

ಪಿಪ್ಪಳ್ಳು, ಪಿಪ್ಪಲಿ ಮೂಲಂ, ಮಿರಿಯಾಲು ಲವಂಗಂ, ಮುಲುಗೊಬ್ಬಿ ವಿತ್ತಲು, ಓಮಂ ಈ ದ್ರವ್ಯಮುಲನು ಪೆಚ್ಚಜೇಸಿ ನೂರಿ ಈಯುನು ಗ್ರಹಣೀ ರೋಗಂ ನಿಲುಚುನು. ೨೬

ಅರಳಿಚಕ್ಕೆಯನ್ನು ಮೊಸರಿನಿಂದರೆದು ಕಟ್ಟು ಮೊಸರಿನಲ್ಲಿ ಸೇವಿಸೆ ಗ್ರಹಣಿ ಹೊಟ್ಟೆಶೂಲೆ ಸಹ ಮಾಣ್ಗುಂ. ೨೭

ಶುಂಠಿ, ಹಿಪ್ಪಲಿ, ಮೆಣಸು, ವಾದಕ್ಕಿ ಬೆಳ್ಳುಳ್ಳಿ, ಲವಂಗ, ಕೊತ್ತಂಬರಿ ಇವಂ ಚೂರ್ಣಿಸಿ ಎಮ್ಮೆ ಮಜ್ಜಿಗೆಯಲ್ಲಿ ಎರಡು ವರಹ ತೂಕವಂ ಕದಡಿ ಎರಡು ಹೊತ್ತು ಕೊಡುವುದು ; ಮೂರು ದಿನದ ಮೇಲೆ ಹಿಡಿ ಮೆಂತ್ಯವಂ ತಿರುಹಿ ನಸು ಉಪ್ಪು ಕಲಸಿ ಒಂದು ಗಜ್ಜುಗದ ತಿರುಳಂ ಪುಡಿಮಾಡಿ ಹಾಕಿ ಕದಡಿ ಮಜ್ಜಿಗೆಯಂ ಕೊಡಲು ಹೊಟ್ಟೆ, ರಕ್ತಗ್ರಹಣಿ ಸಹ ಮಾಣ್ಗುಂ. ೨೮

## ಕಲ್ಕಗಳು

ಅಳಿಲೆಕಾಯನು ಎಣ್ಣೆಯೊಳು ಹುರಿದು ಆಡಿನ ಹಾಲನಲ್ಲರೆದು ಕಲ್ಕವ ಮಾಡಿ ಆಡಿನ ಹಾಲಂ ಕೊಡಲು ಗ್ರಹಣಿ, ಅಗ್ನಿಮಾಂದ್ಯ, ರಕ್ತಾತಿಸಾರ, ಶ್ಲೇಷ್ಮಾತಿಸಾರ, ಸಹ ಪರಿಹರಮಕ್ಕುಂ. ೧

---

[1] (ಗ) ಕೋಲುಮುರಕನ ಚಕ್ಕೆ, ಶುಂಠಿ, ಮಿರಿಯಾಲು, ಜಿಲಕರ, ಇಂತ ಸಮಂಗ ಚೂರ್ಣ ಚೂರ್ಣಂ ಜೇಸಿ.

ನೇರೆಡು ಚಕ್ಕನು ವೇಂಕಪಾಲುತೂ ನೂರಿ ತಾಗೆನು ಗ್ರಹಣೀರೋಗಂ ಮಾನುನು. ೨

## ಕಷಾಯಗಳು

ಅಗುಳುಶುಂಠಿ, ಹೊಂಗೆತೊಕ್ಕು, ಪಂಚಲವಣ, ಅಳಲೆಕಾಯಿ, ಕರಿಬೇವು, ಮುಳ್ಳುಕೊಗ್ಗೆಬೇರು, ತಪಸಿನಾರು, ಶುಂಠಿ ಇವಂ ಕಷಾಯಂ ಕಾಸಿ ಕುಡಿಯೆ ಗ್ರಹಣಿಮಾಣ್ಗುಂ. ೧

ಮುಳ್ಳುಕೊಗ್ಗೆಯಂ ಕಷಾಯವಿಟ್ಟು ನಾಲ್ಕುವರಹ ತೂಕ ಶುಂಠಿಯ ಚೂರ್ಣವಂ ಹಾಕಿ ಕೊಡಲು ಗ್ರಹಣಿ ಪರಿಹರ. ೨

ಕಿರುಗಡಸಿಗೆ ಸಮೂಲವಂ ಕಷಾಯವಿಕ್ಕಿ ಶುಂಠಿ ೪ ವರಹ ತೂಕ ಪ್ರತಿ ಪಾಕವಂ ಕೂಡಿಕೊಡಲು ಗ್ರಹಣಿರೋಗಂ ಗುಣಮಕ್ಕು. ೩

ಕರಿಬೇವಿನ ಸೊಪ್ಪು, ಧಂಗಿಸೊಪ್ಪು, ಅತಿಬಜೆ ಇವು ಪ್ರತ್ಯೇಕ ಗ ೧೦ ತೂಕವಂ ಬಳ್ಳ ನೀರಿನಲ್ಲಿ ಹಾಕಿ ಅಷ್ಟಾವಶೇಷ ಕಷಾಯಂ ಮಾಡಿ ಕುಡಿಯೆ ಸಮಸ್ತ ಗ್ರಹಣಿ, ಅಗ್ನಿಮಾಂದ್ಯ, ಉದರ ಶೂಲೆ ಸಹ ಪರಿಹರವಹುದು. ೪

ಹೊಂಗೆತೊಕ್ಕು, ಪಂಚಕೋಲಂ, ಕರಿಬೇವು, ಅಳಲೆಕಾಯಿ, ಮುಳ್ಳುಕೊಗ್ಗಿ, ಬೆಲ್ಲವತ್ತದ ಕಾಯಿ ಇವು ಪ್ರತ್ಯೇಕ ೪ ವರಹ ತೂಕವಂ ಬಳ್ಳ ನೀರಿನಲ್ಲಿ ಅಷ್ಟಾವಶೇಷವಾಗಿ ಕಷಾಯವ ಮಾಡಿ ವರಹತೂಕ ಹಿಪ್ಪಲಿ ಚೂರ್ಣವೆರಸಿಕೊಳ್ಳಲು ಗ್ರಹಣಿ, ಅತಿಸಾರ, ಅಗ್ನಿಮಾಂದ್ಯ, ಗುದಧ್ವಂಶ—ಇವೆಲ್ಲ ಪರಿಹರಮಕ್ಕುಂ. ೫

ಕುಕ್ಕವೇಗವೇಳ್ಳು, ಮಾರೆಡುವೇಳ್ಳು, ಪಿಪ್ಪಲಮೂಲಂ ಇಂತ ಸಮಾಂಶಂ ಗೂರ್ಚಿ ಕಷಾಯಂ ಕಾಚಿ ಇಚ್ಚಿತೆ ಕಡುಪು ಪೋಯೇದಿ, ಗ್ರಹಣಿಲು ಸಹ ಮಾನುನು. ೬

ಪೆದ್ದಮಾನು ಚಕ್ಕ, ಶುಂಠಿ, ಅತಿವಜ, ತುಂಗಮುಸ್ತಲು, ಮಾರೆಡು ಪಂಡು, ದಾಡಿಂಬಚಿಪ್ಪಲು, ಇಂತ ಸಮಾಂಶಂ ಕಷಾಯಂ ಬೆಟ್ಟಿ ಈಯುನು ಗ್ರಹಣಿ, ಅತಿಸಾರಮುಲು, ಜ್ವರಾತಿಸಾರಮುಲು ಸಹ ಮಾನುನು. ೭

ಕಮಿಕೆಡು, ತೆಲ್ಲತುಂಮಿಚಕ್ಕ, ಮಿರಿಯಾಲು ಚಾರೆಡು, ಓಮಮು ಪಿಡಿಕೆಡು, ವೆಲ್ಲುಲ್ಲಿಗಡ್ಡಲು, ವಾಯಿವಿಳಂಗಂ ದುಡ್ಡೆತ್ತು, ಮೆಂತ್ಯಂ ದು ೧ ತೂನು ಧಂಗಿಯಾಕು ಪಿಡಿಕೆಡು ಇವಿನಿ ಸಮಾಂಶಂ ಕಷಾಯಂಬೆಟ್ಟಿ ಜಾಕಾಯಿ, ಜಾಪತ್ರ, ಲವಂಗಂ, ಮುಲುಗೊಬ್ಬಿವಿತ್ತುಲು, ಓಮಮು ಇಂತ ತೆಚ್ಚಿ ಪಚ್ಚಿ ಜೇಸಿ ಆ ಕಷಾಯಮುತೊ ಈಯುನು ಗ್ರಹಣಿ ನಿಲುಚುನು. ೮

## ಚೂರ್ಣಗಳು—ದಾಡಿಮಾಷ್ಟಕ.

ತವಕ್ಷೀರ ೨ ವರಹತೂಕ, ಏಲಕ್ಕಿ, ಲವಂಗದ ತೊಕ್ಕು, ಲವಂಗಪತ್ರೆ, ನಾಗ

ಕೇಸರಿ, ಇವು ಪ್ರತ್ಯೇಕ ೩ ಹೊನ್ನುತೂಕ, ವಾದಕ್ಕಿ, ಕೊತ್ತಂಬರಿ, ಜೀರಿಗೆ, ಹಿಪ್ಪಲಿಮೂಲ, ಶುಂಠಿ, ಮೆಣಸು ಇವುಬಗೆ ೧ ಕ್ಕೆ ಗ ೧॥ ತೂಕ, ಒಣಗಿದ ದಾಳಿಂಬದ ಸಿಪ್ಪೆ ೮ ಹಲ, ಸಕ್ಕರೆ ಎಂಟು ಹಲ ಈರೀತಿಯಲ್ಲಿ ಕೂಡಿ ಚೂರ್ಣವ ಮಾಡಿ ಪ್ರತಿದಿನ ಉದಯದಲ್ಲಿ ಸೇವಿಸಲು ಸಕಲ ಗ್ರಹಣಿ ಹರ. ೧

ಅಳಿಲೆಕಾಯಿ, ಹಿಪ್ಪಲಿ, ಶುಂಠಿ, ತಪಸಿನಾರು, ವಾಯಿವಿಳಂಗ, ಚಿತ್ರಮೂಲ ಇವಂ ಸಮಾಂಶವಾಗಿ ಚೂರ್ಣಿಸಿ ಸಮಸಕ್ಕರೆ ವೆರಸಿ ಉದಯದಲ್ಲಿ ಸೇವಿಸೆ ಗ್ರಹಣಿ, ಅಗ್ನಿಮಾಂದ್ಯ ಸಹ ಮಾಣ್ಗುಂ. ೨

## ವೈಶ್ವಾನರ ಚೂರ್ಣ

ಶುಂಠಿ, ಹಿಪ್ಪಲಿ, ಮೆಣಸು, ಏಲಕ್ಕಿ, ಇಂಗು, ಗಂಟುಭಾರಂಗಿ, [1]ಪುಷ್ಕರಮೂಲ,[1] ಬಿಡುಲವಣ, ಯವಕ್ಷಾರ, ಅಗುಳುಶುಂಠಿ, ಜೀರಿಗೆ, ವಾದಕ್ಕಿ, ಚವ್ಯ, ಚಿತ್ರಮೂಲ, ಗಜಹಿಪ್ಪಲಿ, ಲವಂಗದ ತೊಕ್ಕು, ಸೈಂಧವ, ಹಿಪ್ಪಲಿಮೂಲ, ಬಿಳಿಸಾಸುವೆ—ಇವಂ ಸಮಾಂಶವಾಗಿ ದಿನಪ್ರತಿಯೂ ೪ ವರಹ ತೂಕ ತುಪ್ಪದಿಂ ಸೇವಿಸೆ ಗ್ರಹಣಿ, ಅಗ್ನಿಮಾಂದ್ಯ, ಹೊಟ್ಟೆಶೂಲೆ ಸಹ ಪರಿಹರಮಕ್ಕು ೩

## ಪಿಪ್ಪಲ್ಯಾದಿ ಚೂರ್ಣ

ಹಿಪ್ಪಲಿ, ಶುಂಠಿ, ಮೆಣಸು, ವಾದಕ್ಕಿ, ಚಿತ್ರಮೂಲ, ಇಂಗು, ಗಂಟುಭಾರಂಗಿ, ವಾಯಿವಿಳಂಗ, ಬಿಡಯಿಲವಣ, ಚವ್ಯ, ಸೈಂಧವಲವಣ, ಯವಕ್ಷಾರ, ಮುಳ್ಳುಗೋರಟೆಯ ಬೇರಿನ ತೊಕ್ಕು ಇವನೆಲ್ಲ ಸಮಾಂಶವಾಗಿ ಚೂರ್ಣಿಸಿ ವಸ್ತ್ರಗಾಳಿತಂ ಮಾಡಿ ದಿನಪ್ರತಿಯೂ ಉದಯಕಾಲದಲ್ಲಿ ನಾಲ್ಕುವರಹ ತೂಕವಂ ಸೇವಿಸೆ ಆಮಗ್ರಹಣಿ, ಅಗ್ನಿಮಾಂದ್ಯ, ಶೂಲೆ ಸಹ ಮಾಣ್ಗುಂ. ೪

## ಚಿತ್ರಕಾದಿ ಚೂರ್ಣ

ಚಿತ್ರಮೂಲ, ಅತಿಬಜೆ, ಜಂಗಲಕೋಷ್ಟ, ಇಂಗು, ಸಂವತ್ಸರಲವಣ, ಬಜೆ, ಹಿಪ್ಪಲಿ, ಗಂಟುಭಾರಂಗಿ, ಪುಷ್ಕರಮೂಲ, ವಾದಕ್ಕಿ, ಶುಂಠಿ. ಯವಕ್ಷಾರ, ವಾಯಿವಿಳಂಗ, ಮೆಣಸು, ಹಿಪ್ಪಲಿಮೂಲ ಇವೆಲ್ಲ ಸಮಾಂಶವಾಗಿ ಇಷ್ಟರ ಸಮ ಅಳಿಲೆಕಾಯಿ ಇವೆಲ್ಲವಂ ಪ್ರತ್ಯೇಕ ಚೂರ್ಣಿಸಿ ವಸ್ತ್ರಗಾಳಿತವಂ ಮಾಡಿ ದಿನಪ್ರತಿಯೂ ಪ್ರಾತಃಕಾಲದಲ್ಲಿ ೪ ವರಹ ತೂಕವಂ ಅಳಿಲೆಕಾಯ ಕಷಾಯದಿಂದಾಗಲಿ ಶುಂಠಿ ಕಷಾಯದಿಂದಾಗಲಿ, ಬಿಸಿನೀರಿಂದಾಗಲಿ, ಮಜ್ಜಿಗೆಯಿಂದಾಗಲಿ, ಹಸುವಿನ ತುಪ್ಪದಲ್ಲಾಗಲಿ ತೆಗೆದುಕೊಳ್ಳಲು ಗ್ರಹಣಿ, ಅಗ್ನಿಮಾಂದ್ಯ, ಆಧ್ಮಾನ, ವಾತಶೂಲೆ ಸಹ ಮಾಣ್ಗುಂ. ೫

---

[1] (ಗ) ಪ್ರತಿಯಲ್ಲಿಲ್ಲ.

## [1]ಅನಂತಾದಿ[1] ಚೂರ್ಣ

ತುರುಚನ ಬೇರಿನ ತೊಕ್ಕು, ಅತಿಬಜೆ, ಅಗುಳುಶುಂಠಿ, ಲವಂಗ, ತಾವರೆ ಕೇಸರ, ವಾದಕ್ಕಿ, ಕುರಾಸಾನಿ ಓಮು, ಗಜ್ಜುಗದ ತಿರುಳು, ಕೊಡಸಿಗೆಬೀಜ, ಧಾತಕೀಕುಸುಮ, ಕೊಡನಾರಿಗೆಡ್ಡೆ, ಕೋಲುಮುರುಕನ ಚಕ್ಕೆ, ದಾಳಿಂಬದ ಪಂಚಾಂಗ, ನಾಗಕೇಸರ, ಹೆಮ್ಮರದ ತೊಕ್ಕು, ಎಲವದ ಹಗಿನು, ಬೇಲದ ಹಗಿನು, ಹುಣಿಸೆಬೀಜದ ಹುರುಕು, ಈ ಬೇರಿನ ತೊಕ್ಕು, [2]ಬೆಲ್ಲವತ್ತದ ಹೀಚು, ಬಿಳಿಹಾಲೆ ತೊಕ್ಕು,[2] ಕಾಚು, ನೇರಿಲ ಬೀಜ, ಮಾವಿನ ಬೀಜದ ತಿರುಳು, ಸ್ಯೆಂಧವ, ಲವಂಗ, ಹಿಪ್ಪಲಿಮೂಲ, ನಾರಂಬೇಳಿಯ ಬೇರಿನ ತೊಕ್ಕು, ಇವು ಪ್ರತ್ಯೇಕ ೪ ವರಹ ತೂಕವಂ ಚೂರ್ಣಿಸಿ ಎರಡು ಹಲ ಗಜ್ಜುಗದ ಸೊಪ್ಪಿನ ರಸದಲ್ಲಿ ಭಾವನೆಯುಂಕೊಟ್ಟು ನೆಳಲಲ್ಲಿ ಒಣಗಿಸಿ ದಿನಂಪ್ರತಿ ಉದಯದಲ್ಲಿ ೪ ವರಹ ತೂಕವಂ ಕಟ್ಟು ಮೊಸರಿಂದಾಗಲಿ, ಮಜ್ಜಿಗೆ, ಜೇನುತುಪ್ಪ, ಹಸಿಶುಂಠಿ ರಸಗಳಿಂದಾಗಲಿ ಕೊಡಲು ಗ್ರಹಣಿ, ಅತಿಸಾರ, ಉದರಶೂಲೆ, ಅಗ್ನಿಮಾಂದ್ಯ ಸಹ ಗುಣಮಕ್ಕು. ೬

## ಅಗ್ನಿಮುಖ ಚೂರ್ಣ

ಇಂಗು[3]೧[3]ಭಾಗ, ವಿಳಂಗ ೩ ಭಾಗ, ಬಜೆ ೨ ಭಾಗ, ಸ್ಯೆಂಧವ ೪ ಭಾಗ, ವಾದಕ್ಕಿ ೫ ಭಾಗ, ಅಳಿಲೆಕಾಯಿ ೬ ಭಾಗ, ಚಿತ್ರಮೂಲ ೭ ಭಾಗ, ಚಂಗಲ ಕೋಷ್ಟ ೮ ಭಾಗ, ಹಿಪ್ಪಲಿ ೯ ಭಾಗ, ಜೀರಿಗೆ ೧೦ ಭಾಗ, ಈ ಪ್ರಕಾರದಿಂ ಇದನೆಲ್ಲ ಚೂರ್ಣಿಸಿ ವಸ್ತ್ರಗಾಳಿತವಂಮಾಡಿ ಪ್ರತಿದಿನವೂ ಉದಯಕಾಲದಲ್ಲಿ ೪ ವರಹ ತೂಕ ಚೂರ್ಣವಂ ಬಿಸಿನೀರಿಂದಾದರು, ಮೊಸರಿನಿಂದಾದರು, ಜೇನುತುಪ್ಪದಿಂದಾದರು ಸೇವಿಸೆ ಸಕಲ ಗ್ರಹಣಿ, ಅಜೀರ್ಣ, ಮಂದಾಗ್ನಿ, ಪ್ಲೀಹ, ಮಹೋದರ ಸಹ ಪರಿಹಾರಮಕ್ಕುಂ. ೭

## ಕ್ಷಾರದ್ವಯಾದಿ ಚೂರ್ಣ

ಯವಕ್ಷಾರಂ, ಸರ್ಜ್ಜಕ್ಷಾರಂ, ಶುಂಠಿ, ಹಿಪ್ಪಳು, ಮಿರಿಯಾಲು, ಲವಂಗೆಮುಲು, ಕರಕ್ಕಾಯಲು, ಅಗುಲುಶುಂಠಿ, ನೇಲಮುಲುಕ, ಪೆದ್ದಮುಲುಕ, ಮಾಮಿಡಿಗಿಂಜ, ಧಾತಕೀಕುಸುಮಂ, ತುಂಗಮುಸ್ತಲು, ವೆಂಪರಿವೇಳ್ಳು, ಜಟಾಮಾಂಸಿ, ಪಚ್ಚ, ಅಜಾಮೋದಂ, ಗಚ್ಚಕಾಯ ಪಪ್ಪು, ಕೋಲುಮುರುಕ ಚಕ್ಕ, ಜಿಲಕರ, ಓಮಂ, ದಾಳಿಂಬಮೂಲಂ, ಪಿಪ್ಪಲಿಮೂಲಂ, ಚವ್ಯಂ, ಗಲಜರ, ತೆಲ್ಲಗಲಜರ, ಇವಿನ್ನಿ ಸಮಾಂಶಂ ಚೂರ್ಣಂಜೇಸಿ ಮೂಡುವೇಳ್ಳಕು ವಚ್ಚಿನಂತ ಚೂರ್ಣಂ ತೀಸುಕೊನಿ ಮಜ್ಜಿಗತೋ ನೀಯುಚ್ಚಿನು ಗ್ರಹಣಿ, ಅತಿಸಾರಮುಲು ಸಹ ಮಾನುನು. ೮

---

[1] (ಗ) ಅಗ್ನಿಮುಖ [2] (ಗ) ಪ್ರತಿಯಲ್ಲಿಲ್ಲ. [3] (ಗ) ೯೦.

## ಪರಳಾದಿ ಚೂರ್ಣಂ

ಲವಂಗಮುಲು, ಪಿಪ್ಪಳ್ಳು, ಧಾತಕೀಕುಸುಮಂ, ಓಮಂ, ಚಿಂತಗಿಂಜಲು, ಮಾಮಿಡಿಗಿಂಜ, ಗಜ್ಜಕಾಯಪಪ್ಪು, ಕೋಡೀಶವಿತ್ತುಲು, ಜಿಲಕರ, ತುಂಗಮುಸ್ತಲು, ಶುಂಠಿ, ವಜ, ಚಂದ್ರಸಾಸುಪಲು, ವಾಯಿವಿಳಂಗಮುಲು, ಮಾರೆಡುಪಂಡು, ಸ್ಯೆಂಧವಲವಣಂ ಇವಿನಿ ಸಮಭಾಗಂ ಚೂರ್ಣಂಜೇಸಿ ತೇನೆತೊ ತೀಸುಕೊಂಟೆ ಗ್ರಹಣೀವ್ಯಾಧುಲು ಗುಣಮೌನು. ೯

## ಕಪಿತ್ಥಾಷ್ಟಕಂ

ಓಮಂ, ಪಿಪ್ಪಲಿಮೂಲಂ, ಲವಂಗಚಕ್ಕ, ಏಲಕ್ಕುಲು, ಲವಂಗಪತ್ರ, ನಾಗಕೇಸರಂ, ಶುಂಠಿ, ಮಿರಿಯಾಲು, ಲವಂಗಮುಲು, ಚಿತ್ರಮೂಲಂ, ಜಿಲಕರ, ಕೊತ್ತುಮ್ಮುಲು, ಸಂವತ್ಸರಲವಣಂ ಇವಿನಿ ಸಮಾಂಶಮುಗ ತುಂಗಗಡ್ಡಲು, ಅಗಿಲು ಶುಂಠಿ, ಮಂಜಿಷ್ಠ, ಕೋಡೀಶಚಕ್ಕ, ಇವಿ ವಗಕು ೪ ಪಲಮುಲು, ಚಿಂತಗಿಂಜಲ ಬೊದ್ದಿಡ ೬ ಎತ್ತುಲು, ಧಾತಕೀಕುಸುಮಂ ೧೬ ಎತ್ತುಲು, [1]ಪಿಪ್ಪಳ್ಳು ೬ ಎತ್ತುಲು,[1] ಮಾರೆಡುಪಂಡು ೬ ಎತ್ತುಲು, ದಾಡಿಂಬಕಾಯ ೬ ಎತ್ತುಲು, ಖುರಾಸಾನಿ ಓಮಂ ೬ ಎತ್ತುಲು, ಚಕ್ಕೆರ ೭೮ ಎತ್ತುಲು, ವೆಲಗಪಂಡ್ಲಗೊಜ್ಜಗ ೧೦೪ ಎತ್ತುಲು ಇವಿನ್ನಿ ಚೂರ್ಣಿಂಚಿ ಸೇವಿಂಚಿತೆನು ಗ್ರಹಣಿಲು, ಅತಿಸಾರಮುಲು ಮೊದಲ್ಯೆನವಿ ಮಾನುನು. ೧೦

## ಗಂಗಾಧರ ಚೂರ್ಣ

ಹಿರಿಮರದ ತೊಕ್ಕು, ಭದ್ರಮುಸ್ತೆ, ಶುಂಠಿ, ಧಾತಕೀಕುಸುಮ, ಬೆಲ್ಲವತ್ತದ ಹಣ್ಣು, ಲೋದ್ರ, ಕೊಡಸಿಗೆಬೀಜ, ಎಲವದ ಹಗಿನು, ಅತಿಬಜೆ, ಮುಡಿವಾಳ, ಅಗುಳುಶುಂಠಿ, ಹುಣಿಸೆಬೀಜ, ಮಾವಿನ ಬೀಜ, ಇವಂ ಚೂರ್ಣಿಸಿ ತುಪ್ಪದಿಂಕಲಸಿಯಾಗಲಿ ಅಕ್ಕಿಗಟ್ಟಿನಲ್ಲಿಯಾಗಲಿ ಸೇವಿಸೆ ಗ್ರಹಣೀರೋಗಂ ಮಾಣ್ಗುಂ. ೧೧

## ಲೇಹ್ಯಗಳು

ಪಾರಿಭಾತಕ ಹರೀತಕೀ, ಅಗುಳುಶುಂಠಿ, ಹೊಂಗೆನಾರು, ಚಿತ್ರಮೂಲ, ಮುಳ್ಳುಕೊಗ್ಗಿತೊಕ್ಕು, ತಪಸಿನಾರು, ಕೊಮ್ಮೆ ಬೇರು, ಕರಿದೇವು, ಹೆಮ್ಮರದ ಚಕ್ಕೆ, ನಾರಂಜೇಳೆ, ಬೆಳ್ಳುಳ್ಳಿ—ಇವು ಪ್ರತ್ಯೇಕ ೧೦ ಹಲವಂ ನಾಗಳ ನೀರಿನಲ್ಲಿ ಹಾಕಿ ಕಷಾಯವ ಕಾಸಿ ಚಾತುರ್ಭಾಗಾವಶೇಷವಾದುದರಲ್ಲಿ ಒಂದುಕೊಳಗ ಮೊಸರನ್ನೂ ಎರಡುಬಳ್ಳ ಅಂಬಿಲ ಸಹ ಹಸಿಸಿ ಸ್ಯೆಂಧವ ಚೂರ್ಣ ೧ ಬಳ್ಳವಂ ಹಾಕಿ ಕಡೆಗೋ

[1] (ಗ) ಪ್ರತಿಯಲ್ಲಿಲ್ಲ.

ಲಿಂದ ಕಡೆದು ಒಲೆಯ ಮೇಲೆತ್ತಿ ಅಳಲೆಕಾಯಿ ಇನ್ನೂರನು ಚೂರ್ಣವ ಮಾಡಿ ಇದರೊಳು ಹಾಕಿ ಅಳಲೆಕಾಯ ಸಮಭಾಗ ಶುಂಠಿ ಚೂರ್ಣವಕೂಡಿ ಎಣ್ಣೆ ಪಡಿ ೨, ತುಪ್ಪ ಪಡಿ ೨ ಸಹ ಹನಿಸಿ ಕಾಸಿ ಲೇಹ್ಯಪಾಕ ಬಂದ ಸಮಯದಲ್ಲಿ ಹಾಕುವ ಕಲ್ಕದ್ರವ್ಯಗಳು:—ಜೀರಿಗೆ, ಕರಿಜೀರಿಗೆ, ವಾದಕ್ಕಿ, ಇಂಗು, ಶುಂಠಿ, ಹಿಪ್ಪಲಿ, ಮೆಣಸು, ಯವಕ್ಷಾರ—ಇವು ಪ್ರತ್ಯೇಕ ಮೂರು ವರಹ ತೂಕವಂ ಚೂರ್ಣವಂ ಮಾಡಿ ಹಾಕಿ ಚೆನ್ನಾಗಿ ತೊಳಸಿ ಇಳುಹಿಕೊಂಡು ದೇಹಾನುಗುಣ್ಯವರಿತು ಪ್ರತಿದಿನವೂ ತೆಗೆದುಕೊಳ್ಳೆ ಗ್ರಹಣಿ, ಅಜೀರ್ಣ, ಆಮ, ಹೊಟ್ಟೆಶೂಲೆ, ಗುಲ್ಮಶೂಲೆ, ಮಹೋದರ, ಅರೋಚಕ, ಪೀನಸ, ಕ್ಷಯ, ವಾತ, ಶ್ವಾಸ, ಕುಷ್ಠಂ, ಅಗ್ನಿಮಾಂದ್ಯ ಇವಿಷ್ಟೂ ಪರಿಹರ.

## ಗ್ರಹಣೀ ಗಜಕೇಸರಿ ಲೇಹ್ಯ

ಹೊಂಗೆ ತೊಕ್ಕು, ತಪಸಿ ತೊಕ್ಕು, ಹೆಮ್ಮರದ ತೊಕ್ಕು, ಆಲದ ತೊಕ್ಕು, ಅರಳಿ ತೊಕ್ಕು, ಮಾವಿನ ತೊಕ್ಕು, ನೇರಿಲ ತೊಕ್ಕು, ಮುತ್ತುಗದ ತೊಕ್ಕು, ಕೊಡಸಿಗೆ ತೊಕ್ಕು, ಆವರಿಕೆ ತೊಕ್ಕು, ಬಿಳಿಹೂರಿ ತೊಕ್ಕು—ಇವು ಪ್ರತ್ಯೇಕ ೩೦ ಹಲ, ಜೇಲದ ತೊಕ್ಕು, ಹುಣಿಸೆತೊಕ್ಕು, ಲೋಧ್ರದ ಚಕ್ಕೆ, ಧಾತಕೀಕುಸುಮ, ಅಂಕೋಲೆತೊಕ್ಕು, ಚಿತ್ರವಮೂಲದ ಬೇರಿನ ತೊಕ್ಕು, ದಾಳಿಂಬದ ಚಕ್ಕೆ, ನುಗ್ಗೆ ಚಕ್ಕೆ, ಎಲಚಿ ಚಕ್ಕೆ, ಕಳ್ಳಂಗಡಲೆ ಬೇರಿನ ತೊಕ್ಕು, ಚಿಟಿಕೆ ಬೇರು, ತುರುಚಿನ ಬೇರು, ಮುಟ್ಟಿದರೆ, ಮುನಿವ, ಮುಳ್ಳುಕೊಗ್ಗೆ ಬೇರಿನ ತೊಕ್ಕು, ಗಜ್ಜುಗದ ಬೇರಿನ ತೊಕ್ಕು, ಉತ್ತರಣಿ ಬೇರು, ಕೆಂಪಿನ ಉತ್ತರಣಿ ಬೇರು—ಇವು ಪ್ರತ್ಯೇಕ ಏಳುಹಲ, ಕರಿಬೇವಿನ ಸೊಪ್ಪು, ನೆಲ್ಲಿ ಸಹಮೂಲ, ಹೆಮ್ಮರದ ಚಕ್ಕೆ, ಪುಳ್ಳಂಪುರುಚಿ ಸೊಪ್ಪು, ಇವು ಪ್ರತ್ಯೇಕ ಏಳು ಹಲ, ಇವನೆಲ್ಲ ಖಂಡುಗ ನೀರಿನಲ್ಲಿ ಹಾಕಿ ಕಷಾಯವ ಕಾಸಿ ಏಳುದಿನ ಪಾಕವ ಮಾಡಿ ಚಾತುರ್ಭಾಗಾವಶೇಷವಾಗಿ ನಿಲ್ಲಿಸಿ ಆದರಲ್ಲಿ ೨೦ ಹಲ ಹಳೆ ಬೆಲ್ಲವ ಹಾಕಿ ಮೃದ್ವಗ್ನಿಯಿಂದ ಪಾಕಮಾಡಿ ಪಾಕಬಂದ ಸಮಯದಲ್ಲಿ ಹಾಕುವ ಕಲ್ಕದ್ರವ್ಯ:—ಲೋಧ್ರದ ಚಕ್ಕೆ, ಮಾವಿನ ಬೀಜ, ವಾದಕ್ಕಿ, ಲವಂಗ, ಕೊಳವಳಿಕೆ ಬೀಜ, ಅತಿಬಜೆ, ಜಾಕಾಯಿ, ಬೆಲ್ಲವತ್ತದ ಹೀಚು, ಸಜ್ಜರಸ, ಚಿತ್ರಮೂಲ, ಕೊಡಸಿಗೆ ತೊಕ್ಕು, ಸರ್ಜ್ಯಕ್ಷಾರ, ಅಗುಳುಶುಂಠಿ, ಕೊಡನಾರಿಗೆಡ್ಡೆ, ಅರಗು, ಕರ್ಪೂರಶುಂಠಿ, ಬಿಳಿ ಸಾಸುವೆ, ಅಳಲೆಕಾಯಿ, ಇಂಗು, ಪಂಚಲವಣ, ಉಮ್ಮತ್ತದ ಬೀಜ, ಬೇಲದ ಹಗಿನು, ಏಲವದ ಹಗಿನು, ಕಗ್ಗಲೀ ಹಗಿನು, ಹಿಪ್ಪಲಮೂಲ, ಚವ್ಯ, ಗಜ್ಜುಗದ ತಿರುಳು, ಹತ್ತಿಹರಳಿನ ತಿರುಳು, ದಾಳಿಂಬದ ಹೀಚು, ವಿಜಯದ ಚೂರ್ಣ, ಹುಣಿಸೆಬೀಜದ ತೊಕ್ಕು—ಇವು ಪ್ರತ್ಯೇಕ ಗ ೬ ತೂಕ, ಏಲಕ್ಕಿ, ಲವಂಗ, ಲವಂಗದ ತೊಕ್ಕು, ನಾಗಕೇಸರಿ, ಸೈಂಧವ, ವಾಯುವಿಳಂಗ, ಮೆಣಸು, ಹಿಪ್ಪಲಿ, ಲಾವಂಚ

ಮುಡಿವಾಳ, ಶುಂಠಿ, ಕೊಡಸಿಗೆ ಬೀಜ, ಜೀರಿಗೆ—ಇವು ಬಗೆ ೧ಕ್ಕೆ ಗ೩ ತೂಕ, ತಾಳಕ, ಗಂಧಕ, ಬಿಳುಗಾರ, ಕಾಂತಭಸ್ಮ, ಲೋಹಭಸ್ಮ, ತಾಮ್ರಭಸ್ಮ, ಅಭ್ರಕ ಭಸ್ಮ, ಇವು ಪ್ರತ್ಯೇಕ ಗ೫ ತೂಕ, ದುದ್ದು ಗ೧೦ ತೂಕ,—ಇವನೆಲ್ಲ ಕ್ರಮದಿಂ ಚೂರ್ಣಿಸಿ ಲೇಹ್ಯಪಾಕವಾದ ಸಮಯದಲ್ಲಿ ಇಳುಹಿಕೊಂಡು ಆರಿದಮೇಲೆ ೩೪ ಹಲ ಜೇನುತುಪ್ಪವ ಹನಿಸಿ ಕಲಸಿ ಪ್ರಾತಃಕಾಲದಲ್ಲಿ ಮಧ್ಯಾಹ್ನ ಸಾಯಂಕಾಲಗಳಲ್ಲಿ ಸಹ ಸೇವಿಸಲು ವಾತಗ್ರಹಣಿ, ಪಿತ್ತಗ್ರಹಣಿ, ಶ್ಲೇಷ್ಮಗ್ರಹಣಿ, ಭಯಗ್ರಹಣಿ, ಶೋಕ ಗ್ರಹಣಿ, ಅಭಿಘಾತಗ್ರಹಣಿ, ಕೃತ್ರಿಮಗ್ರಹಣಿ, ವಿಷೂಚಿ, ಅತಿಸಾರ, ಶ್ವಾಸ, ಖಾಸ, ಕಾಮಾಲೆ, ಹೃದಯವ್ಯಾಧಿ, ಕುಷ್ಠವ್ಯಾಧಿ, ಅರೋಚಕ, ಕ್ರಿಮಿ, ಬಿಕ್ಕಳು, ಛರ್ದಿ, ಕ್ಷಯ, ವಾತಶ್ರೋಣಿತ, ಪಾಂಡುಕೃಶತ್ವ ಮುಂತಾದ ಸಕಲ ರೋಗ ಗಳೂ ಗುಣಮಕ್ಕುಂ. ೨

## ಪಂಚಕೋಲಾದಿ ಲೇಹ್ಯ

ಪಿಪ್ಪಲಿ, ಪಿಪ್ಪಲಿಮೂಲ, ಚವ್ಯ, ಚಿತ್ರಮೂಲ, ಶುಂಠಿ, ಕರಿಬೇವು, ಕಗ್ಗಲಿ ಚಕ್ಕೆ, ಹೊಂಗೆ ನಾರು, ತಪಸಿ ನಾರು, ಅಗುಳುಶುಂಠಿ, ಕೊಡಸಿಗೆ ತೊಕ್ಕು, ಕೊಡ ನಾರಿಗೆಡ್ಡೆ, ದೇವದಾರು—ಇವು ಪ್ರತ್ಯೇಕ ಒಂದು ಹಲವಂ ಜಜ್ಜುಗುಟ್ಟಿ ಇಷ್ಟರ ಸಮಾಂಶ ವಾದಕ್ಕಿ ಸಹ ನಾಗಳ ನೀರಿನಲ್ಲಿ ಹಾಕಿ ಕಷಾಯವಿಟ್ಟು ಅಷ್ಟಾವ ಶೇಷವಾಗಿ ಕಾಸಿ ಶೋಧಿಸಿಕೊಂಡು ಶೋಧಿಸಿದ ಹಳೆಬೆಲ್ಲ ೩೦ ಹಲವಂಹಾಕಿ ಲೇಹ್ಯಪಾಕದಲ್ಲಿಳುಹಿದಾಗ ಹಾಕುವ ಕಲ್ಕದ್ರವ್ಯ,—ಶುಂಠಿ, ಹಿಪ್ಪಲಿ, ಮೆಣಸು, ವಾದಕ್ಕಿ, ಸೈಂಧವ, ಜೀರಿಗೆ, ಕರಿಜೀರಿಗೆ, ಲವಂಗ, ಗಜ್ಜುಗದ ತಿರುಳು, ಜಾಯಿ ಕಾಯಿ, ಕಾಚು, ಎಲವದ ಹಗಿನು, ಧಾತಕೀ ಕುಸುಮ, ಇಂಗು—ಇವು ಪ್ರತ್ಯೇಕ ಗ ೮ ತೂಕ, ಏಲಕ್ಕಿ, ಲವಂಗಪತ್ರೆ, ಲವಂಗದ ತೊಕ್ಕು—ಇವು ಪ್ರತ್ಯೇಕ ಗ ೪ ತೂಕ ಸಹ ಇವೆಲ್ಲವಂ ಚೂರ್ಣಿಸಿ ಹಾಕಿ ಚೆನ್ನಾಗಿ ತೊಳಸಿ ಅದರಲ್ಲಿ ಮೂರು ಮಾನ ಜೇನುತುಪ್ಪವ ಹನಿಸಿ ಕಲಸಿ ತುಪ್ಪವುಂಡ ಮಡಕೆಯಲ್ಲಿರಿಸಿ ಒಂದುಪಕ್ಷ ಧಾನ್ಯಪುಟವಿಕ್ಕಿ ನಿತ್ಯವೂ ಪ್ರಾತಃಕಾಲದಲ್ಲಿ ನಾಲ್ಕು ವರಹ ತೂಕವಂ ಸೇವಿಸಲು ಗ್ರಹಣಿ, ಮಹೋದರ, ಖಾಸ, ಶ್ವಾಸ, ಗುಲ್ಮರೋಗ ಸಹ ಮಾಣ್ಗುಂ. ೩

## ವಜ್ರಹರೀತಕೀ ಲೇಹ್ಯ

ಚಿತ್ರಮೂಲದ ಸೊಪ್ಪಿನ ರಸ ೮ ಹಲ, ಗಂಟುಭಾರಂಗಿ, ಬಜೆ, ಶುಂಠಿ, ಜೀರಿಗೆ, ಭದ್ರಮುಸ್ತೆ, ಅಗುಳುಶುಂಠಿ, ಹೊಂಗೆ ತೊಕ್ಕು, ತಪಸಿ ತೊಕ್ಕು, ಮುಳ್ಳು ಕೊಗ್ಗಿ, ಮುಂಡಗಳ್ಳಿ ಸಹ ಈ ಬೇರುಗಳ ತೊಕ್ಕು, ರಾಸ್ನೆ, ಹೆಮ್ಮರದ ತೊಕ್ಕು, ಸೂರಣದ ಗೆಣಸು, ಕೊಮ್ಮೆ ಬೇರು, ಆಡಕೆಚಿಟ್ಟಿನ ಬೇರು, ಗೇರಹರಳು, ಹಿಪ್ಪಲಿ,

ಕುರುಟಿಗೆ ಬೇರು, ಆಡುಸೋಗೆಯ ಬೇರು, ಅಷಾಢಿ ಬೇರು, ಎಕ್ಕೆ ಬೇರು,— ಇವು ಪ್ರತ್ಯೇಕ ೮ ಹಲವನ್ನು ಹದಿನಾರು ಕೊಳಗ ನೀರಿನಲ್ಲಿ ಹಾಕಿ ಅಷ್ಟಾವ ಶೇಷವಾಗಿ ಕಷಾಯವ ಕಾಸಿ ಹಿಂದೆ ಹೇಳಿದ ಎರಡು ಬಗೆ ಸ್ವರಸಗಳ ಹಸಿಸಿ, ಅಳಲೆಕಾಯ ಪುಡಿ, ಸೈಂಧವ ಚೂರ್ಣ, ಶುಂಠಿಯ ಪುಡಿ—ಇವು ಪ್ರತ್ಯೇಕ ೬ ಹಲವ ಹಾಕಿ ಮೊಸರ ನೀರು ೨ ಬಳ್ಳ, ಎಣ್ಣೆ ಷಡಿ ೧ ಸಹ ಇವನೆಲ್ಲ ಕಷಾಯವ ಮಾಡಿಸಿ ಲೇಹ್ಯಪಾಕದಲ್ಲಿಳುಹಿ ತ್ರಾಣವರಿತು ದಿನಪ್ರತಿಯೂ ಪ್ರಾತಃಕಾಲದಲ್ಲಿ ಸೇವಿಸೆ ಗ್ರಹಣಿ, ಅಗ್ನಿಮಾಂದ್ಯ, ಆಮಶೂಲೆ, ಗುಲ್ಮಶೂಲೆ, ಮಹೋದರ, ಗೆಂಡೆ, ಇವೆಲ್ಲ ಪರಿಹರಮಕ್ಕುಂ. ೪

## ವಡಬಾನಲ ಹರೀತಕೀ ಲೇಹ್ಯ

ಸೂರಣ, ಚಿತ್ರಮೂಲ, ನರುವಲ, ಕೊವ್ಮೆ ಬೇರು, ಅಡಕೆಚಿಟ್ಟನ ಬೇರು, ಎಕ್ಕೆಯ ಬೇರು. ಉಳ್ಳಿ, ನರಲ, ಮಾದಿಗಾವರಿಕೆ ಬೇರು, ನೆಲಗುಳ್ಳ, ಬಳ್ಳಿಸೊಂಡೆ, ಆಡುಸೋಗೆ, ಶುಂಠಿ, ತೋಟಮಾದಳ, ಗರುಗ, ಹುಳಿನರಲೆ, ದೊಳದರಗ, ಚೇಳು ಬಾಲ, ತುರುಚ, ಮುಳ್ಳುಮುತ್ತಗ, ರೊಕ್ಕಿ, ಹೆರಳೆಸೊಪ್ಪು, ಕಳ್ಳಂಗಡಲೆ, ಇವಿಷ್ಟರಲ್ಲಿ ಸ್ವರಸಗಳ ತೆಗೆದು ಪ್ರತ್ಯೇಕ ಬಗೆ ೧ಕ್ಕೆ ೮ ಹಲ, ಮಜ್ಜಿಗೆ ೧ ಕೊಳಗ ಸಹ ಕೂಡಿಸಿ ಪಾಕವ ಮಾಡುವಾಗ ಹಾಕುವ ಕಲ್ಕದ್ರವ್ಯ ;—ಲವಂಗ, ಶುಂಠಿ, ಹಿಪ್ಪಲಿ, ಓವು, ರಾಸ್ಮೆ, ಸೈಂಧವ, ಬಿಡುಲವಣ, ಕಾಚುಲವಣ, ಚಿತ್ರಮೂಲ, ಅತಿಬಜೆ, ವಾಯಿ ವಿಳಂಗ, ಜೀರಿಗೆ, ಕರಿಜೀರಿಗೆ, ಗಜ್ಜುಗದ ತಿರುಳು, ಕೊಡನಾರಿಗೆಡ್ಡೆ, ಇಂಗು, ಕರಿಬೇವು, ಮೆಣಸು, ಹಿಪ್ಪಲಿ, ಈ ಮೂಲ,—ಇವು ಬಗೆ ೧ಕ್ಕೆ ಗ ೮ ತೂಕವಂ ಚೂರ್ಣಿಸಿ ಹಾಕಿ ಲೇಹ್ಯಪಾಕದಲ್ಲಿಳುಹಿಕೊಂಡು ಗಣಪತಿ ಕ್ಷೇತ್ರಗಾಲ ಪೂಜೆಯಂ ಮಾಡಿ ದಾನಧರ್ಮಗಳ ಮಾಡಿ ಒಂದು ಪಕ್ಷ ಧಾನ್ಯಪುಟವಿಟ್ಟು ದಿನಪ್ರತಿಯೂ ತೆಗೆದುಕೊಳ್ಳಲು ಗ್ರಹಣಿ, ಕೃಥ್ರ, ಶ್ವಾಸ, ಖಾಸ, ಭಗಂದರ ಮುಂತಾದ ಸಮಸ್ತ ರೋಗವೂ ಮಾಣ್ಗುಂ. ೫

## ಹಿಂಗುಪಾಠಾ ಹರೀತಕೀ ಲೇಹ್ಯ

ಇಂಗು, ಅಗುಳುಶುಂಠಿ, ಯವಕ್ಷಾರ, ಸೈಂಧವ, ಚಿತ್ರಮೂಲ, ಕೊವ್ಮೆ ಬೇರು, ಹೊಂಗೆನಾರು, ತಪಸಿನಾರು, ಜೀರಿಗೆ, ಕರಿಜೀರಿಗೆ, ಶುಂಠಿ, ಹಿಪ್ಪಲಿ, ಮೆಣಸು, ಬಜೆ, ಅಜಾಮೋದ, ಸೈಂಧವ ಲವಣ, ಇವು ಪ್ರತ್ಯೇಕ ೪ ವರಹ ತೂಕ, ಶುಂಠಿ ೫ ಹಲ, ಅಳಲೆಕಾಯಿ ೫ ಹಲ, ಸಹ ಚೂರ್ಣಿಸಿ ಒಂದು ಕೊಳಗ ಮಜ್ಜಿಗೆ ಯಲ್ಲಿ ಕಲಸಿ ಎರಡು ಬಳ್ಳ ಅಂಬಿಲವ ಹಸಿಸಿ ತಳ ಹತ್ತದ ಹಾಗೆ ತೊಳಸುತ್ತಾ ಲೇಹ್ಯ ಪಾಕವಾಗಿಳುಹಿ ಧಾನ್ಯಪುಟವಿಟ್ಟು ಒಂದು ಪಕ್ಷದಮೇಲೆ ತೆಗೆದು ಪ್ರಾತಃ

ಕಾಲದಲ್ಲಿ ಗ ೨ ತೂಕವಂ ಕೊಳ್ಳೆ ಗ್ರಹಣಿ, ಅಗ್ನಿಮಾಂದ್ಯ, ಪಾಂಡುರೋಗ, ಅರೋಚಕ, ಗುಲ್ಮ ಮುಂತಾದ ಸಮಸ್ತ ವ್ಯಾಧಿಗಳು ಪರಿಹರಮಕ್ಕು. ೭

## ಬಿಲ್ವಾದಿ ಲೇಹ್ಯ

ಬೆಲ್ಲವತ್ತದ ಬೇರು, ಹೆಮ್ಮರದ ತೊಕ್ಕು, ಕೊಡನಾರಿ ಗೆಡ್ಡೆ, ಅಗುಳುಶುಂಠಿ, ಹೊಂಗೆ ಒಳನಾರು, ತಪಸಿ ಒಳನಾರು, ಪಂಚಕೋಲ, ಕಿರುನೆಲ್ಲಿ, ಕರಿಬೇವು, ಬಿಳಿದುರುಚ, ಮುಳ್ಳುಕೊಗ್ಗಿ ತೊಕ್ಕು, ಇವು ಪ್ರತ್ಯೇಕ ೨ ಹಲ, ಇಷ್ಟರ ಸಮತೂಕ ವಾದಕ್ಕಿ ಸಹ ನಾಗಳ ನೀರಿನಲ್ಲಿ ಹಾಕಿ ಮೃದ್ವಗ್ನಿಯಿಂದ ಚತುರ್ಥಾಗಾವಶೇಷ ವಾಗಿ ಕಷಾಯವ ಕಾಸಿ ಶೋಧಿಸಿಕೊಂಡು ಶೋಧಿಸಿದ ಹಳೆ ಬೆಲ್ಲ ೨೪ ಹಲವಂ ಹಾಕಿ ಇದರೊಳಗೆ ಲವಂಗ, ಶುಂಠಿ, ಮಾವಿನ ಬೀಜದ ತಿರುಳು, ಸೈಂಧವ, ಹಿಪ್ಪಲಿ, ಎಲವದ ಹಗಿನು, ಜೀರಿಗೆ, ಕರಿಜೀರಿಗೆ, ವಾದಕ್ಕಿ, ಭಂಗಿ, ಧಾತಕೀಕುಸುಮ, ಬೆಲ್ಲವತ್ತದ ಹೀಚು ಇವು ಪ್ರತ್ಯೇಕ ೮ ತೂಕವಂ ಚೂರ್ಣಿಸಿ ಹಾಕಿ ಸಮರಸವಾಗಿ ತೊಳಸಿ ಪ್ರಾತಃಕಾಲದಲ್ಲಿ ೪ ವರಹ ತೂಕವಂ ದಿನಪ್ರತಿಯೂ ತಗೆದುಕೊಳ್ಳೆ ಗ್ರಹಣಿ, ಅಗ್ನಿಮಾಂದ್ಯ, ಗುಲ್ಮ, ಹೊಟ್ಟೆಯುಬ್ಬರ ಸಹ ಮಾಣ್ಗುಂ. ೭

ಹೆಮ್ಮರದ ತೊಕ್ಕನು ಚೆನ್ನಾಗಿ ಕತ್ತರಿಸಿ ಒರಲೊಳು ಹಾಕಿ ಇಡಿದು ಒಂದು ಕೊಳಗ ರಸವಂ ತೆಗೆದುಕೊಂಡು ಶೋಧಿಸಿ ಒಂದು ಭಾಂಡದಲ್ಲಿ ಹನಿಸಿ ಒಲೆಯ ಮೇಲಿಟ್ಟು ಕಾಸಿ ಲೇಹ್ಯ ಪಾಕದಲ್ಲಿಳುಹಿ ಹಾಕುವ ಕಲ್ಕದ್ರವ್ಯ:—ಧಾತಕೀ ಕುಸುಮ, ಲೋಧ್ರದ ಚಕ್ಕೆ, ಬೆಲ್ಲವತ್ತದ ಹೀಚು, ಎಲವದ ಹಗಿನು, ಸೈಂಧವ, ಕಾಚು, ಅತಿಬಜೆ, ವಾದಕ್ಕಿ ಕೊಡಸಿಗೆ ಬೀಜ, ಯವಕ್ಷಾರ, ಸರ್ಜಕ್ಷಾರ, ದಾಳಿಂಬದ ಕಾಯಿಸಿಪ್ಪೆ, ಜೀರಿಗೆ, ಕೊಡನಾರಿಗೆಡ್ಡೆ, ಶುಂಠಿ, ಹಿಪ್ಪಲಿ, ಮೆಣಸು, ನೇರಿಲ ಬೀಜ, ಮಾವಿನ ಓಟೆಯ ತಿರುಳು, ಲವಂಗ, ಈ ಪತ್ರೆ, ಇವು ಪ್ರತ್ಯೇಕ ೨ ಹಲವಂ ಚೂರ್ಣಿಸಿ ಹಾಕಿ ಸಮರಸವಾಗುವಂತೆ ತೊಳಸಿ ಜೇನುತುಪ್ಪ ೨ ಹಲವಂ ಹನಿಸಿ ಪ್ರತಿದಿನವೂ ಉದಯಕಾಲದಲ್ಲಿ ೪ ವರಹ ತೂಕವಂ ಎಣ್ಣೆಯಿಂ ಸೇವಿಸೆ ಸಮಸ್ತ ಗ್ರಹಣಿ, ಅಗ್ನಿಮಾಂದ್ಯ ಸಹ ಮಾಣ್ಗುಂ. ೮

## ಅಸಾಧ್ಯ ಗ್ರಹಣೀ ಲೇಹ್ಯಂ

ಮಾವಿಡಿ ಚಕ್ಕರಸಂ, ಬಲುಸುವೇಳ್ಳುರಸಂ, ಮೋಡಿವೇಳ್ಳುರಸಂ, ಪೆದ್ದ ಮಾನಿ ಚಕ್ಕರಸಂ, ಇವಿ ಪ್ರತ್ಯೇಕಂ ೪ ಸೇರು, ಕಾಚು, ನೀರು ಗೊಡಿಮಿಡಿ ವಿತ್ತುಲು, ಜಾಜಿಕಾಯಿ, [1] ಬಾಗಿಕಾಯಲು, [1] ಮಾರೆಡು ಪಂಡು, ಅತಿವಜ, ಜಿಲಕರ, ಶುಂಠಿ, ಮಿರಿಯಾಲು ಇವಿ ಪ್ರತ್ಯೇಕಂ ೪ ವರಹ ಎತ್ತು ಲೆಕ್ಕಮುನ ಕೂರ್ಚಿ ಅಂದುಲೋನ ಲೇಹ್ಯಪಾಕಮುಗ ವಂಡಿ ವಡಿಯಗಟ್ಟಿ ಗ ೨ ತೂನು ಪೆರುಗುತೂ

---

[1] (ಗ) ಪ್ರತಿಯಲ್ಲಿಲ್ಲ.

ಈಯುನು ಅಸಾಧ್ಯ ಗ್ರಹಣಿಲು, ರಕ್ತಗ್ರಹಣಿಲು, ಆಮಗ್ರಹಣಿಲು ಸಹ ಮಾನುನು. ೯

## ಘೃತಗಳು

ಸಬ್ಬಸಿಗೆ ಬೀಜ, ಕೊತ್ತುಂಬರಿ, ಅಗುಳು ಶುಂಠಿ, ದೆಲ್ಲವತ್ತದ ತಿರುಳು, ಶುಂಠಿ, ಚಿತ್ರಮೂಲ, ಓವ್ರ, ಹಿಪ್ಪಲಿ, ಈ ಮೂಲ,. ಚವ್ಯ. ಇವಂ ಸಣ್ಣನಾಗರೆದು ತುಪ್ಪದಲ್ಲಿ ಕೂಡಿಸಿ ನಾಲ್ಕುಮಡಿ ಮೊಸರ ಹೊಯ್ದು ಈ ಮೊಸರಿನ ಸಮಾನ ಪುಲ್ಲಂ ಪುರುಚೆ ರಸವ ಹೊಯ್ದು ತುಪ್ಪನಿಲಲಟ್ಟು. [1] ಎರಡು [1] ವರಹ ತೂಕವಂ ಪ್ರತಿದಿನವೂ ಉದಯ ಕಾಲದಲ್ಲಿ ಸೇವಿಸೆ ಗ್ರಹಣಿ, ಮೂಲರೋಗ, ನನೆಹೊರ ಟುದು, ಯೋನಿಶೂಲೆ, ಹೊಟ್ಟೆಯುಬ್ಬರ ಸಹ ಪ್ರವಾಹ ರೂಪವಾಗಿ ಹೋಗುವ ಅತಿಸಾರ ಸಹ ಮಾಣ್ಗುಂ. ೧

ತಪಸಿನಾರು ಎರಡು ಬಳ್ಳದಷ್ಟನು ಎರಡುಕೊಳಗ ನೀರಿನಲ್ಲಿ ಹಾಕಿ ಅಷ್ಟಾವಶೇಷವಾಗಿ ಐದು ದಿನ ಕಷಾಯಕಾಸಿ ಶುಂಠಿ ೧ ಬಳ್ಳವನ್ನು ೨ ಕೊಳಗ ನೀರಿನಲ್ಲಿ ಹಾಕಿ ಒಂದು ದಿವಸವೆಲ್ಲ ಕಷಾಯಕಾಸಿ ಈ ಎರಡು ಕಷಾಯವಂ ಶೋಧಿಸಿ ಒಂದಾಗಿ ಕೂಡಿಸಿ ಅದರಲ್ಲಿ ಹಸುವಿನ ತುಪ್ಪವಂ ೧ ಬಳ್ಳ, ಹಾಲು ಒಂದು ಬಳ್ಳ ಸಹ ಹನಿಸಿ ಅದರಲ್ಲಿ ಹಾಕುವ ಕಲ್ಕದ್ರವ್ಯ:—ಶುಂಠಿ, ಹಿಪ್ಪಲಿ ಮೆಣಸು, ಚಿತ್ರಮೂಲ, ಅಗುಳುಶುಂಠಿ, ಅರಿಸಿನ, ಗಂಟುಭಾರಂಗಿ, ಹಿಪ್ಪಲಿ ಮೂಲ, ವಾಯಿವಿಳಂಗ, ಇಂಗು, ಅತಿಬಜೆ, ಕುರುಟಿಗೆ ಬೇರು, ಕೊಡನಾರಿ ಗೆಡ್ಡೆ, ಸೈಂಧವ ಇವು ಪ್ರತ್ಯೇಕ ಗ ೪ ತೂಕವಂ ಚೂರ್ಣಿಸಿ ವಸ್ತ್ರಗಾಳಿತವಂ ಮಾಡಿ ಆ ತುಪ್ಪದಲ್ಲಿ ಕದಡಿ ಐದುದಿನ ಮಂದಾಗ್ನಿಯಲ್ಲಿ ಪಾಕವಮಾಡಿ ತುಪ್ಪ ಉಳಿವಂತೆ ಕಾಸಿ ಇಳುಹಿ ಶೋಧಿಸಿಕೊಂಡು ನಿತ್ಯವೂ ಉದಯಕಾಲದಲ್ಲಿ ಗ. ೨ ವರಹ ತೂಕವಂ ಸೇವಿಸಲು ಗ್ರಹಣಿ. ಅಗ್ನಿಮಾಂದ್ಯ, ಜ್ವರಾತಿಸಾರ ಸಹ ಪರಿ ಹರಮಕ್ಕು. ೨

ಅಗುಳು ಶುಂಠಿ, ಚವ್ಯ, ಹೊಂಗೆ ಒಳನಾರು, ತಪಸಿನಾರು, ಮುಳ್ಳುಕೊಗ್ಗಿ ಬೇರು, ಚಿತ್ರಮೂಲ, ಕೊಡನಾರಿ ಗೆಡ್ಡೆ, ಇವು ಪ್ರತ್ಯೇಕ ೪ ಹಲವಂ ನಾಗಳ ನೀರಿನಲ್ಲಿ ಹಾಕಿ ಚತುರ್ಥಾಗಾವಶೇಷವಾಗಿ ಕಾಸಿ ಎರಡುಮಾನ ಹಸಿಶುಂಠಿ ರಸವಂ ಹೊಯ್ದು ಬಳ್ಳ ಹಸುವಿನ ತುಪ್ಪವ ಹನಿಸಿ ಪಾಕವ ಮಾಡುವಾಗ ಹಾಕುವ ಕಲ್ಕದ್ರವ್ಯ:—ಸೈಂಧವ, ಪಂಚಕೋಲ, ಅತಿಬಜೆ, ಸದ್ಯಕ್ಷಾರ, ಯವಕ್ಷಾರ, ಇಂಗು, ಕೊಡನಾರಿಗೆಡ್ಡೆ, ಜೀರಿಗೆ, ಕರಿಜೀರಿಗೆ, ವಾದಕ್ಕಿ—ಇವು ಪ್ರತ್ಯೇಕ ೪ ವರಹ ತೂಕವಂ ಚೂರ್ಣಿಸಿ ಹಾಕಿ ಪಾಕದಲ್ಲಿಳುಹಿ ದಿನ ಪ್ರತಿಯೂ ಉದಯಕಾಲದಲ್ಲಿ ಗ ೨ ತೂಕವಂ ಸೇವಿಸೆ ಗ್ರಹಣಿ, ಅಗ್ನಿಮಾಂದ್ಯ, ಗುಲ್ಮ, ಸ್ವರಭಂಗ ಬಿಕ್ಕಳಿ ಸಹ ಗುಣಮಕ್ಕು. ೩

---

[1] (ಗ) ಪ್ರತಿಯಲ್ಲಿಲ್ಲ.

ವಾತಾತಕ ಹರೀತಕೀ, ಆಗುಳುಶುಂಠಿ, ಹೊಂಗೆ ಬೇರಿನ ತೊಕ್ಕು, ತಪಸಿ ತೊಕ್ಕು, ಚಿತ್ರಮೂಲದ ಬೇರಿನ ತೊಕ್ಕು, ಮುಳ್ಳುಕೊಗ್ಗಿ ಬೇರಿನ ತೊಕ್ಕು, ಕೊಮ್ಮೆ ಬೇರಿನ ತೊಕ್ಕು, ಕರಿಬೇವಿನ ಸೊಪ್ಪು, ಹೆಮ್ಮರದ ತೊಕ್ಕು, ನಾರಂಬೇಳೆಯ ಬೇರು, ಬೆಳ್ಳುಳ್ಳಿಯ ಸುಲಿದ ಬೇಳೆ, ಇವು ಪ್ರತ್ಯೇಕ ೧೦ ಹಲವಂ ನಾಗಳ ನೀರಿನಲ್ಲಿ ಹಾಕಿ ಕಷಾಯವಿಕ್ಕಿ ಚತುರ್ಥಾಗಾವಶೇಷವಾಗಿ ಶೋಧಿಸಿಕೊಂಡು ಆ ಕಷಾಯದಲ್ಲಿ ಮೊಸರು ೧ ಹಲವಂ ಹನಿಸಿ, ಅಂಬಿಲ ಅರ್ಧ ಹಲವಂ ಸಹ ಹೊಯ್ದು ಕಡೆದು ಒಲೆಯ ಮೇಲೆತ್ತಿ ಸೈಂಧವ ೧೨ ಹಲವಂ ಚೂರ್ಣಿಸಿ ಹಾಕಿ ಅಳಿಲೆ ಕಾಯನು ಚೂರ್ಣವಮಾಡಿ ಹಾಕಿ ಕೂಡಿ ಪಾಕವಮಾಡುವಾಗ ಶುಂಠಿ ೨೦ ಹಲವಂ ಚೂರ್ಣಿಸಿ ಹಾಕಿ ಮೃದ್ವಗ್ನಿಯಲ್ಲಿ ಲೇಹ್ಯಪಾಕವಂ ಮಾಡಿ ಇಳುಹಿದ ಮೇಲೆ ಜೀರಿಗೆ, ಓವು, ಕುರಾಸಾನಿ, ಇಂಗು, ಶುಂಠಿ, ಹಿಪ್ಪಲಿ, ಮೆಣಸು, ಯವಕ್ಷಾರ, ಇವು ಪ್ರತ್ಯೇಕ ೨ ಹಲವಂ ಚೂರ್ಣಿಸಿ ಹಾಕಿ ಆ ಮೇಲೆ ಒಂದುಮಾನ ತುಪ್ಪವಂ ಹನಿಸಿ ಒಂದುಮಾನ ಎಳ್ಳೆಣ್ಣೆಯಂ ಎರಸಿ ಸಮರಸವಾಗಿ ಸಟ್ಟುಗದಿಂದ ತೊಳಸಿ ತುಪ್ಪ ಪಳಗಿದ ಮಡಕೆಯಲ್ಲಿಟ್ಟು ಒಂದು ಪಕ್ಷ ಧಾನ್ಯಪುಟವಿಕ್ಕಿ ತೆಗೆದುಕೊಂಡು ದಿನಂಪ್ರತಿ ಉದಯಕಾಲದಲ್ಲಿ ಅಗ್ನಿಬಲವರಿತು ದೇಹತ್ರಾಣವರಿತು ಕ್ಷೀಣದೇಹದವರಿಗೆ ಗ ೨ ತೂಕ, ಬಲವುಳ್ಳ ಶರೀರಕ್ಕೆ ಗ ೪ ತೂಕವಂ ಕೊಡಲು ಗ್ರಹಣಿ, ಅಜೀರ್ಣ, ಅಗ್ನಿಮಾಂದ್ಯ, ಹಳೆ ಹೊಟ್ಟೆಬೇನೆ, ಗುಲ್ಮ, ಉದರವ್ಯಾಧಿ, ಅಡ್ಡಗೈಗೆಂಡೆ, ಶೋಭೆ, ಪಾಂಡುರೋಗ, ಶ್ವಾಸ, ಮೂಲ, ಮಲಬಂಧ, ಗ್ರಹಣಿ, ಮುಂತಾಗಿ ಗುಣಮಕ್ಕು[1]. ೪

## ತೈಲಗಳು—ದಧಿತೈಲಂ

ಅತಿವಜ, ಜಾಜಿಕಾಯಿ, ಆಗುಲುಶುಂಠಿ, ಸೈಂಧವಲವಣಂ, ದಾಡಿಂಬಕಾಯಿ, ಲವಂಗಂ, ಏಲಕ್ಕುಲು, ಪೆದ್ದಮಾಸಿಚಕ್ಕ, ಕೋಡೀಶ ಚಕ್ಕ, ಕೋಡೀಶ ವಿತ್ತುಲು, ಗಜಪಪ್ಪು, ಶುಂಠಿ, ಪಿಪ್ಪಳ್ಳು, ಓಮಂ, ಬೂರುಗ ಬಂಕ, ನೀರುಗೊಬ್ಬಿ ವಿತ್ತುಲು, ಮಾರೆಡುಪಂಡು, ವೆಲಗಕಾಯಿಲೋನಿಗಿಂಜ, ಮಾಮಿಡಿವಿತ್ತುಲೋನಿ ಪಪ್ಪು, ಚಿಲಕರ, ಪಿಪ್ಪಲಿಮೂಲಂ, ಇವಿ ಪ್ರತ್ಯೇಕಂ ಗ ೨ ಎತ್ತು ಲೆಕ್ಕಮುನ ಕೂರ್ಚಿ ನಿಮ್ಮಪಂಡ್ಲುರಸಮುನ ನೂರಿ ಪಡೆಡು ನೂನೆ, ಪಡೆಡು ಆವು ಪೆರುಗುನು ಕಲಯು ಜೋಸಿ ಆ ನೂರಿನ ಮಂದು ವೇಸಿ ಕಲಪಿ ಒಕ್ಕನಾಡು ಊರನಿಚ್ಚಿ ಮರಿನಾಡು ವಂಡಿಗನೆ ಪಕ್ವಮುನ ದಿಂಚಿ ಪೂಟಕು ಗ ೧ ತೂನು ಸೇವಿಂಚಿತೆ ಗ್ರಹಣಿ ರೋಗಮುಲು ಮಾನುನು. ೧

ಜೊಕ್ಕಿಯಾಕು ರಸಂ, ಪತ್ತಿಯಾಕು ರಸಂ, ದಾಡಿಂಬಾಕು ರಸಂ, ವೆಲಗಾಕುರಸಂ, ಈ ರಸಮುಲನು ಪೆರುಗುತೊ ಕೂಡಿಕೊನಿ ಮಿರಿಯಾಲು, ಇಂಗು,

---

1 (ಗ) ಪ್ರತಿಯಲ್ಲಿ ಬಿಟ್ಟುಹೋಗಿದೆ.

ಶುಂಠಿ, ಗಚ್ಚೆಪಪ್ಪು, ಮಾವಿಡಿಪಟ್ಟ, ಈ ಗಿಂಜಲು, ಜಾಯಿಕಾಯಿ, ಪೆದ್ದಮಾನಿ ಚಕ್ಕ, ಇಂತ ಆ ರಸಮುಲತೊ ನೂರಿ ನೂನೆ ಕೂಡ ಕಲಪಿ ಚಮುರು ಚಿಕ್ಕಗಾವಂಡಿ ವಡುಚುಕೊನಿ ಗಚ್ಚಿಡು ತ್ರಾಗಿತೆ ಗ್ರಹಣಿಲು ನಿಲುಚುನು. ೨

ಪಿಪ್ಪಲಿಮೂಲಂ, ಶುಂಠಿ, ಚಿತ್ರಮೂಲಂ, ವೆಲಗಪಟ್ಟ ಇವಿ ಪ್ರತ್ಯೇಕಮುಗ ಗ ೫ ತೂನು ವೇಸಿ ಎನುಮುಪೆರುಗು ಬೋಸಿ ನೂರಿ ಆ ನೂರಿನ ಮಂದುಲೊ ನಾಲ್ಗು ಅಡ್ಡೆಡು ಎನುಮುಪೆರುಗು, ಅಡ್ಡೆಡು ನೂನೆ ಕೂಡ ಬೋಸಿ ಅಂತ ಕಲಪಿ ರಂಗಳಿಂಚಿ ದೀಪಾಗ್ನಿ ಚೇತ ವಂಡಿ ರೆಂಡುನಾಳ್ಳು ಕಾಗುಗಾನು ಆ ನೂನೆ ಚಿಕ್ಕಗಾಕಾಚಿ ದಿಂಚಿ ಆ ನೂನೆ ಗ ೧ ಎತ್ತು ನಾಕಿತೆ ಸಮಸ್ತ ಗ್ರಹಣೀರೋಗ ಮುಲು ಮಾನುನು. ೩

## ಗುಳಿಗೆ—ಗ್ರಹಣೀಕವಾಟ ವಟಕ

ಆರಳಿ, ಆಲ, ಮಾವು, ನೇರಿಲು, ಅತ್ತಿ, ಬೂರ, ಕೊಡಸಿಗೆ ಈ ಬಗೆಯ ತೊಕ್ಕನ್ನು ಸಮಾನವಾಗಿ ಇಡಿದು, ನೀರಿನಲ್ಲಿ ಹಾಕಿ, ಒಂದು ಜಾವ ಬೇಯಿಸಿ ಆ ರಸವಂ ಹಿಂಡಿಕೊಂಡು ಶುಂಠಿ, ಹಿಪ್ಪಲಿ, ಮೆಣಸು, ಓವು, ಇಂಗು, ಕೊತ್ತುಂಬರಿ, ಜಾಕಾಯಿ, ಜಾಪತ್ರೆ, ಲವಂಗ, ಏಲಕ್ಕಿ, ಕುರಾಸಾನಿ ಇಷ್ಟು ಪ್ರತ್ಯೇಕ ಲ ತೂಕವಂ ಚೂರ್ಣಿಸಿ ಆ ರಸದೊಳು ಹಾಕಿ ಅತಿಪಾಕಂ ಮಾಡಿ ಅಡಕೆಯ ಪ್ರಮಾಣ ಗುಳಿಗೆಯಂ ಮಾಡಿ ನೆಳಲಲ್ಲಿ ಒಣಗಿಸಿ ಮಡಗಿಕೊಂಡು ಎಮ್ಮೆಯ ಕಟ್ಟು ಮೊಸರಿನಲ್ಲಿ ತೆಗೆದುಕೊಳ್ಳಲು ಸಕಲ ಗ್ರಹಣಿ ಗುಣವಹುದು. ಮಜ್ಜಿಗೆ ಮೊಸರು ಎಣ್ಣೆ ನಿಂಬೆ ಹಣ್ಣು ಸಾಸುವೆಗಳನುಣಬಹುದು. ೧

## ಕಪಿತ್ಥಾಷ್ಟಕ ವಟಕ

ಓವು, ಹಿಪ್ಪಲಿಮೂಲ, ಚಾತುರ್ಜಾತಕ, ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲ, ಕರ್ಪೂರ, ಶಿಲಾಜಿತು, ಜಾಕಾಯಿ, ಕೊತ್ತುಂಬರಿ, ಸಂವತ್ಸರಲವಣ ಇವನೆಲ್ಲ ಸಮಾನವಾಗಿ ಕೂಡಿ ಇಷ್ಟರ ಮೂರರಲ್ಲೊಂದು ಪಾಲು ಹುಣಿಸೆಬೀಜದ ಹೊಟ್ಟನು ಕೂಡಿಸಿ ಆಚಿದ ಹೂ, ದಾಳಿಂಬದ ಮೊಗ್ಗು, ಬಿಲ್ವಪತ್ರೆಕಾಯಿ ಇವನಲ್ಲ ಒಂದುಗೂಡಿ ಇಷ್ಟರ ಆರರೊಳೊಂದು ಪಾಲು ಸಕ್ಕರೆ, ಇದರ ಎಂಟರೊಳೊಂದು ಭಾಗ ಬೇಲದ ಮರದ ಮೇಣ ಇಷ್ಟನೂ ಮರ್ದಿಸಿ, ತಾರೆಕಾಯ ಪ್ರಮಾಣ ಗುಳಿಗೆಯಂಮಾಡಿ ತೆಗೆದುಕೊಳ್ಳಲು ಸಕಲವಾದ ಗ್ರಹಣಿಯೂ ಮಾಣ್ಗುಂ. ೧

ಮಾವಿನ ಬಿತ್ತಣದ ಬೇಳೆ, ಧಾತಕೀ ಕುಸುಮ, ಕಾವಿಕಲ್ಲು, ನೀಲಾಂಜನ, ಕೊಡಸಿಗೆ ಚಕ್ಕೆ, ಶುಂಠಿ, ಬೂರುಗದ ಮೇಣ, ಭದ್ರಮುಸ್ತೆ, ಮರದರಿಸಿನ, ಮುನುಗುತಾವರೆ, ಕೊಡಸಿಗೆ, ಬೇಲದ ಹಣ್ಣಿನ ತಿರುಳು, ಇವಂ ಸಮಭಾಗ ಚೂರ್ಣವಂ

ಮಾಡಿ ಹೆಮ್ಮರದ ಚಕ್ಕೆಯ ಕಷಾಯವಿಕ್ಕಿ ಅದರಲ್ಲಿ ಶುಂಠಿಯ ರಸವನಲ್ಪವಾಗಿ ಹನಿಸಿ ಈ ಚೂರ್ಣವಂ ಕಲಸಿ ತಾರೆಕಾಯ ಪ್ರಮಾಣ ಗುಳಿಗೆಯಂಮಾಡಿ ಜೇನುತುಪ್ಪದಲ್ಲಾದರೂ ಮೊಸರಿನಲ್ಲಾದರೂ ತೆಗೆದುಕೊಳ್ಳಲು ಗ್ರಹಣಿ, ಅತಿಸಾರ ಸಹ ಮಾಣ್ಗುಂ. ೩

ಅಗುಳುಶುಂಠಿ, ಅತಿಬಜೆ, ಜಾಪತ್ರೆ, ಲವಂಗ, ಹಿಪ್ಪಲಿ, ಬೂರುಗದ ಮೇಣ, ಚಿತ್ರಮೂಲ ಇವಂ ಸಮಭಾಗವಾಗಿ ಚೂರ್ಣಿಸಿ ಮಾವಿನ ಪಟ್ಟೆಯಲ್ಲಿ ರಸವ ತೆಗೆದು ಗಾರಿಗೆ ಪಾಕದ ಹಾಗೆ ಕಾಸಿ ಚೂರ್ಣವನದರಲ್ಲಿ ಹಾಕಿ ಇಳುಹಿಕೊಂಡು ಗಜ್ಜುಗ ಪ್ರಮಾಣ ಗುಳಿಗೆಯಂ ಮಾಡಿ ಉದಯಸಾಯಂಕಾಲಗಳಲ್ಲಿ ಒಂದೊಂದು ಗುಳಿಗೆಯಂ ಕಾಲುಮಂಡಲ ತೆಗೆದುಕೊಳ್ಳೆ ಗ್ರಹಣಿ ನಿಲುವುದು. ೪

ನಾರಂಬೇಳೆಯ ಬೇರು, ಪಾರಿವಾಳದ ಬೇರು, ಬಿಲ್ವಪತ್ರೆಯ ಬೇರು, ನೆಲದುಂಬೆ ಹೂ, ಈ ಬೇರು, ಇವಂ ಭಸ್ಮವಂಮಾಡಿ ಗರುಗದ ರಸದಿಂ ಮರ್ದಿಸಿ ಗುರುಗಂಜಿಯ ಪ್ರಮಾಣ ಗುಳಿಗೆಯಂ ಮಾಡಿ, ಒಣಗಿಸಿ ಹಸುವಿನ ಬೆಣ್ಣೆಯಲ್ಲಿ ಒಂದು ಗುಳಿಗೆಯಂ ಕೊಡಲು ಗ್ರಹಣಿ ಪರಿಹರಮಕ್ಕು; ಒಂದ ಬಿಸಿನೀರಿಂದಾದರೂ ಆರು ದಿನ ಕೊಡಲು ಗುಣಮಕ್ಕು. ೫

## ದಾಳಿಂಬಾದಿ ವಟಕ

ದಾಳಿಂಬಪಂಚಕ, ಬಿಲ್ವಪತ್ರೆ ಹೀಚು, ಲವಂಗ, ಹೆಮ್ಮರದ ಪಟ್ಟೆ, ಅತಿಬಜೆ, ಮಾವಿನ ಬೀಜದ ತಿರುಳು, ಬೂರುಗದ ಹಗಿನು, ಕೊಡನಾರಿಗೆಷ್ಟೆ, ವಾದಕ್ಕಿ, ಕುರಾಸಾನಿ, ಓವು, ನೇರಿಲ ಬೀಜ, ಸೈಂಧವಲವಣ, ಗಜ್ಜುಗದ ತಿರುಳು, ಜೀರಿಗೆ, ಕರಿ ಜೀರಿಗೆ, ಸಾಸುವೆ, ಕಾಚು, ಶುಂಠಿ, ಹಿಪ್ಪಲಿ, ಮೆಣಸು, ಜಾಕಾಯಿ, ಜಾಪತ್ರೆ, ಉಮ್ಮತ್ತದ ಬೀಜ, ಧಾತಕೀ ಕುಸುಮ, ಕೊಡಸಿಗೆ ಬೀಜ, ಸಂವತ್ಸರ ಲವಣ, ಅಗುಳ ಶುಂಠಿ, ಅಪಿನಿ ಮದ್ದು, ಇಂಗು, ಬೇಲದ ಹಗಿನು, ಮಾವಿನ ಹಗಿನು, ಹುಣಸೆ ಬೀಜ, ಸಣ್ಣ ನಾಗಕೇಸರಿ, ಏಲಕ್ಕಿ, ನೆಲ್ಲಿ ಚಟ್ಟು, ಮುಳ್ಳುಕೊಗ್ಗಿ ಬೇರಿನ ಪಟ್ಟೆ ಇವಂ ಸಮಭಾಗವಾಗಿ ಎಮ್ಮೆ ಮೊಸರಿಂದರೆದು ದಾಳಿಂಬದ ಒಳಗಾಯಿಯೊಳಗಣ ಬಿತ್ತಂ ತೆಗೆದು ಅದರಲ್ಲಿ ತುಂಬಿ, ಬಟ್ಟೆಯ ಸುತ್ತಿ, ಕೆಮ್ಮಣ್ಣ ಮೆತ್ತಿ ಪುಟವ ಹಾಕಿ ಬಟ್ಟೆ ತಗೆದು ಆ ಕಾಯಿ ಸಹಿತ ಆ ಔಷಧಿಯ ಮೊಸರಿಂದರೆದು ಎಲಚಿಯ ಕಾಯ ಪ್ರಮಾಣ ಗುಳಿಗೆಯಂ ಮಾಡಿ ಒಣಗಿಸಿ ಜೇನುತುಪ್ಪದಿಂದ ಒಂದು ಗುಳಿಗೆಯಂ ತೆಗೆದುಕೊಳ್ಳಲು ಹೊಟ್ಟೆಬೇನೆ ನಿಲ್ಗುಂ; ಪಥ್ಯ ಹುಳಿ, ಶಲದಿ ವರ್ಜ್ಯ. ೬

ಮಾವಿಡಿ ವೇರು ಚಕ್ಕ, ನೇರೆಡು ವೇರು ಚಕ್ಕ, ದಾಳಿಂಬಕಾಯ, ಮಾರೆಡುವರುಗು, ರಾವಿಚಕ್ಕ, ಮರಿವೂಡಲು, ಬಲುಸು ವೇರು ಚಕ್ಕ, ತಂಗೇಡು ವೇರು

ಚಕ್ಕ, ಜಿಬುಲಕ ವೇಳ್ಳು, ಚಿಂತಮಾನಿ ಚಕ್ಕ, ನುರಿಗಾಯು, ಚಿಂತಗಿಂಜಲ ಪೊಟ್ಟು, ಶುಂಠಿ ಈ ದ್ರವ್ಯಮುಲು ಪ್ರತ್ಯೇಕಂಗ ಗ ೩ ಎತ್ತು, ಕಾಚು, ಕರಕ್ಕಾಯ, ಗುಗ್ಗಿಲಂ, ಮಿರಿಯಾಲು, ಮುಲುಗೊಬ್ಬವಿತ್ತುಲು, ಜಾಜಿಕಾಯ, ಉಮ್ಮೆತ್ತವಿತ್ತುಲು, ಸಮುದ್ರಶೋಕ ವಿತ್ತುಲು, ಆಪೇನಂ ಇವಿ ವಗಕು ವರಹ ಎತ್ತು, ಇನ್ನಿಟಿಕಿ ಸಮಂ ಪೊಸ್ತು ಥಂಗಿ ಪೋಡಿ ಇಂತ ಚೂರ್ಣಂ ಜೇಸಿ ಮಾಮಿಡಿ ಚಕ್ಕ ಕಷಾಯಮುನ ಮೂನಾಳ್ಳು ಮರ್ದಿಂಚಿ ಗಜ್ಜಕಾಯಂತ ಉಂಟಲು ಜೇಸಿ ಉಂಚುಕೊನಿ ಒಕ ಉಂಟನು ಪೊಡಿ ಸೇಸಿ, ಪೆರುಗುತೊ ಕಲಪಿ ಈಯುನು ಸಕಲವ್ಮೈನ ಗ್ರಹಣಿಲು ನಿಲುಚುನು. ಇವೇ ವಟಕಮುನು ಜ್ವರಾತಿಸಾರಮುನಕು ಶುಂಠಿನಿ ಕಾಲ್ಚಿನ ಮಸಿತೊ ಇಚ್ಚಿತೆ ಸಕಲವ್ಮೈನ ಜ್ವರಾತಿಸಾರಮುಲು ನಿಲುಚುನು. ೭

ಜಾಕಾಯಿ, ಜಾಪತ್ರ, ಲವಂಗಂ, ಆಕುಮುಂಡು, ಕುರಾಸಾನಿ, ಓಮಂ, ಗಸಗಸಲು, ಸಮುದ್ರಶೋಕವಿತ್ತುಲು, ಖರ್ಜೂರಂ, ಅತಿಮಧುರಂ, ತಿಪ್ಪತೀಗ ಮೀನಿ ಸಮಮುಗ ಗೂರ್ಚಿ ಕಷಾಯಂ ಬೆಟ್ಟಿ ಇಂಕನು ವೇರೆ ಈ ಪ್ರಕಾರಂ ದ್ರವ್ಯಮುಲನು ದೆಚ್ಚಿ ವೆಚ್ಚಜೇಸಿ ಚೂರ್ಣಿಂಚಿ ಲೆಸ್ಸಗಾ ಆ ಕಷಾಯಮುತೊ ನೂರಿ ಮಾತ್ರಗಟ್ಟಿ ಎಂಡಿಂಚಿ ಉಂಚುಕೊನಿ ಎನುಮು ಪೆರುಗುತೊ ಇಚ್ಚಿತೆ ಗ್ರಹಣಿ, ರಕ್ತಗ್ರಹಣಿ, ಆಮಗ್ರಹಣಿ, ಸಂಗ್ರಹಣಿ ಸಹ ನಿಲುಚುನು. ೮

## ಗ್ರಹಣೀ ವಟಕಂ

ಶುಂಠಿ, ಪಿಪ್ಪಳ್ಳು, ಮಿರಿಯಾಲು, ಗಂಧಕಂ, ಈ ದ್ರವ್ಯಮುಲನು ಸಮಭಾಗಂ ಕೂರ್ಚಿ ಚೂರ್ಣಿಂಚಿ, ಮಾಮಿಡಿ ಚಿಗುಳ್ಳುರಸಮು ಚೇತ ಮೂನಾಳ್ಳು, ಜಾಜಿಕಾಯ ಕಷಾಯಮುತೊ ಮೂನಾಳ್ಳು, ಸಹ ಮರ್ದಿಂಚಿ ಗುಂಜಾ ಪ್ರಮಾಣಂ ಮಾತ್ರಲು ಗಟ್ಟಿ ಈ ಔಷಧಮುನು ತೇನೆತೊ ಅವುನೇಯಿತೊ ಪೂಟಕು ಒಕ ಮಾತ್ರನೀಯುನು ಸಕಲವ್ಮೈನ ಗ್ರಹಣೀ ರೋಗಮುಲು ಶೀಘ್ರಮುಗ ನಿಲುಚುನು. ೯

## ಅರಳ್ವಾದಿ ಯೋಗಂ

ಪೆದ್ದಮಾನಿಚಕ್ಕ, ಆತಿವಜ, ಕೋಡೀಶಪಾಲವಿತ್ತುಲು, ಜಾಜಿಕಾಯ, ಜಾಪತ್ರ, ಬೂರುಗಬಂಕ, ವಿಷಬೊಟ್ಟಿ, ಮಾರೆಡುಪಂಡು, ಜಿಲಕರ, ಓಮಂ, ಕುರಾಸಾನಿಓಮಂ, ಪೋಸ್ತು, ಸೈಂಧವಂ ಇವಿ ವಗಕು ಗ ೧ ಎತ್ತು, ಆರಪೂವು, ಕರಕ್ಕಾಯ ಇವಿ ಸಮಭಾಗಂ, ಶುಂಠಿ, ಹಿಪ್ಪಲಿ, ಮಿರಿಯಾಲು, ಲವಂಗಮುಲು, ಮಾಮಿಡಿಪಿಂದಲು, ಕೋಡೀಶ ಚಕ್ಕ, ಇವಿ ಅರ್ಧಭಾಗಂ, ಆಪೇನಂ ಗ ೧ ಎತ್ತು, ಇನ್ನಿಟಿಕಿ ಸಮಂ ದಾಡಿಂಬಕಾಯ, ಅರಟಿಪೂ, ಅವುಮಜ್ಜಿಗ, ಬಲುಸುಚಕ್ಕ,

ತಂಗೇಡು ಚಕ್ಕ, ಮಾಮಿಡಿ ಚಕ್ಕ, ನೇರೆಡು ಚಕ್ಕ, ರಾವಿ ಚಕ್ಕ ಈ ರಸಮುಲ ಚೇತ ಲೇಹ್ಯಪಕ್ವಮುಗ ವಂಡಿ ಪೋಕಲಂತೇಟಿಮಾತ್ರಲು ಜೇಸಿ ನಾನಾ ಅನುಪಾನಮುಲ ಚೇತನೀಯುನು ಗ್ರಹಣೀರೋಗಂ ಮಾನುನು. ೧೦

## ಗ್ರಹಣೀ ಕವಾಟಂ

ಜಾಜಿಕಾಯಲು, ವೆಲಿಗಾರಂ, ಅಭ್ರಕಂ, ಉಮ್ಮೆತ್ತವಿತ್ತುಲು, ಇವಿ ಸಮಾಂಶಂ ಇಂದುಕು ಆಪೇನಂ ರೆಂಡು ಪಾಳ್ಳು, ಶುದ್ಧಿ ಜೇಸಿನವಿ ಗಾಂಜಾಯಾಕು ಪಸುರುನ ಮರ್ದಿಂಚಿ ಚಣಕಪ್ರಮಾಣಂ ಮಾತ್ರಲುಗಟ್ಟಿ ತೇನೆ ಮರಿನ್ನಿ ಅನುಪಾನ ವಿಶೇಷಮುಲಿಗಿ ಈಯುನು ಗ್ರಹಣೀರೋಗಂ ಮಾನುನು. ೧೧

ಜಾಜಿಕಾಯ, ಸೈಂಧವಲವಣಂ, ಆಪೇನಂ, ಶುಂಠಿ, ಅತಿವಜ, ಉಮ್ಮೆತ್ತ ವಿತ್ತುಲು, ಪಿಪ್ಪಳ್ಳು, ಇವಿನಿ ಸಮಮುಗ ಕೂರ್ಚಿ ಭಂಗಿಯಾಕು ರಸಮುನ ಮರ್ದಿಂಚಿ ಚಿಗುರಿಗಿಂಜಲಂತ ಮಾತ್ರಲು ಜೇಸಿ ಪೆರುಗುತೊ, ಅರಟಿಪೂವು ರಸಮುತೊ ಗಾನಿ ಇಚ್ಚಿತೆ ಗ್ರಹಣಿಲು ನಿಲುಚುನು. ಇದಿ ಗ್ರಹಣೀ ಗಜಕೇಸರಿ ಯನ ಪೇರುಗಲಗಿನದಿ. ೧೨

ಅಂತು ಗ್ರಹಣೀ ರೋಗಕ್ಕೆ ಸಂಹಿತೆ ೨೮, ಕಲ್ಕ ೨, ಕಷಾಯ ೮,
ಚೂರ್ಣ ೧೧, ಲೇಹ್ಯ ೯, ಘೃತ ೪, ತೈಲ ೩, ಗುಳಿಗೆ ೧೨,
ಸಹ ಪ್ರಯೋಗ ೭೭ ಕ್ಕಂ ಸಮಾಪ್ತಂ.

---

## ಪಿತ್ತಗ್ರಹಣಿ

### ಚಿಕಿತ್ಸೆ— ಸಂಹಿತೆಗಳು

ಬೆಲ್ಲವತ್ತದ ತಿರುಳು, ಕೊಡಸಿಗೆ ಬೀಜ, ಕೊಡಸಿಗೆ ತಿಗುಡು, ಧಾತಕೀ ಕುಸುಮ, ಕಟುಕರೋಹಿಣಿ, ಶುಂಠಿ ಇವಂ ಚೂರ್ಣಿಸಿ ಅಕ್ಕಿಗಚ್ಚಿನಲ್ಲಿ ಕಲಸಿ ಜೇನುತುಪ್ಪವೆರಸಿ ಕುಡಿಯೆ .ಪಿತ್ತಗ್ರಹಣಿ, ಮೂಲರೋಗ, ಪ್ರವಾಹವಾದ ಅತಿಸಾರ, ಹೊಟ್ಟೆಬೇನೆ ಸಹ ಪರಿಹರಮಕ್ಕು. ೧

## ಶ್ಲೇಷ್ಮಗ್ರಹಣಿ—ಕಲ್ಕ

ಕಚೋರ, ಶುಂಠಿ, ಹಿಪ್ಪಲಿ, ಮೆಣಸು, ಅಳಲೆಕಾಯಿ, ಯವಕ್ಷಾರ, ಹಿಪ್ಪಲಿಮೂಲ, ಸೈಂಧವಲವಣ, ಮಾದಳದ ಹಣ್ಣಿನ ಕೇಸರ, ಸಹ ಇವಂ ಬಿಸಿನೀರಿನಿಂದರೆದು ಕುಡಿಯೆ ಶ್ಲೇಷ್ಮಗ್ರಹಣಿ ಹರ. ೨

## ರಕ್ತಗ್ರಹಣಿ

### ಚಿಕಿತ್ಸೆ – ಸಂಹಿತೆಗಳು

ಅತ್ತಿತಿಗುಡು, ಕೊಡಸಿಗೆ ತಿಗುಡು, ಲೋಧ್ರ, ಕನ್ನೈದಿರೆ ಗೆಡ್ಡೆ, ಎಳ್ಳು ಸಹ ಚೂರ್ಣಂ ಮಾಡಿ ಅಳೆಯಲ್ಲಟ್ಟು ಸೈಂಧವ ಮಿಶ್ರವಾಗಿ ತುಪ್ಪದಲ್ಲಿ ಕಲಸಿ ಕೊಳ್ಳಲು ರಕ್ತಗ್ರಹಣಿ, ರಕ್ತಾತಿಸಾರ, ಮೂಲವ್ಯಾಧಿ, ಪಾಂಡುರೋಗ ಸಹ ಮಾಣ್ಗುಂ. ೧

ಶುಂಠಿ, ಹಿಪ್ಪಲಿ, ಮೆಣಸು, ಅಳಲೆಕಾಯಿ, ಕರಿಬೇವು, ಕರಿಜೀರಿಗೆ, ಗಜ್ಜುಗದ ತಿರುಳು, ಓವು, ಸೈಂಧವ ಇವಂ ಸಮಾನಗೊಂಡು ಪ್ರತ್ಯೇಕವಾಗಿ ಹುರಿದು ಚೂರ್ಣಂಗೆಯ್ದು ವಸ್ತ್ರಗಾಳಿತಂ ಮಾಡಿ ಒಳ್ಳೆಣ್ಣೆಯಿಂ ಕಲಸಿ ಕೊಳ್ಳಲು ರಕ್ತಗ್ರಹಣಿ, ಶೂಲೆ, ಅತಿಸಾರ ಸಂಗ್ರಹಣಿ, ಮುಂತಾಗಿ ಗುಣಮಕ್ಕು. ೨

ನಿಂಬೆಯ ಹಣ್ಣಿನ ಹೋಳಿನಲ್ಲಿ ಲವಂಗ, ಶುಂಠಿ, ಜೀರಿಗೆ, ಜಾಕಾಯಿ, ಇವಂ ಪುಡಿಮಾಡಿ ತುಂಬಿ ಮೇಲೆ ಮತ್ತೊಂದು ಹೋಳ ಮುಚ್ಚಿ ಉಪ್ಪನರೆದು ಸುತ್ತಲೂ ತೊಡೆದು ಹೊತ್ತದ ಹಾಗೆ ಪುಟವ ಹಾಕಿ ತೆಗೆದುಕೊಂಡು ಪುನಃ ಅರೆದು ಕಬ್ಬಿಣದ ಸೌಟಿನಲ್ಲಿ ಕುದಿಸಿ ಮೊಸರಲ್ಲಿ ಗುಳಿಗೆಯಂ ಮಾಡಿ ಕೊಡಲು ರಕ್ತಗ್ರಹಣಿ ಸಂಗ್ರಹಣಿ ಸಹ ಮಾಣ್ಗುಂ. ೩

ಶುಂಠಿ, ಹಿಪ್ಪಲಿಮೂಲ, ಹಿಪ್ಪಲಿ, ಮೆಣಸು, ಚವ್ಯ, ಚಿತ್ರಮೂಲ, ಗಜಹಿಪ್ಪಲಿ, ಗಚ್ಚಪಪ್ಪು, ಕೊಡಸಿಗೆಬೀಜ, ವಾದಕ್ಕಿ, ಸದ್ಯಕ್ಷಾರ ಇವನೆಲ್ಲ ಸಮಾಂಶಂ ಚೂರ್ಣಂ ಮಾಡಿ ಮಜ್ಜಿಗೆಯಿಂದರೆದು ಉಂಡೆಮಾಡಿ ಮೊಸರಿನಿಂದ ಕೊಡಲು ರಕ್ತಗ್ರಹಣಿ ಮಾಣ್ಗುಂ. ೪

ಜೀಡಗಿಂಜಲನು ಪಲುಕುಲುಗಾ ನೂರಿ ಚಟ್ಟಿಲೊ ಚಾರೆಡು ವೇಸಿ ಶುಂಠಿ ಪಪ್ಪುಲನು ಚಾರೆಡು, ಕತ್ತರಿಂಚಿನ ಕರ್ಕಾಟಕಶೃಂಗಿ ಚಾರೆಡು ಸಹ ಚೆಟ್ಟಿಲೊ ವೇಸಿ ವೇಯಿಂಚೇದಿ; ಜೀಡಿ ತೈಲಂ ಆ ಪಪ್ಪುಲಕು ಅಂಟುನು ಆಮಿಾದ ತೀಸುಕೊನಿ ಜೀಡಿನಿ ಪಾರಿವೇಸಿ ಆ ರೆಂಡುನು ಚೂರ್ಣಂ ಜೇಸಿ ರೂಕ ಎತ್ತು ಪೆರುಗುತೊ ಇಚ್ಚಿತೆ ರಕ್ತಗ್ರಹಣಿ ಆಮಗ್ರಹಣಿಲು ಸಹ ನಿಲುಚುನು. ನೆಯ್ಯಿ, ಪೆರುಗು ಅನ್ನಂ ಪಥ್ಯಂ. ೫

ಎನುಮು ಪೆರುಗುನು ಬಟ್ಟಲೊ ಜೋಸಿ ನೀಳ್ಳು ಪಡಿಚಿನ ಗಟ್ಟಿಪೆರುಗುನು ತೀಸುಕೊನಿ ಅನ್ನಪು ಕಂಚಮುಲೊ ಉಂಚಿ ಕಾಲವೇಸಿನ ಮೂಡು ರಾಳ್ಳುನು ಅನ್ನಮುಮಿಾದ ಉಂಚಿ ಆ ರಾಳ್ಳುಮಿಾದ ಪೆರುಗುಬೋಸಿ ಮೂಸಿ ಇಂದುಮಿಾದ ತಿರಿಗಿ ಮಿರ್ಯಾಲು ಒಕ ಎತ್ತು, ಶುಂಠಿ ಒಕ ಎತ್ತು, ಮೆಂತ್ಯಂ ರೆಂಡು ಎತ್ತು, ಕರಕ್ಕಾಯ ಗ ೧ ಎತ್ತು ಇಂತ ಚೂರ್ಣಂ ಜೇಸಿ ಅನ್ನಮುಮಿಾದ ಉಂಚಿ ಆನಂ

ಕಲಪಿ ಇಂದು ಮಿಾದ ಅಟ್ಲೆ ಲೆಸ್ಸಗಾಚಿನ ಗರಟಿನು ಕರಕಾಚಿನದಿ ಕಾರು (?) ತೀಸುಕೊನಿ ಪ್ರಸಾಪಡಿತೆ ಮೂಡುದಿನಮುಲಕು ನೆತ್ತರಬಂಕ ನಿಲುಚುನು. ೬

ನಿಮ್ಮಪಪ್ಪುಲೊ ದಿನಮುನಕು ಒಕ ಜಿಂತಗಿಂಜಯುಂಚಿ ವೇಸುಕೊನಿ ದೀನಿ ಬೊಪ್ಪೆಡ ತೀಸಿ ಚೂರ್ಣಂ ಜೇಸಿ ನಿಮ್ಮಪಪ್ಪುಲೊ ನಿಂಚಿ ಉಡಕನುಂಚಿ ಚಿಬಿಕಿ ಪಿಪ್ಪಪಾರನುವಿಸಿ ವೇಸೇದಿ. ಈ ಲಾಗುನ ೫ ದಿನಮುಲು ಇಚ್ಚಿತೆ ನೆತ್ತರು ಬಂಕ ನಿಲುಚುನು. ೭

ಅನ್ನಪುಕಂಚುನು ಪೊಲವುಂಚಿ ಮೂಡುವಿಧಮುಲ ರಾಳ್ಳುನು ಕಾಲವೇಸಿ ಅನ್ನಮುಮಿಾದ ಉಂಚಿ ದೀನಿಮಿಾದ ಸೊಸುವಲ ಪೊಡಿ ರೆಂಡು ಎತ್ತುವೇಸಿ ಮರಿ ದೀನಿಮಿಾದ ನೇಯಿ ಬೋಸಿ ಕಲಪುಕೊನಿ ಪ್ರಸಾಪಡೇದಿ ; ಮರಿ ವೆನಕ ಮಜ್ಜಿಗಗಾನಿ ಕಂದುಲ ವೊಗರುಗಾನಿ ಅನ್ನಂ ಬೋಸುಕ ಪ್ರಸಾಪಡುನು ನೆತ್ತರು ಬಂಕ ನಿಲುಚುನು. ೮

## ಕಲ್ಕಗಳು

ಶುಂಠಿ, ಕೋಡೀಶಪಾಲ, ಅತಿವಜ, ತುಂಗಮುಸ್ತುಲು, ಮಾಮಿಡಿಗಿಂಜಲು ದಾಡಿಂಬ ಚಿಪ್ಪ, ಚಿಂತಗಿಂಜಲಪೊಟ್ಟು, ಬೂರುಗಬಂಕ, ಸೈಂಧವಲವಣಂ, ಲೋಧ್ರಂ, ಓಮಂ, ಮಾರೆಡುವೇರು ವೀನಿ ವಗಕು ಗ ೧ ತೂನು ಲೆಕ್ಕಮುನ ಪಚ್ಚಿ ಬೀಯುಮು ಕಡುಗುತೋನೀಯುನು ರಕ್ತಗ್ರಹಣಿಲು, ಆಮಗ್ರಹಣಿಲು ಸಹ ಮಾನುನು. ೧

ಸಜ್ಜರಸ ಧೂಪಂ ಗ ೨ ತೂನುನು ಪೋತುನು ಈನಿನ ಎನುಮು ಪೆರುಗು ತೊ ಸನ್ನಗಾ ನೂರಿ ಇಚ್ಚಿತೆ ರಕ್ತಗ್ರಹಣಿ, ಸಂಗ್ರಹಣಿ ಸಹ ಮೂಡು ದಿನಮು ಲಕು ಮಾನುನು. ೨

## ಕಷಾಯ

ಬಾಳೆಯ ಹೂವು, ತೆಂಗಿನ ಹೂವು, ನೇರಿಲ ಚಕ್ಕೆ, ಮಾವಿನ ಚಕ್ಕೆ ಹುಣಿ ಸೆಯ ಚಕ್ಕೆ, ಬೇವಿನ ಚಕ್ಕೆ, ದಾಳಿಂಬದ ಕಾಯಿ, ಇವಂ ಕಷಾಯವಿಕ್ಕಿ ಕೊಡಲು ರಕ್ತಗ್ರಹಣಿ ಪರಿಹರಮಹುದು. ೧

## ಚೂರ್ಣಗಳು

ಶುಂಠಿ, ದಾಳಿಂಬದ ಕಾಯಿ, ಆಳಿಲೆಕಾಯ ಬೀಜ, ದನಾಗ್ರ ಗ ೧ ತೂಕ ಸಹ ಚೂರ್ಣವಂ ಮಾಡಿ ಬೆಲ್ಲದಿಂ ಕಲಸಿ ನಿಂಬೆಯ ಕಾಯಷ್ಟನು ಮೆಲ್ಲಲು ರಕ್ತ ಗ್ರಹಣಿ ನಿಲುವುದು. ೧

ಬೆಲ್ಲ, ಶುಂಠಿ, ಹಿಪ್ಪಲಿ, ಅಳಿಲೆಕಾಯಿ ಬೀಜದ ನ್ನಾರು, ತಾರೆಯ ಕಾಯ ಬೀಜ ಇವಂ ಚೂರ್ಣವಂ ಮಾಡಿ ಬೆಲ್ಲದಿಂ ಕಲಸಿ ಸೇವಿಸೆ ರಕ್ತಗ್ರಹಣಿ ನಿಲ್ಗುಂ. ೨

### ಘೃತ

ಶುಂಠಿ, ಹಿಪ್ಪಲಿ, ಮಿರಿಯಾಲು, ಸಾಸುವಲು, ಸೈಂಧವ ಲವಣಂ, ಇಂಗುವ ಇವಿ ವಗಕು ಗ ೧ ತೂನ್ನು ಚೂರ್ಣಂ, ಉಲ್ಲಿಗಡ್ಡಲ ರಸಂ ತೀಸಿ ಈ ರಸಮುಲೊ ಚೂರ್ಣಂವೇಸಿ ಇಂದುಲೊ ನೇಯಿ ಬೋಸಿ ರಸಂ ತೀಸೇ ಪರಿಯಂತರಂ ವಂಡಿ ದಿಂಚುಕೊನಿ ನೇಯಿನಿ ಸೇವಿಂಚುನು ರಕ್ತಗ್ರಹಣಿಲು ಅತಿಸಾರಮುಲು ಸಹ ನಿಲುಚುನು. ೧

### ಲೇಹ್ಯ—ಕುಟಜಾದಿ ಲೇಹ್ಯ

ಕೊಡಸಿಗೆ ತೊಕ್ಕು ೧೦೦ ಹಲವಂ ಸಾಗಳ ನೀರಿನಲ್ಲಿ ಹಾಕಿ ಕಷಾಯವಿಕ್ಕಿ ಅಷ್ಟಾವಶೇಷವಾಗಿ ಕಾಸಿ ನಿಂತ ಕಷಾಯಮಂ ಶೋಧಿಸಿಕೊಂಡು ಅದರಲ್ಲಿ ಶೋಧಿಸಿದ ಹಳೆ ಬೆಲ್ಲ ಮೂವತ್ತು ಹಲವಂ ಹಾಕಿ ಬಳ್ಳ ತುಪ್ಪವ ಹೊಯ್ದು ಒಲೆಯ ಮೇಲಿಟ್ಟು ಮೃದ್ವಗ್ನಿಯಿಂ ಪಾಕವ ಮಾಡಿ ಅದರಲ್ಲಿ ಹಾಕುವ ಚೂರ್ಣ.—ರಸಾಂಜನ, ಶುಂಠಿ, ಹಿಪ್ಪಲಿ, ಮೆಣಸು, ಲೋಧ್ರ, ಎಲವದ ಹಗಿನು, ಕೊಡನಾರಿಗೆಡ್ಡೆ ಕಾಚು, ಧಾತಕೀ ಕುಸುಮ, ಬೆಲ್ಲವತ್ತದ ಹೀಚು, ದಾಳಿಂಬದ ಕಾಯಿ ತೊಕ್ಕು ಕರ್ಕಾಟಕ ಶೃಂಗಿ, ಇವು ಪ್ರತ್ಯೇಕ ಒಂದು ಪಲ, ಕೊಡಸಿಗೆ ಚಕ್ಕೆ ಹತ್ತುಹಲ ಸಹ ಚೂರ್ಣವಮಾಡಿ ಕಷಾಯದಲ್ಲಿ ಹಾಕಿ ತೊಳಸಿ ಲೇಹ್ಯಪಾಕದಿಂದಿಳುಹಿಕೊಂಡು ಆರಿದ ಮೇಲೆ ಎರಡು ಮಾನ ಜೇನುತುಪ್ಪವ ಹೊಯ್ದು ಒಂದು ತಿಂಗಳು ಧಾನ್ಯ ಪುಟವಿರಿಸಿ ತೆಗೆದು ನಿತ್ಯವೂ ಉದಯದಲ್ಲಿ ಎರಡು ವರಹ ತೂಕವಂ ಸೇವಿಸೆ ರಕ್ತಗ್ರಹಣಿ, ಆಮಾತಿಸಾರ, ರಕ್ತಾತಿಸಾರ ಸಹ ವಾಣ್ಗುಂ. ೧

### ಗುಳಿಗೆಗಳು

ಪೆದ್ದಮಾನಿ ಚಕ್ಕ, ಅತಿವಜ, ಕೊಡೀಶವಿತ್ತಲು, ಇವಿನಿ ಕಾಚಿ ವೇಸುಕೊನೇದಿ. ಜಾಕಾಯಿ, ಜಾಪತ್ರಿ, ಬ್ಲೂರುಗ ಬಂಕ, ವಿಷಬೊಟ್ಟಿ, ಮಾರೆಡು ಪಂಡು ಜಿಲಕರ, ಓಮಂ, ಕುರಾಸಾನಿ ಓಮಂ, ಪೊಸ್ತು, ಸೈಂಧವಲವಣಂ, ಆರಟಿ ಪೂವು, ಕರಕ್ಕಾಯನು ಕಾಲ್ಚಿನದಿ, ಶುಂಠಿ, ಪಿಪ್ಪಲಿ, ಮಿರಿಯಾಲು, ಲವಂಗ ಮುಲು, ಮಾಮಿಡಿ ಪಿಂದ, ಕೋಡೀಶ ಚಕ್ಕ, ಧಾತಕೀಕುಸುಮಂ, ರೇಣುಕಲು, ಚಿಂತಗಿಂಜಲ ಬೊಬ್ಬೆಡ, ಪಿಪ್ಪಲಮೂಲಂ, ತುಂಗಮುಸ್ತಲು, ಮಾಮಿಡಿ ಬಂಕ, ದಾಳಿಂಬ ಚಿಪ್ಪು, ಯಷ್ಟಿಮಧುಕಂ, [1]ಕಾರೆ ಮುಂಜು,[1] ಇಂತ ಸಮಚೂರ್ಣಂ ಜೇಸಿ ಆರಟಿ ಪೂವುಲ ರಸಂ, ಆವು ಮಜ್ಜಿಗ, ಬುಲುಸುಚಕ್ಕಲ ರಸಂ, ಮಾಮಿಡಿ ಚಕ್ಕ ರಸಂ, ನೇರೆಡು ಚಕ್ಕ ರಸಂ, ರಾವಿ ಚಕ್ಕ ರಸಂ, ಈ ರಸಮುಲ ಚೇತ ಪಕ್ವ ಮುಗ ವಂಡಿ ಪೋಕಲಂತ ಮಾತ್ರಲು ಜೇಸಿ ಎಲಮುಂದುನು ಕಲಪಿಕೊನಿ ಒಕ

[1] (ಗ) ಕಾರೆನುಮಂಜುನು

ಮಾತ್ರನು ಅನುಪಾನಮುಲನು ಎರಿಗಿ ತೀಸುಕೊನನು ರಕ್ತಗ್ರಹಣಿ, ಕಡುಪು ನುಲಿ, ಸಂಗ್ರಹಣಿ ಸಹ ನಿಲುಚುನು. ೧

## ದಾಳಿಂಬಾದಿ ವಟಕ

ಜಾಕಾಯಿ, ಸೈಂಧವ ಲವಣಂ, ಲವಂಗಂ, ಅತಿವಜ, ಶುಂಠಿ, ಉಮ್ಮೆತ್ತ ವಿತ್ತುಲು, ಪಿಪ್ಪಳ್ಳು, ಇವಿ ಪ್ರತ್ಯೇಕಂ ಗ ೧ ತೂನು ಪ್ರಕಾರಂ ತುಂಗಮುಸ್ತುಲು ಗ ೪ ತೂನು ಸಹ ವೇಸಿ ಚೂರ್ಣಂ ಜೇಸಿ ಭಂಗಿಯಾಕು ರಸಂ, ನಿಮ್ಮಪುಲುಸು, ಉಮ್ಮೆತ್ತಾಕುರಸಮುಚೇತ ನೂರಿ ಲೆಸ್ಸ ಮರ್ದಿಂಚಿ ಅನುಪಾನಮು ಚೇತ ಇಚ್ಚಿತೆ ರಕ್ತಗ್ರಹಣಿ, ಅತಿಸಾರಂ, ರಕ್ತಾತಿ ಸಾರಂ ಸಹ ನಿಲುಚುನು. ೨

ಜಾಕಾಯಿ, ಜಾಪತ್ರ, ಲವಂಗಂ, ಆಕುಮಂದು, ಶುಂಠಿ, ನಾಗಕೇಸರಂ, ಮಾಮಿಡಿ ವಿತ್ತುಲು, ಪದ್ಮಕಂ, ಏಲಕ್ಕುಲು, ಮೆಂತ್ಯಂ, ಯಷ್ಟಿಮಧುಕಂ, ಚಂಗಲ ಕೋಷ್ಠಂ, ಧಾತಕೀಕುಸುಮಂ, ವೀನಿ ಪೊಡಿಜೇಸಿ, ದಾಡಿಂಬಪು ಕಾಯಲೊ ನಿಂಚಿ ದಾರಂಚುಟ್ಟಿ ಚಟ್ಟಿಲೊ ವೇಸಿ ಪನ್ನೆಂಡು ಸೇರ್ಲು ಮಜ್ಜಿಗವೇಸಿ ದಾಡಿಂಬ ಚಕ್ಕ ಆ ಆಕುವೇಸಿ ಪೊಯ್ಯಿಮೀದ ಉಂಚಿ ಕಾಚೇದಿ, ಯಿಗತೀದಾಕ. ಈ ದಾಡಿಂಬ ಕಾಯ ಸಮೂಲಂ ವೇಸಿ ಕಾಚಿನ ಮಜ್ಜಿಗತೊ ಸಗ ಮಜ್ಜಿಗ ಉಂಡ ಗಾನೆ ದಿಂಚುಕೊನಿ ಆ ಔಷಧಮುನು ನಿಂಚಿನ ಕಾಯಚಕ್ಕನು ಆ ಮೂಲಮು ಸಮೇತಮುಗ ಈ ಕಾಚಿನ ಮಜ್ಜಿಗತೋನೆ ನೂರಿ ಗಜ್ಜಿಕಾಯಂತ ಮಾತ್ರ ಇಚ್ಚಿತೆ ರಕ್ತಗ್ರಹಣಿ, ಅತಿಸಾರಮು ಸಹ ನಿಲುಚುನು. ೩

ಶುಂಠಿ, ಪಿಪ್ಪಲಿ, ಮಿರಿಯಾಲು, ಪಿಪ್ಪಲಮೂಲಂ, ಚವ್ಯಂ, ಚಿತ್ರಮೂಲಂ, ಗಜಪಿಪ್ಪಳ್ಳು, ಗಜ್ಜಕಾಯಲೋನಿ ಪಪ್ಪು, ಕೋಡೀಶ ವಿತ್ತುಲು, ಓಮಂ, ಸದ್ಯ ಕ್ಷಾರಂ, ಇವಿ ಪ್ರತ್ಯೇಕಂ ಗ ೨ ತೂನು ಚೂರ್ಣಿಂಚಿ ಮಜ್ಜಿಗತೊ ನೂರಿ ಚಿಂತಗಿಂ ಜಲಂತೇಟಿ ವಟಕಂ ಜೇಸಿ ಮೂಡು ಮಾತ್ರಲುನು ಪೆರುಗುತೊ ಇಚ್ಚಿತೆ ರಕ್ತ ಗ್ರಹಣಿ ಮಾನುನು. ೪

ಶುಂಠಿ, ಚಿತ್ರಮೂಲಂ, ವಿಷಡೊಟ್ಟಿ, [1]ಓಮಂ[1] ರಸಾಂಜನಂ, ಜಿಲಕರ, ಅತಿವಜ, ತುಂಗಮುಸ್ತಲು, ಪಿಪ್ಪಳ್ಳು, ಕೋಡೀಶಚಕ್ಕ, ಮಿರ್ಯಾಲು, ಲವಂಗಮುಲು, ಕೋಡೀಶಪಾಲವಿತ್ತುಲು, ಬೂರುಗಬಂಕ, ಆರಪೂವು, ವೆಲಗಪಂಡು, ಪಿಪ್ಪಲಿ ಮೂಲಂ, ಬೆಶಂ, ಮಾರೆಡುಪಂಡು, ಮಾಮಿಡಿಪಿಂದ, ತಂಗೇಡುಚಕ್ಕ, ದಾಡಿಂಬ ಪಿಂದಲು ಇಂಶ ಸಮಭಾಗಂ ಚೂರ್ಣಿಂಚಿ ಮಜ್ಜಿಗ ಚೇತನು ವಂಡಿ ಮಾತ್ರಲು ಜೇಸಿ ತೇನೆತೊ ಸೇವಿಂಪಗಾನು ರಕ್ತಗ್ರಹಣಿ, ಸಮಸ್ತಾತಿಸಾರಂ, ಅಜೀರ್ಣಂ, ಅರೋಚಕಂ, ಸಹ ಮಾನುನು. ೫

---

[1] (ಕ) ಪ್ರತಿಯಲ್ಲಿಲ್ಲ.

### ಅನುಪಾನಂ

ಮಾರೆಡುಪಂಡು, ಧಾತಕೀಕುಸುಮಂ, ಲವಂಗಂ, ಬೂರುಗಬಂಕ, ಕುರಾ ಸಾನಿ, ಓಮಂ, ಅತಿವಜ, ದಾಳಿಂಬ ಚಿಪ್ಪು, ವೀನಿ ಮಜ್ಜಿಗತೊ ನೂರಿ ಮಜ್ಜಿಗತೊ ಕಲಪಿ ಮಾತ್ರಲು ಪೊಡಿ ಸೇಸಿ ಮಜ್ಜಿಗತೊ ವೇಸಿ ತ್ರಾಗೇದಿ. ೧

ಅಂತು ರಕ್ತಗ್ರಹಣಿಗೆ ಸಂಹಿತೆ ೮, ಕಲ್ಕ ೨, ಕಷಾಯ ೧, ಚೂರ್ಣ ೨, ಘೃತಂ, ೧, ಲೇಹ್ಯ ೧, ಗುಳಿಗೆ ೫, ಅನುಪಾನ ೧ ಸಹ ಪ್ರಯೋಗ ೨೧ ಕ್ಕಂ ಸಮಾಪ್ತಂ.

---

## ಸಂಗ್ರಹಣಿ

### ಚಿಕಿತ್ಸೆ—ಸಂಹಿತೆಗಳು

ಅಡುಸೋಗೆ, ಅಮುರದವಳ್ಳಿ, ನೆಲಗುಳ್ಳ ಇವಂ ಚೂರ್ಣವಂ ಮಾಡಿ ತುಪ್ಪದಿಂ ಕೊಳ್ಳಲು ಸಂಗ್ರಹಣಿ ಮಾಣ್ಗುಂ. ೧

ಹರಿದರೆ ಹತ್ತುವನ ಸಹಮೂಲವಂ ಮೊಸರಿನಲ್ಲರೆದು ನುಂಗಿಸಲು ಹೊಟ್ಟೆ ಬೇನೆ ಸಂಗ್ರಹಣಿ ಸಹ ನಿಲ್ಗುಂ. ಪಥ್ಯ ತೊಗರಿಯ ಬೇಳೆಯ ಕಟ್ಟು, ಅನ್ನ. ೨

ಜೀರಿಗೆಯುಂ ಕಪ್ಪಾಗದ ಹಾಗೆ ಹುರಿದು ಮೂರು ಲವಂಗವಂ ಬಿಸಿ ಮಾಡಿ ಮೂರು ಲವಂಗವಂ ಹಸಿಯದನ್ನೇ ಕೂಡಿ ಮಜ್ಜಗೆಯಲ್ಲರೆದು ತೆಗೆದುಕೊಳ್ಳಲು ಸಂಗ್ರಹಣಿ ತೀರ್ಗುಂ. ೩

### ಕಲ್ಕ

ವಾಪಕ್ಕಿ, ಬೂರುಗದ ಮೇಣ, ಧಾತಕೀಕುಸುಮ, ಲೋಧ್ರ ಇವಂ ಸಮ ಭಾಗವಾಗಿ ಹಸುವಿನ ಮಜ್ಜಿಗೆಯಿಂದರೆದು ಮಜ್ಜಗೆಯಲ್ಲಿ ಕಲಸಿಕೊಡಲು ಸಂತತ ಗ್ರಹಣಿ ಗುಣಮಕ್ಕು. ೪

### ಲೇಹ್ಯಗಳು

ದಶಸಾರಹರೀತಕೀ—ಲೊಕ್ಕಿಸೊಪ್ಪಿನ ರಸ, ಆವರಿಕೆಸೊಪ್ಪಿನ ರಸ, ಮುಂಗ ರವಳ್ಳಿಯ ರಸ, ಎಲೆಗಳ್ಳಿಸೊಪ್ಪಿನ ರಸ, ಗರುಗದ ಸೊಪ್ಪಿನ ರಸ, ಉತ್ತರಣೆಯ ಸೊಪ್ಪಿನ ರಸ, ಒಂದೆಲಗನ ಸೊಪ್ಪಿನ ರಸ, ಎಕ್ಕೆಯ ಸೊಪ್ಪಿನ ರಸ, ಮುಳ್ಳುಮುತ್ತು ಗದ ಸೊಪ್ಪಿನ ರಸ, ಚಿತ್ರಮೂಲದ ಸೊಪ್ಪಿನ ರಸ, ಇವು ಬಗೆ ೧ಕ್ಕೆ ೪ ಹಲ ಸ್ವರಸ ಗಳಲ್ಲಿ ಉಳ್ಳಿಯ ತೈಲವಿಪ್ಪತ್ತು ಹಲವಂಕೂಡಿ ಆದರಲ್ಲಿ ಮಜ್ಜಿಗೆ ೨ ಬಳ್ಳ, ಅಂಬಿಲ

೨ ಬಳ್ಳ ಸಹ ಹನಿಸಿ ಸೈಂಧವದ ಚೂರ್ಣವೆಂಟು ಹಲವಂ ಹಾಕಿ ನೂರು ಅಳಿಲೆ ಕಾಯಿ ಪುಡಿಯಂ ಶೋಧಿಸಿ ಹಾಕಿ ಶುಂಠಿಯ ಚೂರ್ಣ ೧೦ ಹಲವಂ ಹಾಕಿ ಪಾಕವ ಮಾಡುವಾಗ ಹಸುವಿನ ತುಪ್ಪ ಒಂದು ಮಾನ, ಎಳ್ಳೆಣ್ಣೆ ಒಂದು ಮಾನ ಸಹ ಹನಿಸಿ ತಳಹತ್ತದ ಹಾಗೆ ಮೃದ್ವಗ್ನಿಯಿಂದ ಲೇಹ್ಯ ಪಾಕವಾಗಿ ಅಟ್ಟ ಇಳುಹಿಕೊಂಡು ಅದರೊಳಃ ಹಾಕುವ ಕಲ್ಕದ್ರವ್ಯ :—ಕರಿಬೇವಿನ ಸೊಪ್ಪು, ಸೈಂಧವ, ಓವು, ಜೀರಿಗೆ, ಶುಂಠಿ, ಹಿಪ್ಪಲಿ, ಮೆಣಸು, ಚಿತ್ರಮೂಲ, ಇವು ಪ್ರತ್ಯೇಕ ೨ ಹಲ, ಇಂಗು ಒಂದು ಹಲ ಸಹ ಚೂರ್ಣಿಸಿ ಸಮರಸನಾಗುವಂತೆ ತೊಳಸಿ ಇರಿಸಿ ಕೊಂಡು ದಿನ ಪ್ರತಿಯೂ ಉದಯಕಾಲದಲ್ಲಿ ದೇಹ ಬಲವರಿತು ತೆಗೆದುಕೊಳ್ಳಲು ಗ್ರಹಣಿ, ಸಂಗ್ರಹಣಿ, ಅಗ್ನಿಮಾಂದ್ಯ, ಪಾಂಡುರೋಗ, ಶೋಫೆ, ಮಹೋಧರ, ಕ್ಷಯ, ಆಧ್ಮಾನ, ನನೆಹೊರಟುದು ಇವೆಲ್ಲ ಪರಿಹರಮಕ್ಕುಂ. ೧

## ಕೋಡೀಶಾದಿ ಲೇಹ್ಯಂ

ಕೋಡೀಶಚಕ್ಕ ೨ ಮಾನಂ, ಪೆದ್ದಮಾನಿ ಚಕ್ಕ ೨ ಮಾನಂ ವೇಸಿಕಿ ನಾಲ್ಗು ಬಳ್ಳಮುಲ ನೀಳ್ಳುಪೋಸಿ ಒಲ್ಲೆಡುಗಾ ಕಾಚಿ ಇಂದುಲೊ ಗಂಧದ್ರವ್ಯಂ, ಜಾಜಿ ಕಾಯ, ಜಾಪತ್ರ, ಲವಂಗಮುಲು, ಅತಿಬಜ, ಪಿಪ್ಪಳ್ಳು, ಪಿಪ್ಪಲಮೂಲಂ, ಚಿಲ ಕರ, ಲೋಧ್ರಂ, ಮಾಸಿಬಸುಪು, ತೆಲ್ಲಸಾಸುವಲು, ಕೋಲುಮುಕ್ಕವಿತ್ತುಲು, ಧಾತಕೀಕುಸುಮಂ, ಅಜಾಮೋದಂ, ನಾಗಕೇಸರಮುಲು, ಕರ್ಪೂರ ಶಿಲಾ ಜಿತು, ಸೈಂಧವಲವಣಂ, ಮಾರೆಡುಪಂಡು, ಅಗುಲುಶುಂಠಿ, ಎಲಗವಿತ್ತುಲು, ಧಂಗಿವಿತ್ತುಲು, ಇಂಗು, ದಾಡಿಂಬಪಿಪ್ಪ, ಏಲಕ್ಕುಲು, ಬೂರುಗಬಂಕ, ಮಾರೆಡು ಗಿಂಜಲು, ಚಿಂತಗಿಂಜಲ ಬೊಬ್ಬಿಡ, ಷಡ್ಪಾಷ್ಪಕಂ, ಇಂತವಟ್ಟು ವಗಕು ಗ ೩ ತೂನು ಚೂರ್ಣಂಜೇಸಿ ಈ ಚೂರ್ಣಮುನಕು ಮೂಡುಪಾಳ್ಳು ಪ್ರಾತಬೆಲ್ಲಂವೇಸಿ ಮೊದಟಿ ಚೆಪ್ಪಿನ ಕಷಾಯಮುಲೊ ವೇಸಿ ತೇನೆ ಪಾಕಮುಗ ಕಾಚಿ ಇಂದುಲೊ ಚೂರ್ಣಂಜೇಸಿ ಲೇಹ್ಯ ಪಕ್ವಮುನ ದಿಂಚಿ ತೇನೆ ಬೋಸಿ ಪೋಕಂತ ಉಂಚುಲು ಜೇಸಿ ವಡಿಯಗಟ್ಟಿ ಪೆರುಗುತೋನೀಯುನು ಸಂಗ್ರಹಣಿ ಪೋವುನು. ೨

## ಗುಳಿಗೆ

ಜಾಕಾಯಿ, ಜಾಪತ್ರೆ, ಕುರಾಸಾನಿ, ಓವು, ಸಮುದ್ರ ಸೋಗೆಯ ಬೀಜ, ಗಸಗಸೆ, ಹಿಪ್ಪಲಿಯ ಎಲೆಯ ಮದ್ದು, ಇವಂ ಸಮಾನಗೊಂಡು ತೆಂಗಿನ ಕಾಯ ಹಾಲ ಬಿಟ್ಟು ಸಣ್ಣನಾಗಿ ತಿರುಹಿ ಅರಳೆಲೆಯಲ್ಲಿ ಬಲಿತ ಭಂಗಿಸೊಪ್ಪನು ಪೊಟ್ಟಣ ಗಟ್ಟಿ ತುಂಬ ಸಗಣಿ ಮೆತ್ತಿ, ಪುಟಕ್ಕೆ ಹಾಕಿ ಸಗಣಿ ಬೆಂದಮೇಲೆ ತೆಗೆದೊಣಗಿಸಿ ಇದರ ಕೂಡೆ ಎಲವದ ಹಗಿನು, ದಾಳಿಂಬದ ಹೀಚು, ಗಜ್ಜುಗದ ತಿರುಳು,

ಮಾವಿನ ವಾಟೆಯ ತಿರುಳು ಇವೆಲ್ಲವಂ ತೆಂಗಿನ ಹಾಲ ಬಿಟ್ಟು ಸಣ್ಣನಾಗರೆದು ಮೊದಲು ಹೇಳಿದ ಔಷಧವಂ ಒಂದು ಭಾಗ, ಕಡೆಯಲ್ಲಿ ಹೇಳಿದ ಔಷಧಿಯೂ ಭಂಗಿಯೂ ಕೂಡ ಒಂದು ಭಾಗ ಈ ವೋರೆಗೆ ಸರಿಮಾಡಿಕೊಂಡು ಈ ಎರಡು ಬಗೆಯ ಔಷಧಿಯನ್ನು ತೆಂಗಿನ ಹಣ್ಣುಗಾಯ ಒಂದು ಕಣ್ಣತಳೆದು ನೀರ ಕಡೆಗೆ ಸುರಿದು ಅದರಲ್ಲಿ ತುಂಬಿ ಆ ರಂಧ್ರಕ್ಕೆ ಬಣೆಯಂ ಬಲಿದವೋಲೆ ಕಾಯತುಂಬ ಕೆಮ್ಮಣ್ಣಮೆತ್ತಿ ಪುಟಹಾಕಿ ಒಳಗಿನ ಕಾಯ ವಾಟೆ ಕಪ್ಪಾದ ಬಳಿಕ ತೆಗೆದು ಸಣ್ಣನಾಗಿ ತಿರುಹಿ ಎಲಚಿಯ ಕಾಯ ಪ್ರಮಾಣ ಗುಳಿಗೆಯಂಮಾಡಿ ನೆಳಲಲ್ಲಿ ಒಣಗಿಸಿ ಜೇನುತುಪ್ಪದಲ್ಲಿ ಒಂದು ಗುಳಿಗೆಯಂ ತೆಗೆದುಕೊಂಡು ಆಮೇಲೆ ಘುಟದಲ್ಲಿ ಬೆಂದ ತೆಂಗಿನ ಕಾಯನ್ನು ಮೆಲುವುದು. ಪಥ್ಯ, ಗ್ರಾಹಿಯಾದ ಪದಾರ್ಥದಲ್ಲಿ ಅನ್ನವ ತೆಗದುಕೊಳ್ಳುವುದು ; ಬಹಳ ದಿನದ ಸಂಗ್ರಹಿಣಿಯೂ ಗುಣಮಕ್ಕು ; ಇದು ಕೈಗಂಡ ಪ್ರಯೋಗ. ೧

ಅಂತು ಸಂಹಿತೆ ೩, ಕಲ್ಕ ೧, ಲೇಹ್ಯ ೨, ಗುಳಿಗೆ ೧ ಸಹ ಪ್ರಯೋಗ ೭ಕ್ಕಂ ಶ್ರೀ.

---

## ಆಮಗ್ರಹಣಿ

### ಚಿಕಿತ್ಸೆ—ಕಲ್ಕ

ಮಿಟ್ಲಚಕ್ಕನು ತೇನೆತೊ ನೂರಿ ಗಜ್ಜುಕಾಯಂತ ಈಯುನು ಕಡುಪುನುಲಿ, ಆಮಗ್ರಹಣಿ ಸಹ ನಿಲುಚುನು. ೧

### ಕಷಾಯ

ಶುಂಠಿ, ಭದ್ರಮುಸ್ತೆ, ಅತಿಬಜೆ, ಅಮರದವಳ್ಳಿ ಇವಂ ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಆಮಗ್ರಹಣಿ, ಅಗ್ನಿಮಾಂದ್ಯ, ಹುಳಿದೇಗು ಮುಂತಾಗಿ ಗುಣಮಕ್ಕು. ೧

### ಚರ್ಮದೋಷ ಗ್ರಹಣಿಗೆ ಕಷಾಯ

ತೆಲ್ಲಗಲಜರ, ಮಾನಿಬಸುಪು, ಕರಕ್ಕಾಯ, ತಿಪ್ಪತೀಗ ವೀನಿ.ಗೋಮೂತ್ರ ಮುನ ಕಷಾಯಂಬೆಟ್ಟಿ ಮಹಿಷಾಕ್ಷಿ ಗುಗ್ಗಿಲಂ ಪ್ರತಿಪಾಕಂ ಜೇಸಿ ಇಚ್ಚಿತೆ ಚರ್ಮದೋಷಗ್ರಹಣಿ, ಶೋಥ, ಉದರರೋಗಂ, ಸ್ಥೂಲತ್ವಂ, ನೋರು ಎಂಡೇದಿ, ಊರ್ಧ್ವಶ್ವಾಸಂ, ಶ್ಲೇಷ್ಮಂ ಸಹ ಮಾನುನು. ೧

## ಮೂಲವ್ಯಾಧಿಯ ಗ್ರಹಣಿಯಃ ಗುಳಿಗೆ

ಚಿತ್ರಮೂಲಂ, ಇಂಗುವ ಸಹ ಕಾಚೇದಿ; ಅಜಾಮೋದಂ, ಶುಂಠಿ, ಪಿಪ್ಪಲಿ, ಮಿರಿಯಾಲು, ವೀನಿ ವೆಚ್ಚಜೇಸಿ ಗಂಟುಭಾರಂಗಿ, ಪಾಪರವೇಳ್ಳು, ಅತಿವಜ, ತಂಗೇಡುವೇಳ್ಳು, ಚವ್ಯಂ, ದಾಡಿಂಬಚಿಪ್ಪು, ಪೆದ್ದಮಾನಿಚಕ್ಕ, ಕರ್ಕಾಟಕಶೃಂಗಿ, ಪ್ರಬ್ಬನಾರು, ಅಮರದವಳ್ಳಿ ಇವಿನ್ನಿ ವೆಚ್ಚ ಜೇಸೇದಿ; ಲವಂಗಚಕ್ಕ, ಲವಂಗಪತ್ರ, ಏಲಕ್ಕುಲು, ನಾಗಕೇಸರಮುಲು, ತುಂಗಮುಸ್ತಲು, ಚಿಂತಗಿಂಜ ಪೊಟ್ಟು, ಪಿಲ್ಲಪೀಚರವೇಳ್ಳು, ಅತಿವಜ, ತಂಗೇಡುವೇಳ್ಳು, ದೀನಿ ವಿತ್ತುಲು, ಆವಾಲು, ಪಲ್ಲೇರುವೇಳ್ಳು ವೀನಿ ವೆಚ್ಚಜೇಸಿ ಈ ದ್ರವ್ಯಮುಲಕು ಐದುಪಾಳ್ಳು ಜೀಡಿವಿತ್ತುಲು ವೇಸಿ ಇಂತ ಚೂರ್ಣಂಜೇಸಿ ಆವಿದಮುನು ಪೋಸಿ ಗಜ್ಜಕಾಯಂತ ಉಂಟಲುಜೇಸಿ ಬೂರುಗ ಬಂಕತೋನ್ನೈನ ತಂಗೇಡುವೇಳ್ಳು ಕಷಾಯ್ಯಮುಂದ್ಯೈನ, ಪೆರುಗುತೋನ್ನೈನನು ಇಚ್ಚಿತೆ ಮೂಲವ್ಯಾಧಿ, ಗ್ರಹಣಿ, ರಕ್ತಗ್ರಹಣಿ, ಆಮಗ್ರಹಣಿ, ಸಮಸ್ತಮ್ಯೆನ ಅತಿಸಾರಮುಲು ಸಹ ಚ್ಯೆಬಟ್ಟಿನಟ್ಟು ನಿಲುಚುನು. ೧

## ಪ್ರವೃತ್ತಿ ನಿಲ್ಲುವುದಕ್ಕೆ ಸಂಹಿತೆ

ಸೂರ್ಯನಿಗೆ ಅಭಿಮುಖವಾಗಿ ಇದ್ದ ಕಗ್ಗಲೀ ಕೊನರ ಒಂದು ಹಿಡಿಯನ್ನು ಮೂರು ಉಗನಿಯ ಎಲೆಯಲ್ಲಿ ಪೊಟ್ಟಣಂಗಟ್ಟಿ ದಾಗುಡಿ ಹಂಬಿನಲ್ಲಿ ಬಿಗಿದು ಮೂರು ಹಿಡಿ ಹುತ್ತದ ಮಣ್ಣಮೆತ್ತಿ ಸಾರಿಸಿದ ನೆಲದಲ್ಲಿ ಪುಟವ ಹಾಕಿ ಆ ಕೊನರ ತೆಗೆದುಕೊಂಡು ಕೋಣನ ತಾಯ ಮೊಸರಿನಲ್ಲಿ ಅರೆದು ಉಂಡೆಮಾಡಿ ಕೆಳಗೂ ಮೇಲೂ ಕಟ್ಟುಮೊಸರನಿಕ್ಕಿ ಮೊದಲು ದಿನ ೫ ಗುಳಿಗೆ, ಮರುದಿನ ೭ ಗುಳಿಗೆ, ಮೂರನೆಯ ದಿನ ೯ ಗುಳಿಗೆಯ ಕೊಡಲು ಪ್ರವೃತ್ತಿ ನಿಲ್ಲುವುದು ೧

ರಸಾಂಜನ, ಲಾಮಂಚ, ಶ್ರೀಗಂಧ, ಬತ್ತದ ಅರಳು, ಸಹ ಚೂರ್ಣ ಮಾಡಿ ಮೊಸರಿನಲ್ಲಿ ಹಾಕಿ ಕದಡಿ ಕುಡಿಯೆ ಅತಿವಿರೇಕಂ ನಿಲ್ಗುಂ. ೨

## ಕಲ್ಕ

ಪದ್ಮಕ, ಲಾಮಂಚ, ನಾಗಕೇಸರಿ, ಶ್ರೀಗಂಧ ಇವಂ ಬಿಸಿನೀರಿಂದರೆದು ಕೆಲವಂ ಕುಡಿಯಕೊಟ್ಟು ಕೆಲವಂ ಮ್ಯೆಗೆ ತೊಡೆಯಲು ಪ್ರವೃತ್ತಿ ನಿಲುವುದು. ೧

ಚಂದ್ರಚಕ್ಕನು ಪಚ್ಚಿದಿ ತೆಚ್ಚಿ ಮಜ್ಜಿಗತೊ ನೂರಿ ಈಯುನು ವಿರೇಚನಂ ನಿಲುಚುನು. ೨

ಅಂತು ಕಲ್ಕ ೩, ಕಷಾಯ ೨, ಗುಳಿಗೆ ೩ ಸಹ ಪ್ರಯೋಗ ೮ ಕ್ಕಂ. ಶ್ರೀ.

## ಗ್ರಹಣ್ಯಾತಿಸಾರ ಛರ್ದಿ

### ಚಿಕಿತ್ಸೆ—ಕಲ್ಕ

ಕೊಡಸಿಗೆಬೀಜ, ಶುಂಠಿ, ಹಿಪ್ಪಲಿ, ಮೆಣಸು, ಕೊಡನಾರಿಗೆಡ್ಡೆ, ಬೂರುಗದ ಮೇಣ, ಹುಣಿಸೆಬೀಜದ ಹುರುಕು, ಓಮ, ಕುರಾಸಾನಿ, ಇಷ್ಟನೂ ಅರೆದು ದಾಳಿಂಬದ ಕಾಯಲ್ಲಿ ಮೂರು ಪುಟವಹಾಕಿ ಆರಿದಮೇಲೆ ತೆಗೆದು ಬಾಳೆಯ ಹೂವಿನ ರಸದಲ್ಲರೆದು ಗಜ್ಜುಗದ ಗಾತ್ರವಂ ಬಿಸಿನೀರಿಂದ ಸೇವಿಸೆ ಗ್ರಹಣ್ಯಾತಿಸಾರಾದಿಗಳು ಗುಣಮಕ್ಕುಂ. ೧

### ಗುಳಿಗೆ

ಬೂರುಗದ ಮೇಣ, ಶುಂಠಿ, ಹಿಪ್ಪಲಿ, ಮೆಣಸು, ವಾದಕ್ಕಿ, ಬಿಳುಗಾರ, ಜೀರಿಗೆ, ಕರಿಜೀರಿಗೆ, ಅಗುಳುಶುಂಠಿ, ಅತಿಬಜೆ, ಕೊಡನಾರಿಗೆಡ್ಡೆ, ಸೈಂಧವ, ಹಿಪ್ಪಲಮೂಲ, ಗಜಹಿಪ್ಪಲಿ, ಅಳಿಲೆಕಾಯಿ, ಇಂಗು, ಎಲೆಮದ್ದು, ಜಾಕಾಯಿ, ಏಲಕ್ಕಿ, ಲವಂಗದ ಚಕ್ಕೆ, ಲವಂಗಪತ್ರೆ, ನಾಗಕೇಸರಿ ಇವುಗಳನ್ನು ಸಮಭಾಗವಾಗಿ ಬಿಸಿಮಾಡಿ ಬಿಸಿನೀರಿಂದರೆದು ಮಾದಳದ ಹಣ್ಣಿನ ಬೀಜವಂ ತೆಗೆದದರಲ್ಲಿ ತುಂಬಿ ಮೂರು ಪುಟವಹಾಕಿ ಗ ೧ ತೂಕ ಮಾತ್ರೆಗಳ ಮಾಡಿ ಒಣಗಿಸಿ ಮಡಗಿಕೊಂಡು ಒಂದು ಮಾತ್ರೆಯಂ ಕೆಂಪಿನ ಹತ್ತಿಕಾಯ ರಸದಲ್ಲರೆದು ಕೊಡೆ ಗ್ರಹಣ್ಯಾತಿಸಾರಂ ಮಾಣ್ಗುಂ. ೧

### ಲೇಹ್ಯ—ಬಿಲ್ವಾದಿಲೇಹ್ಯ

ಮಾರೆಡುಪಂಡು, ವಿಷಮುಷ್ಟಿಗಿಂಜಲು, ಪಿಪ್ಪಲಮೂಲಂ, ಪಿಪ್ಪಳ್ಳು, ಏಲಕ್ಕುಲು, ಬೂರುಗಬಂಕ, ಓಮಂ, ಧಾತಕೀಕುಸುಮಂ, ವೀನಿ ಸಮಚೂರ್ಣಂ ಜೇಸಿ ಪ್ರಾತದೆಲ್ಲಂ ಸೇರ್ಲು ೪, ಚಿಂತಾಕು ಕಷಾಯಂ ಸೇರ್ಲು ೪, ತೇನೆ ಈ ದ್ರವ್ಯಮುಲ ಚೇತನು ಕಷಾಯಂಬೆಟ್ಟಿ ಈ ಚೂರ್ಣಮುನು ಆ ಕಷಾಯಮುಲೊ ಕಲಪಿ ಲೇಹ್ಯ ಪಕ್ವಮುಗ ವಂಡಿ ದಿಂಚುಕೊನಿ ಆ ತೇನೆ ವೇಸಿ ಕಲಪಿ ಕರ್ಷಮಾತ್ರಂ ಸೇವಿಂಚುನು ಸರ್ವವ್ಯೈನ ಅತಿಸಾರಮುಲು, ಗ್ರಹಣಿ, ಆಮಗ್ರಹಣಿ, ಸರ್ವಜ್ವರಂ, ಸಮಸ್ತ ಛರ್ದಿರೋಗಂ ಸಹ ನಾಶಮೌನು ; ಚತುರ್ಮುಖ ಬ್ರಹ್ಮನಿಚೇ ಚೆಪ್ಪಿನ ಯೋಗವಿದಿ. ೧

ಅಂತು ಕಲ್ಕ ೧, ಗುಳಿಗೆ ೧, ಲೇಹ್ಯ ೧ ಸಹ ಚಿಕಿತ್ಸೆ ೩ ಕ್ಕಂ ಶ್ರೀ.

ಈ ಅತಿಸಾರ ರೋಗಕ್ಕೆ ಪಥ್ಯಾಪಥ್ಯದ್ರವ್ಯಂಗಳಾವುವೆನೆ ಪಡುವಲದ ಕಾಯಿ ಕೊಡಸಿಗೆಚಕ್ಕೆ, ಜೀರಿಗೆ, ಪುಲ್ಲಂಪುರುಚಿಸೊಪ್ಪು, ಬಾಳೆಯ ಕಾಯಿ, ಆಡಿನ ಮೊಸರು, ಕಳ್ಳಂಗಡಲೆ, ಎಣ್ಣೆ, ಕರಿಬೇವು, ಚಕ್ರವರ್ತಿಡ ಸೊಪ್ಪು, ಕಷ್ಟಕಾಯಿ, ಬೇಲದ ಹಣ್ಣು, ತೊಗರಿಕಟ್ಟು, ಬಾಳೆಯ ಮೋತೆ ಸಹ ಪಥ್ಯಕಾರಿಗಳೆಂದರಿವುದು ; ಮತ್ತಂ ಎಳ್ಳು, ಅವರೆಕಾಯಿ, ಕುಂಬಳಕಾಯಿ, ಮುಳ್ಳುಸೌತೆಕಾಯಿ, ಬಸಲೆಯ ಸೊಪ್ಪು, ಸೋರೆಕಾಯಿ, ಗೆಣಸು, ದೋಸೆ, ಮದ್ಯ, ಮಾಂಸ, ಬೆಲ್ಲ, ಶೀತವಾದ ದ್ರವ್ಯ, ಹುಳಿಯಾದ ದ್ರವ್ಯ, ತಣ್ಣೀರ ಪಾನ, ತಾಂಬೂಲ, ಸ್ನಾನ, ಜಾಗರಣೆ, ಸ್ತ್ರೀಸಂಗ, ಹಸಿಪದಾರ್ಥ, ಗುರುತ್ವವಾದ ವಸ್ತು, ಸಹ ಇವೆಲ್ಲಂ ಅತಿಸಾರ ರೋಗದಲ್ಲಿ ಅಪಥ್ಯಕಾರಿಗಳೆಂದು ತಿಳಿವುದು.

ಅಂತು ಅತಿಸಾರರೋಗಕ್ಕೆ ಜ್ವರಾತಿಸಾರದ ಬಗೆ ೧, ರಕ್ತಾತಿಸಾರದ ಬಗೆ ೧, ಆಮಾತಿಸಾರದ ಬಗೆ ೧, ವಾತಾತಿಸಾರದ ಬಗೆ ೧, ಪಿತ್ತಾತಿಸಾರ ೧, ಶ್ಲೇಷ್ಮಾತಿಸಾರ, ೧, ದೋಷಾತಿಸಾರ ೧, ಸರ್ವಾತಿಸಾರ ೧, ಗ್ರಹಣಿ ಬಗೆ ೧, ಪಿತ್ತಗ್ರಹಣಿ ೧, ಶ್ಲೇಷ್ಮಗ್ರಹಣಿ ೧, ರಕ್ತಗ್ರಹಣಿ ೧, ಚರ್ಮದೋಷಗ್ರಹಣಿ ೧, ಶೂಲವ್ಯಾಧಿಯ ಗ್ರಹಣಿ ೧, ಪ್ರವೃತ್ತಿಸಿಲ್ಲುವ ಬಗೆ ೧, ಗ್ರಹಣ್ಯಾತಿಸಾರದ ಛರ್ದಿ ಬಗೆ ೧, ಸಹ ಕುಳ ೧೭ಕ್ಕಂ ಸಂಹಿತೆ ೯೮, ಕಲ್ಕ ೩೪, ಕಷಾಯ ೭೩, ಗುಳಿಗೆ ೩೭, ಚೂರ್ಣ ೨೪, ಘೃತ ೭, ತೈಲ ೩, ಲೇಹ್ಯ೧೩, ಲೇಪ ೧, ಬತ್ತಿ ೧, ಪ್ರಯೋಗ ೨, ಅನುಪಾನದ ಬಗೆ ೧, ಪಥ್ಯಾಪಥ್ಯಂಗಳ ಬಗೆ ೧ ಸಹ ಪೇಳ್ದ ಪ್ರಯೋಗ ೩೦೫ ಕ್ಕಂ ಸಮಾಪ್ತಂ.

---

## ವಿಷೂಚೀರೋಗಂ

ಲಕ್ಷಣಂ.—ನಿತ್ಯದಲ್ಲಿಯೂ ಅತ್ಯಂತವಾದ ಆಹಾರ, ವಿರುದ್ಧವಾದ ಆಹಾರ, ಗುರುತ್ವವುಳ್ಳ ಆಹಾರ, ಅಗ್ನಿಮಾಂದ್ಯಗಳಪ್ಪ ಆಹಾರಗಳಿಂದಲೂ ಮನುಷ್ಯರಿಗೆ ವಿಷೂಚಿಯೆಂಬ ರೋಗವುಂಟಾಗುತ್ತಿಹುದೆಂತೆನೆ—ಆಹಾರ ವೈಷಮ್ಯದೋಷದಿಂ ವಾತ ಪಿತ್ತ ಶ್ಲೇಷ್ಮಗಳು ಪ್ರಕೋಪಿಸಿ ಶರೀರವೆಲ್ಲವಂ ಸೂಜಿಯಲ್ಲಿ ಚುಚ್ಚಿದ ಹಾಗೆ ವೇದನೆಯನ್ನುಂಟುಮಾಡುವುದರಿಂದ ಈ ರೋಗಕ್ಕೆ ವಿಷೂಚೀ ಎಂಬ ಪೆಸರುಂ ಟಾಯಿತು. ಇದರಲ್ಲಿ ವಿಷೂಚಿಕವೆಂದು ಅಲಸಿಕವೆಂದು ಅಜೀರ್ಣಕವೆಂದು ವಿಳಂಬಿಕವೆಂದು ಸಶೇಷವೆಂದು ವಿಷೂಚಿಕಾರೋಗವೈದುತೆರನಾಗಿರ್ಪುದು. ಮತ್ತಮಿದರಲ್ಲಿ ಮೊದಲು ಪೇಳ್ದ ವಿಷೂಚಿ ಎಂಬ ರೋಗವು ವಾತಪಿತ್ತ, ಶ್ಲೇಷ್ಮ

ಚಿಹ್ನೆಗಳಿಂದ ಮೂರುವಿಧವಾಗಿರ್ಪುವುದೆಂತೆನೆ:—ಭ್ರಮೆಯುಂಟಾಗಿ ಮೈನಡು ಗುತ್ತ ಶರೀರದಲ್ಲಿ ಬೆವರುಪುಟ್ಟಿ ಹೊಟ್ಟೆಶೂಲೆಯುಂಟಾಗಿ ಹೊಟ್ಟೆಯುಬ್ಬರಿಸುತ್ತ ಈ ಉಪದ್ರವಗಳುಂಟಾದುದೆ ವಾತಜನ್ಯ ವಿಷೂಚಿಯೆಂದರಿವುದು.

ಬಾಯಾರಿಕೆಯು, ಜ್ವರವು, ಒಳತಾಪವು, ಮೂರ್ಛೆಯು ವೆಗ್ಗಳವಾಗಿ ಹೊಟ್ಟೆಹೋಗುವುದು, ಪ್ರಳಾಪವು ಇನಿತು ಉಂಟಾಗಿರ್ಪುದೇ ಪಿತ್ತಜವಿಷೂಚಿ ಯೆಂದು ತಿಳಿವುದು.

ವೈಥಾರವು, ಓಕರಿಕೆಯು, ಮಾತನಾಡಲು ಸಾಮರ್ಥ್ಯವಿಲ್ಲದಿರುವುದು, ಜಾಡ್ಯವು, ಹೊಟ್ಟೆಹರಿವುದು, ಇವು ಮುಂತಾದುಪದ್ರವಂಗಳಿಂದೊಡಗೂಡಿಹುದೆ ಶ್ಲೇಷ್ಮಜನ್ಯ ವಿಷೂಚಿಯೆಂದರಿವುದು.

ಅಲಸಿಕವೆಂದು, ದಂಡಕಾಲಸಕವೆಂದು ಎರಡುತೆರನಿದರಲ್ಲಿ ಹೊಟ್ಟೆಯುಬ್ಬ ರಿಸಿಕೊಂಡು ದುಷ್ಟವಾದ, ಅನ್ನದ ಅಗಳು ಕೆಳಯಿಂಕೆ ಹೋಗದೆ ಊರ್ಧ್ವಮಾ ಗಿಯೂ ತಿರುಗದೆ ಆಮರೂಪವಾಗಿ ಅತ್ಯಂತ ಜಡತ್ವವನ್ನೂ, ಅಲಸಿಕೆಯನ್ನೂ ಉಂಟುಮಾಡುವುದಾದಕಾರಣದಿಂದೀ ಲಕ್ಷಣಗಳುಳ್ಳುದೇ ಅಲಸಿಕವೆಂದು ಪೇಳಿಸಿ ಕೊಂಡಿತು.

ಮಂದಾಗ್ನಿಯಾಗಿ ದುರ್ಬಲವಾಗಿ ಇದ್ದವನು ತೆಗೆದುಕೊಂಡನ್ನವು ವಾತ ಶ್ಲೇಷ್ಮಗಳಿಂದ ದುಷ್ಟವಾಗಿ, ಆಲಸ್ಯವನ್ನುಂಟುಮಾಡುತ ದಸಿಯೇರಿಸಿದ ಹಾಗೆ ಹೊಟ್ಟೆಯಲ್ಲಿ ಅತ್ಯಂತ ವೇದನೆಯನ್ನೂ ಹೆಚ್ಚಾಗಿ ಹೊಟ್ಟೆಯುಬ್ಬರವನ್ನೂ ಉಂಟು ಮಾಡುತ ವಾಂತಿವಿರೇಚನೆಗಳೊಂದನೂ ಆಗಬಿಡದೆ ವಾತಪಿತ್ತಶ್ಲೇಷ್ಮಗಳು ತಂತಮ್ಮ ಚೈತನ್ಯವ ಕಾಣಿಸದೆ ಆ ಶರೀರವಂ ಹುಡಿ ಬಿಟ್ಟ ಮರದ ಹಾಗೆ ಬೆರೆತು ಇಹುದಾದ್ದರಿಂದ ದಂಡಕಾಲ ಸಕವೆನಿಸಿಕೊಂಡೀ ರೋಗವುಂಟಾದ ಮನುಷ್ಯನು ಯಮದಂಡದಿಂ ಪೊಡೆಯಿಸಿಕೊಂಡವನೋಪಾದಿಯಲ್ಲಿ ಮರಣವನ್ನೈದುವನು.

ಅಜೀರ್ಣವೆಂಬ ವಿಷೂಚಿಯು ಆಮವೆಂದು, ವಿದಗ್ಧವೆಂದು, ವಿಷ್ಟಂಭವೆಂದು ಮೂರುವಿಧವಾಗಿರ್ಪುದು. ಇದರಲ್ಲಿ ಅಗುಳುಗಳಾಗಿ ಹೊಟ್ಟೆಹೋಗುವುದಾಮವೆನಿಸಿ ಕೊಂಬುದು; ಎದೆಯುರಿತ ಕಾಣಿಸುವುದು ವಿದಗ್ಧವೆನಿಸಿಕೊಂಬುದು. ಹೊಟ್ಟೆ ಯುಬ್ಬರಿಸುವುದೇ ವಿಷ್ಟಂಭವೆನಿಸಿಕೊಳ್ಳುವುದು. ದಿನದಿನದಲ್ಲಿಯೂ ಬೋದಬೋಟೆ ಯಾಗಿ ಹೊಟ್ಟೆಹೋಗುತ್ತ ಇರುವುದೇ ವಿಷ್ಟಂಭವೆನಿಸಿಕೊಂಬುದು. ಜೀರ್ಣಾ ಜೀರ್ಣವೊಡನೆ ಕೂಡಿಕೊಂಡಿರ್ದ ವಿಷೂಚಿಯು ರಸಶೇಷವೆನಿಸಿಕೊಂಬುದು. ಹಲ್ಲುಗಳು, ಉಗುರುಗಳು, ಮುಂಗೈಗಳು ಸಹ ನೀಲವರ್ಣವಾಗಿ ಕಣ್ಣುಗಳು ಕುಳಿಬಿದ್ದು ಮೈ ಕೈ ಸಂದುಗಳು ಸಡಿಲವಲ್ಲದೆ ಇರಲಾತನು ಬದುಕಲರಿಯನೆಂದ ರಿವುದು, ಈ ಲಕ್ಷಣವುಳ್ಳವನೆ ಅಜೀರ್ಣ ವಿಷೂಚಿಯುಳ್ಳವನೆಂದು ತಿಳಿವುದು. ಈ ರೋಗವುಂಟಾದವನಿಗೆ ಜ್ಞಾನತಪ್ಪಿ ಮರವೆಯುಂಟಾಗುವುದು; ಆ ಮರವೆ

ಯುಂಟಾದ ಸಮಯದಲ್ಲಿ ಸಮಸ್ತ ರೋಗಗಳೂ ಬಂದೆಡೆಗೊಂಬುವುದರಿಂ ಜ್ಞಾನ ತಪ್ಪದಂತೆ ಮುನ್ನವೆ ಚಿಕಿತ್ಸೆಯಂ ನಡೆಸುವ ವೈದ್ಯನೇ ಬುದ್ಧಿವಂತನೆನಿಸಿಕೊಳ್ಳು ವನು. ಇದರಲ್ಲಿ ಆಮವೆಂಬ ವಿಷೂಚಿಯಲ್ಲಿ ಲಂಘನವಂ ವಿದಗ್ಧವೆಂಬ ವಿಷೂಚಿ ಯಲ್ಲಿ ಜಲಪಾನವಂ ರಸಶೇಷವೆಂಬ ಅಜೀರ್ಣದಲ್ಲಿ ದಿವಾನಿದ್ರೆಯಂ ವಿಷ್ಟಂಧಾ ಜೀರ್ಣದಲ್ಲಿ ವಮನವಂ ಮಾಳ್ಪುದು. ಈ ಪ್ರಕಾರಕ್ಕೆ ಆಯಾ ಅಜೀರ್ಣ ವಿಷೂಚಿ ಗಳಿಗೆ ಆವ ಚಿಕಿತ್ಸೆಯನೇ ಪೇಳಿಯಿಡೆಯಾಚಿಕಿತ್ಸೆಯನ್ನೇ ಶೀಘ್ರವಾಗಿ ನಡೆಸು ವಾತನೇ ವೈದ್ಯರಲ್ಲಿ ಕುಶಲನೆನಿಸಿಕೊಂಬನು. ಈ ವಿಷೂಚೀರೋಗದಲ್ಲಿ ಒಂದು ಹಲ ಬಜೆಯು ಭಸ್ಮಕ್ಕೆ ತಕ್ಕಷ್ಟು ಬಿಸಿನೀರ ಹನಿಸಿ ಕುಡಿಯೆ ವಿಷೂಚಿ ಆಗಲೆ ಪರಿ ಹರವಹುದು. ಈ ವಿಷೂಚಿಯಲ್ಲಿ ಬಹುಶಃ ತ್ರಾಣಗೂಡಿ ಅತ್ಯಂತ ಬಳಲಿಕೆಯುಂ ಟಾಗಿ ದಾಹವೇರಿದವರಿಗೆ ಮಜ್ಜಿಗೆ, ಮೊಸರು, ಎಳನೀರು, ಗಂಜಿ ಮುಂತಾಗಿ ದೊರೆತುದ ಕಿಂಚಿತ್ತು ಕೊಡಿಸಿ ಸಂತರ್ಪಣೆಯಂ ಮಾಡಿಸಿ ಆಮೇಲೆ ಚಿಕಿತ್ಸೆಯಂ ಮಾಡಿಸುವುದು. ಹಾಗಲ್ಲದೆ ನಿತ್ರಾಣವೂ ಬಳಲಿಕೆಯೂ, ಶಕ್ತಿಹೀನವೂ ಉಂಟಾ ದವರಿಗೆ ಸಂತರ್ಪಣವ ಮಾಡದೆ ಕಂಗೆಡಿಕೆ ಮೇಲೆ ಕಠಿಣವಾಗಿ ಚಿಕಿತ್ಸೆ ಮಾಡೇ ನೆಂದರೆ ಪ್ರಾಣನಿಲಲರಿಯದು. ಮತ್ತಂ ತಾಳೇಮರದ ಬೇರನು ಅಕ್ಕಿಗಚ್ಚಿನಲ್ಲರೆದು ನಾಭಿಗೆ ಲೇಪವಂ ಮಾಡೆ ಆಗತಾನೆ ವಿಷೂಚಿ ಪರಿಹರವಹುದು. ಮತ್ತಮಾ ವಿಷೂಚೀ ಭೇದವಾದ ನೀರಕೊಂಬಿನ ರೋಗನಿಧಾನಮೆಂತೆಂದೆನೆ ವಾಯುವಿ ನಿಂದ ಮಲಶ್ಲೇಷ್ಮ ರಕ್ತಗಳು ಮುಂತಾಗಿ ಸ್ವಸ್ಥಾನವ ಬಿಟ್ಟು ಕೆಲದಲ್ಲಿರುತ ಮಲ ವಿಲ್ಲದೆ ನೊರೆ ಸಹಿತವಾಗಿ ಬರಿಯ ನೀರೇ ಪ್ರವಾಹಿಕವಾಗಿ ಸುರಿವುದ ನೀರ ಕೊಂಬೆನಿಸಿಕೊಂಬ ರೋಗವೆಂದರಿವುದು.

## ಚಿಕಿತ್ಸೆ—ಸಂಹಿತೆಗಳು

ಉತ್ತರಣೆಯ ಸಮೂಲವಂ ಮಜ್ಜಿಗೆಯೊಳಗೆ ಜಜ್ಜುಗುಟ್ಟಿ ಹಿಂಡಿಕೊಂಡು ಜೀರಿಗೆಯ ಪುಡಿಯನು ಆ ರಸದಲ್ಲಿ ಕಲಸಿ ಕೊಡಲು ನೂರಾರು ಬಾರಿ ಎತ್ತುವ ವಿಷೂಚಿಯೂ ಆವ ಚಿಕಿತ್ಸೆಗೂ ನಿಲ್ಲದ ಮಹಾ ದುಸ್ತರವಾದ ವಿಷೂಚಿಯಾದರೂ ಅಕ್ಷಣವೇ ಮಾಣ್ಗುಂ. ೧

ಮೆಳೆಯ ಮೇಲೆ ಹಬ್ಬಿ .ಕೊನೆ ಜೋಲಾಡುವ ದಾಗುಡಿಸೊಪ್ಪನು ತಂದು ತಣ್ಣೀರಲ್ಲ ಅರೆದು ಕುಡಿಸಲು ವಿಷೂಚಿ ಪರಿಹರ. ಬಹಳವಾಗಿ ಶರೀರ ಕಂಗೆಟ್ಟು ಪ್ರಾಣ ಸಂದೇಹವಾಗಿರ್ದ ಹೊತ್ತಿಗೂ ಅವನ ತಂದೆತಾಯಿಗಳಾಗಲಿ ಸೋದರ ಮಾವನಿಗಾಗಲಿ ಇಲ್ಲದೆ ಮತ್ತೊಬ್ಬ ಆಪ್ತನಿಗಾಗಲಿ ಕುಡಿಯಿಸಿ ಅವನ ಕೈಯಿಂದ ವಿಷೂಚಿ ಹತ್ತಿದವನ ಕಿವಿಯಲ್ಲಿ ಊದಿಸೆ ಚೈತನ್ಯಗೂಡಿ ವಿಷೂಚಿ ಪರಿಹರ ಮಕ್ಕುಂ. ೨

ಬಜೆಯ ಭಸ್ಮವಂ ಬಿಸಿನೀರಲ್ಲಿ ಅರೆದು ಕದಡಿ ಕುಡಿಯಿಸೆ ವಿಷೂಚಿ ಮಾಣ್ಗುಂ. ೩

ಎಲೆಮದ್ದು, ಲವಂಗ, ಅತಿಮಧುರ, ಜಾಕಾಯಿ, ಬಿಳಿಗಾರ, ಉಮ್ಮತ್ತದ ಬೀಜವ ಸುಟ್ಟಮಸಿ—ಇವು ಪ್ರತ್ಯೇಕ ಗ ೨ ತೂಕದಲ್ಲಿ ಅರ್ಧಾಯವಂ ಒಳ್ಳೆಣ್ಣೆಯಲ್ಲಿ ಬಿಸಿಮಾಡಿ ಅರ್ಧಾಯವಂ ಹಸಿಯದನೆ ಮಡಗಿಕೊಂಡು ಈ ಹಸಿಬಿಸಿ ದ್ರವ್ಯಗಳೆರಡನೂ ಕೂಡಿಸಿ ಒಳ್ಳೆಣ್ಣೆಯಿಂ ಮರ್ದಿಸಿ ಭರಣಿಯಲ್ಲಿ ಮಡಗಿಕೊಂಡು ವಿಷೂಚಿ ಯೆತ್ತಿದವರಿಗೆ ಕಡಲೆಯುಪ್ಪನು ತೆಗೆದು ನಾಲಗೆಗೆ ಎಚ್ಚಲು ವಿಷೂಚಿ ಗುಣಮಕ್ಕುಂ. ೪

ಅಫಿನಿ, ಲವಂಗಂ, ಅತಿಮಧುರಂ, ಅತಿಪಜ, ಜಾಕಾಯ, ಉಮ್ಮೆತ್ತವಿತ್ತುಲನು ಕಾಲ್ಚಿನಮಸಿ, ಜಾಪತ್ರ, ವೆಲಿಗಾರಂ, ಇವಿ ವಗಕು ಗ ೨ ತೂನು ಲೆಕ್ಕಮುನ ಕೂರ್ಚಿ ಈ ದ್ರವ್ಯಮುಲ ಸಗಂ ನೂನೆತೊ ಉಡುಕಿಂಚಿ ಸಗಂ ಪಚ್ಚಿದಿತೊ ಕೂಡ ನೂನೆಬೋಸಿ ಮರ್ದಿಂಚಿ ಕರಟಮುನ ಬೆಟ್ಟಿ ವಿಷೂಚಿಯೆತ್ತಿನಪ್ಪುಡು ಶನಿಗ ಗಿಂಜಲಂತ ನಾಲಿಕಮಿಾದ ಚರಿಮಿತೆ ವಿಷೂಚಿ ಮಾನುನು. ೫

ಪೆದ್ದಮಾನಿ ಚಕ್ಕ ರಸಮುನು ನೂನೆತೊ ಕಾಚಿ ದಿಂಚಿ ದಾನಿಲೊ ಪೋಸಿತೆ ಪೊಂಗುವಚ್ಚುಚುನ್ನದಿ ; ಆ ಪೊಂಗುಟ ಸಹಿಂಚಿನ ಪಾಟುನ ತಾಗಿತೆ ವಿಷೂಚಿ ಮಾನುನು. ೬

ಪೋಕಪಟ ಭಸ್ಮಂ, ತಾಂಡ್ರಿಕಾಯಲ ಭಸ್ಮಂ, ಅಗುಲುಶುಂಠಿ ಭಸ್ಮಂ, ವಜಭಸ್ಮಂ, ಮಿರಿಯಮುಲ ಭಸ್ಮಂ, ಕರಿವೇಪಾಕು ಭಸ್ಮಂ, ತಲ್ಲಬಟ್ಟ ಭಸ್ಮಂ, ಬೋದವೆನ್ನುಲ ಭಸ್ಮಂ, ಶುಂಠಿಭಸ್ಮಂ, ಚಿಕ್ಕಣಪುವಕ್ಕಲ ಭಸ್ಮಂ, ಈ ಭಸ್ಮಮುಲನು ಸಮಮುಗ ಗೂರ್ಚಿ ಮೊದಟಿಪಚ್ಚಿವಿ ಕರುಕುಲು ಜೇಸಿ ಅಷ್ಟಾವಶೇಷಮುಗ ಕಷಾಯಂಕಾಸಿ ಈ ಕಷಾಯಮುಲೊ ಗ ೨ ಎತ್ತು ಈ ಭಸ್ಮಂ ಕಲಪಿ ಸೇವಿಂಚಿತೆ ವಿಷೂಚಿ, ವಾಂತಿ, ಭ್ರಾಂತಿ ನೀಳ್ಳುದಾಹಂ ಸಹ ಗುಣಮೌನು. ೭

## ಕಷಾಯಗಳು

ಕರಿಬೇವು ಗ ೬ ಎತ್ತು, ಅಳಲೆಕಾಯಿ ಗ ೪ ಎತ್ತು, ಶುಂಠಿ ಗ ೨ ತೂಕ ಇವಂ ಅಷ್ಟಾವಶೇಷವಾಗಿ ಕಷಾಯಂ ಕಾಸಿ ತೆಗೆದುಕೊಳ್ಳಲು ವಿಷೂಚಿ ಪರಿಹರ. ೧

ಒಂದುಸೊಲಿಗೆ ಮೆಣಸನ್ನು ಅರೆಪಡಿ ನೀರೊಳಗೆ ಹಾಕಿ ಸೊಲಿಗೆಯಾಗುವ ಹಾಗೆ ಕಾಸಿ ಕಾಳು ಮೆಣಸನಿಕ್ಕಿ ಅರೆದು ಈ ಕಷಾಯುಧೊಳು ಕದಡಿ ಕುಡಿಯೆ ವಿಷೂಚಿ ಪರಿಹಾರಮಕ್ಕುಂ. ೨

## ಲೇಪ

ಹುಣಿಸೆಸೊಪ್ಪಿನ ರಸ, ಎಳ್ಳೆಣ್ಣೆ ಸಹ ಕೂಡಿ ನೆತ್ತಿಗೆ ಒತ್ತಿ ಗರುಗದ ಬೇರನ್ನು ಅಂಬಿಲದಲ್ಲರೆದು ನಾಭಿಗೆ ಲೇಪಂ ಮಾಡಲು ವಿಷೂಚಿ ಪರಿಹರ. ೧

### ಗಂಡೂಷ

ಅತಿಬಜ, ಜಾಜಿಕಾಯಿ, ವೇಯಿಂಚಿ ಪಚ್ಚಿದಿವೇಸಿ ಆಪೇನಂ ಗೂರ್ಚಿ ಈ ಮೂಡನು ಮಂಚಿ ನೂನೆನು ಉಡುಕದೆಟ್ಟಿ ಧರಣಿಲೊ ಬೆಟ್ಟಿ ಗುಂಜಾಮಾತ್ರಂ ನಾಲಿಕಕು ಲೇಪಂ ವೇಸಿತೆ ವಿಷೂಚಿ ಮಾನುನು. ೧

### ಗುಳಿಗೆ

ದಾಡಿಂಬಕಾಯ ಚಿಪ್ಪ, ಮಾಮಿಡಿ ಪಿಂದೆಲ ವಿತ್ತುಲು, ಎಲಗಪಿಂದೆಲು, ಮಾರೆಡು ಪಂಡು, ಬೂರುಗ ಬಂಕ, ಧಾತಕೀ ಕುಸುಮಂ, ಅಜಾಮೋದಂ, ಕುರಾಸಾನಿ ಓಮಂ, ಅತಿವಜ, ಕೋಡೀಶವಿತ್ತುಲು, ಶುಂಠಿ, ಪೆದ್ದಮಾನಿ ಚಕ್ಕ, ತುಂಗಮುಸ್ತುಲು, ಲೋಧ್ರಂ, ತೆಲ್ಲ ಸಾಸುವುಲು, ಪೀನಿ ಸಮಮುಗ ಪೆರಗು ವಡಿಯಗಟ್ಟಿನ ನೀಳ್ಳುತೊ ದಾಡಿಂಬಕಾಯಲೊ ಪುಟಂ ವೇಸಿ ಪಕ್ವಂತೆಲಿಸಿ ತೀಸಿ ಮಾತ್ರಲುಜೇಸಿ ಪೆರುಗು ನೀಳ್ಳುತೋನೆ ಇಚ್ಚೇದಿ. ಪಥ್ಯಂ ಕಂದಿ ಒಗರು ನೀಳ್ಳು, ಬಲುಸುಕೂರ, ಅರಟಿಕಾಯ, ಮಜ್ಜಿಗ, ಪೆರುಗು, ಪೊಳ್ಳಕಾಯ. ೧

### ಚೂರ್ಣ—ದಾಳಿಂಬಾದಿ ಚೂರ್ಣ

ದಾಡಿಂಬಕಾಯ, ಪಿಪ್ಪಳ್ಳು, ತುಪ್ಪದೇವದಾರು, ವೀನಿ ಕೂರ್ಚುಕೊನಿ ಮಾಮಿಡಿ ಪಿಂದೆಲವಿತ್ತುಲು, ಎಲಗ [1]ವಿತ್ತುಲು[1], ಮಾರೆಡುಪಂಡು, ಬೂರುಗ ಬಂಕ, ಧಾತಕೀ ಕುಸುಮಂ, ಅಜಾಮೋದಂ, ಕುರಾಸಾನಿ ಓಮಂ, ಅತಿವಜ, ಕೋಡೀಶವಿತ್ತುಲು, ಶುಂಠಿ, ಪೆದ್ದಮಾನಿ ಚಕ್ಕ, ತುಂಗಮುಸ್ತಲು, ಲೋಧ್ರಂ, ತೆಲ್ಲಸಾಸುವುಲು, ಸಹ ಕೂಡಿ ಚೂರ್ಣಂ ಜೇಸಿ ಸೇವಿಂಚುನು ವಿಷೂಚಿ ಗುಣಮೌನು.

ಅಂತು ಸಂಹಿತೆ ೭, ಕಷಾಯ ೨, ಲೇಪ ೧, ಗಂಡೂಷ ೧, ಗುಳಿಗೆ ೧, ಚೂರ್ಣ ೧ ಸಹ ಪ್ರಯೋಗ ೧೩ ಕ್ಕಂ ಸಮಾಪ್ತಂ.

---

## ವಾಂತಿ, ಭ್ರಾಂತಿ

### ಚಿಕಿತ್ಸೆ—ಸಂಹಿತೆಗಳು

ಜಿಲಕರ, ಮೆಂತ್ಯಂ, ನೂಕಲು, ಈ ಮೂಡುನು ವೇಮಜ್ಜಿಗತೊ ನೂರಿ ಪಲಾಚುಗ ಕಲಪಿ ಕಾಚಿ ವಡಿಯಗಟ್ಟಿ ಈಯುನು ಮರಿವಾಂತಿಯೌನು, ಆ ವೆನಕ ವಾಂತಿಭ್ರಾಂತುಲು ನಿಲುಚುನು. ೧

[1] (ಕ) ಪಿಂದೆಲು

ಸಂವತ್ಸರ ಲವಣಂ, ಯವಕ್ಷಾರಂ, ವಜ, ಕರಕ್ಕಾಯ, ಚಿತ್ರಮೂಲಂ ಇಂತ ವಟ್ಟಿನು ಚೂರ್ಣಂ ಜೇಸಿ ನೇಯಿತೊ ವಂಡಿ ವಾವಿಳಂಗಂ, ಶುಂಠಿ, ಪಿಪ್ಪಲಿ, ಮಿರಿಯಾಲು ವೀನಿ ಸಮಚೂರ್ಣಂ ಜೇಸಿ ಲೇಹ್ಯಪಾಕಮುಗ ವಂಡಿ ಸೇವಿಂಚಿತೆ ವಾಂತಿ ಭ್ರಾಂತುಲು, ಗ್ರಹಣಿಲು, ಗುಲ್ಮಂ, ಶ್ವಾಸಮುಲು, ಖಾಸಮುಲು ಸಹ ಗುಣಮೌನು. ೨

ಹುಣಿಸೆ ಬೇರಂ ನಿಂಬೆಹುಳಿಯಲ್ಲಿ ಗಂಧವ ತೇದು ಗ ೧ ತೂಕವಂ ಒಳಯಿಂಕೆ ಕೊಡಲು ವಾಂತಿಭ್ರಾಂತಿ ನಿಲುವುದು. ೩

ರಾಗುಲನು ಮಸಿಗಾ ವೇಯಿಂಚಿ ನಿಮ್ಮಕಾಯಪುಲುಸುನ ನೂರಿ ಇಚ್ಚಿತೆ ವಾಂತಿ ಭ್ರಾಂತಿ ನಿಲುಚುನು. ೪

ಮಾದಳಪುಕಾಯ ಪಚ್ಚಡಿಗಾ ಕೋಸಿ ಶುಂಠಿ, ಪಿಪ್ಪಲ, ಮಿರಿಯಾಲು, ಯಷ್ಟಿಮಧುಕಂ, ವಾಯುವಿಳಂಗಂ, ಸೈಂಧವಲವಣಂ ವೀನಿ ಚೂರ್ಣಂ ಜೇಸಿ ಆ ಒಪ್ಪುಲಲೊ ಕಲಪಿ ಶರ್ಕರವೇಸಿ ಲೋಪಲಿಕಿ ಪುಚ್ಚುಕೊಗಾನು ವಾಂತಿಭ್ರಾಂತಿಲು ನಿಲುಚುನು. ೫

ಲವಂಗಮು ಗ ೧ ತೂನುನು ನಿಮ್ಮಕಾಯ ತೊಲ ಜೇಸಿ ಅಂದುಲೊ ನಿಂಚಿ ಚೀಲಮನ್ನಿಚ್ಚಿ ಪುಟಂ ವೇಸಿ ತೀಸಿ ರಾತಿಮೀದ ಪಿಂಡಿಗಿಂಜಲು, ಲವಂಗಮುಲು ಸಹ ಕೂಡಿ ನೂರಿ ಈಯುನು ಅಜೀರ್ಣಂ ವಾಂತಿಭ್ರಾಂತಿ ನಿಲುಚುನು. ೬

ಜಿಲಕರ ಗ ೧ ತೂನುನು ನಿಮ್ಮಕಾಯ ತೊಲಲೊ ಉಂಚಿ ಚೀಲಮನ್ನಿಚ್ಚಿ ಪುಟಂ ವೇಸಿ ತೀಸಿ ರಾತಿಮೀದ ಪಿಂಡಿಗಿಂಜಲು, ಜಿಲಕರ ಕೂಡ ನೂರಿ ಈಯುನು ಅಜೀರ್ಣಂ ವಾಂತಿ, ಭ್ರಾಂತಿ ಸಹ ಗುಣಮೌನು. ೭

ಏಲಕ್ಕುಲು ಗ ೧ ತೂನು, ನಿಮ್ಮಕಾಯ ತೊಲಲೊ ಉಂಚಿ ಚೀಲಮನ್ನಿಚ್ಚಿ ಪುಟಂ ವೇಸಿ ತೀಸಿ ರಾತಿಮೀದ ಪಿಂಡಿಗಿಂಜಲು, ಏಲಕ್ಕಲು ಕೂಡ ನೂರಿ ಈಯುನು ಅಜೀರ್ಣವಾಂತಿ ನಿಲುಚುನು. ೮

ಸಂಚಿಗೂಡ ನಿಮ್ಮಪುಲುಸುನ ನೂರಿ. ನಾಕಿಂಚಿತೆ ವಾಂತಿ ಭ್ರಾಂತಿ ನಿಲುಚುನು. ೯

ವೆಂಪರಿವೇರುನು ನಿಮ್ಮಪುಲುಸುನ ನೂರಿ ನಾಕಿಂಚಿತೆ ವಾಂತಿ ಭ್ರಾಂತಿ ನಿಲುಚನು. ೧೦

ವೆದುರು ಪೀಚುನು ಕಾಲ್ಚಿ ಜಿಲಕರ, ಏಲಕ್ಕುಲುನು ಚೂರ್ಣಂ ಜೇಸಿ ಶರ್ಕರಕೂರ್ಚಿ ಈಯುನು ಅಜೀರ್ಣವಾಂತಿ ಭ್ರಾಂತುಲು ನಿಲುಚುನು. ೧೧

ಮಂಡಪಸುಪು, ಚಿಕ್ಕಣಪೋಕಲು ಸಮಚೂರ್ಣಂ ಜೇಸಿ ತೇನೆತೊ ಗ ೧ ತೂನು ಚೂರ್ಣಂ ಇಚ್ಚಿತೆ ವಾಂತಿಭ್ರಾಂತಿ ಗುಣಮೌನು. ೧೨

## ಕಲ್ಕಗಳು

ಜಾಜಿಕಾಯ, ಲವಂಗಂ, ಆಪೇನಂ, ಅತಿವಜ, ವೆಲಿಗಾರಂ, ವೀನಿ ಸಮಾಂಶಂ ನೂನೆತೊ ನೂರಿ ಈಯುನು ವಾಂತಿಭ್ರಾಂತಿ ನಿಲುಚುನು. ೧

ಲವಂಗಂ, ಮಾಮಿಡಿಗಿಂಜಲು, ಷರ್ಪಾಷ್ಟಕಂ, [1]ಪೋಕಪಟ್ಟ[1] ಭಸ್ಮಂ; ಏಲಕ್ಕುಲು, ಮಾರೆಡು ಪಂಡುಇವಿ ವಗಕು ಗ ೧ ತೂನು, ಆಕು ತೊಡಿಮೆಲು ೨೦, ನಿಮ್ಮ ವಿತ್ತುಲು ೨೦, ಈ ದ್ರವ್ಯಮುಲ ನೂರಿ ಈಯುನು ವಾಂತಿಭ್ರಾಂತಿ ಮಾನುನು. ೨

ವೆಲಗವೇರುನು ನಿಮ್ಮ ಪುಲುಸುನ ನೂರಿ ಉಸಿರಿಕಾಯಂತ ಲೋಪಲಿಕಿ ಇಚ್ಚಿತೆ ವಾಂತಿಭ್ರಾಂತಿ ನಿಲುಚುನು. ೩

ಶನಿಗ ಬೇಡಲುನು ನಾನನಿಚ್ಚಿ ನಿಮ್ಮಪುಲುಸುನ ನೂರಿ ಇಚ್ಚಿತೆ ಅಜೀರ್ಣಂ, ವಾಂತಿ, ಭ್ರಾಂತಿ ಸಹ ಗುಣಮೌನು. ೪

ವೇಗಪಂಡಿಗಿಂಜಲು, ಸೈಂಧವ ಲವಣಂ, ಮಿರಿಯಾಲು, ಶುಂಠಿ, ಸಹ ನಿಮ್ಮಪುಲುಸುನ ನೂರಿ ಇಚ್ಚಿತೆ ವಾಂತಿಭ್ರಾಂತಿ ಪರಿಹರ. ೫

ಬಟ್ಟಕಾಲ್ಚಿ ನೀಳ್ಳಲೊ ಕಲಪಿ ವೆದುರು ಕಾಲ್ಚಿ ಆ ನೀಳ್ಳತೊ ನೂರಿ ತ್ರಾಗನು ವಾಂತಿಭ್ರಾಂತಿ ನಿಲುಚುನು. ೬

ಅಗುಳುಶುಂಠಿಯ ತೇದು ಮಜ್ಜಿಗೆಯಲ್ಲರೆದು ಕುಡಿಯ ಕೊಡಲು ವಾಂತಿ ಭ್ರಾಂತಿಯಾಕ್ಷಣವೇ ನಿಲುವುದು. ೭

ಜಾಕಾಯಿ, ಲವಂಗ, ಶುಂಠಿ, ಜೀರಿಗೆ, ಜಾಪತ್ರೆ ಈ ಐದನು ಗಂಟು ಕಟ್ಟಿ ಮಜ್ಜಿಗೆಯಲ್ಲಿ ಬೇಯಿಸಿ ಅದಂ ಮಜ್ಜಿಗೆಯಲ್ಲೇ ಅರೆದು ಕುಡಿಯ ಕೊಡಲು ವಾಂತಿಭ್ರಾಂತಿ ಆಕ್ಷಣವೇ ನಿಲುವುದು. ೮

ಅಗುಳುಶುಂಠಿಯ ಸೊಪ್ಪನು ಚೆನ್ನಾಗರೆದು ನೀರಿನಲ್ಲಿ ಕಲಸಿದರಾನೀರು ಮಂದವಾಗುವುದಾ ನೀರಿನಲ್ಲಿ ಬೆಚ್ಚಗೆ ಮಾಡಿದ ಜೀರಿಗೆಯನರೆದು ಕದಡಿ ಕುಡಿಯೆ ವಾಂತಿಭ್ರಾಂತಿಯಾಕ್ಷಣವೇ ನಿಲುವುದು. ೯

## ಕಷಾಯ

ಮೂಡು ತಮಲಪಾಕು ಪೈನ ರಾತಿ ಸುನ್ನಮುನು ತಡಿಚಿ ಮಡಿಚಿ ಕಟ್ಟು ಗಟ್ಟಿ ಕಷಾಯಂಗಾಚಿ ಈಯುನು ಅಜೀರ್ಣಂ ವಾಂತಿಭ್ರಾಂತಿ ನಿಲುಚುನು. ೧

## ಲೇಹ್ಯ—ಬಿಲ್ವಾದಿಲೇಹ್ಯ

ಮಾರೆಡುವೇರು: ಲೋಪಲಿ ಚಕ್ಕ ಸೇ ೪ ನು ರೋಟನಲಿಯಬೊಡಿಚಿ ಈ ತೊಕ್ಕು ಮುನುಗ ನಿಂಡ ನೀಳ್ಳುಬೋಸಿ ಎನಿಮಿದಿ ಭಾಗಮು ನೀಳ್ಳು ಒಕಭಾಗ

---

[1] (ಗ) ಪೊರಬಟ್ಟ

ಮಯ್ಯೋಟಟ್ಟು ಕಾಚಿಕೊನಿ ಇಂದುಲೊ ಸೇರು ೪ ಬೆಲ್ಲಂ ಕೊಟ್ಟಿವೇಸಿ ದೀನಿಲೊ ವೇಸೆ ಕಲ್ಕದ್ರವ್ಯಮುಲು.—ಕರಕತಾಂಧ್ರಿ, ಉಸುರಿಕೇಲು, ಶುಂಠಿ, ಮಿರ್ಯಾಲು ಇವಿ ವಗಕು ಅರಸೇರು ಲೆಕ್ಕಮುನ ಕೂರ್ಚಿ ಪಿಪ್ಪಳ್ಳು ಸೇರು ೧, ಚವ್ಯಂ ಗ ೧೦ ಎತ್ತು, ತಾಳೀಶಪತ್ರ ಗ ೧೦ ಎತ್ತು, ನಾಗಕೇಸರಮುಲು ಗ ೫೦ ಎತ್ತು, ಪಿಪ್ಪಲಿ ಮೂಲಂ ಗ ೨೦ ತೂನು, ಲವಂಗಪತ್ರ ಗ ೪ ಎತ್ತು, ಲವಂಗಚಕ್ಕ ಗ ೪ ತೂನು, ಏಲಕ್ಕುಲು ಗ ೪ ತೂನು, ಜಿಲಕರ ಗ ೨೦ ತೂನು ಇಂತ ಚೂರ್ಣಿಂಚಿ ವಸ್ತ್ರಗಾಳಿತಂಜೇಸಿ ಆ ಕಷಾಯಮುಲೊ ವೇಸಿ ಪಕ್ವಮುಗ ವಂಡಿ ತೇನೆಗಲಪಿ ಮರಿನ್ನಿ ಪರಿಮಳಂ ಕಲಪೇದಿ ; ಮರಿನ್ನಿ ಅಲ್ಲಪು ಸ್ವರಸಮುತೊ ಈ ಲೇಹ್ಯಮು ವಂಡೇಟಪ್ಪುಡು ಕಲಪುಕೊಂಟೆ ಮಂಚಿದಿ ; ಈ ಲೇಹ್ಯಮುನು ಸೇವಿಂಚಿತೆ ಅಜೀರ್ಣಂ, ಸರ್ವಛರ್ದಿಲು, ಹೃದ್ರೋಗಮುಲು, ಕಾಮಿಲಾರೋಗಂ, ಗುಲ್ಮಂ, ಗ್ರಹಣಿಲು, ಅರುಚಿ, ಪೀನಸಮುಲು, ಹಿಕ್ಕ, ಖಾಸಶ್ವಾಸಮುಲು, ಕ್ರಿಮಿರೋಗಮುಲು ಪ್ಲೀಹಂ, ಪಾಂಡುರೋಗಮುಲು ಮೊದಲೈನವಿ ಮಾನುನು. ೧

## ಗುಳಿಗೆ

[1]ಬೊಜ್ಜ[1] ಮಂಗವೇರು ಚಕ್ಕ, ಅಗುಲುಶುಂಠಿ, ಗಾರಚಕ್ಕ, ಸುಗಂಧಪಾಲವೇಳ್ಳು, ಈಶ್ವರಿ ವೇರು, ಹಂಸಪಾದಿ ವೇರು, ಲವಂಗಮುಲು, ಜಾಕಾಯಲು, ರಾಸ್ನ, ಗಜ್ಜುಕಾಯ ಪಪ್ಪು, ನೇಲ ಗಲಜರ, ನಲ್ಲ ಜಿಲಕರ, ಶುಂಠಿ, ಪಿಪ್ಪಲಿ, ಮಿರಿಯಾಲು, ವಜ, ವೆಲ್ಲುಲ್ಲಿ, ಕಟುರೋಹಿಣಿ, ಓಮಮು, ವೀನಿ ಸಮಭಾಗಮುಗ ಕೂರ್ಚಿ ವೇನೀಳ್ಳತೊ ನೂರಿ ಬದರೀಬೀಜಪ್ರಮಾಣಂ ಮಾತ್ರಲುಗಟ್ಟಿ ಕಡುಪು ಉಬ್ಬರಂ, ಮಲಜಲಾದುಲು ಪೋವಕ ಉಂಡೇದಿ, ವೀನಿಕಿ ಕಪ್ಪಿಯಾಕುರಸಮುನ ಇಚ್ಚೇದಿ ; ಶ್ಲೇಷ್ಮಮುನಕು ಜುಟ್ಟುಪಾಕುರಸಮುನ ಇಚ್ಚೇದಿ ; ವಾಂತಿ ಭ್ರಾಂತಿಕಿ ವೆಲಗಾಕುರಸಮುನ ಇಚ್ಚೇದಿ, ಈ ಪ್ರಕಾರಮಿಚ್ಚಿತೆ ಈ ರೋಗಮುಲು ಮಾನುನು. ೧

## ಆಘ್ರಾಣಂ

ಶಾಮಂತಿಪೂವುಲ ಭಾವನಂ, ನೇಪಾಳಂ, ಚೇದು ಬೀರಕಾಯ ವಿತ್ತುಲು, ಕಾಡುವಾವಿಂಟಿ ವಿತ್ತುಲು, ವೆರಿಸೋರ ವಿತ್ತುಲು, ಇಂತನೂರಿ ಪಾಲುತೊ ವೇಸಿ ಕಾಚಿ, ಪೀರಬೆಟ್ಟಿ ಚಿಲಿಕಿ ವೆನ್ನೆ ತೀಸಿ ನೇಯಿಕಾಚಿ ಶಾವಂತಿ ಪೂವುಲ ಭಾವನಂ ಜೇಸಿ ಮೂಸಿಚೂಸಿತೆ ವಾಂತಿಭ್ರಾಂತಿ ನಿಲುಚುನು. ೧

ಅಂತು ಸಂಹಿತೆ ೧೨, ಕಲ್ಕ ೮, ಕಷಾಯ ೧, ಲೇಹ್ಯ ೧, ಗುಳಿಗೆ ೧,
ಆಘ್ರಾಣ ೧, ಸಹ ಪ್ರಯೋಗ ೨೪ ಕ್ಕಂ ಸಮಾಪ್ತಂ.

---

[1] ( ) ಗಬೊಟ್ಟಿ

## ಅಜೀರ್ಣಮಂದಾಗ್ನಿ ಚಿಕಿತ್ಸೆ—ಸಂಹಿತೆಗಳು

ಕೊಟದ ಪಳಿದ್ಯ;—ಶುಂಠಿ, ಚಿತ್ರಮೂಲ, ಪಿಪ್ಪಲಿ, ಮೆಣಸು, ಅಳಿಲೆಕಾಯಿ, ಅರಿಸಿನ, ಜೀರಿಗೆ ಬೆಲ್ಲವತ್ತದ ಕಾಯಿ, ದಾಳಿಂಬದ ಕಾಯಿ, ಇಂಗು, ಸೈಂಧವ ಲವಣ, ಓವು, ನುಗ್ಗೆಯ ತೊಪ್ಪಡಿ, ಅಗುಳುಶುಂಠಿ ಇವಂ ಸಮಾನಗೊಂಡು ಚೂರ್ಣವಮಾಡಿ ಅಂಬಿಲ ಮಜ್ಜಿಗೆ ಸಹ ಸಮಾನಗೊಂಡು ಈ ಚೂರ್ಣವ ಹಾಕಿ ಪಳಿದ್ಯವ ಕಾಸಿ ಊಟದಲ್ಲಿ ತೆಗೆದುಕೊಳ್ಳಲು ಅಜೀರ್ಣಂ ಕೆಡುಗುಂ; ದೀಪನ ಪುಟ್ಟುವುದು, ೧

ಹೆರಳೆಯ ಹಣ್ಣಿನ ಕುಸುರಿಯ ತೆಗೆದು ಮೊರಹತ್ತಿ ಕೊಚ್ಚಿದ ರಾಗಿ ಹಿಟ್ಟನೂ ಕಲಸಿ ಉಂಡೆಮಾಡಿ ಮೆಲ್ಲಲು ಅಜೀರ್ಣಂ ಮಾಣ್ಗುಂ. ೨

ಅತಿಬಜೆ, ಜಾಕಾಯಿ, ಎರೆಮದ್ದು, ಇವು ಸಮಭಾಗವಾಗಿ ಕೂಡಿ ಅಂಬಿಲ ದಲ್ಲಿ ತೊಪ್ಪೆಯ ಕೂಡಿಸಿ ತೊಳೆದ ಬಿಳುಗಾರದ ಹಳುಕು ೧, ಅರ್ಧಜಾಕಾಯುನ್ನು ಕೆಂಪು ಹತ್ತುವಹಾಗೆ ಒಳ್ಳೆಣ್ಣೆಯಲ್ಲಿ ಕಾಯಿಸಿ ಇವಿಷ್ಟನು ಎಣ್ಣೆಯಲ್ಲಿ ಚೆನ್ನಾಗಿ ಮರ್ದಿಸಿ ಗೋಧಿ ಪ್ರಮಾಣ ಒಂದು ಹನಿ ಎಣ್ಣೆಯಲ್ಲಿ ಕಲಸಿ ಕೊಡುವುದು, ಹತ್ತೈದು ವರ್ಷದ ಮಕ್ಕಳಿಗಾದರೆ ನಾಲ್ಕರೊಳೊಂದುಪಾಲ ಕೊಡಿಸುವುದು. ಅಜೀರ್ಣಂ ಗುಣಮಕ್ಕುಂ. ೩

ಒದ್ದೆಡೆಯ ಬೇರು, [1]ಉತ್ತರಣೆಯ ಬೇರು[1] ನುಗ್ಗೆಬೇರು, ಸೈಂಧವ ಇವಂ ಸಮಚೂರ್ಣಂಗೆಯ್ದು ತೆಗೆದುಕೊಳ್ಳೆ ಅಜೀರ್ಣಶೂಲೆ ಮಾಣ್ಗುಂ. ೪

ತಪಸಿಯೆಲೆ, ಹಾವುಮೆಕ್ಕೆ, ಮೆಣಸು, ಚಿತ್ರಮೂಲ, ಶುಂಠಿ, ಹಿಪ್ಪಲಿ ಇವಂ ನೆಲದಮೇಲೆ ಹರಹಿ ಮೇಲೆ ಉಪ್ಪತಳಿದು ಸುಟ್ಟು ಚೂರ್ಣವಮಾಡಿ ಮೊಸರಿಂ ಕೊಳ್ಳಲು ಅಜೀರ್ಣ, ಗುಲ್ಮ, ಚಿಲಕರ, ಪಾಂಡುರೋಗ ಸಹ ಗುಣಮಕ್ಕುಂ, ೫

ಸಂವತ್ಸರ ಲವಣ, ಕಲ್ಲುಪ್ಪು, ಇಂಗು, ಚಿತ್ರಮೂಲ ಇವು ಪ್ರತ್ಯೇಕ ಗ ೧ ತೂಕ, ಮೆಣಸು ಗ ೨ ತೂಕ, ಶುಂಠಿ ಗ ೩ ತೂಕ, ಜೀರಿಗೆ ಗ ೪ ತೂಕ ಇವೆಲ್ಲ ಚೂರ್ಣಂಗೆಯ್ದು ಮೂರು ಬೆರಳಿಂದೆತ್ತಿ ಹುಳಿ ಮಜ್ಜಿಗೆಯಿಂ ತೆಗೆದುಕೊಳ್ಳಲು ಅಜೀರ್ಣ, ಹಳೆಜ್ವರ, ಗುಲ್ಮ, ಆಮ್ಲ, ಪೈತ್ಯ, ಅರುಚಿ, ಬದ್ಧಮಲ, ಮೂತ್ರಕೃಛ್ರ, ಅಪಸ್ಮಾರ, ಹೃದಯರೋಗ ಸಹ ಮಾಣ್ಗುಂ. ೬

ಸೈಂಧವ ಚೂರ್ಣವಂ ಬಿಸಿನೀರಿಂ ಕುಡಿಯೆ ವಿಷ್ಕಂಭಾಜೀರ್ಣ ಗುಣ ಮಕ್ಕು. ೭

ಸಂವತ್ಸರ ಲವಣ, ಇಂಗು, ಶುಂಠಿ ಸಹ ಚೂರ್ಣವಂ ಮಾಡಿ ಬಿಸಿ ನೀರಲ್ಲಿ ಕದಡಿ ಕುಡಿಯೆ ಪಕ್ವಾಜೀರ್ಣಂ ಮಾಣ್ಗುಂ. ೮

---

[1] (ಗ) ಪ್ರತಿಯಲಿಲ್ಲ.

ಕುಂಬಳ ಬಳ್ಳಿಯಂ ಸಣ್ಣನಾಗಿ ಕತ್ತರಿಸಿ ತದಕಿ ಉಪ್ಪಿನಲ್ಲಿ ಅಟ್ಟಮಡಕೆಗೆ ಹಾಕಿ ಮುಚ್ಚಳವ ಮುಚ್ಚಿ ಸೀರು ಮಣ್ಣುಗೊಟ್ಟು ಪುಟವನಿಕ್ಕಿ ಆರಿಸಿ ಆ ಉಪ್ಪ ತೆಗೆದುಕೊಂಡು ಆ ಉಪ್ಪನೂ ಓವನೂ ಸಮಚೂರ್ಣವಂ ಮಾಡಿ ಬಿಸಿನೀರಿಂ ಕುಡಿಯೆ ವಾತದಿಂದಾದ ಅಜೀರ್ಣಂ ಕೆಡುಗುಂ. ೯

ಕಲ್ಲುಪ್ಪು, ಗಾಜು ಲವಣ, ಅವರಿಕೆ ಚೂರ್ಣ ಇವಂ ಸಮಾನವಾಗಿ ಅಂಬಿಲದಲ್ಲಿ ಕುಡಿಯೆ ವಾತಾಜೀರ್ಣ ಪರಿಹರ. ೧೦

ಅನ್ನಭೇದಿಯಂ ಸೇವಿಸಲು ಸಮಸ್ತಾಜೀರ್ಣವುಂ ಗುಣಮಕ್ಕುಂ. ೧೧

ಎಳೆಯ ಬದನೆಕಾಯನು ಸುಟ್ಟು ಉಪ್ಪುಗೂಡಿ ಮೆಲ್ಲಲು ಅಜೀರ್ಣ ಹರ. ೧೨

ಹೊಸ ಮಡಕೆಯ ಒಲೆಯ ಮೇಲಿಕ್ಕಿ ಕಾದಮೇಲೆ ಉಪ್ಪು ಜೀರಿಗೆಯ ಹಾಕಿ ಆ ಮೇಲೆ ಒಂದು ಸೇರು ನೀರು ಮಜ್ಜಿಗೆಯ ಹನಿಸಿ ಬಾಗುವ ಅನ್ನವನದರೊಳೆರಡು ಸೌಟುಹಾಕಿ ಪ್ರತಿಪಾಕವ ಮಾಡಿ ಕುದಿಸಿ ಎಡೆಗಿಕ್ಕಿಸಿಕೊಂಡು ಊಟವ ಮಾಡಲು ಎಂತಪ್ಪ ಅಜೀರ್ಣವೂ ನಾಶಮಹುದು. ೧೩

ಅಗುಳು ಶುಂಠಿಯಂ ಮಜ್ಜಿಗೆಯೊಳರೆದು ಪಳಿದ್ಯವ ಕಾಸಿ ಕುಡಿಯೆ ಅಜೀರ್ಣ ಪರಿಹರ. ೧೪

ಹುಣಿಸೆ ಸೊಪ್ಪಿನ ರಸದಲ್ಲಿ ಸ್ವಲ್ಪ ಒಳ್ಳೆಣ್ಣೆಯ ಕೂಡಿ ಮಂಡೆಯ ನಡುನೆತ್ತಿಗೆ ಒತ್ತಲು ಅಜೀರ್ಣ ಗುಣಮಹುದು. ೧೫

ಪಿಪ್ಪಳ್ಳನು ನೂರಿ ತೇನೆತೊ ಇಚ್ಚಿತೆ ಅಜೀರ್ಣಂ ಮಾನುನು. ೧೬

ಶುಂಠಿನಿ ಪಿಪ್ಪಳ್ಳುನಿ ತೇನೆತೋ ಇಚ್ಚಿತೆ ಅಜೀರ್ಣಂ ಮಾನುನು. ೧೭

ಬಟ್ಟ ಕಾಲ್ಚಿನ ಕರುಕುನು ಚನ್ನೀಳ್ಳಲೊ ವೇಸಿ ವೆದುರ ಕಾಲ್ಚಿನ ಕೊರವಿವೇನಿಳ್ಳುಲೊ ತ್ರಿಪ್ಪಿ ಆ ನೀಳ್ಳ ತ್ರಾಗನು ಅಜೀರ್ಣಂ ಗುಣಮೌನು. ೧೮

ಕಹಿದುಂಬೆ ಸೊಪ್ಪಿನ ರಸವಂ ಕಣ್ಣಿಗೆಚ್ಚಿ ಕಿವಿಗೆ ಹಿಂಡಲು ಅಜೀರ್ಣಂ ಮಾಣ್ಗುಂ. ೧೯

ರಸಾಜೀರ್ಣಕ್ಕೆ—ಬಿಸಿನೀರಂ ಕುಡಿದು ಹಗಲು ನಿದ್ರೆಯಂ ಮಾಡಿ ಸ್ತ್ರೀಯನು ಸಂಭೋಗಿಸೆ ರಸಾಜೀರ್ಣಂ ಗುಣಮಕ್ಕುಂ. ೨೦

ಸ್ವೇದನ ಮರ್ದನಗಳಂ ಮಾಡಿಸೆ ವಿಷ್ಕಂಭಾಜೀರ್ಣಂ ಗುಣಮಕ್ಕುಂ. ೨೧

## ಕಲ್ಕಗಳು

ಇಂಗು, ಶುಂಠಿ, ಪಿಪ್ಪಲಿ, ಮೆಣಸು, ಸೈಂಧವ ಸಹ ಬಿಸಿನೀರಿಂದರೆದು ಹೊಟ್ಟೆಗೆ ತೊಡೆದು ಹಗಲು ನಿದ್ರೆಯಂ ಮಾಡಲು ಎಲ್ಲ ಅಜೀರ್ಣವೂ ಮಾಣ್ಗುಂ. ೧

ಅಡಕೆ ಚಿಟ್ಟನ ಬಲತ ಬೇರಿನ ತೊಕ್ಕನು ಮಜ್ಜಿಗೆಯುಲರೆದು ಕೊಡಲು ಅಜೀರ್ಣ ಹರ. ೨

ಶುಂಠಿ ೪ ತೊಕವಂ ಬಿಸಿನೀರಿಂದರೆದು ಸೈಂಧವವೆರಸಿ ಕೊಡಲು ಸಕಲಾಜೀರ್ಣವೂ ಪರಿಹರ. ೩

ಮಾವಿನ ಓಟೆಯು ತಿರುಳು, ಸೈಂಧವ ಲವಣ, ಬೆಲ್ಲವತ್ತ್ರದ ಹೀಚು, ಧಾತಕೀ ಕುಸುಮ, ಜೀರಿಗೆ, ಹಿಪ್ಪಲಿ, ಮೆಣಸು, ಪಾದಕ್ಕಿ ಇವಂ ಸಮಾಂಶವಾಗಿ ಮಜ್ಜಿಗೆಯಿಂದರೆದು ಕೊಡಲು ಅಜೀರ್ಣಂ ಮಾಣ್ಗುಂ. ೪

ಪನ್ನೀರು ಗಡ್ಡನು ವೇನೀಳ್ಲುತೊ ನೂರಿ ಈಯುನು ಅಜೀರ್ಣಂ ಮಾನುನು. ೫

ಶುಂಠಿ ಗ ೪ ತೂನು, ಪಿಪ್ಪಳ್ಳು ಗ ೨ ತೂನು, ಸ್ಮೆಂಧವ ಲವಣಂ ಗ ೧ ತೂನು, ಇಂಗು ಗ ೨ ತೂನು ಇಂತ ಒಟ್ಟುನು ನಿಮ್ಮ ಪುಲುಸುನ ನೂರಿ ನಿಪ್ಪಡಿಜೇಸಿ ಕಿಂದ ವಿಾದ ಎರಗಾಚಿ ಪೆರುಗುತೊ ಇಚ್ಚಿತೆ ಅಜೀರ್ಣಂ ಗುಣಮೌನು. ೬

ಗಂಧಕ ಸೈಂಧವಗಳಂ ಶುಂಠಿಯ ರಸದಿಂದರೆದು ಕುಡಿಯೆ ಅಜೀರ್ಣ ಶೂಲೆ ಮಾಣ್ಗುಂ. ೭

## ಕಷಾಯಗಳು

ಈಶ್ವರೀಬೇರು, ಅಗುಳು ಶುಂಠಿ, ಇವೆರಡನು ಕಷಾಯವಿಕ್ಕಿ ಕೊಡಲು ಅಜೀರ್ಣಂ ಮಾಣ್ಗುಂ. ೧

ಅಡುಸೋಗೆ, ಅಮರದವಳ್ಳಿ ನೆಲಗುಳ್ಳ ಸಹ ಕಷಾಯುವಿಟ್ಟು ತುಪ್ಪವ ಪ್ರತಿ ಪಾಕಂ ಮಾಡಿ ಕುಡಿಯಿಸೆ ಅಜೀರ್ಣ, ಸಂಗ್ರಹಣಿ ಸಹ ಮಾಣ್ಗುಂ. ೨

ಶುಂಠಿ ೨ ತೂಕ, ಅಮರದವಳ್ಳಿ, ೨ ತೂಕ, ಅತಿಬಜೆ ಬೇರು ಸಹ ಸದೆಗುಟ್ಟಿ ಮಡಕೆಯುಲ್ಲಿ ಹಾಕಿ ಅರೆಪಡಿ ನೀರ ಹೊಯ್ದು ೧ ಗದ್ಯಾಣವಾಗುವ ಹಾಗೆ ಕಾಸಿ ಬಸಿದುಕೊಂಡು ಹಿಪ್ಪಲಿ ಪ್ರತಿ ಪಾಕದಿಂ ಸೇವಿಸೆ ಜ್ವರ, ಅರೋಚಕ, ವಾತ ಶೂಲೆ, ಶ್ವಾಸ, ಖಾಸ, ಅಗ್ನಿಮಾಂದ್ಯ, ಅರೆದಲೆ ಬೇನೆ, ನೆಗಡಿ, ಛರ್ದಿ, ತಲೆ ತಿರುಗುವುದು ಸಹ ಗುಣಮಕ್ಕು. ೩

ಚಿಕ್ಕುಡಾಕುನು, ರಾತಿಯುಪ್ಪುನು, ಓಮಂ, ಶುಂಠಿ ಸಹ ಕಷಾಯಂ ಬೆಟ್ಟಿ ಪುಚ್ಚುಕೋಗಾನು ಅಜೀರ್ಣಂ, ಶೂಲಲು, ಜ್ವರಂ ಸಹ ಮಾನುನು ; ದೀಪನಮೌನು. ೪

ಚಂದ್ರಚಕ್ಕ, ಕೋಡೀಶವಿತ್ತುಲು, ವೇಪಚಕ್ಕ, ಶುಂಠಿ, ಪಿಪ್ಪಲಿ, ಮಿರಿಯಾಲು, ಕರಕತಾಂಧ್ರಿ, ಉಸಿರಿಕೇಲು, ತಿಗಡಲು, ಇವಿ ಸಮಮುಗ ಕಷಾಯಂ ಬೆಟ್ಟಿ ಮೇಕ ಮೂತ್ರಮುನ ೭ ದಿನಮುಲು ಪುಚ್ಚುಕೊಂಟ ಅಜೀರ್ಣಂ ಮಾನುನು. ೫

## ಚೂರ್ಣಗಳು

ಸೈಂಧವ ಗ ೧ ತೂಕ, ಹಿಪ್ಪಲಿ ಗ ೨ ತೂಕ, ಹಿಪ್ಪಲಿ ಮೂಲ ೩ ತೂಕ, ಚವ್ಯ ೪ ತೂಕ, ಚಿತ್ರಮೂಲದ ಬೇರು ಗ ೫ ತೂಕ, ಶುಂಠಿ ಗ ೬ ತೂಕ, ಅಳಲೆ ಕಾಯಿ ಗ ೭ ತೂಕ, ಇವೆಲ್ಲವಂ ಚೂರ್ಣಿಸಿ ದಿನಪ್ರತಿಯೂ ಪ್ರಾತಃಕಾಲದಲ್ಲಿ ಬಿಸಿನೀರಿಂದ ಕೊಡಲು ಸಮಸ್ತವಾದ ಅಜೀರ್ಣ, ಅಗ್ನಿಮಾಂದ್ಯ, ವಿಷೂಚಿ ಸಹ ಮಾಣ್ಗುಂ. ೧

## ವೈಶ್ವಾನರ ಚೂರ್ಣ

ಇಂಗು, ಬಜೆ, ವಾಯಿವಿಳಂಗ, ಸೈಂಧವ, ವಾದಕ್ಕಿ, ಅಳಿಲೆಕಾಯಿ, ಚಿತ್ರಮೂಲದ ಬೇರಿನ ತೊಕ್ಕು, ಚೆಂಗಲ ಕೋಷ್ಟ,[1] * * * ೨ (?)

## ಜೀರಕಾದಿ ಚೂರ್ಣ

ಜೀರಿಗೆ, ಅಳಿಲೆಕಾಯಿ, ಏಲಕ್ಕಿ, ನೆಲ್ಲಿಚಟ್ಟು, ಪೆಟ್ಲುಪ್ಪು, ಖರ್ಜೂರದ ಹಣ್ಣು, ಕೊತ್ತುಂಬರಿ, ಲವಂಗ ಚಕ್ಕೆ, ಯಷ್ಟಿಮಧುಕ, ಹಿಪ್ಪಲಿ, ಗರುಗದ ಸಮೂಲ, ಜಟಾಮಾಂಸಿ, ಶುಂಠಿ, ದ್ರಾಕ್ಷಿ, ಗೇಕಿನ ಗೆಡ್ಡೆ, ಸೌತೆಯ ಬೀಜ, ಶ್ರೀಗಂಧ, ಅರಿಸಿನ ಇವಂ ಏಕೋತ್ತರ ವೃದ್ಧಿಯಾಗಿ ಹೆಚ್ಚಿಸಿ ಸಮ ಶರ್ಕರೆ ವೆರಸಿ ದೇಹಾನುಗುಣ್ಯವರಿತು ಹಾಲಿನಲ್ಲಾಗಲಿ, ಜೇನುತುಪ್ಪದಲ್ಲಾಗಲಿ, ಅಕ್ಕಿ ಗಚ್ಚಿನಲ್ಲಾಗಲಿ, ಬಿಸಿನೀರಿಂದಾಗಲಿ ತೆಗೆದುಕೊಳ್ಳಲು ಸಕಲಾಜೀರ್ಣ, ಪಿತ್ತ, ಶೋಥೆ, ಹೃದ್ರೋಗ , ರಕ್ತ ಪಿತ್ತ, ಪಾಂಡು, ಶ್ವಾಸ, ಖಾಸ, ಜ್ವರ, ಮೂತ್ರ ಕೃಛ್ರ, ನಾಭಿಶೂಲೆ, ಪಿತ್ತಶೂಲೆ, ಗುಲ್ಮಶೂಲೆ, ಕಾಮಾಲೆ, ಕ್ಷಯವ್ಯಾಧಿ, ಸಹ ಸರ್ವರೋಗವೂ ಹರ ; ಇದು ರೇವಣಾ ಸಿದ್ಧ ಮತ ಪ್ರಯೋಗ. ೩ (?)

ಸಮುದ್ರ ಲವಣ, ಸಂವತ್ಸರ ಲವಣ, ಯುವಕ್ಷಾರಂ, ಸದ್ಯಕ್ಷಾರಂ, ಓಮಂ, ಕರಕ್ಕಾಯುಲು, ಪಿಪ್ಪಳ್ಳು, ಶುಂಠಿ, ಇಂಗುವ, ವಾಯಿವಿಳಂಗಂ, ವೀನಿ ಸಮ ಭಾಗಮುಗ ಕೂರ್ಚಿ ಚೂರ್ಣಿಂಚಿ ಚನ್ನೀಳ್ಳತೊ ಕಲಪುಕೊನಿ ತ್ರಾಗನು ; ಅಜೀರ್ಣ ವಾತಂ, ಮೂಲವ್ಯಾಧಿ, ಗುಲ್ಮರೋಗಂ ವಾತಪ್ರಮೇಹ, ವಿಷಮವಾತಂ, ಕಾಮಿಲಾ ರೋಗಂ ಶಹ ಮಾನುನು. ೫

## ವಡಬಾನಲ ಚೂರ್ಣಂ

ಶುಂಠಿ, ಚಿತ್ರಮೂಲಂ, ಪಿಪ್ಪಳ್ಳು, ವಾಯುವಿಳಂಗಂ, ನಲ್ಲವಾವಿಲಿಚಕ್ಕ, ಕಾನುಗಪಟ್ಟು, ಕರಕ್ಕಾಯ, ಇವಿ ಪ್ರತ್ಯೇಕಂ ಗ ೪ ಎತ್ತುನು ಗೂರ್ಚಿ ಚೂರ್ಣಂ

---

[1] (ಕ) ಪ್ರತಿಯಲ್ಲಿ ಪತ್ರ ೭೯—೮೪ ರ ವರೆಗೆ ಲುಪ್ತವಾಗಿವೆ.
(ಗ) ಪ್ರತಿಯಲ್ಲಿ ಇಲ್ಲ.

ಜೇಸಿ ಶರ್ಕರ ತೋನು ಗಜ್ಜಕಾಯಂತ ಪ್ರಸಾಪಡುನು ವಾಯುವಲನ ಪುಟ್ಟಿನ ಅಗ್ನಿಮಾಂದ್ಯಮುಲು ಮಾನುನು. ೬

* * * * * ೭

## ಗುಳಿಗೆ

ಇಂಗು ೧ ಹಲ, ಪಂಚ ಲವಣ ಕೂಡಿದ್ದು ೮ ಹಲ, ಹುಣಿಸೆ ಚಕ್ಕೆಯ ಬೂದಿ ೧ ಹಲ, ಎಳ್ಳು ಹುರಿದ ಬೂದಿ ೮ ಹಲ, ಇವಂ ನಿಂಬೆಹುಳಿಯಲ್ಲಿ ಮರ್ದಿಸಿ ಎಲಚಿ ಬೀಜದಷ್ಟು ಗುಳಿಗೆಯಂ ೧ ಗುಳಿಗೆಯಂ ಕೊಳ್ಳೆ ಅಜೀರ್ಣ, ಮಂದಾಗ್ನಿ, ಸರ್ವಶೂಲೆ ಸಹ ಮಾಣ್ಗುಂ. ೧

ಮುಂಡಗಳ್ಳಿಯ ಹಾಲಿನಲ್ಲಿ ಕಕ್ಕೆಹಣ್ಣಿನ ಭಾವನೆಯಂ ಕೊಟ್ಟು ಬೆಲ್ಲವಂ ಕೂಡಿಸಿ, ಹೊಟ್ಟತೆಗೆದ ಕಡಲೆಯಷ್ಟು ಗುಳಿಗೆಯಂ ಮಾಡಿ ೧ ಗುಳಿಗೆಯಂ ತುಪ್ಪದಿಂ ಸೇವಿಸೆ ಕಟ್ಟ ಆವೆ, ಜಲಗರ, ಶೋಭೆ, ಉದರ ದೋಷ ಸಹ ಗುಣಮಕ್ಕು. ೨

ಪಾರಿವಾಣದ ಸೊಪ್ಪಿನ ರಸ, ಲೊಕ್ಕಿ ಸೊಪ್ಪಿನ ರಸ, ಚಿತ್ರಮೂಲದ ಸೊಪ್ಪಿನ ರಸ, ಮುಳ್ಳುಮುತ್ತುಗದ ರಸ, ಕುರುಟಿಗೆ ರಸ, ತಪಸಿ ರಸ, ಈ ಬಗೆ ರಸಗಳಲ್ಲಿ ಹರಳೆಣ್ಣೆ ಸಮಭಾಗವ ಹೊಯ್ದು, ಶುಂಠಿ, ಇಂಗು, ಸೈಂಧವ ಸಹ ಚೂರ್ಣಂ ಮಾಡಿ ಆ ರಸಗಳ ಹಾಕಿ ಮೂರುದಿನವಿರಿಸಿ ಮಾದಳದ ಹಣ್ಣಿನ ರಸದಿಂ ಕಲಸಿ ಗುಳಿಗೆಯಂ ಮಾಡಿ ದಾಡೆಯಲ್ಲಿರಿಸಿಕೊಂಡು ಬಂದ ರಸವಂ ನುಂಗಲು ೪ ತೆರದ ಅಜೀರ್ಣಂ ಕೆಟ್ಟು ದೀಪನವಹುದು. ೩

## ಪಂಚಕೋಲಾದಿ ವಟಕ

ಹಿಪ್ಪಲಿ, ಈ ಮೂಲ, ಚವ್ಯ, ಚಿತ್ರಮೂಲ, ಶುಂಠಿ, ಸೈಂಧವ, ಬಿಡು ಲವಣ, ಗಾಜು ಲವಣ, ಸಮುದ್ರ ಲವಣ, ವಾದಕ್ಕಿ, ಯವಕ್ಷಾರ, ಸಧ್ಯಕ್ಷಾರ, ಮೆಣಸು, ಇಂಗು ಇವಂ ಸಮನಾಗಿ ಚೂರ್ಣಿಸಿ ವಸ್ತ್ರಗಾಳಿತಂ ಮಾಡಿ ಮಾದಳದ ಹಣ್ಣಿನ ರಸದಿಂ ೨ ಜಾವ ಮರ್ದಿಸಿ ಎಲಚಿ ಕಾಯಿ ಪ್ರಮಾಣ ಗುಳಿಗೆಯಂ ಮಾಡಿ ಪ್ರಾತಃಕಾಲದಲ್ಲಿ ಗ ೧ ತೂಕವಂ ಸೇವಿಸೆ ಅನ್ನ ಪಚನಮಹುದು. ೪

## ನಸ್ಯ

ಹುಣಿಸೆ ಸೊಪ್ಪಿನ ರಸದಿಂದಾಗಲಿ, ಗರುಗದ ಸೊಪ್ಪಿನ ರಸದಿಂದಾಗಲಿ, ಬಿಸಿನೀರಿಂದಾಗಲಿ ಶುಂಠಿ ಹಿಪ್ಪಲಿ ಮೆಣಸು ಸೈಂಧವಗಳಂ ನಸ್ಯಂ ಮಾಡೆ ಅಜೀರ್ಣ ಹರ.

## ಆಘ್ರಾಣ

ಚೇಗೊಡತಿಯಾಕು ಚೂರ್ಣಮುನು ಆಘ್ರಾಣಂಜೇಸಿತೆ ತುಮ್ಮುವಚ್ಚುನು ; ಅಜೀರ್ಣಂ ಮಾನುನು. ೧

ಅಂತು ಸಂಹಿತೆ ೨೧, ಕಲ್ಕ ೭, ಕಷಾಯ ೫, ಚೂರ್ಣ ೬, ಗುಳಿಗೆ ೪ ನಸ್ಯ ೧, ಆಘ್ರಾಣ ೧ ಸಹ ಪ್ರಯೋಗ ೪೫ಕ್ಕಂ ಸಮಾಪ್ತಂ.

ಅಂತು ವಿಷೂಚೀ ರೋಗ ಕುಳ ೧ಕ್ಕೆ ವಿಷೂಚಿ ಬಗೆ ೧, ವಾಂತಿ ಭ್ರಾಂತಿ ಬಗೆ ೧, ಅಜೀರ್ಣ ಮಂದಾಗ್ನಿ ೧, ಅಂತು ಬಗೆ ೩ಕ್ಕಂ ಸಂಹಿತೆ ೪೦, ಕಲ್ಕ ೧೫, ಕಷಾಯ ೮, ಚೂರ್ಣ ೭, ಗುಳಿಗೆ ೬, ನಸ್ಯ ೧, ಲೇಪ ೧, ಗಂಡೂಷ ೧, ಲೇಹ್ಯ ೧, ಆಘ್ರಾಣ ೨, ಸಹ ಪ್ರಯೋಗ ೮೨ಕ್ಕಂ ಮಂಗಳಮಹಾ ಶ್ರೀ.

---

## ಮೂತ್ರ ರೋಗಂ

ನಿದಾನಂ:—ಬಹಳವಾದ ಆಯಾಸ ಪಡುವುದರಿಂದಲೂ, ಕೇವಲ ಪೈತ್ಯರೂಪವಾದ ರೂಕ್ಷಾಹಾರಗಳ ಸೇವನೆಯಿಂದಲೂ, ತೀಕ್ಷ್ಣವಾದ ಆಹಾರಗಳ ಕೊಂಬುವುದರಿಂದಲೂ, ಹೆಚ್ಚಾಗಿ ದಾರಿ ನಡೆಯುವುದರಿಂದಲೂ, ವೆಗ್ಗಳವಾಗಿ ಮದ್ಯಪಾನ ಮಾಡುವುದರಿಂದಲೂ, ಬಹಳವಾದ ಮಾಂಸ ಭಕ್ಷಣದಿಂದಲೂ, ಅಜೀರ್ಣದಿಂದಲೂ, ಮಲಮೂತ್ರಾದಿಗಳ ವೇಗವ ತಡೆಯುವುದರಿಂದಲೂ, ಈ ೮ ಪ್ರಕಾರದಿಂದ ಬಹುಮೂತ್ರ ರೋಗಮುಂಟಾಗುತ್ತಿಹುದು. ಮತಾಂತರೇ, ನಾಭಿಯು ಕೆಳಗಣ ವಸ್ತಿಸ್ಥಾನವೆಂಬ ಸ್ಥಳದಲ್ಲಿ ಅಶ್ಮರಿಸರ್ಪ ವಾತಾದಿ ದೋಷಗಳಿಂದ ಮೂತ್ರ ತಡೆವುದು. ಅದು ಕಾರಣದಿಂದ ಈ ರೋಗವು ಮೂತ್ರಘಾತವೆಂಬ ಹೆಸರುಳ್ಳದ್ದಾಗಿ ಇಪ್ಪತ್ತು ವಿಧವಾಗಿರ್ಪುದೆಂದು ಆತ್ರೇಯರಿಂ ಪೇಳಲ್ಪಟ್ಟಿತು. ತಂತ್ರಾಂತರೇ, ತೀಕ್ಷ್ಣಾಹಾರ ಮೊದಲಾದವರಿಂ ಎಂಟು ಪ್ರಕಾರವ ದ ಮೂತ್ರಕೃಛ್ರಗಳಿಗೂ ಇಪ್ಪತ್ತು ವಿಧವಾದ ಕಲ್ಲು ಕಟ್ಟಿನ ವ್ಯಾಧಿಗಳಿಗೂ ಲಕ್ಷಣವೊಂದೆ ತೆರನಾಗಿರ್ಪುದು. ರಕ್ತಗೂಡಿ ಕಡಿಕೊಂಡು ಬಹು ಕಷ್ಟದಿಂದ ಅತ್ಯಂತ ನೋವು ಉಂಟಾಗಿರುವುದೆ ವಾತಾಧೀನವಾದ ಮೂತ್ರಕೃಛ್ರವೆಂದರಿವುದು. ಮೇಢ್ರದಲ್ಲಿಯೂ ತೊಡೆ ಸಂದಿನಲ್ಲಿಯೂ ಬಹಳವಾದ ವೇದನೆಯುಂಟಾಗಿರ್ಪುದು. ನಾಭಿಯಿಂದ ಕೆಳಗೆ ವೇದನೆಯುಂಟಾಗಿ ಮೂತ್ರ ವಿವರ್ಣಗೂಡಿ ಸಿಕ್ಕಿ ಸಿಕ್ಕಿ ಮೂತ್ರ ಬಿಡುತ್ತ ಬಿಡುವಾಗಲೂ ಅಲ್ಪವಾಗಿ ವೇದನೆ ಸಹಿತವಾಗಿ ಪೈತ್ಯವನೂ ದಾಹವನೂ ಉಂಟುಮಾಡುವುದೊ ಅದೆ ಪಿತ್ತಾಧಿಕ್ಯವಾದ ಮೂತ್ರಕೃಛ್ರವೆಂದರಿ

ವುದು. ಕಪ್ಪುವರ್ಣವಾಗಿ ಮೂತ್ರ ಬಿಡುತ್ತ ಪೈತ್ಯವನೂ ದಾಹವನೂ ಉಂಟು ಮಾಡುತಲಿರ್ಪುದೆ ಶ್ಲೇಷ್ಮಾಧಿಕವಾದ ಮೂತ್ರಕೃಛ್ರವೆಂದರಿವುದು. ರಕ್ತ ಶೋಷಣದಿಂದಾದ ಮೂತ್ರಕೃಛ್ರದಲ್ಲಿ ರಕ್ತವೇ ಬೀಳುವುದು. ಶುಕ್ಲಶೋಷಣ ದಿಂದಾದ ಮೂತ್ರಕೃಛ್ರದಲ್ಲಿ ಶುಕ್ಲವೂ, ರಕ್ತವೂ, ಮೂತ್ರವೂ ಮೂರೂ ಕೂಡಿ ಬೀಳುವುದು. ಈ ಲಕ್ಷಣಗಳುಳ್ಳುದೆ ಕ್ರಮದಿಂದ ರಕ್ತಮೇಹ, ಶುಕ್ಲಮೇಹ ವೆಂದರಿವುದು. ಶುಕ್ಲವು ವಾತದಿಂದ ಶುಕ್ಲಸ್ಥಾನವನ್ನೈದಿ ಕಲ್ಲಾಗುತಿರ್ಪುದು. ಅದನೆ ಕಲ್ಲುಕಟ್ಟು ಎಂದೂ ಅಶ್ಮರಿ ಎಂದೂ ಪೇಳುವರು. ಹಾಗಲ್ಲದಿದ್ದರೆ ಶ್ಲೇಷ್ಮ ವಾದರೂ ವಾತ ದೋಷದಿಂದ ವಸ್ತಿಸ್ಥಾನವನ್ನೈದಿ ಅಶ್ಮರಿಯಾಗಿ ತೀವ್ರವಾದ ವೇದನೆಯು, ಮೂತ್ರನಾಳದಲ್ಲಿ ಉರಿತವು ಉಂಟಾಗಿ ಅದು ಅಶ್ಮರಿಯೆನಿಸಿ ಕೊಳ್ಳುವುದು. ಇದು ಮೂತ್ರಕೃಛ್ರ ರೋಗದಿಂದ ಪ್ರತ್ಯೇಕವಾದ ಕಲ್ಲುಕಟ್ಟು ರೋಗವೆಂದರಿವುದೆಂದು ಅಶ್ವಿನೀ ದೇವರ್ಕಳಿಂ ವಚಿಸಲ್ಪಟ್ಟಿತು. ಮತಾಂತರೆ, ವಾತ ಪಿತ್ತ ಶ್ಲೇಷ್ಮಂಗಳು ವಸ್ತಿಸ್ಥಾನವನ್ನೈದಿ ತಮ್ಮ ತಮ್ಮ ಕಾರಣಗಳಿಂ ಪ್ರಕೋಪಿಸಿ ಮೂತ್ರಾಘಾತವೆಂಬ ಮಹಾ ರೋಗಗಳನು ಪುಟ್ಟಿಸುತಮಿರ್ಪುವು. ಅದು ೨೦ ತೆರನಾಗಿರ್ಪುದು. ಪ್ರತ್ಯೇಕ ವಾತ ಪಿತ್ತ ಶ್ಲೇಷ್ಮಗಳಿಂದಾದ ಮೂತ್ರ ಮೂರು, ದೋಷತ್ರಯದಿಂದಾಗುವ ಮೂತ್ರಕೃಛ್ರವೊಂದು, ಇಂತು ಮೂತ್ರ ಕೃಛ್ರ ನಾಲ್ಕು ತೆರನದರಲ್ಲಿ ಅಲ್ಪ ಅಲ್ಪವಾಗಿ ಮೂತ್ರ ಬಿಡುತ ನಾಭಿಯು ಕೆಳಗೂ ತೊಡೆಸಂದಿಗಳಲ್ಲಿಯೂ ಮೇಢ್ರದಲ್ಲಿಯೂ ನೋವು ಉಂಟಾಗಿಹುದೆ ವಾತದಿಂದಾದ ಮೂತ್ರಕೃಛ್ರವೆಂದರಿವುದು. ದಾಹವುಂಟಾಗಿ ಹಳದಿವರ್ಣವಾಗಿ ಮೂತ್ರ ಬಿಡುವುದೇ ಪಿತ್ತದಿಂದಾದ ಮೂತ್ರಕೃಛ್ರವೆಂದು ತಿಳಿವುದು. ನಾಭಿಯು ಕೆಳಗೆ ಬಾವು ಉಂಟಾಗಿ ಮೂತ್ರ ಬಿಡುವುದೆ ಶ್ಲೇಷ್ಮದಿಂದಾದ ಮೂತ್ರಕೃಛ್ರ ವೆಂದು ತಿಳಿದುಕೊಳ್ಳುವುದು. ಹಿಂದೆ ಹೇಳಿದ ವಾತ ಪಿತ್ತ ಶ್ಲೇಷ್ಮಗಳೆಂಬ ಮೂರು ವಿಧವಾದ ಮೂತ್ರಕೃಛ್ರಗಳಲ್ಲಿಯೂ ಆವ ಗುಣಗಳು ಪೇಳಿರ್ಪವಾಗುಣ ಗಳೆಲ್ಲವೂ ಕೂಡಿಕೊಂಡಿರುವ ಮೂತ್ರಕೃಛ್ರವೆ ಸನ್ನಿಪಾತದಿಂದಾದ ದೋಷತ್ರಯ ಮೂತ್ರಕೃಛ್ರವೆಂದರಿವುದು. ಕಲ್ಲುಕಟ್ಟಿನ ವ್ಯಾಧಿಯು ವಾತ ಪಿತ್ತ ಶ್ಲೇಷ್ಮ ಗಳಿಂದಲೂ ದೋಷತ್ರಯದಿಂದಲೂ ಸಹಿತವಾಗಿ ನಾಲ್ಕು ವಿಧವಾಗಿರ್ಪುದು. ವಾಯುವು ನಾಭಿಯ ಕೆಳಗೆ ಆಶ್ರಯಿಸಿ ಬಿಳುಪು ಹಳದಿಯಾದ ಶ್ಲೇಷ್ಮದೊಡನೆ ಕೂಡಿ ಇದ್ದ ಮೂತ್ರವನು ಶೋಷಿಸಿ ಘೋರವಾದ ಕಲ್ಲುಕಟ್ಟಿನ ವ್ಯಾಧಿಯನುಂಟು ಮಾಡುವುದು. ಆ ಕಲ್ಲುಕಟ್ಟಿನ ವ್ಯಾಧಿಯೆಂತೆಂದೊಡೆ, ನಾಭಿಯ ಕೆಳಗೆ ಬಾವು ಉಂಟಾಗಿ ಮೇಢ್ರದಲ್ಲಿ ಪಾರ್ಶ್ವದಲ್ಲಿ ತೊಡೆಗಳಲ್ಲಿ ಸಹ ನೋವು ಉಂಟಾಗಿ ಆಡಿನ ಮೂತ್ರದಂತೆ ಬಹು ದುರ್ಗಂಧವುಂಟಾಗಿ ಅತಿ ಕಷ್ಟದಿಂದ ಮೂತ್ರ ಬಿಡುತ್ತ ಜ್ವರವು, ಮೂರ್ಛೆಯು, ಬಳಲಿಕೆಯು, ಕೂಡಿಕೊಂಡು ಮೂತ್ರ ಬಿಟ್ಟ ತಕ್ಷಣ

ಒಂದು ಕ್ಷಣಮಾತ್ರ ಸುಖವಾಗಿ ನಡುಕವನುಂಟುಮಾಡಿ ಹಲ್ಲಕಡಿಸುವುದು ಸಹ ವಾತದಿಂದಾದ ಕಲ್ಲುಕಟ್ಟಿನ ರೋಗವೆಂದರಿವುದು. ಹಿಂದೆ ಹೇಳಿದ ಪ್ರಕಾರದಲ್ಲಿ ಮೂತ್ರಕೃಛ್ರ ನಾಲ್ಕು, ಅಶ್ಮರಿ ೪ ಕೂಡ ೮ ; ಇವಲ್ಲದೆ ಮತ್ತೆ ೧೨ ಪ್ರಕಾರ ವಾದ ಮೂತ್ರಘಾತ ರೋಗಗಳುಂಟು ; ಇವು ಕೂಡ ಮೂತ್ರಘಾತ ರೋಗ ವಿಪ್ಪತ್ತು ತೆರನಾಗಿರ್ಪುದು. ಹನ್ನೆರಡು ಪ್ರಕಾರ ಮೂತ್ರಘಾತಗಳ ಪೆಸರಾ ವಾವೆಂದೊಡೆ, ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ, ಮೂತ್ರಾತೀತ, ಮೂತ್ರಶುಕ್ಲ, ಮೂತ್ರಕುಂಡಲಕ, ಮೂತ್ರವಿಥ್ರಾಸ, ಮೂತ್ರವಾತ, ಮೂತ್ರ ಪ್ಲೀಹ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾಧವೆಂದಿಂತು ಈ ಮೂತ್ರಘಾತ ರೋಗವು ಕಲ್ಲುಕಟ್ಟಿನ ವ್ಯಾಧಿಯು ಇವೆರಡಕ್ಕೂ ಒಂದೇಪ್ರಕಾರವಾಗಿ ಚಿಕಿತ್ಸೆ ಯನೂ ಪಥ್ಯವನೂ ಮಾಡಿಸುವುದು. ಈ ಮೂತ್ರಕೃಛ್ರವೆಂಬ ರೋಗಕ್ಕೆ ವಾತಸ್ಥಾನವನಾಶ್ರಯಿಸಿ ಹುಟ್ಟಿದ ರೋಗವಿದಾದ್ದರಿಂದ ಯಥಾಯೋಗ್ಯವಾಗಿ ಸ್ನೇಹ, ಪಾನ, ಸ್ವೇದವಿಧಿ, ಅಭ್ಯಂಗನ, ಶಾಖಾ ಸೇಕಾವಗಾಹನ, ವಿರೇಕ, ಮೂರುತೆರನಾದ ವದಾನ ಲೇಪನ, ತಣ್ಣೀರಲ್ಲಿ ಸ್ನಾನ, ಇವಿಷ್ಟು ವಿಹಿತವಾಗಿ ಹುದು. ಮತ್ತಂ, ಅಶ್ಮರಿಯೆಂಬ ರೋಗವು ಮಹಾ ಭಯಂಕರವಾಗಿ ಚಿಕಿತ್ಸೆಯು ಮೃತ್ಯುವಿಗೆ ಸಮಾನವಾಗಿಹುದು. ಈ ರೋಗವು ಹೊಸದಾದರೆ ಔಷಧಕ್ಕೆ ಸಾಧ್ಯ, ಹಳೆಯದಾದರೆ ಕೊಯ್ದಲ್ಲದೆ ಸಾಧ್ಯವಾಗದೆಂದು ಕಲ್ಪತರು ಗ್ರಂಥದಲ್ಲಿ ಹೇಳ ಲ್ಪಟ್ಟು ಇಹುದು. ಮೂತ್ರರೋಗವೆಂಬುದೆ ಬಹುಮೂತ್ರವೆಂದು, ಮೂತ್ರ ಕೃಛ್ರವೆಂದು, ಮೂತ್ರ ಕಟ್ಟು ಎಂದು, ಮೂತ್ರಘಾತಮೆಂದು, ಅಶ್ಮರಿಯೆಂದು ಹೇಳಿಕೊಳ್ಳುತ್ತಿಹುದು.

## ಮೂತ್ರ ಕಟ್ಟಿದ್ದು ಬಿಡುವುದಕ್ಕೆ

### ಚಿಕಿತ್ಸೆ—ಸಂಹಿತೆಗಳು

ಹುಣಿಸೆಯ ಚಿಗುರನು ನಿಂಬೆಯ ಕಾಯಲ್ಲ ಅರೆದು ಮಾನ ಮಜ್ಜಿಗೆಯಲ್ಲಿ ಕದಡಿ ಕುಡಿಯಲು ಮೂತ್ರಕೃಛ್ರ ಬಿಡುವುದು ; ಪಥ್ಯ ಮಜ್ಜಿಗೆ ಅನ್ನ. ೧

ಮೇಲು ಕಸ್ತೂರಿ ೧ ಹಣ ತೂಕ, ಗುಬ್ಬಚ್ಚಿ ಹಕ್ಕಿಯ ಹಿಕ್ಕೆ ೧ ಹಣ ತೂಕ, ಇವೆರಡನು ಆಡಿನ ಗಂಜಳದಿಂದರೆದು ಹೊಡಕೆ ಕಡ್ಡಿಗಾಗಲ ಗರಿಕೆ ಕಡ್ಡಿಯ ಕೊನೆಗಾಗಲಿ ತೊಡೆದು ನಾಭಿಗೇರಿಸಲು ಜಲ ಬಿಡುವುದು. ೨

ಚೌಳುಪ್ಪು ೧ ಪಡಿಯನು ೨ ಪಡಿ ನೀರಿನಲ್ಲಿ ಹಾಕಿ, ಉಕ್ಕಿಬರುವಂತೆ ಕಾಸಿ, ತಿಳಿದ ನೀರನು ಅರ್ಧಸೇರಿನಷ್ಟನು ತೆಗೆದುಕೊಂಡು ಕುಡಿಯಕೊಡಲು ಜಲ ಬಿಡುವುದು. ೩

ಕಡ್ಡಿ ಉಪ್ಪು ೧ ದುಡ್ಡು ತೂಕವಂ ಸಣ್ಣನಾಗರೆದು ಮಜ್ಜಿಗೆಯಲ್ಲಿ ಕದಡಿ

ಈ ಹುಡಿಯು ಚೆನ್ನಾಗಿಯೂರುವತನಕ ಇರಿಸಿದ್ದು ಕುಡಿಯ ಕೊಡಲು ಜಲಬಿಡ್ಬು ವುದು. ೪

ಹುಣಿಸೆಸೊಪ್ಪಿನ ರಸ ೧ ಸೇರೆಯನ್ನು ಎಮ್ಮೆಯ ಮೊಸರಿನಲ್ಲಿ ತೆಗೆದು ಕೊಳ್ಳಲು ಮೂತ್ರಕಟ್ಟು ಪರಿಹಾರವಹುದು. ೫

ಬೆಣ್ಣೆಯನು ಉಪ್ಪುನೀರಿನಲ್ಲಿ ಕದಡಿ ಕುಡಿಯಿಸೆ ಮೂತ್ರ ಬಿಡುವುದು. ೬

ಸೌತೆಬೀಜ, ಅಳಲೆಕಾಯಿ, ತಾರೆಕಾಯಿ, ನೆಲ್ಲಿಚಟ್ಟು, ಶರ್ಕರೆ ಸಹ ಬಿಸಿನೀರಲ್ಲಿ ತೆಗೆದುಕೊಳ್ಳಲು ಮೂತ್ರಕಟ್ಟು ಪರಿಹಾರ. ೭

ಜಾಜಿಯ ಬೇರನು ಆಡಿನ ಹಾಲಿನಲ್ಲಿ ಕುಡಿಯೆ ಮೂತ್ರಕಟ್ಟು ಮಾಣ್ಗುಂ. ೮

ಬಾಳೆಯ ಗೆಡ್ಡೆಯ ರಸ, ಕಿರುಕುಸಾಲೆ ಬೇರಿನ ರಸ ಸಹ ಕೂಡಿ ಶರ್ಕರೆ ವೆರಸಿ ಕುಡಿಯೆ ಮೂತ್ರಕಟ್ಟು ಪರಿಹಾರಮಕ್ಕುಂ. ೯

ಅಡಕಮಾಮಿಡಿವೇರು, ಪಿಂಡಿದೊಂಡಪುವೇರು, ನೇಲತಾಟಿವೇರು, ಈ ಮೂಡು ದೊಯಾಲನು ಪಂಚದಾರನು ನಿಮ್ಮಕಾಯಂತ ಮುದ್ದಕಲಪಿ ತ್ರಾಗಿತೆ ಮೂತ್ರಕೃಛ್ರಂ, ಶುಕ್ಲಮೇಹಂ ಸಹ ಮಾನುನು. ೧೦

ಮಜ್ಜಿಗೆಯುನ್ನು ಗಂಜಿಯುನ್ನು ಕೂಡ ಕುಡಿಯೆ ಮೂತ್ರ ಕೃಛ್ರಂ ಮಾಣ್ಗುಂ.

ಕಳ್ಳಂಗಡಲೆಯ ಬೇರಂ ಅಕ್ಕಿಗಚ್ಚಿನಿಂದರೆದು ಕುಡಿಯೆ ಬಹುಮೂತ್ರಕಟ್ಟು ಮಾಣ್ಗುಂ. ೧೨

ರೇಲ ಚಕ್ಕನು ಗೊಟ್ಟಿ ಆವು ಮಜ್ಜಿಗತೊ ತೊಕ್ಕಿ ಆ ಮಜ್ಜಿಗ ಯೆಸರು ಬೆಟ್ಟಿ ಚಾವುಬೀಯಮುನು ಉಡುಕ ಬೆಟ್ಟಿ ಒಕನಾಡು ವಂಡಿನದಿ ; ಮೂಡುದಿನಮುಲು ಚಾಮವಂಟಕಂ ಪ್ರಸಾಪಡೇದಿ. ೧೩

ಪತ್ತಿಕಾಯ ರಸಂ ಸೇರು ಅರ್ಧಮುಲೊ ವೆಲಿಗಾರ ಭಸ್ಮಂ ೩ ಎತ್ತು, ದೋಸವಿತ್ತುಲು ಗ ೨ ಎತ್ತು ಸಹ ಕೂರ್ಚಿ ಈಯುನು ಮೂತ್ರಂ ವಿಡುಚುನು. ೧೪

ವೆಲಗಾಕುರಸಂ ೧ ಸೇರುಲೊ ಪೆಟ್ಲುಪ್ಪು ಗ ೨ ಎತ್ತು, ಶರ್ಕರ ಗ ೩ ಎತ್ತು, ಸಹ ಕೂರ್ಚಿ ಸೇವಿಂಚಿತೆ ೪ ಗಡಿಯಕು ಮೂತ್ರಂ ಸಡಿಲುನು. ೧೫

ವೆದುರಾಕು ಕಷಾಯಮುಲೊ ನಿಮ್ಮ ಪುಲುಸುನು ಪಿಂಡಿ ಪೆಟ್ಲುಪ್ಪು ಗ ೧ ಎತ್ತು ಸಹ ಕೂರ್ಚಿ ಸೇವಿಂಚಿತೆ ಆ ಕ್ಷಣಮೆ ಮೂತ್ರಂ ವಿಡುಚುನು. ೧೬

ಚೌಡಂಗಿಯ ಬಡಗ ಹರಿದ ಬೇರಂ ವೀಳ್ಯದೆಲೆಯ ಮಡುಪಿನ ಕೂಡೆ ಹಾಕಿ ಕೊಂಡು ವೀಳ್ಯವ ಮಾಡಲು ಮೂತ್ರಕಟ್ಟು ಬಿಡುವುದು. ೧೭

ಎರ್ರವುಲ್ಲಿಗಡ್ಡ ರಸಂ ೧ ಪಾಲು, ಶುದ್ಧಿಜೇಸಿನ ವೆಲಿಗಾರಂ ಗ ಅರ್ಧ ಯೆತ್ತು, ದೋಸವಿತ್ತಲು ಗ ೨ ಎತ್ತು, ಚಕ್ಕೆರ ಗ ೩ ಎತ್ತು, ಇಂತ ಒಟ್ಟುಗೂರ್ಚಿ ಸೇವಿಂಚಿತೆ ಜಲಂ ವಿಡುಚುನು. ೧೮

ಹಿಪ್ಪಲಿಯನು ಬೆಲ್ಲವನು ಕೂಡಿಮೆಲ್ಲಲು ಮೂತ್ರ ಕಟ್ಟು ಪರಿಹಾರ. ೧೯

ಒಂದ, ಬೆಲ್ಲವನು, ಅಳಿಲೆಕಾಯ ಪುಡಿಯನು ಕಲಸಿ ಮೆಲ್ಲಲು ಮೂತ್ರ ಕಟ್ಟು ಬಿಡುವುದು. ೨೦

ದಾಳಿಂಬದ ಹಣ್ಣು, ಶುಂಠಿ ಕೂಡ ಮೆಲ್ಲಲು ಮೂತ್ರಕಟ್ಟು ಗುಣಮಕ್ಕು. ೨೧

ಎಲಚಿಯಾಕು ರಸಂ ೧ ಸೇರುಲೊ ಪೆಟ್ಲುಪ್ಪು ಗ ೨ ಎತ್ತು, ಚಕ್ಕೆರೆ ಗ ೩ ಎತ್ತು, ಸಹ ಚೂರ್ಣಂಜೇಸಿ ಕಲಪಿ ಸೇವಿಂಚಿತೆ ೪ ಗಡಿಯಕು ಮೂತ್ರಂ ವಿಡುಚುನು. ೨೨

ಬೋಡತರಮಾಕು ರಸಮುನು, ಆವು ಪಾಲುತೊ ಗೋರ್ಚಿ ಜಿಲಕರ ಗ ೨ ಎತ್ತು, ಶರ್ಕರ ಗ ೩ ಎತ್ತು, ಸಹ ವೇಸಿಯಿಾಯುನು ಇರುವಾಯಿ ಕಟ್ಟಿನದಿ ವಿಡುಚುನು. ೨೩

ಪೆಟ್ಲುಪ್ಪು ಗ ೧ ಎತ್ತುನು ಪೊಡಿಜೇಸಿ ನಿಮ್ಮ ಪುಲುಸುನ ಕಲಪಿ ಶರ್ಕರ ಗ ೩ ಎತ್ತು ವೇಸಿ ಪುಚ್ಚುಕೋಗಾನು ಆ ಕ್ಷಣಮೆ ನೀರುಕಟ್ಟು ವಿಡುಚುನು. ೨೪

ಗಣಜಿಲ ಬೇರಂ ಸುಟ್ಟಬೂದಿಯಂ ಆಡಿನ ಹಾಲನಲ್ಲಿ ಕೂಡಿ ಕುಡಿಯೆ ಮೂತ್ರಸಿಕ್ಕು ಬಿಡುವುದು. ೨೫

ಬಾಳೆಯ ಹಣ್ಣನೂ ಹುಣಿಸೆಯ ಹಣ್ಣನೂ ಕಿವಿಚಿ ಶರ್ಕರೆವೆರಸಿ ಮೆಲ್ಲಲು ಮೂತ್ರ ಬಿಡುವುದು. ೨೬

ಮರಿದೊಗ್ಗಲು ಚಾರೆಡು, ಬೀಯಂ ರುಬ್ಬಿ ಅಂಬಿಲಮುಗಾ ಗಾಚಿ ನೇಯಿ ಬೋಸು ಕೊನಿ ತ್ರಾಗನು ನೀಳ್ಳು ವಿಡುಚುನು. ೨೭

## ಕಲ್ಕಗಳು

ಮುಗ್ಗಾರೆಯ ಬೇರಂ ಹಾಲನೊಳರೆದು ಶರ್ಕರೆವೆರಸಿ ೮ ದಿನ ತೆಗೆದುಕೊಳ್ಳಲು ಮೂತ್ರಸಿಕ್ಕು ಪರಿಹರ. ೧

ಜಾಜಿಯ ಬೇರಂ ಹಸಿ ಹಾಲನೊಳರೆದು ಕೊಳ್ಳಲು ಮೂತ್ರಸಿಕ್ಕು ಬಿಡುವುದು ೨

ತಾವರೆಯ ಗೆಣಸನು ಎಳ್ಳೆಣ್ಣೆಯಲ್ಲಿ ಬೇಯಿಸಿ ಗೋಮೂತ್ರದೊಳರೆದು ಕೊಡಲು ಮೂತ್ರಕಟ್ಟು ಬಿಡುವುದು. ೩

ಪೆಟ್ಲುಪ್ಪು ಗ ೧ ತೂಕಮಂ ನರಮೂತ್ರದೊಳರೆದುಕೊಡಲು ಆ ಕ್ಷಣವೆ ಮೂತ್ರ ಬಿಡುವುದು. ೪

ಅವರೆಯುಪ್ಪು ಶುಂಠಿಯುನು ಬೆಚ್ಚಗೆ ಮಾಡಿ ಶುದ್ಧಿಮಾಡಿದ ಬೆಳುಗಾರ ಸಹ ನೀರಿನೊಳರದು ಕೊಡಲು ಮೂತ್ರ ಬಿಡುವುದು. ೫

ನೆಗ್ಗಿಲ ಕಾಯಿ, ಏಲಕ್ಕಿ, ಜೀರಿಗೆ, ಬಿಳುಗಾರದ ಅರಳು, ಇವಂ ಬಿಸಿನೀರಿಂದ ರೆದು ಶರ್ಕರೆವೆರಸಿ ತೆಗೆದುಕೊಳ್ಳಲು ಮೂತ್ರ ಬಿಡುವುದು. ೬

ದಾಳಿಂಬದ ಹೀಚು, ಈ ಚಿಗುರು, ಜೀರಿಗೆ ಇವಂ ಅಕ್ಕಿಗಟ್ಟಿನಲ್ಲರೆದು ಹಸುವಿನ ಹಾಲು ಶರ್ಕರೆವೆರಸಿ ೩ ದಿನ ಕೊಳ್ಳಲು ಮೂತ್ರ ಬಿಡುವುದು ೭

ಜೀರಿಗೆ, ಚಿಲ್ಲದ ಬೀಜ, ಕೆಕ್ಕರಿಕೆ ಹಣ್ಣಿನ ಬೀಜ, ಇವನರೆದು ಶರ್ಕರೆ ವೆರಸಿ ತೆಗೆದುಕೊಳ್ಳಲು ಮೂತ್ರಬಿಡುವುದು. ೮

ಕೆಂಪಿನ ಔಡಲದ ಹೂವು, ಆದರ ಮೊಗ್ಗು, ಆಚಿಗುರು, ಇವಂ ಅಕ್ಕಿ ಗಟ್ಟಿನಲ್ಲರೆದು ಹಸುವಿನ ಹಾಲು, ಶರ್ಕರೆವೆರಸಿ ಮೂರು ದಿನ ಕೊಳ್ಳಲು [ಮೂತ್ರ ಬಿಡುವುದು]. ಆದರ ಕಾಯನ್ನು ಸಹ ಕೆಂಪಿನ ಔಡಲದೆಣ್ಣೆಯಲ್ಲಿ ಅರೆದು ತೆಗೆದು ಕೊಳ್ಳುವುದು. ೯

ಪೆಟ್ಲುಪ್ಪು, ಗ ೧ ಎತ್ತುನು ನೂರಿ ಈಯುನು ಆ ಕ್ಷಣವೆ ನೀರುಕಟ್ಟು ಮಂಟ ಮಾನುನು. ೧೦

ಕನ್ನೆಕುಮಾರಿ, ಕಿರುಕಸಾಲೆ, ಸಹ ಹಾಲೊಳರೆದು ಕುಡಿಯೆ ಜಲಬಿಡು ವುದು. ೧೧

### ಕಷಾಯಗಳು

ವೆದುರಾಕುಲೊ ಕಷಾಯಂ ಬೆಟ್ಟಿ ಪೆಟ್ಲುಪ್ಪು ಗ ೧ ಎತ್ತುನು ಕಲಪಿ ಈಯುನು ಮೂತ್ರಂ ಸಡುಲುನು. ೧

ನೆಗ್ಗಿಲ ಬೇರು, ಹಿಂಡಿಸೊಪ್ಪಿನ ಬೇರು, ಸಹ ೧ ಪಡಿ ನೀರಲ್ಲಿಹಾಕಿ ಅಷ್ಟಾವ ಶೇಷವಾಗಿ ಕಾಸಿ ಏಲಕ್ಕಿ, ಹಿಪ್ಪಲಿ, ಬೆಳುಗಾರ, ಕರ್ಪೂರ, ಶಿಲಾಧಾತು, ಸಹ ಪುಡಿಮಾಡಿ ಹಾಕಿ ಶರ್ಕರೆ ವೆರಸಿ ತೆಗೆದುಕೊಳ್ಳಲು ಮೂತ್ರಕಟ್ಟು ಬಿಡುವುದು. ಪಥ್ಯ ಹಸುವಿನ ಹಾಲು, ಮೊಸರು, ಕಟ್ಟು. ೨

ಹೊನ್ನಗನ್ನೆ ಬೇರು, ಕಿರಕುಸಾಲೆಯ ಬೇರು, ಸುಪ್ಪತ್ತಿಗೆ ಹಿಂಡಿ ಬೇರು, ನೆಗ್ಗಿಲ ಬೇರು, ಹಣ್ಣಿ ಬೇರು, ಕಳ್ಳಂಗಡಲೆ ಬೇರು, ಚಿಟ್ಟೌಡಲದ ಬೇರು, ಇವಂ ಕಷಾಯವಿಕ್ಕಿ ಶೋಧಿಸಿ ಆದರಲ್ಲಿ ಎರಡು ಕೊನೆ ಹಿಪ್ಪಲಿ, ಕಡ್ಡುಪ್ಪು, ಜೀರಿಗೆ, ಏಲಕ್ಕಿ, ಕರ್ಪೂರ, ಶಿಲಾಧಾತು, ಸೌತೆಯ ಬೀಜ, ಇಷ್ಟನು ಅರೆದು ಕದಡಿ ಕುಡಿ ಯಲಾಕ್ಷಣವೆ ಮೂತ್ರ ಬಿಡುವುದು. ೩

ಕರಿ ಹುರಳಿ ೩ ಸೇರನು ಕಷಾಯವಿಕ್ಕಿ ಪಾವುನೀರು ನಿಲ್ಲಿಸಿ ಬಸಿದು ಕೊಂಡು ಕಡ್ಡುಪ್ಪು, ಏಲಕ್ಕಿ, ಕರ್ಪೂರ, ಶಿಲಾಧಾತು, ಸೌತೆಬೀಜ, ಶರ್ಕರೆ ಇವಂ ಅರೆದು ಕಷಾಯದಲ್ಲಿ ಕದಡಿ ಸೇವಿಸೆ ಮೂತ್ರ ಬಿಡುವುದು. ೪

ಪೊನ್ನಗಂಟಿ ವೇರು, ಚಿರಿ ವೇಳ್ಳು, ಕೊಂಡಪಂಡಿ ವೇಳ್ಳು, ಪಲ್ಲೇರು ವೇಳ್ಳು, ವೀನಿ ಸಮಕಷಾಯಂ ಬೆಟ್ಟಿ ಪಿಪ್ಪಳ್ಳು ೨, ಕಡ್ಡುಪ್ಪು ಕಡ್ಲು ೪, ಜಿಲಕರ, ಏಲಕ್ಕಲು,

